ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದ ಮಹಾಪುರಾಣಂ

೫

## ಆವಂತ್ಯಖಂಡ

೩

ರೇವಾಖಂಡ (ಪೂರ್ವಭಾಗ ೧)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೯

# ಶ್ರೀಸ್ಕಾಂದಮಹಾಪುರಾಣಂ

ಔ

**ಆವಂತ್ಯಖಂಡ**

**೩**

ರೇವಾಖಂಡ (ಪೂರ್ವಭಾಗ ೧)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಆವಂತ್ಯಖಂಡ

ರೇವಾಖಂಡ (ಪೂರ್ವಭಾಗ ೧)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೯

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯ ಖಂಡದ ಮೂರನೆಯ ರೇವಾಖಂಡದಲ್ಲಿ ಐವತ್ತು ಅಧ್ಯಾಯಗಳನ್ನೊಳಗೊಂಡ ಗ್ರಂಥವು ಸಂಪೂರ್ಣವಾಗಿರುತ್ತದೆ.

ಅವಂತೀಕ್ಷೇತ್ರಕ್ಕೆ 'ಮಹಾಕಾಲವನ'ವೆಂಬ ಮತ್ತೊಂದು ಹೆಸರೂ ಉಂಟು. ಮಹಾಕಾಲವನದಲ್ಲಿಯೇ 'ಮಹಾಕಾಲೇಶ್ವರಲಿಂಗ'ವು ವಿರಾಜಿಸುತ್ತಿರುವುದು. ಕಾಲಿದಾಸಾದಿ ಮಹಾಕವಿಗಳೆಲ್ಲರೂ ಈ ಕ್ಷೇತ್ರವನ್ನು ತಮ್ಮ ಕಾವ್ಯಗಳಲ್ಲಿ ಬಹುವಾಗಿ ವರ್ಣಿಸಿರುತ್ತಾರೆ. ಮಹಾಕಾಲೇಶ್ವರ ದೇವಾಲಯವನ್ನೊಳಕೊಂಡು ಶೋಭಿಸುತ್ತಿರುವ ಅವಂತಿಯು ಉಜ್ಜಯಿನೀನಗರವು ಚಾರಿತ್ರಕವಾಗಿಯೂ ಪ್ರಸಿದ್ಧವಾದುದೇ ಆಗಿರುವುದು. ಪೂರ್ವದಲ್ಲಿ ಇಲ್ಲಿ ಅನೇಕ ವಿಶ್ವವಿದ್ಯಾನಿಲಯಗಳಿದ್ದುವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಭಾರತ ಸಂಸ್ಕೃತಿಯ ಸಂರಕ್ಷಣೆಯಸಲುವಾಗಿ ಮಹಾ ಮಹಾ ಮೇಧಾವಿಗಳು ಹಗಲಿರುಳೂ ಶ್ರಮವಹಿಸಿ ದುಡಿದ ದುಡಿಮೆಯ ಸತ್ಫಲಸಂಕೇತಗಳು ಇಂದಿಗೂ ಈ ದೇಶದಲ್ಲಿ ಚಿರಸ್ಥಾಯಿಯಾಗಿ ಕಂಗೊಳಿಸುತ್ತಿವೆ. ಇಂಥ ಸುಂದರ ಪ್ರಾಂತ್ಯವಾದ ಅವಂತಿಯನ್ನು ಕುರಿತ ಈ ಖಂಡವು ತನ್ನೊಂದು ಐತಿಹಾಸಿಕ, ಸಾಮಾಜಿಕ ಮತ್ತು ನೈತಿಕ ಕಥಾನುಕಥನಗುಣದಿಂದಲೂ, ದೇವ ದೇವಿಯರ ಭಕ್ತಿಪಾರಮ್ಯಸಂಕಥನ ವೈಭವದಿಂದಲೂ, ಹರಿಹರಕ್ಷೇತ್ರಗಳ ಮಾಹಾತ್ಮ್ಯ ನಿರೂಪಣ ವೈಖರಿಯಿಂದಲೂ ಓದುಗರಿಗೆ ಹೃದಯಹಾರಿಯಾಗಿ ಪರಿಣಮಿಸದಿರದು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥಾಽವಂತ್ಯಖಂಡೇ ತೃತೀಯಂ ರೇವಾಖಂಡಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ಪ್ರಥಮೋಽಧ್ಯಾಯಃ

**ಪುರಾಣಸಂಹಿತಾವರ್ಣನಂ**

**ನರ್ಮದಾ ಸ್ತುತಿಃ :—**

**ಮಜ್ಜನ್ಮಾತಂಗಗಂಡಚ್ಯುತಮದಮದಿರಾಮೋದಮತ್ತಾಲಿಮಾಲಂ**
**ಸ್ನಾನೈಃ ಸಿದ್ಧಾಂಗನಾನಾಂ ಕುಚಯುಗವಿಗಲತ್ಕುಂಕುಮಾಸಂಗಪಿಂಗಂ ।**
**ಸಾಯಂ ಪ್ರಾತರ್ಮುನೀನಾಂ ಕುಸುಮಚಯಸಮಾಚ್ಛನ್ನತೀರಸ್ಥವೃಕ್ಷಂ**
**ಪಾಯಾದ್ವೋ ನರ್ಮದಾಂಭಃಕರಿಮಕರ ಕರಾಕ್ರಾಂತ ರಂಹಸ್ತರಂಗಂ ॥**

---

**ಕನ್ನಡದ ಅನುವಾದ**

**ಪುರಾಣಸಂಹಿತಾವರ್ಣನ**

**ನರ್ಮದಾ ಸ್ತುತಿಃ :—**

೧. ಮಜ್ಜನಮಾಡುವ ಮದ್ದಾನೆಗಳ ಗಂಡಸ್ಥಳಗಳಿಂದ ಸುರಿಯುವ ಮದೋದಕವೆಂಬ ಸುರೆಯ ಸೇವನೆಯಿಂದ ಮತ್ತವಾದ ದುಂಬಿಗಳ ಸಾಲುಗಳುಳ್ಳುದಾಗಿ, ಸ್ನಾನಮಾಡಿದ ಸಿದ್ಧಾಂಗನೆಯರ ಕುಚಲೇಪಿತವಾದ ಕುಂಕುಮದಿಂದ ಕೆಂಪು ಬಣ್ಣವುಳ್ಳುದಾಗಿ, ಹಗಲು ರಾತ್ರಿಗಳಲ್ಲಿಯೂ ಮುನಿಗಳು ಹೂವುಗಳನ್ನು ಕೊಯ್ಯಲನುಕೂಲವಾದ ಗಿಡಗಳನ್ನು ತೀರಗಳಲ್ಲಿ ಪೋಷಿಸುತ್ತಿರುವುದಾಗಿ, ಆನೆ ಮೊಸಳೆಗಳ ನೀರಾಟಗಳಿಂದ ವೇಗಗೊಂಡ ಅಲೆಗಳಿಂದ ಶೋಭಿಸುವುದಾದ ನರ್ಮದಾ ಜಲವು ನಿಮ್ಮನ್ನು ಕಾಪಾಡಲಿ.

**ಉಭಯತಟಪುಣ್ಯತೀರ್ಥಾ, ಪ್ರಕ್ಷಾಲಿತಸಕಲಲೋಕದುರಿತೌಘಾ ।**
**ದೇವಮುನಿಮನುಜವಂದ್ಯಾ, ಹರತು ಸದಾ ನರ್ಮದಾ ದುರಿತಂ ॥ ೨ ॥**
**ನಾಶಯತು ದುರಿತಮಖಿಲಂ, ಭೂತಂ ಭವ್ಯಂ ಭವಚ್ಚ ಭುವಿ ಭವಿನಾಂ ।**
**ಸಕಲಪವಿತ್ರಿತವಸುಧಾ, ಪುಣ್ಯಜಲಾ ನರ್ಮದಾ ಭವತಿ ॥ ೩ ॥**
**ತಟ ಪುಲಿನಂ ಶಿವದೇವಾ, ಯಸ್ಯಾ ಯತಯೋಽಪಿ ಕಾಮಯಂತೇ ವಾ ।**
**ಮುನಿನಿವಹ ವಿಹಿತಸೇವಾ, ಶಿವಾಯ ಮಮ ಜಾಯತಾಂ ರೇವಾ ॥ ೪ ॥**

---

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೫ ॥**
**ನೈಮಿಷೇ ಪುಣ್ಯನಿಲಯೇ ನಾನಾಋಷಿನಿಷೇವಿತೇ ।**
**ಶೌನಕಃ ಸತ್ರಮಾಸೀನಃ ಸೂತಂ ಪಪ್ರಚ್ಛ ವಿಸ್ತರಾತ್ ॥ ೬ ॥**
**ಮನ್ಯೇಽಹಂ ಧರ್ಮನೈಪುಣ್ಯಂ ತ್ವಯಿ ಸೂತ ಸದಾರ್ಚಿತಂ ।**
**ಪುಣ್ಯಾಽಮೃತಕಥಾ ವಕ್ತಾ ವ್ಯಾಸಶಿಷ್ಯಸ್ತ್ವಮೇವ ಹಿ ॥ ೭ ॥**

---

೨. ಎರಡೂ ದಡಗಳಲ್ಲಿ ಪುಣ್ಯತೀರ್ಥಗಳನ್ನೊಳಗೊಂಡು ಸಮಸ್ತ ಜನರ ಪಾಪಸಮೂಹಗಳನ್ನು ಕಳೆಯುತ್ತ ದೇವ, ಮುನಿ, ಮಾನವರಿಗೆ ಪೂಜಾರ್ಹವಾಗಿರುವ ನರ್ಮದೆಯು ನಿತ್ಯವೂ ಪಾತಕಗಳನ್ನು ನಾಶಗೊಳಿಸಲಿ.

೩. ಭೂಲೋಕದಲ್ಲಿ ಸಂಸಾರಮಗ್ನರಾಗಿರುವ ಜನರ ದುರಿತಗಳೆಲ್ಲವನ್ನೂ ನರ್ಮದೆಯು ಕಳೆಯಲಿ. ಮಾನವರ ಹಿಂದಿನ, ಇಂದಿನ, ಮುಂದಿನ ಸಕಲ ಪಾತಕಗಳನ್ನೂ ಕಳೆದು ಭೂಮಂಡಲವನ್ನೇ ಪವಿತ್ರಗೊಳಿಸುವ ನರ್ಮದೆಯು ಪುಣ್ಯಜಲಭರಿತವಾಗಿ ಸಕಲರ ಶ್ರೇಯಸ್ಸಿಗಾಗಿ ಶೋಭಿಸುತ್ತಿರುವುದು.

೪. ಪರಮಶಿವನೂ, ದೇವತೆಗಳೂ, ಯತಿಗಳೂ ಯಾವುದರ ದಡಗಳ ಮರಳುಗಳನ್ನು ಅಪೇಕ್ಷಿಸುತ್ತಿರುವರೊ, ಯಾವುದನ್ನು ಮುನಿಸಮೂಹಗಳು ಸೇವಿಸುತ್ತಿರುವರೊ ಆ ರೇವಾತೀರ್ಥವು ನನಗೆ ಮಂಗಳವನ್ನುಂಟುಮಾಡುವುದಾಗಲಿ.

---

೫. ಶ್ರೀಮನ್ನಾರಾಯಣನನ್ನೂ, ನರಶ್ರೇಷ್ಠನಾದ ನರನನ್ನೂ, ಸರಸ್ವತೀ ದೇವಿಯನ್ನೂ, ವ್ಯಾಸರನ್ನೂ ನಮಸ್ಕರಿಸಿ ಜಯಕಾರಕವಾದ ಪುರಾಣವನ್ನು ಹೇಳಬೇಕು.

೬. ಪುಣ್ಯಗಳಿಗೆಡೆಯೂ, ಅನೇಕ ಮಹರ್ಷಿಗಳ ನಿವಾಸವೂ ಆದ ನೈಮಿಷಾರಣ್ಯದಲ್ಲಿ ಶೌನಕಮುನಿಯು ಒಂದು ಸತ್ರವನ್ನು ಮಾಡಲುಪಕ್ರಮಿಸಿ ಸೂತಪೌರಾಣಿಕನನ್ನು ಕುರಿತು ಕೂಲಂಕಷವಾಗಿ ಪ್ರಶ್ನೆಮಾಡಿದನು.

೭. "ಸೂತನೆ! ನಿನ್ನಲ್ಲಿ ಧರ್ಮದ ಹಿರಿಮೆಯು ಯಾವಾಗಲೂ ಪೂಜಿತ

ಅತಸ್ತ್ವಾಂ ಪರಿಪೃಚ್ಛಾಮಿ ಧರ್ಮತೀರ್ಥಾಶ್ರಯಂ ಕವೇ ।
ಬಹೂನಿ ಸಂತಿ ತೀರ್ಥಾನಿ ಬಹುಶೋ ಮೇ ಶ್ರುತಾನಿ ಚ ॥ ೮ ॥
ಶ್ರುತಾ ದಿವ್ಯನದೀ ಬ್ರಾಹ್ಮೀ ತಥಾ ವಿಷ್ಣುನದೀ ಮಯಾ ।
ತೃತೀಯಾ ನ ಮಯಾ ಕ್ವಾಽಪಿ ಶ್ರುತಾ ರೌದ್ರೀ ಸರಿದ್ವರಾ ॥ ೯ ॥
ತಾಂ ವೇದಗರ್ಭಾಂ ವಿಖ್ಯಾತಾಂ ವಿಬುಧೌಘಾಽಭಿವಂದಿತಾಂ ।
ವದ ಮೇ ತ್ವಂ ಮಹಾಪ್ರಾಜ್ಞ ತೀರ್ಥಪೂಗಪರಿಷ್ಕೃತಾಂ ॥ ೧೦ ॥
ಕಂ ದೇಶಮಾಶ್ರಿತಾ ರೇವಾ ಕಥಂ ಶ್ರೀರುದ್ರಸಂಭವಾ ।
ತತ್ಸಂಶ್ರಿತಾನಿ ತೀರ್ಥಾನಿ ಯಾನಿ ತಾನಿ ವದಸ್ವ ಮೇ ॥ ೧೧ ॥

ಸೂತ ಉವಾಚ :—

ಸಾಧು ಪೃಷ್ಟಂ ಕುಲಪತೇ ಚರಿತ್ರಂ ನರ್ಮದಾಶ್ರಿತಂ ।
ಚಿತ್ರಂ ಪವಿತ್ರಂ ದೋಷಘ್ನಂ ಶ್ರುತಮುಕ್ತಂ ಚ ಸತ್ತಮ ॥ ೧೨ ॥
ವೇದೋಪವೇದವೇದಾಂಗಾದೀನ್ಯಭಿವ್ಯಸ್ಯ ಪೂರಿತಃ ।
ಅಷ್ಟಾದಶಪುರಾಣಾನಾಂ ವಕ್ತಾ ಸತ್ಯವತೀಸುತಃ ॥ ೧೩ ॥

---

ವಾಗಿರುವುದೆಂಬುದನ್ನು ಬಲ್ಲೆನು. ವ್ಯಾಸಶಿಷ್ಯನಾದ ನೀನೊಬ್ಬನೇ ಪುಣ್ಯಪ್ರದಗಳೂ ಅಮೃತಪ್ರಾಯಗಳೂ ಆದ ಕಥೆಗಳನ್ನು ಹೇಳುವವನಾಗಿರುವೆ.

೮. ಸರ್ವಜ್ಞನಾದ ನಿನ್ನನ್ನು ಧರ್ಮವರ್ಧಕಗಳಾದ ತೀರ್ಥಗಳಿಗೆ ಆಶ್ರಯವಾದ ಪ್ರದೇಶವು ಯಾವುದೆಂದು ಕೇಳುತ್ತಿರುವೆನು. ಅನಂತ ತೀರ್ಥಗಳು ಭೂಲೋಕದಲ್ಲಿರುವುವೆಂದು ನಾನು ಅನೇಕವೇಳೆ ಕೇಳಿರುವೆನು.

೯–೧೦. ಬ್ರಹ್ಮನಿಗೆ ಪ್ರಿಯವಾದ ದಿವ್ಯನದಿಯ ವಿಷಯವನ್ನು ಕೇಳಿರುವೆನು. ವಿಷ್ಣುತೀರ್ಥಗಳುಳ್ಳ ಪುಣ್ಯನದಿಯ ಮಾಹಾತ್ಮ್ಯವನ್ನೂ ಕೇಳಿರುವೆನು. ಆದರೆ ಶೈವತೀರ್ಥಗಳಿಂದೊಡಗೂಡಿರುವ ಮೂರನೆಯ ಉತ್ತಮನದಿಯಾವುದೆಂಬುದನ್ನು ಮಾತ್ರ ಈವರೆಗೆ ಕೇಳಿಲ್ಲ. ವೇದಾನುಮೋದಿತವೂ, ಪ್ರಖ್ಯಾತವೂ, ದೇವತಾಸಮೂಹಗಳಿಗೂ ವಂದನಾರ್ಹವೂ, ಅಸಂಖ್ಯಾತ ತೀರ್ಥಗಳಿಂದ ವಿರಾಜಿಸುತ್ತಿರುವುದೂ ಆದ ರೇವಾನದಿಯ ವಿಷಯವನ್ನು ಮಹಾಪ್ರಾಜ್ಞನಾದ ನೀನು ನನಗೆ ತಿಳಿಸು.

೧೧. ರೇವಾನದಿಯು ಯಾವ ದೇಶದಲ್ಲಿ ಪ್ರವಹಿಸುತ್ತಿರುವುದು? ಅದು ಮಹೇಶ್ವರನಿಂದ ಹೇಗೆ ಹುಟ್ಟಿತು? ಅದನ್ನಾಶ್ರಯಿಸಿರುವ ತೀರ್ಥಗಳು ಯಾವುವಿರುವುವೊ, ಅವುಗಳನ್ನೂ ನನಗೆ ಹೇಳು.

೧೨. ಸೂತನು ಹೇಳುತ್ತಾನೆ:—ಕುಲಪತಿಯಾದ ಶೌನಕನೆ! ನಿನ್ನ ಪ್ರಶ್ನೆಯು ಬಹಳ ಯುಕ್ತವಾಗಿರುವುದು. ನರ್ಮದಾನದಿಗೆ ಸಂಬಂಧಿಸಿದ ಚರಿತ್ರೆಯು ವಿಚಿತ್ರವೂ, ಪಾವನವೂ, ದೋಷನಿವಾರಕವೂ ಆಗಿ ಹೇಳಿದವರನ್ನೂ ಕೇಳಿದವರನ್ನೂ ಪವಿತ್ರಗೊಳಿಸುವುದು.

೧೩. ವೇದಗಳು, ಉಪದೇಶಗಳು, ವೇದಾಂಗಗಳು ಮುಂತಾದುವು

ತಂ ನಮಸ್ಕೃತ್ಯ ವಕ್ಷ್ಯಾಮಿ ಪುರಾಣಾನಿ ಯಥಾಕ್ರಮಂ ।
ಯೇಷಾಮಭಿವ್ಯಾಹರಣಾದಭಿವೃದ್ಧಿರ್ವೃಷಾಯುಷೋಃ ॥ ೧೪ ॥
ಶ್ರುತಿಃ ಸ್ಮೃತಿಶ್ಚ ವಿಪ್ರಾಣಾಂ ಚಕ್ಷುಷೀ ಪರಿಕೀರ್ತಿತೇ ।
ಕಾಣಸ್ತತ್ರೈಕಯಾ ಹೀನೋ ದ್ವಾಭ್ಯಾಮಂಧಃ ಪ್ರಕೀರ್ತಿತಃ ॥ ೧೫ ॥
ಶ್ರುತಿಸ್ಮೃತಿಪುರಾಣಾನಿ ವಿದುಷಾಂ ಲೋಚನತ್ರಯಂ ।
ಯಸ್ತ್ರಿಭಿರ್ನಯನೈಃ ಪಶ್ಯೇತ್ಸೋಽಂಶೋ ಮಾಹೇಶ್ವರೋ ಮತಃ ॥ ೧೬ ॥
ಆತ್ಮನೋ ವೇದವಿದ್ಯಾಚ ಈಶ್ವರೇಣ ವಿನಿರ್ಮಿತಾ ।
ಶೌನಕೀಯಾ ಚ ಪೌರಾಣೀ ಧರ್ಮಶಾಸ್ತ್ರಾತ್ಮಿಕಾ ಚ ಯಾ ॥ ೧೭ ॥
ತಿಸ್ರೋ ವಿದ್ಯಾ ಇಮಾ ಮುಖ್ಯಾಃ ಸರ್ವಶಾಸ್ತ್ರವಿನಿರ್ಣಯೇ ।
ಪುರಾಣಂ ಪಂಚಮೋ ವೇದ ಇತಿ ಬ್ರಹ್ಮಾನುಶಾಸನಂ ॥ ೧೮ ॥
ಯೋ ನ ವೇದ ಪುರಾಣಂ ಹಿ ನ ಸ ವೇದಾತ್ರ ಕಿಂಚನ ।
ಕತಮಃ ಸ ಹಿ ಧರ್ಮೋಽಸ್ತಿ ಕಿಂ ವಾ ಜ್ಞಾನಂ ತಥಾವಿಧಂ ॥ ೧೯ ॥

---

ಗಳನ್ನು ವಿಭಜನೆಮಾಡಿದವನೂ, ಜ್ಞಾನಭರಿತನೂ, ಸತ್ಯವತೀಪುತ್ರನೂ ಆದ ವ್ಯಾಸನೇ ಹದಿನೆಂಟು ಪುರಾಣಗಳನ್ನೂ ಹೇಳಿರುವನಷ್ಟೆ.

೧೪. ಆತನನ್ನು ನಮಸ್ಕರಿಸಿ ಪುರಾಣಗಳನ್ನು ಯಥಾಕ್ರಮವಾಗಿ ವಿವರಿಸುವೆನು. ಅವುಗಳ ಸಂಕೀರ್ತನದಿಂದಲೇ ಧರ್ಮ ಮತ್ತು ಆಯುಷ್ಯಗಳ ವೃದ್ಧಿಯುಂಟಾಗುವುದು.

೧೫. ಶ್ರುತಿಸ್ಮೃತಿಗಳೇ ಬ್ರಾಹ್ಮಣರಿಗೆ ಕಣ್ಣುಗಳೆಂದು ಪ್ರಖ್ಯಾತಿಯಿರುವುದು. ಇವುಗಳಲ್ಲಿ ಒಂದರ ಜ್ಞಾನವಿಲ್ಲದವನು ಏಕಾಕ್ಷಿಯೂ, ಎರಡನ್ನೂ ತಿಳಿಯದವನು ಅಂಧನೂ ಎನಿಸಿಕೊಳ್ಳುವನು.

೧೬. ವಿದ್ವಾಂಸರಿಗಾದರೂ ಶ್ರುತಿ, ಸ್ಮೃತಿ, ಪುರಾಣಗಳೆಂಬ ಮೂರು ಕಣ್ಣುಗಳಿರುವುವು. ಯಾವನು ಈ ಮೂರು ಕಣ್ಣುಗಳಿಂದ ತತ್ತ್ವವಿವೇಚನೆಯನ್ನು ಮಾಡುವನೊ, ಅವನನ್ನು ಮಹೇಶ್ವರಾಂಶಸಂಭೂತನೆಂದು ತಿಳಿಯಬೇಕು.

೧೭. ಪರಮೇಶ್ವರನು ತನ್ನ ಆತ್ಮದಿಂದಲೇ ವೇದವಿದ್ಯೆಯನ್ನೂ, ಶೌನಕಾದಿಗಳಿಗಾಗಿ ಪ್ರಕಟಿತಗಳಾದ ಪುರಾಣಗಳನ್ನೂ, ಧರ್ಮಶಾಸ್ತ್ರಗಳನ್ನೂ ನಿರ್ಮಿಸಿರುವನು.

೧೮. ಸಮಸ್ತ ಶಾಸ್ತ್ರಾರ್ಥಗಳ ನಿಶ್ಚಯದಲ್ಲಿಯೂ ಈ ಮೂರೇ ವಿದ್ಯೆಗಳು ಮುಖ್ಯಾಧಾರಗಳಾಗಿರುವುವು. ಪುರಾಣವು ಐದನೆಯ ವೇದವೆಂದು ಲೋಕಕರ್ತನಾದ ಬ್ರಹ್ಮನಿಂದ ಅಪ್ಪಣೆಯಾಗಿರುವುದು.

೧೯. ಯಾವನು ಪುರಾಣವನ್ನು ತಿಳಿಯಲಾರನೊ, ಅವನಿಗೆ ಧರ್ಮವು ಎಷ್ಟರಮಟ್ಟಿನದೆಂಬುದೂ, ಜ್ಞಾನವು ಎಂತಹುದೆಂಬುದೂ ಗೊತ್ತಾಗುವುದಿಲ್ಲ.

ಅನ್ಯದ್ವಾ ತತ್ಕಿಮುತ್ರಾಹ ಪುರಾಣೇ ಯತ್ರ ದೃಶ್ಯತೇ ।
ವೇದಾಃ ಪ್ರತಿಷ್ಠಿತಾಃ ಪೂರ್ವಂ ಪುರಾಣೇ ನಾಽತ್ರ ಸಂಶಯಃ ॥ ೨೦ ॥
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ ।
ಇತಿಹಾಸಪುರಾಣೈಶ್ಚ ಕೃತೋಽಯಂ ನಿಶ್ಚಯಃ ಪುರಾ ॥ ೨೧ ॥
ಆತ್ಮಾ ಪುರಾಣಂ ವೇದಾನಾಂ ಪೃಥಗಂಗಾನಿ ತಾನಿ ಷಟ್ ।
ಯಚ್ಚ ದೃಷ್ಟಂ ಹಿ ವೇದೇಷು ತದ್ದೃಷ್ಟಂ ಸ್ಮೃತಿಭಿಃ ಕಿಲ ॥ ೨೨ ॥
ಉಭಾಭ್ಯಾಂ ಯತ್ತು ದೃಷ್ಟಂ ಹಿ ತತ್ಪುರಾಣೇಷು ಗೀಯತೇ ।
ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಃ ಸ್ಮೃತಂ ॥ ೨೩ ॥
ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ ।
ಪುರಾಣಮೇಕಮೇವಾಽಽಸೀದಸ್ಮಿನ್ಕಲ್ಪಾಂತರೇ ಮುನೇ ॥ ೨೪ ॥
ತ್ರಿವರ್ಗಸಾಧನಂ ಪುಣ್ಯಂ ಶತಕೋಟಿಪ್ರವಿಸ್ತರಂ ।
ಸ್ಮೃತ್ವಾ ಜಗಾದ ಚ ಮುನೀನ್ಪ್ರತಿ ದೇವಶ್ಚತುರ್ಮುಖಃ ॥ ೨೫ ॥

---

೨೦. ಪುರಾಣದಲ್ಲಿ ಕಾಣದಿರುವ ಬೇರೆ ಅಂಶವು ಯಾವುದು ಎಲ್ಲಿ ತಾನೆ ಹೇಳಲ್ಪಟ್ಟಿರುವುದು? ಹಿಂದೆ ವೇದಗಳೇ ಪುರಾಣದಲ್ಲಿ ನೆಲೆಗೊಂಡಿದ್ದುವೆಂಬುದು ನಿಸ್ಸಂಶಯವಾದ ವಿಷಯವು.

೨೧. ಸ್ವಲ್ಪವಾಗಿ ಅಧ್ಯಯನವನ್ನು ಮಾಡಿದವನಿಂದ ವೇದವು, "ಈತನು ನನ್ನನ್ನು ಹಾಳುಮಾಡುವನು" ಎಂದು ಭಯಪಡುವುದು. ಈ ವೇದಾರ್ಥವೇ ಹಿಂದೆ ಇತಿಹಾಸ ಪುರಾಣಗಳಿಂದ ನಿಶ್ಚಯಿಸಲ್ಪಟ್ಟಿರುವುದು.

೨೨. ವೇದಗಳಿಗೆ ಪುರಾಣವೇ ಆತ್ಮವಾಗಿರುವುದು. ಅವುಗಳಿಗೆ ಷಡಂಗಗಳು ಬೇರೆಯಾಗಿರುವುವು. ವೇದಗಳಲ್ಲಿ ಯಾವುದು ಪ್ರತಿಪಾದಿತವಾಗಿರುವುದೊ, ಅದೇ ಸ್ಮೃತಿಗಳಲ್ಲಿಯೂ ಕಂಡುಬರುತ್ತಿರುವುದು.

೨೩. ಈ ಶ್ರುತಿಸ್ಮೃತಿಗಳಲ್ಲಿ ಯಾವ ಸಾರವಿರುವುದೊ ಅದನ್ನೇ ಪುರಾಣಗಳಲ್ಲಿಯೂ ಕೀರ್ತಿಸಿರುವರು. ಸಮಸ್ತ ಶಾಸ್ತ್ರಗಳಿಗೂ ಪುರಾಣವೇ ಮೊದಲನೆಯದೆಂದು ಬ್ರಹ್ಮನು ಹೇಳಿರುವನು.

೨೪. ಪುರಾಣಗಳಾದಮೇಲೆಯೇ ವೇದಗಳು ಆತನ ಮುಖದಿಂದ ಹೊರಬಿದ್ದುವು. ಮುನಿಯೆ! ಈ ಕಲ್ಪದ ಆರಂಭದಲ್ಲಿ ನೂರುಕೋಟಿ ಗ್ರಂಥಗಳ ವಿಸ್ತಾರದ ಪುರಾಣವೊಂದೇ ತ್ರಿವರ್ಗಗಳಿಗೆ ಸಾಧನವೂ, ಪುಣ್ಯಪ್ರದವೂ ಆಗಿದ್ದಿತು.

೨೫. ಇದನ್ನು ಸ್ಮರಿಸಿಕೊಂಡೇ ಚತುರ್ಮುಖನು ಮುನಿಗಳಿಗೆ ಉಪದೇಶ ಮಾಡಿದನು. ಪುರಾಣದಿಂದಲೇ ಸಮಸ್ತ ಶಾಸ್ತ್ರಗಳೂ ಪ್ರವರ್ತಿಸಿದುವು.

ಪ್ರವೃತ್ತಿಃ ಸರ್ವಶಾಸ್ತ್ರಾಣಾಂ ಪುರಾಣಸ್ಯಾಽಭವತ್ತತಃ ।
ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ತತೋ ಮುನಿಃ ॥ ೨೬ ॥
ವ್ಯಾಸರೂಪಂ ವಿಭುಃ ಕೃತ್ವಾ ಸಂಹರೇತ್ಸ ಯುಗೇ ಯುಗೇ ।
ಅಷ್ಟಲಕ್ಷ ಪ್ರಮಾಣೇತು ದ್ವಾಪರೇ ದ್ವಾಪರೇ ಸದಾ ॥ ೨೭ ॥
ತದಷ್ಟಾದಶಧಾ ಕೃತ್ವಾ ಭೂರ್ಲೋಕೇಽಸ್ಮಿನ್ಪ್ರಭಾಷ್ಯತೇ ।
ಅದ್ಯಾಽಪಿ ದೇವಲೋಕೇ ತಚ್ಛತಕೋಟಿಪ್ರವಿಸ್ತರಂ ॥ ೨೮ ॥
ತದಥಾಽತ್ರ ಚತುರ್ಲಕ್ಷಂ ಸಂಕ್ಷೇಪೇಣ ನಿವೇಶಿತಂ ।
ಪುರಾಣಾನಿ ದಶಾಽಷ್ಟೌ ಚ ಸಾಂಪ್ರತಂ ತದಿಹೋಚ್ಯತೇ ।
ನಾಮತಸ್ತಾನಿ ವಕ್ಷ್ಯಾಮಿ ಶೃಣು ತ್ವಮೃಷಿಸತ್ತಮ ॥ ೨೯ ॥
ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥ ೩೦ ॥
ಬ್ರಾಹ್ಮಂ ಪುರಾಣಂ ತತ್ರಾದ್ಯಂ ಸಂಹಿತಾಯಾಂ ವಿಭೂಷಿತಂ ।
ಶ್ಲೋಕಾನಾಂ ದಶಸಾಹಸ್ರಂ ನಾನಾಪುಣ್ಯಕಥಾಯುತಂ ॥ ೩೧ ॥

---

೨೬. ಕಾಲವು ಕಳೆದಂತೆ ಜನಗಳು ಅದನ್ನು ಗ್ರಹಿಸಲು ಅಶಕ್ತರಾದುದನ್ನು ಕಂಡು ಚಿಂತಾಪರನಾಗಿ ಆ ಸರ್ವವ್ಯಾಪಿಯೇ ವ್ಯಾಸರೂಪದಿಂದ ಅವತರಿಸಿ ಯುಗಯುಗಕ್ಕೂ ಆ ಪುರಾಣರಾಶಿಯನ್ನು ಸಂಕೋಚಮಾಡಿದನು.

೨೭. ಪ್ರತಿಯೊಂದು ದ್ವಾಪರಯುಗದಲ್ಲಿಯೂ ಅದು ಎಂಟುಲಕ್ಷ ಪ್ರಮಾಣವುಳ್ಳದ್ದಾಯಿತು. ಅದನ್ನೂ ವ್ಯಾಸಮುನಿಯು ಹದಿನೆಂಟು ಭಾಗಗಳನ್ನಾಗಿ ಮಾಡಿ ಭೂಲೋಕದಲ್ಲಿ ಪ್ರಚುರಪಡಿಸಿದನು.

೨೮. ಇಂದಿಗೂ ಅದು ದೇವಲೋಕದಲ್ಲಿ ನೂರುಕೋಟಿ ಗ್ರಂಥರಾಶಿಯಾಗಿಯೇ ಉಳಿದಿರುವುದು. ಇಲ್ಲಿ ಮಾತ್ರ ಸಂಕ್ಷೇಪರೂಪದಿಂದ ನಾಲ್ಕುಲಕ್ಷ ಗ್ರಂಥವಾಗಿ ಇಡಲ್ಪಟ್ಟಿರುವುದು.

೨೯. ಎಲೈ ಋಷಿಶ್ರೇಷ್ಠನೆ! ಈಗ ಭೂಲೋಕದಲ್ಲಿ ಯಾವ ಹದಿನೆಂಟು ಪುರಾಣಗಳು ಪ್ರಖ್ಯಾತಗಳಾಗಿವೆಯೊ, ಅವುಗಳ ಹೆಸರುಗಳನ್ನು ಕೇಳುವವನಾಗು.

೩೦. ಬ್ರಹ್ಮಾಂಡದ ಉತ್ಪತ್ತಿ, ಲಯ, ಆದಿ ವಂಶಾವಳಿಗಳು, ಮನ್ವಂತರಗಳು, ವಂಶಾವಳಿಗಳ ವ್ಯಕ್ತಿಗಳ ಚರಿತ್ರೆಗಳು ಎಂಬ ಐದು ವಿಷಯಗಳನ್ನೊಳಗೊಂಡಿರುವುದೇ ಪುರಾಣಕ್ಕೆ ಲಕ್ಷಣವೆಂದು ಹೇಳುವರು.

೩೧. ಈ ರಾಶಿಯಲ್ಲಿ ಸಂಹಿತೆಗಳಿಂದ ಕಂಗೊಳಿಸುತ್ತಿರುವ ಬ್ರಾಹ್ಮಪುರಾಣವೇ ಮೊದಲನೆಯದು. ಅದು ಹತ್ತುಸಾವಿರ ಶ್ಲೋಕಗಳುಳ್ಳದಾಗಿ ಅನೇಕ ಪುಣ್ಯಕಥೆಗಳನ್ನೊಳಗೊಂಡಿರುವುದು.

ಪಾದ್ಮಂ ಚ ಪಂಚಪಂಚಾಶತ್ಸಹಸ್ರಾಣಿ ನಿಗದ್ಯತೇ ।
ತೃತೀಯಂ ವೈಷ್ಣವಂ ನಾಮ ತ್ರಯೋವಿಂಶತಿಸಂಖ್ಯಯಾ ॥ ೩೨ ॥
ಚತುರ್ಥಂ ವಾಯುನಾ ಪ್ರೋಕ್ತಂ ವಾಯವೀಯಮಿತಿ ಸ್ಮೃತಂ ।
ಶಿವಭಕ್ತಿಸಮಾಯೋಗಾಚ್ಛೈವಂ ತಚ್ಚಾಽಪರಾಖ್ಯಯಾ ॥ ೩೩ ॥
ಚತುರ್ವಿಂಶತಿಸಂಖ್ಯಾತಂ ಸಹಸ್ರಾಣಿ ತು ಶೌನಕ ।
ಚತುರ್ಭಿಃ ಪರ್ವಭಿಃ ಪ್ರೋಕ್ತಂ ಭವಿಷ್ಯಂ ಪಂಚಮಂ ತಥಾ ॥ ೩೪ ॥
ಚತುರ್ದಶಸಹಸ್ರಾಣಿ ತಥಾ ಪಂಚಶತಾನಿ ತತ್ ।
ಮಾರ್ಕಂಡಂ ನವಸಾಹಸ್ರಂ ಷಷ್ಠಂ ತತ್ಪರಿಕೀರ್ತಿತಂ ॥ ೩೫ ॥
ಆಗ್ನೇಯಂ ಸಪ್ತಮಂ ಪ್ರೋಕ್ತಂ ಸಹಸ್ರಾಣಿ ತು ಷೋಡಶ ।
ಅಷ್ಟಮಂ ನಾರದೀಯಂ ತು ಪ್ರೋಕ್ತಂ ವೈ ಪಂಚವಿಂಶತಿಃ ॥ ೩೬ ॥
ನವಮಂ ಭಗವನ್ನಾಮ ಭಾಗದ್ವಯವಿಭೂಷಿತಂ ।
ತದಷ್ಟಾದಶಸಾಹಸ್ರಂ ಪ್ರೋಚ್ಯತೇ ಗ್ರಂಥಸಂಖ್ಯಯಾ ॥ ೩೭ ॥
ದಶಮಂ ಬ್ರಹ್ಮವೈವರ್ತಂ ತಾವತ್ಸಂಖ್ಯಮಿಹೋಚ್ಯತೇ ।
ಲೈಂಗಮೇಕಾದಶಂ ಜ್ಞೇಯಂ ತಥೈಕಾದಶಸಂಖ್ಯಯಾ ॥ ೩೮ ॥

---

೩೨–೩೩. ಪಾದ್ಮಪುರಾಣವು ಐವತ್ತೈದು ಸಾವಿರ ಶ್ಲೋಕಗಳುಳ್ಳದ್ದೆಂದು ಹೇಳುವರು. ಮೂರನೆಯದೇ ಇಪ್ಪತ್ತಮೂರು ಸಾವಿರ ಶ್ಲೋಕಗಳ ವೈಷ್ಣವ (ವಿಷ್ಣು) ಪುರಾಣವು. ನಾಲ್ಕನೆಯದನ್ನು ವಾಯುದೇವನು ಹೇಳಿದುದರಿಂದ ವಾಯವೀಯವೆಂದು ಕರೆಯುವರು. ಅದನ್ನೇ ಶಿವಭಕ್ತಿಯನ್ನು ಕೈಗೂಡಿಸುವ ಶಿವಪುರಾಣವೆಂದೂ ಕರೆಯುವರು.

೩೪. ಎಲೈ ಶೌನಕನೆ! ಅದು ಇಪ್ಪತ್ತನಾಲ್ಕುಸಾವಿರ ಸಂಖ್ಯೆಯ ಶ್ಲೋಕಗಳಿಂದ ಕೂಡಿರುವುದು. ಐದನೆಯ ಭವಿಷ್ಯೋತ್ತರಪುರಾಣವು ನಾಲ್ಕುಪರ್ವಗಳನ್ನೊಳಗೊಂಡಿರುವುದು.

೩೫. ಅದು ಹದಿನಾಲ್ಕುಸಾವಿರದ ಐನೂರು ಶ್ಲೋಕಗಳುಳ್ಳದ್ದಾಗಿರುವುದು. ಆರನೆಯ ಮಾರ್ಕಂಡೇಯಪುರಾಣವು ಒಂಬತ್ತುಸಾವಿರ ಗ್ರಂಥವುಳ್ಳದ್ದೆಂದು ಪ್ರಸಿದ್ಧವಾಗಿರುವುದು.

೩೬. ಏಳನೆಯ ಅಗ್ನಿಪುರಾಣವು ಹದಿನಾರುಸಾವಿರ ಶ್ಲೋಕಗಳಿಂದ ಕೂಡಿದುದೂ, ಎಂಟನೆಯ ನಾರದಪುರಾಣವು ಇಪ್ಪತ್ತೈದುಸಾವಿರ ಶ್ಲೋಕಗಳುಳ್ಳದ್ದೂ ಆಗಿರುವುವು.

೩೭. ಒಂಬತ್ತನೆಯ ಮಹಾಭಾಗವತವು ಎರಡು ಭಾಗಗಳಾಗಿರುವುದು. ಅದರಲ್ಲಿನ ಗ್ರಂಥಸಂಖ್ಯೆಯು ಹದಿನೆಂಟುಸಾವಿರವೆಂದು ಹೇಳುವರು.

೩೮. ಹತ್ತನೆಯ ಬ್ರಹ್ಮವೈವರ್ತಪುರಾಣವೂ ಅಷ್ಟೇ ಸಂಖ್ಯೆಯ ಶ್ಲೋಕ

ಭಾಗದ್ವಯಂ ವಿರಚಿತಂ ತಲ್ಲಿಂಗಮೃಷಿಪುಂಗವ ।
ಚತುರ್ವಿಂಶತಿಸಾಹಸ್ರಂ ವಾರಾಹಂ ದ್ವಾದಶಂ ವಿದುಃ ॥ ೩೯ ॥
ವಿಭಕ್ತಂ ಸಪ್ತಭಿಃ ಖಂಡೈಃ ಸ್ಕಾಂದಂ ಭಾಗ್ಯವತಾಂ ವರ ।
ತದೇಕಾಶೀತಿಸಾಹಸ್ರಂ ಸಂಖ್ಯಯಾ ವೈ ನಿರೂಪಿತಂ ॥ ೪೦ ॥
ತತಸ್ತು ವಾಮನಂ ನಾಮ ಚತುರ್ದಶತಮಂ ಸ್ಮೃತಂ ।
ಸಂಖ್ಯಯಾ ದಶಸಾಹಸ್ರಂ ಪ್ರೋಕ್ತಂ ಕುಲಪತೇ ಪುರಾ ॥ ೪೧ ॥
ಕೌರ್ಮಂ ಪಂಚದಶಂ ಪ್ರಾಹುರ್ಭಾಗದ್ವಯವಿಭೂಷಿತಂ ।
ದಶಸಪ್ತಸಹಸ್ರಾಣಿ ಪುರಾ ಸಾಂಖ್ಯಪತೇ ಕಲೌ ॥ ೪೨ ॥
ಮಾತ್ಸ್ಯಂ ಮತ್ಸ್ಯೇನ ಯತ್ಪ್ರೋಕ್ತಂ ಮನವೇ ಷೋಡಶಂ ಕ್ರಮಾತ್ ।
ತಚ್ಚತುರ್ದಶಸಾಹಸ್ರಂ ಸಂಖ್ಯಯಾ ವದತಾಂ ವರ ॥ ೪೩ ॥
ಗಾರುಡಂ ಸಪ್ತದಶಮಂ ಸ್ಮೃತಂ ಚೈಕೋನವಿಂಶತಿಃ ।
ಅಷ್ಟಾದಶಂ ತು ಬ್ರಹ್ಮಾಂಡಂ ಭಾಗದ್ವಯವಿಭೂಷಿತಂ ॥ ೪೪ ॥

---

ಗಳುಳ್ಳುದೆಂದು ಹೇಳುವರು. ಹನ್ನೊಂದನೆಯ ಲಿಂಗಪುರಾಣದಲ್ಲಿ ಹನ್ನೊಂದು ಸಾವಿರ ಶ್ಲೋಕಗಳಿರುವುವೆಂದು ತಿಳಿಯಬೇಕು.

೩೯. ಆ ಲಿಂಗಪುರಾಣವೂ ಎರಡು ಭಾಗಗಳಾಗಿ ರಚಿಸಲ್ಪಟ್ಟಿರುವುದು. ಹನ್ನೆರಡನೆಯ ವರಾಹಪುರಾಣವು ಇಪ್ಪತ್ತನಾಲ್ಕುಸಾವಿರ ಶ್ಲೋಕಗಳದೆಂದು ಪ್ರಾಜ್ಞರು ತಿಳಿದಿರುವರು.

೪೦. ಮಹಾಭಾಗ್ಯಶಾಲಿಯೆ! ಸ್ಕಾಂದಮಹಾಪುರಾಣವು ಏಳುಖಂಡಗಳಾಗಿ ವಿಭಜಿಸಲ್ಪಟ್ಟಿರುವುದು. ಅದರಲ್ಲಿ ಎಂಬತ್ತೊಂದುಸಾವಿರ ಶ್ಲೋಕಗಳಿರುವುವೆಂದು ಹೇಳಿರುವುದು.

೪೧. ಬಳಿಕ ಹದಿನಾಲ್ಕನೆಯ ವಾಮನಪುರಾಣವಿರುವುದು. ಅದು ಹಿಂದೆ ಹತ್ತುಸಾವಿರ ಶ್ಲೋಕಗಳಿಂದ ಕೂಡಿದ್ದುದಾಗಿ ಕೀರ್ತಿತವಾಗಿದ್ದಿತು.

೪೨. ಎರಡು ಭಾಗಗಳಿಂದ ರಂಜಿಸುತ್ತಿರುವ ಕೂರ್ಮಪುರಾಣವೇ ಹದಿನೈದನೆಯುದು. ಸಾಂಖ್ಯಜ್ಞಶ್ರೇಷ್ಠನೆ! ಕಲಿಯುಗದಲ್ಲಿ ಅದು ಹದಿನೇಳು ಸಾವಿರ ಶ್ಲೋಕವುಳ್ಳದ್ದೆಂದು ಹೇಳಿರುವರು.

೪೩. ಮತ್ಸ್ಯಮೂರ್ತಿಯು ಮನುವಿಗೆ ಹೇಳಿದುದೇ ಮತ್ಸ್ಯಪುರಾಣವೆಂಬ ಹದಿನಾರನೆಯುದು. ಅದು ಹದಿನಾಲ್ಕುಸಾವಿರ ಗ್ರಂಥದಿಂದೊಡಗೂಡಿರುವುದು.

೪೪. ಹದಿನೇಳನೆಯ ಗರುಡಪುರಾಣವು ಹತ್ತೊಂಬತ್ತುಸಾವಿರ ಶ್ಲೋಕಗಳಿಂದಲೂ, ಹದಿನೆಂಟನೆಯ ಬ್ರಹ್ಮಾಂಡಪುರಾಣವು ಎರಡು ಭಾಗಗಳಿಂದಲೂ ಕೂಡಿರುವುವೆಂದು ಹೇಳುವರು.

ತಚ್ಚ ದ್ವಾದಶಸಾಹಸ್ರಂ ಶತಮಷ್ಟಸಮನ್ವಿತಂ ।
ತಥೈವೋಪಪುರಾಣಾನಿ ಯಾನಿ ಚೋಕ್ತಾನಿ ವೇಧಸಾ ॥ ೪೫ ॥
ಇದಂ ಬ್ರಹ್ಮಪುರಾಣಸ್ಯ ಸುಲಭಂ ಸೌರಮುತ್ತಮಂ ।
ಸಂಹಿತಾದ್ವಯಸಂಯುಕ್ತಂ ಪುಣ್ಯಂ ಶಿವಕಥಾಶ್ರಯಂ ॥ ೪೬ ॥
ಆದ್ಯಾ ಸನತ್ಕುಮಾರೋಕ್ತಾ ದ್ವಿತೀಯಾ ಸೂರ್ಯಭಾಷಿತಾ ।
ಸನತ್ಕುಮಾರನಾಮ್ನಾ ಹಿ ತದ್ವಿಖ್ಯಾತಂ ಮಹಾಮುನೇ ॥ ೪೭ ॥
ದ್ವಿತೀಯಂ ನಾರಸಿಂಹಂ ಚ ಪುರಾಣೇ ಪಾದ್ಮಸಂಜ್ಞಿತೇ ।
ಶೌಕೇಯಂ ಹಿ ತೃತೀಯಂ ತು ಪುರಾಣೇ ವೈಷ್ಣವೇ ಮತಂ ॥ ೪೮ ॥
ಬಾರ್ಹಸ್ಪತ್ಯಂ ಚತುರ್ಥಂ ಚ ವಾಯವ್ಯಂ ಸಂಮತಂ ಸದಾ ।
ದೌರ್ವಾಸಸಂ ಪಂಚಮಂ ಚ ಸ್ಮೃತಂ ಭಾಗವತೇ ಸದಾ ॥ ೪೯ ॥
ಭವಿಷ್ಯೇ ನಾರದೋಕ್ತಂ ಚ ಸೂರಿಭಿಃ ಕಥಿತಂ ಪುರಾ ।
ಕಾಪಿಲಂ ಮಾನವಂ ಚೈವ ತಥೈವೋಶನಸೇರಿತಂ ॥ ೫೦ ॥

---

೪೫. ಅದು ಹನ್ನೆರಡುಸಾವಿರದ ಎಂಟುನೂರು ಶ್ಲೋಕಗಳಿಂದ ಕೂಡಿರುವುದೆಂದು ಹೇಳುವರು. ಇವುಗಳಲ್ಲದೆ ಬ್ರಹ್ಮದೇವನು ಉಪಪುರಾಣಗಳನ್ನೂ ಹೇಳಿರುವನು.

೪೬. ಬ್ರಹ್ಮಪುರಾಣಕ್ಕೆ ಸುಲಭವೂ, ಉತ್ತಮವೂ ಆದ ಸೌರಪುರಾಣವು ಉಪಪುರಾಣವಾಗಿರುವುದು. ಇದು ಎರಡು ಸಂಹಿತೆಗಳಿಂದ ಕೂಡಿ ಪುಣ್ಯಪ್ರದವೂ, ಅನೇಕ ಶಿವಕಥೆಗಳಿಗೆ ಆಕರವೂ ಆಗಿರುವುದು.

೪೭. ಮೊದಲನೆಯದನ್ನು ಸನತ್ಕುಮಾರನೂ, ಎರಡನೆಯದನ್ನು ಸೂರ್ಯದೇವನೂ ಹೇಳಿರುವರು. ಮಹಾಮುನಿಯೆ ! ಆದರೂ ಅದು ಸನತ್ಕುಮಾರನ ಹೆಸರಿನಿಂದಲೇ ಪ್ರಖ್ಯಾತವಾಗಿರುವುದು.

೪೮. ಎರಡನೆಯದು ಪದ್ಮಪುರಾಣಕ್ಕೆ ಸಂಬಂಧಿಸಿದ ನಾರಸಿಂಹ ಪುರಾಣವು. ಮೂರನೆಯದೇ ವಿಷ್ಣುಪುರಾಣಕ್ಕೆ ಸೇರಿದ ಶುಕಪುರಾಣವೆಂದು ಹೇಳುವರು.

೪೯. ವಾಯುಪುರಾಣಕ್ಕೆ ಸಮ್ಮತವಾದ ಬೃಹಸ್ಪತಿಪುರಾಣವು ನಾಲ್ಕನೆಯದೂ, ಭಾಗವತಕ್ಕೆ ಸೇರಿದ ದೂರ್ವಾಸಪುರಾಣವು ಐದನೆಯದೂ ಆಗಿರುವುವು.

೫೦. ಭವಿಷ್ಯೋತ್ತರಪುರಾಣಕ್ಕೆ ಸೇರಿದ ನಾರದಪುರಾಣವೊಂದಿರುವುದೆಂದು ಪಂಡಿತರು ಹಿಂದೆಯೆ ಹೇಳಿರುವರು. ಬಳಿಕ ಕಾಪಿಲ, ಮಾನವ ಮತ್ತು ಉಶನಪುರಾಣಗಳಿರುವುವು.

ಬ್ರಹ್ಮಾಂಡಂ ವಾರುಣಂ ಚಾಽಥ ಕಾಲಿಕಾದ್ವಯಮೇವ ಚ ।
ಮಾಹೇಶ್ವರಂ ತಥಾ ಸಾಂಬಂ ಸೌರಂ ಸರ್ವಾರ್ಥಸಂಚಯಂ ॥ ೫೧ ॥
ಪಾರಾಶರಂ ಭಾಗವತಂ ಕೌರ್ಮಂ ಚಾಷ್ಟಾದಶಂ ಕ್ರಮಾತ್ ।
ಏತಾನ್ಯುಪಪುರಾಣಾನಿ ಮಯೋಕ್ತಾನಿ ಯಥಾಕ್ರಮಂ ॥ ೫೨ ॥
ಪುರಾಣಸಂಹಿತಾಮೇತಾಂ ಯಃ ಪಠೇದ್ವಾ ಶೃಣೋತಿ ಚ ।
ಸೋಽನಂತಪುಣ್ಯಭಾಗೀ ಸ್ಯಾನ್ಮೃತೋ ಬ್ರಹ್ಮಪುರಂ ವ್ರಜೇತ್ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪುರಾಣಸಂಹಿತಾವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೫೧. ಆಮೇಲೆ ಬ್ರಹ್ಮಾಂಡ, ವಾರುಣ, ಎರಡು ಕಾಳಿಕಾಪುರಾಣಗಳು, ಮಾಹೇಶ್ವರ, ಸಾಂಬ, ಸಕಲಾಭೀಷ್ಟಪ್ರದವಾದ ಸೌರಪುರಾಣಗಳೂ ಇರುವುವು.

೫೨. ಬಳಿಕ ಪರಾಶರಪ್ರೋಕ್ತವಾದ ಭಾಗವತವೂ, ಹದಿನೆಂಟನೆಯದಾದ ಕೂರ್ಮಪುರಾಣವೂ ಕ್ರಮವಾಗಿರುವುವು. ಇಂತು ಉಪಪುರಾಣಗಳೆಲ್ಲವನ್ನೂ ಕ್ರಮವಾಗಿ ನಿನಗೆ ವಿವರಿಸಿರುವೆನು.

೫೩. ಯಾವನು ಪುರಾಣಸಂಹಿತೆಯನ್ನೊಳಗೊಂಡ ಈ ಅಧ್ಯಾಯವನ್ನು ಓದುವನೊ, ಯಾವನು ಕೇಳುವನೊ, ಅವನು ಇಹದಲ್ಲಿ ಅನಂತವಾದ ಪುಣ್ಯಕ್ಕೆ ಭಾಗಿಯಾಗಿ ದೇಹವನ್ನು ಬಿಟ್ಟಮೇಲೆ ಬ್ರಹ್ಮಲೋಕದಲ್ಲಿ ವಾಸಮಾಡುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪುರಾಣಸಂಹಿತಾವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ರೇವಾಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ನರ್ಮದಾಯಾಸ್ತು ಮಾಹಾತ್ಮ್ಯಂ ಕೃಷ್ಣದ್ವೈಪಾಯನೋಽಬ್ರವೀತ್ ।**
**ತತ್ತೇಽಹಂ ಸಂಪ್ರವಕ್ಷ್ಯಾಮಿ ಯತ್ತ್ವಯಾ ಪರಿಪೃಚ್ಛಿತಂ ॥ ೧ ॥**
**ವಿಸ್ತರಂ ನರ್ಮದಾಯಾಸ್ತು ತೀರ್ಥಾನಾಂ ಮುನಿಸತ್ತಮ ।**
**ಕೋಽನ್ಯಃ ಶಕ್ತೋಽಸ್ತಿ ವೈ ವಕ್ತುಮೃತೇ ಬ್ರಹ್ಮಾಣಮೀಶ್ವರಂ ॥ ೨ ॥**
**ಏತದೇವ ಪುರಾ ಪ್ರಶ್ನಂ ಪೃಷ್ಟವಾನ್ ಜನಮೇಜಯಃ ।**
**ವೈಶಂಪಾಯನಸಂಜ್ಞಂ ತು ಶಿಷ್ಯಂ ದ್ವೈಪಾಯನಸ್ಯ ಹ ॥ ೩ ॥**
**ರೇವಾತೀರ್ಥಾಶ್ರಿತಂ ಪುಣ್ಯಂ ತತ್ತೇ ವಕ್ಷ್ಯಾಮಿ ಶೌನಕ ।**
**ಪುರಾ ಪಾರೀಕ್ಷಿತೋ ರಾಜಾ ಯಜ್ಞದೀಕ್ಷಾಸು ದೀಕ್ಷಿತಃ ॥ ೪ ॥**
**ಸಂಭೃತೇ ತು ಹವಿರ್ದ್ರವ್ಯೇ ವರ್ತಮಾನೇಷು ಕರ್ಮಸು ।**
**ಆಸೀನೇಷು ದ್ವಿಜಾಗ್ರ್ಯೇಷು ಹೂಯಮಾನೇ ಹುತಾಶನೇ ॥ ೫ ॥**

---

## ಕನ್ನಡದ ಅನುವಾದ

### ರೇವಾಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ನರ್ಮದೆಯ ಮಾಹಾತ್ಮ್ಯವನ್ನು ಕೃಷ್ಣದ್ವೈಪಾಯನಮುನಿಯು ಹೇಳಿದನು. ಅದನ್ನು ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ತಿಳಿಸುವೆನು.

೨. ಎಲೈ ಮುನಿವರ್ಯನೆ! ನರ್ಮದಾನದಿಯ ತೀರದಲ್ಲಿರುವ ತೀರ್ಥಗಳ ಸಮಗ್ರಪ್ರಭಾವವನ್ನು ಲೋಕೇಶ್ವರನಾದ ಬ್ರಹ್ಮದೇವನಲ್ಲದೆ ಮತ್ತೆ ಯಾವನು ತಾನೆ ವಿವರಿಸಲು ಶಕ್ತನಾಗುವನು?

೩. ಹಿಂದೆ ಜನಮೇಜಯಮಹಾರಾಜನು ವ್ಯಾಸಶಿಷ್ಯನಾದ ವೈಶಂಪಾಯನಮುನಿಯಲ್ಲಿ ಇದೇ ಪ್ರಶ್ನೆಯನ್ನೇ ಕೇಳುವವನಾದನು.

೪. ಶೌನಕ! ರೇವಾತೀರ್ಥಗಳ ಸೇವೆಯಿಂದ ಲಭಿಸುವ ಪುಣ್ಯವನ್ನು ಆತನು ಹೇಳಿದಂತೆ ವಿವರಿಸುವೆನು. ಹಿಂದೆ ಪರೀಕ್ಷಿತ್ಪುತ್ರನಾದ ಜನಮೇಜಯನು ಮಹಾಯಜ್ಞವನ್ನು ಮಾಡಲುದ್ಯುಕ್ತನಾಗಿ ದೀಕ್ಷೆಯನ್ನು ವಹಿಸಿದ್ದನು.

೫. ಹವಿರ್ದ್ರವ್ಯವು ಯಥೇಚ್ಛವಾಗಿದ್ದು ಸಕಲಕರ್ಮಗಳೂ ನಡೆಯುತ್ತಿದ್ದುವು. ಬ್ರಾಹ್ಮಣೋತ್ತಮರೆಲ್ಲರೂ ಉಚಿತಾಸನಗಳಲ್ಲಿ ಕುಳಿತಿರಲು ಅಗ್ನಿಯಲ್ಲಿ ಹೋಮಗಳನ್ನು ಮಾಡುತ್ತಿದ್ದರು.

ವರ್ತಮಾನಾಸು ಸರ್ವತ್ರ ತಥಾ ಧರ್ಮಕಥಾಸು ಚ ।
ಶ್ರೂಯಮಾಣೇ ತಥಾ ಶಬ್ದೇ ಜನ್ಯೈರುಕ್ತೇ ತ್ವಹರ್ನಿಶಂ ॥ ೬ ॥
ಯಜ್ಞಭೂಮೌ ಕುಲಪತೇ ದೀಯತಾಂ ಭುಜ್ಯತಾಮಿತಿ ।
ವಿವಿಧಾಂಶ್ಚ ವಿನೋದಾನ್ವೈ ಕುರ್ವಾಣೇಷು ವಿನೋದಿಷು ॥ ೭ ॥
ಏವಂವಿಧೇ ವರ್ತಮಾನೇ ಯಜ್ಞೇ ಸ್ವರ್ಗಸದಃಸಮೇ ।
ವೈಶಂಪಾಯನಮಾಸೀನಂ ಪಪ್ರಚ್ಛ ಜನಮೇಜಯಃ ॥ ೮ ॥

ಜನಮೇಜಯ ಉವಾಚ:—

ದ್ವೈಪಾಯನಪ್ರಸಾದೇನ ಜ್ಞಾನವಾನಸಿ ಮೇ ತತಃ ।
ವೈಶಂಪಾಯನ ತಸ್ಮಾತ್ತ್ವಾಂ ಪೃಚ್ಛಾಮಿ ಋಷಿಸನ್ನಿಧೌ ॥ ೯ ॥
ಬ್ರೂಹಿ ಮೇ ತ್ವಂ ಪುರಾವೃತ್ತಂ ಪಿತೄಣಾಂ ತೀರ್ಥಸೇವನಂ ।
ಚಿರಂ ನಾನಾವಿಧಾನ್ ಕ್ಲೇಶಾನ್ಪ್ರಾಪ್ತಾಸ್ತ ಇತಿ ಮೇ ಶ್ರುತಂ ॥ ೧೦ ॥
ಕಥಂ ದ್ಯೂತಜಿತಾಃ ಪಾರ್ಥಾ ಮಮ ಪೂರ್ವಪಿತಾಮಹಾಃ ।
ಆಸಮುದ್ರಾಂ ಮಹೀಂ ವಿಪ್ರ ಭ್ರಮುಂತಸ್ತೀರ್ಥಲೋಭತಃ ॥ ೧೧ ॥

---

೬. ಎಲ್ಲೆಲ್ಲಿಯೂ ಧರ್ಮಕಥೆಗಳು ವಿವರಿಸಲ್ಪಡುತ್ತಿದ್ದುವು. ಅಹೋರಾತ್ರಿಗಳಲ್ಲಿಯೂ ಎಡಬಿಡದೆ ಜನರು ಮಾತನಾಡಿಕೊಳ್ಳುವ ಶಬ್ದವು ಕೇಳಿಬರುತ್ತಿದ್ದಿತು.

೭. ಎಲೈ ಶೌನಕನೆ! ಯಜ್ಞಭೂಮಿಯಲ್ಲೆಲ್ಲ "ದಾನಮಾಡಿರಿ, ಭೋಜನಮಾಡಿರಿ" ಎಂಬ ಧ್ವನಿಯೇ ಕೇಳಿಬರುತ್ತಿರಲು ವಿದೂಷಕಾದಿಗಳು ಬಗೆಬಗೆಯ ವಿನೋದಗಳನ್ನು ಪ್ರದರ್ಶಿಸುತ್ತಿದ್ದರು.

೮. ಇಂತು ಸ್ವರ್ಗಲೋಕದ ಸುಧರ್ಮಸಭೆಯಂತೆ ಆ ಯಜ್ಞವಾಟವು ಮೆರೆಯುತ್ತಿರಲು ಸುಖಾಸೀನನಾಗಿದ್ದ ವೈಶಂಪಾಯನನನ್ನು ಜನಮೇಜಯನು ಈ ಪ್ರಕಾರವಾಗಿ ಪ್ರಶ್ನೆಮಾಡಿದನು.

೯. ಜನಮೇಜಯನು ಪ್ರಶ್ನೆಮಾಡುತ್ತಾನೆ:—ವೈಶಂಪಾಯನಮುನಿಯೆ! ವ್ಯಾಸಮುನಿಯ ಅನುಗ್ರಹದಿಂದ ನೀನು ಸಕಲ ಶಾಸ್ತ್ರಗಳನ್ನೂ ತಿಳಿದಿರುವೆಯೆಂದೆಣಿಸುವೆನು. ಆದುದರಿಂದ ನಿನ್ನಲ್ಲೊಂದು ಪ್ರಶ್ನೆಯನ್ನು ಮಾಡುವೆನು.

೧೦. ಹಿಂದೆ ನನ್ನ ಪ್ರಪಿತಾಮಹರು ಮಾಡಿದ ತೀರ್ಥಸೇವನೆಯ ವಿಷಯವನ್ನು ತಿಳಿಸು. ಅವರು ಬಹಳಕಾಲದವರೆಗೂ ಅನೇಕ ವಿಧಗಳಾದ ಕಷ್ಟಗಳನ್ನು ಅನುಭವಿಸಿದರೆಂದು ಕೇಳಿರುವೆನು.

೧೧. ವಿಪ್ರಶ್ರೇಷ್ಠನೆ! ನನ್ನ ಪೂರ್ವಪಿತಾಮಹರು ಕಪಟದ್ಯೂತದಲ್ಲಿ ಪರಾಜಿತರಾಗಿ ತೀರ್ಥಗಳನ್ನು ಸೇವಿಸುವ ಅಭಿಲಾಷೆಯಿಂದ ಸಮುದ್ರಪರ್ಯಂತವಾದ ಭೂಮಂಡಲವನ್ನೆಲ್ಲ ಹೇಗೆ ತಿರುಗಿದರು?

ಕೇನ ತೇ ಸಹಿತಾಸ್ತಾತ ಭೂಮಿಭಾಗಾನನೇಕಶಃ ।
ಚೇರುಃ ಕಥಯ ತತ್ಸರ್ವಂ ಸರ್ವಜ್ಞೋಽಸಿ ಮತೋ ಮಮ ॥ ೧೨ ॥
ವೈಶಂಪಾಯನ ಉವಾಚ :—
ಕಥಯಿಷ್ಯಾಮಿ ಭೂನಾಥ ಯತ್ಪೃಷ್ಟಂ ತು ತ್ವಯಾಽನಘ ।
ನಮಸ್ಕೃತ್ಯ ವಿರೂಪಾಕ್ಷಂ ವೇದವ್ಯಾಸಂ ಮಹಾಕವಿಂ ॥ ೧೩ ॥
ಪಿತಾಮಹಾಸ್ತು ತೇ ಪಂಚ ಪಾಂಡವಾಃ ಸಹಕೃಷ್ಣಯಾ ।
ಉಷಿತ್ವಾ ಬ್ರಾಹ್ಮಣೈಃ ಸಾರ್ಧಂ ಕಾಮ್ಯಕೇ ವನ ಉತ್ತಮೇ ॥ ೧೪ ॥
ಪ್ರಧಾನೋದ್ದಾಲಕೇ ತತ್ರ ಕಶ್ಯಪೋಽಥ ಮಹಾಮತಿಃ ।
ವಿಭಾಂಡಕಶ್ಚ ರಾಜೇಂದ್ರ ಗುರುಶ್ಚೈವ ಮಹಾಮುನಿಃ ॥ ೧೫ ॥
ಪುಲಸ್ತ್ಯೋ ಲೋಮಶಶ್ಚೈವ ತಥಾಽನ್ಯೇ ಪುತ್ರಪೌತ್ರಿಣಃ ।
ಸ್ನಾತ್ವಾ ನಿಃಶೇಷತೀರ್ಥೇಷು ಗತಾಸ್ತೇ ವಿಂಧ್ಯಪರ್ವತಂ ॥ ೧೬ ॥
ತೇ ಚ ತತ್ರಾಶ್ರಮಂ ಪುಣ್ಯಂ ಸರ್ವೈರ್ವೃಕ್ಷೈಃ ಸಮಾಕುಲಂ ।
ಚಂಪಕೈಃ ಕರ್ಣಿಕಾರೈಶ್ಚ ಪುನ್ನಾಗೈರ್ನಾಗಕೇಸರೈಃ ॥ ೧೭ ॥

---

೧೨. ಯಾರೊಡಗೂಡಿ ಅವರು ಅನೇಕಗಳಾದ ತೀರ್ಥಕ್ಷೇತ್ರಗಳನ್ನು ಸಂಚರಿಸಿದರೆಂಬ ವಿಷಯವನ್ನು ನಿಶ್ಶೇಷವಾಗಿ ಹೇಳಲು ಸರ್ವಜ್ಞನಾದ ನೀನೇ ತಕ್ಕವನೆಂದು ನಾನು ತಿಳಿದಿರುವೆನು.

೧೩. ವೈಶಂಪಾಯನನು ಹೇಳುತ್ತಾನೆ:—ನಿಷ್ಕಲ್ಮಷನಾದ ಓ ರಾಜೇಂದ್ರನೆ! ಆದಿಯಲ್ಲಿ ಪರಮೇಶ್ವರನಿಗೂ, ಮಹಾ ಕವಿಯಾದ ವೇದವ್ಯಾಸನಿಗೂ ನಮಸ್ಕರಿಸಿ ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳುವೆನು.

೧೪. ನಿನ್ನ ಪಿತಾಮಹರಾದ ಪಂಚಪಾಂಡವರು, ದ್ರೌಪದಿಯೊಡನೆಯೂ, ಬ್ರಾಹ್ಮಣರ ಸಮೂಹದೊಡನೆಯೂ ಸರ್ವೋತ್ತಮವಾದ ಕಾಮ್ಯಕವನದಲ್ಲಿ ವಾಸಮಾಡುತ್ತಿದ್ದರು.

೧೫. ಆ ಋಷಿಸಮೂಹದಲ್ಲಿ ಪ್ರಧಾನರಾದವರು ಮಹಾ ಪ್ರಾಜ್ಞನಾದ ಕಾಶ್ಯಪ, ವಿಭಾಂಡಕ ಮತ್ತು ಆಚಾರ್ಯನೂ, ಮಹಾಮುನಿಯೂ ಆದ ಧೌಮ್ಯನು.

೧೬. ಪುಲಸ್ತ್ಯ, ಲೋಮಶ ಮುಂತಾದವರೂ, ಅವರ ಪುತ್ರಪೌತ್ರಾದಿಗಳೂ ಅನೇಕ ತೀರ್ಥಗಳಲ್ಲಿ ಮಿಂದು ಕಡೆಗೆ ವಿಂಧ್ಯಪರ್ವತಕ್ಕೆ ಬಂದರು.

೧೭. ಅಲ್ಲಿ ಒಂದು ಆಶ್ರಮಪ್ರದೇಶವು ಚಂಪಕ, ಕರ್ಣಿಕಾರ, ಪುನ್ನಾಗ, ನಾಗಕೇಸರಗಳೇ ಮುಂತಾದ ಎಲ್ಲ ಬಗೆಯ ಗಿಡಗಳಿಂದಲೂ ತುಂಬಿದ್ದಿತು.

ಬಕುಲೈಃ ಕೋವಿದಾರೈಶ್ಚ ದಾಡಿಮ್ಯೈರುಪಶೋಭಿತಂ ।
ಪುಷ್ಪಿತೈರರ್ಜುನೈಶ್ಚೈವ ಬಿಲ್ವಪಾಟಲಕೇತಕೈಃ ॥ ೧೮ ॥
ಕದಂಬಾಮ್ರಮಧೂಕೈಶ್ಚ ನಿಂಬಜಂಬೀರತಿಂದುಕೈಃ ।
ನಾಲಿಕೇರೈಃ ಕಪಿತ್ಥೈಶ್ಚ ಖರ್ಜೂರಪನಸೈಸ್ತಥಾ ॥ ೧೯ ॥
ನಾನಾದ್ರುಮಲತಾಕೀರ್ಣಂ ನಾನಾವಲ್ಲೀಭಿರಾವೃತಂ ।
ಸಪುಷ್ಪಂ ಫಲಿತಂ ಕಾಂತಂ ವನಂ ಚೈತ್ರರಥಂ ಯಥಾ ॥ ೨೦ ॥
ಜಲಾಶ್ರಯೈಸ್ತು ವಿಪುಲೈಃ ಪದ್ಮಿನೀಖಂಡಮಂಡಿತಂ ।
ಸಿತೋತ್ಪಲೈಶ್ಚ ಸಂಛನ್ನಂ ನೀಲಪೀತೈಃ ಸಿತಾಽರುಣೈಃ ॥ ೨೧ ॥
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ।
ಆಡೀಕಾಕಬಲಾಕಾಭಿಃ ಸೇವಿತಂ ಕೋಕಿಲಾದಿಭಿಃ ॥ ೨೨ ॥
ಸಿಂಹೈರ್ವ್ಯಾಘ್ರೈರ್ವರಾಹೈಶ್ಚ ಗಜೈಶ್ಚೈವ ಮಹೋತ್ಕಟೈಃ ।
ಮಹಿಷೈಶ್ಚ ಮಹಾಕಾಯೈಃ ಕುರಂಗೈಶ್ಚಿತ್ರಕೈಃ ಶಶೈಃ ॥ ೨೩ ॥
ಗಂಡಕೈಶ್ಚೈವ ಖಡ್ಗೈಶ್ಚ ಗೋಮಾಯುಸುರಭೀಯುತಂ ।
ಸಾರಂಗೈರ್ನಲ್ಲಕೈಶ್ಚೈವ ದ್ವಿಪದೈಶ್ಚ ಚತುಷ್ಪದೈಃ ॥ ೨೪ ॥

---

೧೮. ಬಕುಲ, ಕೋವಿದಾರ, ದಾಡಿಮ, ಹೂವುಗಳಿಂದ ತುಂಬಿದ ಅರ್ಜುನ, ಬಿಲ್ವ, ಪಾಟಲ, ಕೇತಕ್ಯಾದಿ ವೃಕ್ಷಗಳಿಂದ ಆ ಆಶ್ರಮವು ರಂಜಿಸುತ್ತಿದ್ದಿತು.

೧೯. ಕಡಬ, ಮಾವು, ಇಪ್ಪೆ, ನಿಂಬೆ, ಬೇವು, ತಿಂದುಕ, ತೆಂಗು, ಬೇಲ, ಖರ್ಜೂರ, ಹಲಸು ಮುಂತಾದ ಮರಗಳೂ ಅಲ್ಲಿ ಶೋಭಿಸುತ್ತಿದ್ದುವು.

೨೦. ಅನೇಕ ಗಿಡಗಳಿಗೆ ಸುತ್ತಿರುವ ಲತೆಗಳಿಂದಲೂ, ಬಹು ವಿಧಗಳಾದ ಬಳ್ಳಿಗಳಿಂದಲೂ, ಗಿಡಗಳಲ್ಲಿ ತುಂಬಿರುವ ಪುಷ್ಪಫಲಗಳಿಂದಲೂ ಕೂಡಿದ ಆ ಆಶ್ರಮವು ಚೈತ್ರರಥವನದಂತೆ ಅತಿ ಮನೋಹರವಾಗಿದ್ದಿತು.

೨೧. ವಿಶಾಲವಾದ ಸರೋವರಗಳಲ್ಲಿ ಕಮಲಸಮೂಹಗಳು ವಿರಾಜಿಸುತ್ತಿದ್ದುವು. ನೀಲಿ, ಹಳದಿ, ಬಿಳುಪು, ಕೆಂಪು ಬಣ್ಣಗಳಿಂದ ಕೂಡಿದ ಕನ್ನೈದಿಲೆಗಳೂ ದಟ್ಟವಾಗಿದ್ದುವು.

೨೨. ಹಂಸ, ಕಾರಂಡವ, ಚಕ್ರವಾಕ, ಬೆಳ್ಳಕ್ಕಿ, ಕಾಗೆ, ಬಲಾಕೆ, ಕೋಗಿಲೆಗಳೇ ಮೊದಲಾದ ಪಕ್ಷಿಗಳು ಗುಂಪುಕೂಡಿಕೊಂಡು ಸರೋವರವನ್ನು ಸೇವಿಸುತ್ತಿದ್ದುವು.

೨೩. ಆ ವನಪ್ರದೇಶವು ಸಿಂಹಗಳು, ಹುಲಿಗಳು, ಕಾಡುಹಂದಿಗಳು, ಮದಿಸಿದ ಮಹಾಗಜಗಳು, ದೊಡ್ಡ ದೇಹದ ಕಾಡೆಮ್ಮೆಗಳು, ಜಿಂಕೆಗಳು, ಚಿತ್ರಮೃಗಗಳು, ಮೊಲಗಳು ಮುಂತಾದ ಮೃಗಗಳಿಂದ ಕೂಡಿದ್ದಿತು.

೨೪. ಗಂಡಕ, ಖಡ್ಗ, ನರಿ, ಹಸು, ಸಾರಂಗ, ಮುಂತಾದ ಎರಡು ಮತ್ತು ನಾಲ್ಕು ಕಾಲುಗಳ ಪ್ರಾಣಿಗಳು ಆ ವನದಲ್ಲಿ ತುಂಬಿದ್ದುವು.

ತಥಾ ಚ ಕೋಕಿಲಾಕೀರ್ಣಂ ಮನಃಕಾಂತಂ ಸುಶೋಭಿತಂ ।
ಜೀವಂಜೀವಕಸಂಘೈಶ್ಚ ನಾನಾಪಕ್ಷಿಸಮಾಯುತಂ ॥ ೨೫ ॥
ದುಃಖಶೋಕವಿನಿರ್ಮುಕ್ತಂ ಸತ್ತ್ವೋತ್ಕಟಮನೋರಮಂ ।
ಕ್ಷುತ್ತೃಷಾರಹಿತಂ ಕಾಂತಂ ಸರ್ವವ್ಯಾಧಿವಿವರ್ಜಿತಂ ॥ ೨೬ ॥
ಸಿಂಹೀಸ್ತನಂ ಪಿಬಂತ್ಯತ್ರ ಕುರಂಗಾಃ ಸ್ನೇಹಸಂಯುತಂ ।
ಮಾರ್ಜಾರಮೂಷಕೌ ಚೋಭಾವವಲೇಹತ ಉನ್ಮುಖೌ ॥ ೨೭ ॥
ಪಂಚಾಸ್ಯಾಃ ಪೋತಕೇಭಾಶ್ಚ ಭೋಗಿನಸ್ತು ಕಲಾಪಿನಃ ।
ದೃಷ್ಟ್ವಾ ತದ್ವಿಪಿನಂ ರಮ್ಯಂ ಪ್ರವಿಷ್ಟಾಃ ಪಾಂಡುನಂದನಾಃ ॥ ೨೮ ॥
ಮಾರ್ಕಂಡಂ ದೃಷ್ಟವಾಂಸ್ತತ್ರ ತರುಣಾದಿತ್ಯಸನ್ನಿಭಂ ।
ಋಷಿಭಿಃ ಸೇವ್ಯಮಾನಂ ತು ನಾನಾಶಾಸ್ತ್ರವಿಶಾರದೈಃ ॥ ೨೯ ॥
ಕುಲೀನೈಃ ಸತ್ತ್ವಸಂಪನ್ನೈಃ ಶೌಚಾಚಾರಸಮನ್ವಿತೈಃ ।
ಧೀಸಂಗತೈಃ ಕ್ಷಮಾಯುಕ್ತೈಸ್ತ್ರಿಸಂಧ್ಯಂ ಜಪತತ್ಪರೈಃ ॥ ೩೦ ॥
ಋಗ್ಯಜುಃಸಾಮವಿಹಿತೈರ್ಮಂತ್ರೈರ್ಹೋಮಪರಾಯಣೈಃ ।
ಕೇಚಿತ್ಪಂಚಾಽಗ್ನಿಮಧ್ಯಸ್ಥಾಃ ಕೇಚಿದೇಕಾಂತಸಂಸ್ಥಿತಾಃ ॥ ೩೧ ॥

---

೨೫. ಹಾಗೆಯೇ ಕೋಗಿಲೆಗಳೂ, ಚಕ್ರವಾಕಪಕ್ಷಿಗಳೂ, ಇತರ ನಾನಾ ವಿಧ ಪಕ್ಷಿಗಳೂ ಶೋಭಿಸುತ್ತ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿದ್ದಿತು.

೨೬. ಅಲ್ಲಿ ದುಃಖವಾಗಲಿ ಶೋಕವಾಗಲಿ ಇರಲಿಲ್ಲ. ಕೇವಲ ಸತ್ತ್ವ ಗುಣಾಧಿಕ್ಯದಿಂದ ಮನೋಹರವಾದ ಆ ಪ್ರದೇಶವು ಹಸಿವು ಬಾಯಾರಿಕೆಗಳಿಲ್ಲದುದೂ, ಸಕಲ ವ್ಯಾಧಿವರ್ಜಿತವೂ ಆಗಿ ರಂಜಿಸುತ್ತಿದ್ದಿತು.

೨೭. ಅಲ್ಲಿ ಜಿಂಕೆಯ ಮರಿಗಳು ಸ್ನೇಹದಿಂದ ಹೆಣ್ಣುಸಿಂಹದ ಮೊಲೆಯನ್ನು ಉಣ್ಣುತ್ತಿದ್ದುವು. ಇಲಿ ಬೆಕ್ಕುಗಳು ಮುಖಕ್ಕೆ ಮುಖವನ್ನಿಟ್ಟು ನೆಕ್ಕುತ್ತಿದ್ದುವು.

೨೮. ಸಿಂಹಗಳೂ, ಎಳೆಯಾನೆಗಳೂ ಎಡೆಯಾಡುತ್ತಿದ್ದುವು. ಹಾವುಗಳೂ ನವಿಲುಗಳೂ ಜೊತೆಯಾಗಿದ್ದ ಆ ಮನೋಹರವಾದ ಅರಣ್ಯವನ್ನು ಕಂಡು ಪಾಂಡವರು ಅಲ್ಲಿ ಪ್ರವೇಶಿಸಿದರು.

೨೯. ಬಾಲಸೂರ್ಯನನ್ನು ಹೋಲುವ ಮಾರ್ಕಂಡೇಯಮುನಿಯನ್ನು ಧರ್ಮರಾಜನು ಅಲ್ಲಿ ಕಂಡನು. ಅನೇಕ ಶಾಸ್ತ್ರಪರಿಣತರಾದ ಮಹರ್ಷಿಗಳು ಆತನನ್ನು ಸೇವಿಸುತ್ತಿದ್ದರು.

೩೦. ಅವರೆಲ್ಲರೂ ಕುಲೀನರೂ, ಸತ್ತ್ವಗುಣಾನ್ವಿತರೂ, ಶೌಚಾಚಾರ ನಿರತರೂ, ಮಹಾಮೇಧಾವಿಗಳೂ, ಕ್ಷಮಾಶೀಲರೂ, ತ್ರಿಸಂಧ್ಯೆಗಳಲ್ಲಿಯೂ ಗಾಯತ್ರ್ಯಾದಿ ಜಪಗಳನ್ನು ಮಾಡುವವರೂ ಆಗಿದ್ದರು.

೩೧. ಋಗ್ಯಜುಸ್ಸಾಮವೇದಗಳಲ್ಲಿ ವಿಧಿಸಿರುವ ಮಂತ್ರಗಳಿಂದ ಹೋಮ

ಊರ್ಧ್ವಬಾಹುನಿರಾಲಂಬಾ ಆದಿತ್ಯಭ್ರಮಣಾಃ ಪರೇ ।
ಸಾಯಂ ಪ್ರಾತರ್ಭುಜಶ್ಚಾಽನ್ಯೇ ಏಕಾಹಾರಾಸ್ತಥಾ ಪರೇ ॥ ೩೨ ॥
ದ್ವಾದಶಾಹಾತ್ತಥಾ ಚಾಽನ್ಯೇ ಅನ್ಯೇ ಮಾಸಾರ್ಧಭೋಜನಾಃ ।
ದರ್ಶೇ ದರ್ಶೇ ತಥಾ ಚಾಽನ್ಯೇ ಅನ್ಯೇ ಶೈವಾಲಭೋಜನಾಃ ॥ ೩೩ ॥
ಪಿಣ್ಯಾಕಮಪರೇ ಭುಂಜನ್ಕೇಚಿತ್ಪಾಲಾಶಭೋಜನಾಃ ।
ಅಪರೇ ನಿಯತಾಹಾರಾ ವಾಯುಭಕ್ಷ್ಯಾಽಂಬುಭೋಜನಾಃ ॥ ೩೪ ॥
ಏವಂ ಭೂತೈಸ್ತಥಾ ವೃದ್ಧೈಃ ಸೇವ್ಯತೇ ಮುನಿಪುಂಗವೈಃ ।
ತತೋ ಧರ್ಮಸುತಃ ಶ್ರೀಮಾನಾಶ್ರಮಂ ತಂ ಪ್ರವಿಶ್ಯ ಸಃ ॥ ೩೫ ॥
ದೃಷ್ಟ್ವಾ ಮುನಿವರಂ ಶಾಂತಂ ಧ್ಯಾಯಮಾನಂ ಪರಂ ಪದಂ ।
ಪ್ರಾದಕ್ಷಿಣ್ಯೇನ ಸಹಸಾ ದಂಡವತ್ಪತಿತೋಽಗ್ರತಃ ॥ ೩೬ ॥
ಭಕ್ತ್ಯಾನುಪತಿತಂ ದೃಷ್ಟ್ವಾ ಚಿರಾದಾದಾಯ ಲೋಚನಂ ।
ಕೋ ಭವಾನಿತ್ಯುವಾಚೇದಂ ಧರ್ಮಂ ಧೀಮಾನಪೃಚ್ಛತ ॥ ೩೭ ॥

---

ಗಳನ್ನು ಮಾಡುತ್ತ ಕೆಲವರಿದ್ದರು. ಹಲವರು ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸುಗಳನ್ನಾಚರಿಸುತ್ತಿದ್ದರು. ಇತರರು ಏಕಾಂತಸ್ಥಳಗಳಲ್ಲಿ ಧ್ಯಾನಾಸಕ್ತರಾಗಿದ್ದರು.

೩೨–೩೩. ಕೆಲವರು ಯಾವ ಆಸರೆಯೂ ಇಲ್ಲದೆ ಕೈಗಳನ್ನೆತ್ತಿಹಿಡಿದು ಸೂರ್ಯಪಥವನ್ನೇ ನೋಡುತ್ತಿದ್ದರು. ಕೆಲವರು ಸಾಯಂಕಾಲ ಹಗಲುಗಳಲ್ಲಿ ಭೋಜನಗಳನ್ನು ಮಾಡುತ್ತಿರಲು, ಹಲವರು ಏಕಭುಕ್ತವ್ರತವನ್ನಾಶ್ರಯಿಸಿದ್ದರು. ಕೆಲವರು ಹನ್ನೆರಡು ದಿವಸಗಳಿಗೂ, ಇತರರು ಹದಿನೈದು ದಿನಗಳಿಗೂ, ಹಲವರು ಅಮಾವಾಸ್ಯೆಯಲ್ಲಿಯೂ ಮಾತ್ರ ಭೋಜನಗಳನ್ನು ಮಾಡುತ್ತಿದ್ದರು. ಕೆಲವರು ಪಾಚಿಗಳನ್ನೇ ತಿನ್ನುತ್ತಿದ್ದರು.

೩೪. ಇತರರು ಹಿಂಡಿಗಳನ್ನೂ, ತರಗೆಲೆಗಳನ್ನೂ ತಿನ್ನುತ್ತಿದ್ದರು. ಕೆಲವರು ಕ್ಲುಪ್ತಾಹಾರಿಗಳಾಗಿದ್ದರು. ಕೆಲವರು ಗಾಳಿಯನ್ನೂ, ನೀರನ್ನೂ ಮಾತ್ರವೆ ಸೇವಿಸುತ್ತಿದ್ದರು.

೩೫. ಈ ವಿಧವಾದ ಅನೇಕ ವೃದ್ಧಮಹರ್ಷಿಗಳಿಂದ ಸೇವಿತನಾಗಿದ್ದ ಮಾರ್ಕಂಡೇಯನನ್ನು ಕಂಡು ಧರ್ಮನಂದನನು ಆ ಆಶ್ರಮವನ್ನು ಪ್ರವೇಶಿಸಿದನು.

೩೬. ಪ್ರಶಾಂತನಾಗಿ ಕುಳಿತು ಪರಮಪದವನ್ನೇ ಕುರಿತು ಧ್ಯಾನಿಸುತ್ತಿರುವ ಆ ಮುನಿವರನನ್ನು ನೋಡಿ ಆ ಧರ್ಮನಂದನನು ಸಂಭ್ರಮದಿಂದ ಪ್ರದಕ್ಷಿಣೆಯನ್ನು ಮಾಡಿ ಆತನಿದಿರಿನಲ್ಲಿ ದಂಡಪ್ರಣಾಮವನ್ನೂ ಮಾಡಿದನು.

೩೭. ಭಕ್ತಿಯಿಂದ ನಮಸ್ಕರಿಸುತ್ತಿರುವ ಆತನನ್ನು ಬಹಳಕಾಲದಮೇಲೆ ಬಹಿರ್ಮುಖನಾದ ಆ ಬುದ್ಧಿಶಾಲಿಯು ಕಂಡು, "ನೀನು ಯಾರು?" ಎಂದು ಪ್ರಶ್ನೆಮಾಡಿದನು.

ತಸ್ಯ ತದ್ವಚನಂ ಶ್ರುತ್ವಾ ದಾರಕಸ್ತತ್ಸಮೀಪಗಃ ।
ಅಹಾಽಯಂ ಧರ್ಮರಾಜಸ್ತೇ ದರ್ಶನಾರ್ಥಂ ಸಮಾಗತಃ ॥ ೩೮ ॥
ತಚ್ಛ್ರುತ್ವಾ ದಾರಕೇಣೋಕ್ತಂ ವಚನಂ ಪ್ರಾಹ ಸಾದರಃ ।
ಏಹ್ಯೇಹಿ ವತ್ಸವತ್ಸೇತಿ ಕಿಂಚಿತ್ಸ್ಥಾನಾಚ್ಚಲನ್ಮುನಿಃ ।
ತಂ ತು ಸ್ನೇಹಾದುಪಾಘ್ರಾಯ ಆಸನೇ ಉಪವೇಶಯತ್ ॥ ೩೯ ॥
ಉಪವಿಷ್ಟೇ ಸಭಾಯಾಂತು ಪೂಜಾಂ ಕೃತ್ವಾ ಯಥಾವಿಧಿ ।
ವನ್ಯೈರ್ಧಾನ್ಯೈಃ ಫಲೈರ್ಮೂಲೈ ರಸೈಶ್ಚೈವ ಪೃಥಗ್ವಿಧೈಃ ।
ಪಾಂಡವಾ ಬ್ರಾಹ್ಮಣೈಃ ಸಾರ್ಧಂ ಯಥಾಯೋಗ್ಯಂ ಪ್ರಪೂಜಿತಾಃ॥ ೪೦ ॥
ಮುಹೂರ್ತಾದಥ ವಿಶ್ರಮ್ಯ ಧರ್ಮಪುತ್ರೋ ಯುಧಿಷ್ಠಿರಃ ।
ಪೃಚ್ಛತಿಸ್ಮ ಮುನಿಶ್ರೇಷ್ಠಂ ಕೌತೂಹಲಸಮನ್ವಿತಃ ॥ ೪೧ ॥
ಭಗವನ್ ಸರ್ವಲೋಕಾನಾಂ ದೀರ್ಘಾಯುಸ್ತ್ವಂ ಮತೋ ಮಮ ।
ಸಪ್ತಕಲ್ಪಾನಶೇಷೇಣ ಕಥಯಸ್ವ ಮಮಾಽನಘ ॥ ೪೨ ॥
ಕಲ್ಪಕ್ಷಯೇಽಪಿ ಲೋಕಸ್ಯ ಸ್ಥಾವರಸ್ಯೇತರಸ್ಯ ಚ ।
ನ ವಿನಷ್ಟೋಽಸಿ ವಿಪ್ರೇಂದ್ರ ಕಥಂ ವಾ ಕೇನ ಹೇತುನಾ ॥ ೪೩ ॥

---

೩೮–೩೯. ಆತನ ಮಾತನ್ನು ಕೇಳಿ ಸಮೀಪದಲ್ಲಿದ್ದ ಒಬ್ಬ ಋಷಿಕುಮಾರಕನು "ಈತನೇ ಧರ್ಮರಾಜನು; ನಿನ್ನ ದರ್ಶನಾರ್ಥವಾಗಿ ಬಂದಿರುವನು" ಎಂದು ಬಿನ್ನವಿಸಿದನು. ಬಾಲಕನ ಮಾತನ್ನು ಕೇಳಿ ಮುನಿಯು ತನ್ನ ಆಸನದಿಂದ ಸ್ವಲ್ಪ ಎದ್ದು ಆದರವನ್ನು ತೋರಿಸುತ್ತ, "ಪುತ್ರ! ಬಾ, ಬಾ" ಎಂದು ಬಳಿಗೆ ಕರೆದು ಸ್ನೇಹದಿಂದ ತಲೆಯನ್ನು ಮೂಸಿನೋಡಿ ಉಚಿತಾಸನದಲ್ಲಿ ಕುಳ್ಳಿರಿಸಿದನು.

೪೦. ಇಂತು ಸಭೆಯೆಲ್ಲವೂ ಮಂಡಿಸಿರಲು ಅತಿಥಿಸತ್ಕಾರವು ನಡೆದು ಅರಣ್ಯದಲ್ಲಿ ಸಿಕ್ಕುವ ಧಾನ್ಯಗಳಿಂದಲೂ, ಫಲಗಳಿಂದಲೂ, ಕಂದಮೂಲಗಳಿಂದಲೂ, ವಿಧವಿಧಗಳಾದ ಪಾನೀಯಗಳಿಂದಲೂ, ಧರ್ಮರಾಜನೂ ಆತನೊಡನಿದ್ದ ಬ್ರಾಹ್ಮಣರೂ ಯೋಗ್ಯತಾನುಸಾರವಾಗಿ ಪೂಜೆಗೊಂಡರು.

೪೧. ಬಳಿಕ ಒಂದುಮುಹೂರ್ತದವರೆಗೂ ವಿಶ್ರಮಿಸಿಕೊಂಡು ಧರ್ಮಸುತನಾದ ಯುಧಿಷ್ಠಿರನು ಕುತೂಹಲದಿಂದ ಕೂಡಿದವನಾಗಿ ಆ ಮುನಿಸತ್ತಮನನ್ನು ಕೇಳಿದನು.

೪೨. "ಮಹರ್ಷಿಯೆ! ಸಮಸ್ತಲೋಕಗಳಲ್ಲಿಯೂ ನೀನೇ ಬಹಳ ಪುರಾತನನೆಂದು ನಾನು ತಿಳಿದಿರುವೆನು. ನನಗೆ ಏಳುಕಲ್ಪಗಳನ್ನೂ ನಿಶ್ಶೇಷವಾಗಿ ವಿವರಿಸುವವನಾಗು.

೪೩. ಬ್ರಾಹ್ಮಣಶ್ರೇಷ್ಠನೆ! ಚರಾಚರಾತ್ಮಕವಾದ ಬ್ರಹ್ಮಾಂಡವೆಲ್ಲವೂ

**ಗಂಗಾದ್ಯಾಃ ಸರಿತಃ ಸರ್ವಾಃ ಸಮುದ್ರಾಂತಾಶ್ಚ ಯಾ ಮುನೇ ।**
**ತಾಸಾಂ ಮಧ್ಯೇ ಸ್ಥಿತಾಃ ಕಾಸ್ವಿತ್ಕಾಶ್ಚಿಚ್ಚೈವ ಪ್ರಲಯಂಗತಾಃ ॥ ೪೪ ॥**
**ಕಾನು ಪುಣ್ಯಜಲಾ ನಿತ್ಯಂ ಕಾನು ನ ಕ್ಷಯಮಾಗತಾ ।**
**ಏತತ್ಕಥಯ ಮೇ ತಾತ ಪ್ರಸನ್ನೇನಾಂತರಾತ್ಮನಾ ॥ ೪೫ ॥**
**ಶ್ರೋತುಮಿಚ್ಛಾಮ್ಯಶೇಷೇಣ ಋಷಿಭಿಃ ಸಹಬಾಂಧವೈಃ ॥ ೪೬ ॥**

**ಶ್ರೀ ಮಾರ್ಕಂಡೇಯ ಉವಾಚ :—**

**ಸಾಧು ಸಾಧು ಮಹಾಪ್ರಾಜ್ಞ ಧರ್ಮಪುತ್ರ ಯುಧಿಷ್ಠಿರ ।**
**ಕಥಯಾಮಿ ಯಥಾನ್ಯಾಯಂ ಯತ್ಪೃಚ್ಛಸಿ ಮಮಾಽನಘ ॥ ೪೭ ॥**
**ಸರ್ವಪಾಪಹರಂ ಪುಣ್ಯಂ ಪುರಾಣಂ ರುದ್ರಭಾಷಿತಂ ।**
**ಯಃ ಶೃಣೋತಿ ನರೋ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ೪೮ ॥**
**ಅಶ್ವಮೇಧಸಹಸ್ರೇಣ ವಾಜಪೇಯಶತೇನ ಚ ।**
**ತತ್ಫಲಂ ಸಮವಾಪ್ನೋತಿ ರಾಜನ್ನಾಽಸ್ತ್ಯತ್ರ ಸಂಶಯಃ ॥ ೪೯ ॥**

---

ಕಲ್ಪಾಂತ್ಯದಲ್ಲಿ ನಷ್ಟವಾದರೂ ನೀನು ಮಾತ್ರ ಶಾಶ್ವತನಾಗಿರುವುದು ಹೇಗೆ? ಇದಕ್ಕೆ ಕಾರಣವೇನು ?

೪೪. ಎಲೈ ಮುನಿವರ್ಯನೆ! ಸಮುದ್ರಗಳಲ್ಲಿ ಲಯಿಸುವ ಗಂಗಾದ್ಯನೇಕ ನದಿಗಳಿರುವುವಲ್ಲವೆ. ಅವುಗಳಲ್ಲಿ ನಿರಂತರವಾಗಿ ನಿಲ್ಲುವುವು ಯಾವುವು? ನಾಶ ವಾಗುವುವು ಯಾವುವು ?

೪೫. ಯಾವ ನದಿಯು ಸರ್ವಕಾಲದಲ್ಲಿಯೂ ಪುಣ್ಯಜಲಭರಿತವಾಗಿರು ವುದು ? ಯಾವುದು ನಾಶವಾಗುವುದಿಲ್ಲ? ಇದೆಲ್ಲವನ್ನೂ ಪ್ರಸನ್ನಾಂತಃಕರಣನಾಗಿ ನೀನು ನನಗೆ ವಿವರಿಸು.

೪೬. ಈ ಋಷಿಗಳಿಂದಲೂ, ಬಾಂಧವರಿಂದಲೂ ಪರಿವಾರಿತನಾದ ನಾನು ಇದೆಲ್ಲವನ್ನೂ ನಿಶ್ಶೇಷವಾಗಿ ಕೇಳಲಿಚ್ಛಿಸುವೆನು.''

೪೭. **ಮಾರ್ಕಂಡೇಯನು** ಹೇಳುತ್ತಾನೆ:—ಮಹಾಪ್ರಾಜ್ಞನೂ, ಯಮ ಸೂನುವೂ ಆದ ಯುಧಿಷ್ಠಿರನೆ! ಬಹಳ ಸಾಧುವಾದ ಪ್ರಶ್ನೆಯನ್ನು ಮಾಡಿದೆ. ಎಲೈ ನಿಷ್ಕಲ್ಮಷನೆ! ನೀನು ಕೇಳಿದುದನ್ನೆಲ್ಲ ಯಥಾನ್ಯಾಯವಾಗಿ ವಿವರಿಸುವೆನು.

೪೮. ಈ ಪುರಾಣವು ಮಹೇಶ್ವರಪ್ರೋಕ್ತವಾದುದರಿಂದ ಸಮಸ್ತ ಪಾತಕ ಗಳನ್ನೂ ಹೋಗಲಾಡಿಸಿ ಪುಣ್ಯವನ್ನೊದಗಿಸುವುದು. ಯಾವನು ಇದನ್ನು ಭಕ್ತಿ ಯಿಂದ ಕೇಳುತ್ತಾನೆಯೊ, ಆ ಮಾನವನಿಗೆ ಲಭಿಸುವ ಪುಣ್ಯಫಲವನ್ನು ಕೇಳು.

೪೯. ರಾಜೇಂದ್ರನೆ! ಇದರ ಶ್ರವಣದಿಂದ ಅವನು ನೂರು ವಾಜಪೇಯ ಗಳನ್ನೂ, ಸಾವಿರ ಅಶ್ವಮೇಧಗಳನ್ನೂ ಮಾಡಿದ ಫಲಕ್ಕೆ ಭಾಗಿಯಾಗುವನು. ಇದರಲ್ಲಿ ಸಂದೇಹವಿಲ್ಲ.

ಬ್ರಹ್ಮಘ್ನಶ್ಚ ಸುರಾಪೀ ಚ ಸ್ತೇಯೀ ಗೋಘ್ನಶ್ಚ ಯೋ ನರಃ ।
ಮುಚ್ಯತೇ ಸರ್ವಪಾಪೇಭ್ಯೋ ರುದ್ರಸ್ಯ ವಚನಂ ಯಥಾ ॥ ೫೦ ॥
ಗಂಗಾ ತು ಸರಿತಾಂ ಶ್ರೇಷ್ಠಾ ತಥಾ ಚೈವ ಸರಸ್ವತೀ ।
ಕಾವೇರೀ ದೇವಿಕಾ ಚೈವ ಸಿಂಧುಃ ಸಾಲಕುಟೀ ತಥಾ ॥ ೫೧ ॥
ಸರಯೂಃ ಶತರುದ್ರಾ ಚ ಮಹೀ ಚರ್ಮಿಲಯಾ ಸಹ ।
ಗೋದಾವರೀ ತಥಾ ಪುಣ್ಯಾ ತಥೈವ ಯಮುನಾ ನದೀ ॥ ೫೨ ॥
ಪಯೋಷ್ಣೀ ಚ ಶತದ್ರುಶ್ಚ ತಥಾ ಧರ್ಮನದೀ ಶುಭಾ ।
ಏತಾಶ್ಚಾಽನ್ಯಾಶ್ಚ ಸರಿತಃ ಸರ್ವಪಾಪಹರಾಃ ಸ್ಮೃತಾಃ ॥ ೫೩ ॥
ಕಿಂತು ತೇ ಕಾರಣಂ ತಾತ ವಕ್ಷ್ಯಾಮಿ ನೃಪಸತ್ತಮ ।
ಸಮುದ್ರಾಃ ಸರಿತಃ ಸರ್ವಾಃ ಕಲ್ಪೇ ಕಲ್ಪೇ ಕ್ಷಯಂ ಗತಾಃ ॥ ೫೪ ॥
ಸಪ್ತ ಕಲ್ಪಕ್ಷಯೇ ಕ್ಷೀಣೇ ನ ಮೃತಾ ತೇನ ನರ್ಮದಾ ।
ನರ್ಮದೈಕೈವ ರಾಜೇಂದ್ರ ಪರಂ ತಿಷ್ಠೇತ್ಸರಿದ್ವರಾ ॥ ೫೫ ॥
ತೋಯಪೂರ್ಣಾ ಮಹಾಭಾಗ ಮುನಿಸಂಘೈರಭಿಷ್ಟುತಾ ।
ಗಂಗಾದ್ಯಾಃ ಸರಿತಶ್ಚಾಽನ್ಯಾಃ ಕಲ್ಪೇ ಕಲ್ಪೇ ಕ್ಷಯಂಗತಾಃ ॥ ೫೬ ॥

---

೫೦. ಬ್ರಹ್ಮಘಾತಕನೂ, ಸುರಾಪಾನನಿರತನೂ, ಸ್ವರ್ಣಸ್ತೇಯವನ್ನು ಮಾಡಿದವನೂ, ಗೋಘಾತಕನೂ ತಮ್ಮ ಪಾತಕಗಳಿಂದ ಮುಕ್ತರಾಗುವರೆಂದು ಮಹೇಶ್ವರನ ವಚನವಿರುವುದು.

೫೧–೫೩. ನದಿಗಳಲ್ಲಿ ಸರ್ವೋತ್ತಮವೆನಿಸಿದ ಗಂಗೆ, ಸರಸ್ವತಿ, ಕಾವೇರಿ, ದೇವಿಕೆ, ಸಿಂಧು, ಸಾಲಕುಟ, ಸರಯು, ಶತರುದ್ರಾ, ಮಹೀ, ಚರ್ಮಿಲಯಾ, ಗೋದಾವರಿ, ಯಮುನೆ, ಪಯೋಷ್ಣೀ, ಶತದ್ರು, ಧರ್ಮನದಿ— ಇವೂ ಮತ್ತು ಇತರ ನದಿಗಳೂ ಸಕಲ ಪಾತಕಗಳನ್ನೂ ಪರಿಹರಿಸುವುವೆಂದು ಹೇಳುವರು.

೫೪. ಮಹಾರಾಜನೆ! ಆದರೆ ಪ್ರಿಯನಾದ ನಿನಗೆ ಒಂದು ರಹಸ್ಯವನ್ನು ತಿಳಿಸುವೆನು. ಈ ಸಮುದ್ರಗಳೂ, ನದಿಗಳೂ, ಪ್ರತಿಯೊಂದು ಕಲ್ಪಾಂತ್ಯದಲ್ಲಿಯೂ ನಾಶವನ್ನು ಹೊಂದುವುವು.

೫೫. ಆದರೆ ಏಳುಕಲ್ಪಗಳು ಕಳೆದರೂ ನರ್ಮದೆಯು ಮಾತ್ರ ನಾಶವಾಗಲಿಲ್ಲ. ರಾಜೇಂದ್ರನೆ! ನರ್ಮದೆಯೊಂದೇ ನದೀಶ್ರೇಷ್ಠವೆನಿಸಿ ಶಾಶ್ವತವಾಗಿ ನಿಂತಿರುವುದು.

೫೬. ಮಹಾಭಾಗ್ಯಶಾಲಿಯೆ! ನೀರಿನಿಂದ ತುಂಬಿರುವ ಈ ನದಿಯು ಅನೇಕ ಮುನಿಗಳಿಂದ ಸಂಸ್ತುತವಾಗಿರುವುದು. ಗಂಗಾದಿ ಇತರ ನದಿಗಳೆಲ್ಲವೂ ಪ್ರತಿಯೊಂದು ಕಲ್ಪದಲ್ಲಿಯೂ ಕ್ಷಯಿಸುತ್ತಿರುವುವು.

ಏಷಾ ದೇವೀ ಪುರಾ ದೃಷ್ಟಾ ತೇನ ವಕ್ಷ್ಯಾಮಿ ತೇಽನಘ ॥ ೫೭ ॥
ಆಶ್ಚರ್ಯಭೂತಾ ರಾಜೇಂದ್ರ ತ್ರಿಷು ಲೋಕೇಷು ವಿಶ್ರುತಾ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ರೇವಾಮಾಹಾತ್ಮ್ಯವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

೫೭–೫೮. ಅನಘನೆ! ಈ ದೇವಿಯನ್ನು ನಾನು ಹಿಂದೆ ನೋಡಿರುವುದರಿಂದ ನಿನಗೆ ವರ್ಣಿಸುವೆನು. ಆಶ್ಚರ್ಯಗಳಿಗೆ ನೆಲೆಯೆನಿಸಿದ ಈ ನದಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರೇವಾಮಾಹಾತ್ಮ್ಯವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಮಾರ್ಕಂಡೇಯ ಕೃತಪೋತಾರೋಹಣವೃತ್ತಾಂತವರ್ಣನಂ

**ಯುಧಿಷ್ಠಿರ ಉವಾಚ :—**

**ಸಪ್ತಕಲ್ಪಕ್ಷಯಾ ಘೋರಾಸ್ತ್ವಯಾ ದೃಷ್ಟಾ ಮಹಾಮುನೇ ।**
**ನ ಚಾಽಪೀಹಾಽಸ್ತಿ ಭಗವನ್ ದೀರ್ಘಾಯುರಿಹ ಕಶ್ಚನ ॥ ೧ ॥**
**ತ್ವಯಾಹ್ಯೇಕಾರ್ಣವೇ ಸುಪ್ತಃ ಪದ್ಮನಾಭಃ ಸುರಾರಿಹಾ ।**
**ದೃಷ್ಟಃ ಸಹಸ್ರಚರಣಃ ಸಹಸ್ರನಯನೋದರಃ ॥ ೨ ॥**
**ತ್ವಂ ಕಿಲಾಽನುಗ್ರಹಾತ್ತಸ್ಯ ದಹ್ಯಮಾನೇ ಚರಾಽಚರೇ ।**
**ನ ಕ್ಷಯಂ ಸಮನುಪ್ರಾಪ್ತೋ ವರದಾನಾನ್ಮಹಾತ್ಮನಃ ॥ ೩ ॥**
**ಕಿಂ ತ್ವಯಾಶ್ಚರ್ಯಭೂತಂ ಹಿ ದೃಷ್ಟಂ ಚ ಭ್ರಮತಾಽನಘ ।**
**ಏತದಾಚಕ್ಷ್ವ ಭಗವನ್ಪರಂ ಕೌತೂಹಲಂ ಹಿ ಮೇ ॥ ೪ ॥**
**ಸಂಪ್ರಾಪ್ತೇ ಚ ಮಹಾಘೋರೇ ಯುಗಸ್ಯಾಂತೇ ಮಹಾಕ್ಷಯೇ ।**
**ಅನಾವೃಷ್ಟಿಹತೇ ಲೋಕೇ ಪುರಾ ವರ್ಷಶತಾಧಿಕೇ ॥ ೫ ॥**

---

### ಕನ್ನಡದ ಅನುವಾದ

#### ಮಾರ್ಕಂಡೇಯಕೃತಪೋತಾರೋಹಣವೃತ್ತಾಂತವರ್ಣನ

೧. ಯುಧಿಷ್ಠಿರನು ಕೇಳುತ್ತಾನೆ:—ಮಹಾಮುನಿಯೆ! ನೀನು ಏಳು ಕಲ್ಪಗಳ ಕೊನೆಯಲ್ಲಿಯೂ ಭಯಂಕರಗಳಾದ ಪ್ರಳಯಗಳನ್ನು ನೋಡಿರುವೆ. ನಿನ್ನನ್ನು ಹೋಲುವ ದೀರ್ಘಾಯುವು ಬೇರೊಬ್ಬನೀಗ ದೊರೆಯಲಾರನು.

೨. ಅನಂತಪಾದನೂ, ಅನಂತನೇತ್ರನೂ, ಅನಂತೋದರನೂ ಆದ ಮಹಾವಿಷ್ಣುವು, ದೈತ್ಯಘಾತಕನೂ, ಪದ್ಮನಾಭನೂ ಆಗಿ ಏಕಾರ್ಣವನದಲ್ಲಿ ಮಲಗಿದ್ದುದನ್ನೂ ನೀನು ನೋಡಿರುವೆ.

೩. ಆ ಮಹಾತ್ಮನ ವರಪ್ರಭಾವದಿಂದಲೂ, ಅನುಗ್ರಹದಿಂದಲೂ ನೀನು ಸಕಲ ಚರಾಚರವು ಸುಡುತ್ತಿರುವುದನ್ನೂ ನಿಂತು ನೋಡಿರುವೆ.

೪. ಭಗವಂತನೆ! ಭೂಮಿಯಲ್ಲಿ ತಿರುಗುತ್ತಿರುವ ನೀನು ಎಲ್ಲಿ ಯಾವ ಆಶ್ಚರ್ಯವನ್ನು ನೋಡಿದೆಯೆಂಬುದನ್ನು ಹೇಳು. ನನಗೆ ಈ ವಿಷಯದಲ್ಲಿ ಅತ್ಯಂತ ಕುತೂಹಲವುಂಟಾಗಿರುವುದು.

೫. ಯುಗದ ಅಂತ್ಯದಲ್ಲಿ ಮಹಾ ಘೋರವಾದ ಪ್ರಳಯವು ಪ್ರಾಪ್ತವಾಗಲು ಲೋಕವೆಲ್ಲವೂ ನೂರು ವರ್ಷಗಳಿಗೂ ಹೆಚ್ಚಿನ ಕಾಲದ ಅನಾವೃಷ್ಟಿಯಿಂದ ನಾಶವನ್ನು ಹೊಂದಿತು.

ಔಷಧೀನಾಂ ಕ್ಷಯೇ ಘೋರೇ ದೇವದಾನವವರ್ಜಿತೇ ।
ನಿರ್ವೀರ್ಯೇ ನಿರ್ವಷಟ್ಕಾರೇ ಕಲಿನಾ ದೂಷಿತೇ ಭೃಶಂ ॥ ೬ ॥
ಸರಿತ್ಸರಸ್ತಡಾಗೇಷು ಪಲ್ವಲೋಪವನೇಷು ಚ ।
ಸಂಶುಷ್ಕೇಷು ತದಾ ಬ್ರಹ್ಮನ್ನಿರಾಕಾರೇ ಯುಗಕ್ಷಯೇ ॥ ೭ ॥
ಜನಂ ಪ್ರಾಪ್ತೇ ಮಹರ್ಲೋಕೇ ಬ್ರಹ್ಮಕ್ಷತ್ರವಿಶಾದಯಃ ।
ಋಷಯಶ್ಚ ಮಹಾತ್ಮಾನೋ ದಿವ್ಯತೇಜಃಸಮನ್ವಿತಾಃ ॥ ೮ ॥
ಸ್ಥಿತಾನಿ ಕಾನಿ ಭೂತಾನಿ ಗತಾನ್ಯೇವ ಮಹಾಮುನೇ ।
ಏತತ್ಸರ್ವಂ ಮಹಾಭಾಗ ಕಥಯಸ್ವ ಪೃಥಕ್ ಪೃಥಕ್ ॥ ೯ ॥
ಭೂತಾನಿ ಕಾನಿ ವಿಪ್ರೇಂದ್ರ ಕಥಂ ಸಿದ್ಧಿಮವಾಪ್ನುಯಾತ್ ।
ಬ್ರಹ್ಮವಿಷ್ಣ್ವಂದ್ರ ರುದ್ರಾಣಾಂ ಕಾಲೇ ಪ್ರಾಪ್ತೇ ಸುದಾರುಣೇ ॥ ೧೦ ॥
ಏವಮುಕ್ತಸ್ತತಃ ಸೋಽಥ ಧರ್ಮರಾಜೇನ ಧೀಮತಾ ।
ಮಾರ್ಕಂಡಃ ಪ್ರತ್ಯುವಾಚೇದಮೃಷಿಸಂಘೈಃ ಸಮಾವೃತಃ ॥ ೧೧ ॥

ಶ್ರೀ ಮಾರ್ಕಂಡೇಯ ಉವಾಚ :—

ಶೃಣ್ವಂತು ಋಷಯಃ ಸರ್ವೇ ತ್ವಯಾ ಸಹ ನರೇಶ್ವರ ।
ಮಹತ್ಪುರಾಣಂ ಪೂರ್ವೋಕ್ತಂ ಶಂಭುನಾ ವಾಯುದೈವತೇ ॥ ೧೨ ॥

---

೬. ಮತ್ತು ಓಷಧಿಗಳೂ ನಷ್ಟವಾದುವು. ದೇವದಾನವರು ಇಲ್ಲವಾದರು. ಬ್ರಹ್ಮಾಂಡವೇ ನಿಸ್ಸತ್ವವೂ, ಯಜ್ಞವಿಹೀನವೂ ಆಗಿ ಕಲಿಕಲ್ಮಷದಿಂದ ಪೀಡಿತವಾಯಿತು.

೭. ನದಿಗಳೂ, ಸರೋವರಗಳೂ, ಕೊಳಗಳೂ, ಕುಂಟೆಗಳೂ, ಉಪವನಗಳೂ ಒಣಗಿಹೋಗಿ ಯುಗಾಂತ್ಯದಲ್ಲಿ ಎಲ್ಲವೂ ನಿರಾಕಾರವಾಗಿದ್ದಿತು.

೮. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೂ, ಋಷಿಗಳೂ, ದಿವ್ಯತೇಜೋವಂತರಾದ ಮಹಾತ್ಮರೂ ಮಹರ್ಲೋಕಕ್ಕೆ ಹೊರಟುಹೋದರು.

೯. ಮಹಾಮುನಿಯೆ! ಆಗ ಯಾವ ಪ್ರಾಣಿಗಳು ಅವಶೇಷವಾಗಿ ನಿಂತುವು? ಈ ವಿಷಯಗಳೆಲ್ಲವನ್ನೂ ಬೇರೆಬೇರೆಯಾಗಿ ನಮಗೆ ತಿಳಿಸು.

೧೦. ಅಯ್ಯಾ ಬ್ರಾಹ್ಮಣೋತ್ತಮನೆ! ಯಾವ ಜೀವರು ಆಗ ಮುಕ್ತಿಯನ್ನು ಹೊಂದುವರು? ಹೇಗೆ? ಇಂತಹ ಭಯಂಕರಕಾಲವು ಪ್ರಾಪ್ತವಾಗಲು ಬ್ರಹ್ಮ, ವಿಷ್ಣು, ಮಹೇಂದ್ರ, ರುದ್ರಾದಿಗಳ ಗತಿಯೇನು?

೧೧. ಇಂತು ಮಹಾಬುದ್ಧಿಶಾಲಿಯಾದ ಧರ್ಮರಾಜನು ಪ್ರಶ್ನೆಮಾಡಲು ಮಹರ್ಷಿಸಮೂಹದ ಮಧ್ಯದಲ್ಲಿ ಕುಳಿತಿದ್ದ ಮಾರ್ಕಂಡೇಯನು ಉತ್ತರವನ್ನಿತ್ತನು.

೧೨. ಮಾರ್ಕಂಡೇಯನು ಹೇಳುತ್ತಾನೆ:— ರಾಜೇಂದ್ರನೆ! ನೀನೂ ಇಲ್ಲಿ

ವಾಯೋಃ ಸಕಾಶಾತ್ಸ್ಕಂದೇನ ಶ್ರುತಮೇತತ್ಪುರಾತನಂ ।
ವಸಿಷ್ಠಃ ಶ್ರುತವಾಂಸ್ತಸ್ಮಾತ್ಪರಾಶರಸ್ತತಃಪರಂ ॥ ೧೩ ॥
ತಸ್ಮಾಚ್ಚ ಜಾತೂಕರ್ಣ್ಯೇನ ತಸ್ಮಾಚ್ಚೈವ ಮಹರ್ಷಿಭಿಃ ।
ಏವಂ ಪರಂಪರಾಪ್ರೋಕ್ತಂ ಶತಸಂಖ್ಯೈರ್ದ್ವಿಜೋತ್ತಮೈಃ ॥ ೧೪ ॥
ಸಂಹಿತಾ ಶತಸಾಹಸ್ರೀ ಪುರೋಕ್ತಾ ಶಂಭುನಾ ಕಿಲ ।
ಆಲೋಡ್ಯ ಸರ್ವಶಾಸ್ತ್ರಾಣಿ ವೇದಾರ್ಥಂ ತತ್ವತಃ ಪುರಾ ॥ ೧೫ ॥
ಯುಗರೂಪೇಣ ಸಾ ಪಶ್ಚಾಚ್ಚತುರ್ಧಾ ವಿನಿಯೋಜಿತಾ ।
ಮಂದಪ್ರಜ್ಞಾನುಸಾರೇಣ ನರಾಣಾಂ ತು ಮಹರ್ಷಿಭಿಃ ॥ ೧೬ ॥
ಆರಾಧ್ಯ ಪಶುಭರ್ತಾರಂ ಮಯಾ ಪೂರ್ವಂ ಮಹೇಶ್ವರಂ ।
ಪುರಾಣಂ ಶ್ರುತಮೇತದ್ಧಿ ತತ್ತೇ ವಕ್ಷ್ಯಾಮ್ಯಶೇಷತಃ ॥ ೧೭ ॥
ಯಚ್ಛ್ರುತ್ವಾ ಮುಚ್ಯತೇ ಜಂತುಃ ಸರ್ವಪಾಪೈರ್ನರೇಶ್ವರ ।
ಮಾನಸೈಃ ಕರ್ಮಜೈಶ್ಚೈವ ಸಪ್ತಜನ್ಮಸು ಸಂಚಿತೈಃ ॥ ೧೮ ॥

---

ನೆರೆದಿರುವ ಋಷಿಗಳೆಲ್ಲರೂ ಕೇಳಿರಿ. ಈ ಮಹಾಪುರಾಣವನ್ನು ಹಿಂದೆ ಮಹಾದೇವನು ವಾಯುದೇವನಿಗೆ ಹೇಳಿದನು.

೧೩. ವಾಯುವಿನಿಂದ ಷಣ್ಮುಖಸ್ವಾಮಿಯು ಇದನ್ನು ಕೇಳಿದನು. ಪುರಾತನವಾದ ಈ ಕಥೆಯನ್ನು ಆತನಿಂದ ವಶಿಷ್ಠನೂ, ವಶಿಷ್ಠನಿಂದ ಪರಾಶರ ಮುನಿಯೂ ಕೇಳಿದರು.

೧೪. ಆತನಿಂದ ಜಾತೂಕರ್ಣಿಯೂ, ಆತನಿಂದ ಇತರ ಮಹರ್ಷಿಗಳೂ ತಿಳಿದುಕೊಂಡರು. ಇಂತು ನೂರಾರು ಬ್ರಾಹ್ಮಣೋತ್ತಮರಿಂದ ಇದು ಪರಂಪರೋಕ್ತವಾಗಿ ಬಂದಿರುವುದು.

೧೫. ಸಮಸ್ತ ಶಾಸ್ತ್ರಗಳನ್ನೂ ಆಲೋಡನೆಮಾಡಿ ವೇದಾರ್ಥವು ಯಥಾರ್ಥವಾಗಿ ಪ್ರಕಟವಾಗುವಂತೆ ಮಹೇಶ್ವರನು ಹಿಂದೆ ನೂರುಸಾವಿರದ (ಲಕ್ಷ) ಸಂಹಿತೆಯನ್ನು ಹೇಳಿದನು.

೧೬. ಯುಗಗಳು ಕಳೆದಂತೆಲ್ಲ ಮಾನವರ ಬುದ್ಧಿಶಕ್ತಿಯೂ ಮಂದವಾದುದರಿಂದ ಮಹರ್ಷಿಗಳು ಅದನ್ನೇ ನಾಲ್ಕುಭಾಗಗಳಾಗಿ ಮಾಡಿ ಪ್ರಚುರಪಡಿಸಿದರು.

೧೭. ಪಶುಪತಿಯೆನಿಸಿದ ಮಹಾದೇವನನ್ನೇ ಪೂಜೆಮಾಡಿ ನಾನು ಹಿಂದೆಯೇ ಈ ಪುರಾಣವನ್ನು ತಿಳಿದೆನು. ಅದನ್ನು ಆಮೂಲಾಗ್ರವಾಗಿ ನಿನಗೆ ಹೇಳುವೆನು.

೧೮. ಎಲೈ ನರೇಶ್ವರನೆ! ಇದನ್ನು ಕೇಳಿದ ಮನುಜನು ಏಳು ಜನ್ಮಗಳಲ್ಲಿ ಮನಸ್ಸಿನಿಂದಲೂ, ದೇಹದಿಂದಲೂ ಮಾಡಿದ ಸಮಸ್ತ ಪಾತಕಗಳನ್ನೂ ಕಳೆದುಕೊಳ್ಳುವನು.

ಸಪ್ತಕಲ್ಪಕ್ಷಯಾ ಘೋರಾ ಮಯಾ ದೃಷ್ಟಾಃ ಪುನಃ ಪುನಃ ।
ಪ್ರಸಾದಾದ್ದೇವದೇವಸ್ಯ ವಿಷ್ಣೋಶ್ಚ ಪರಮೇಷ್ಠಿನಃ ॥ ೧೯ ॥
ದ್ವಾದಶಾದಿತ್ಯನಿರ್ದಗ್ಧೇ ಜಗತ್ಯೇಕಾರ್ಣವೀಕೃತೇ ।
ಶ್ರಾಂತೋಽಹಂ ವಿಭ್ರಮಂಸ್ತತ್ರ ತರನ್ಬಾಹುಭಿರರ್ಣವಮ್ ॥ ೨೦ ॥
ಅಥಾಽಹಂ ಸಲಿಲೇ ರಾಜನ್ನಾದಿತ್ಯಸಮರೂಪಿಣಂ ।
ಪುರಾ ಪುರುಷಮದ್ರಾಕ್ಷಮನಾದಿನಿಧನಂ ಪ್ರಭುಂ ॥ ೨೧ ॥
ಶೃಂಗಂ ಚೈವಾಽದ್ರಿರಾಜಸ್ಯ ಭಾಸಯಂತಂ ದಿಶೋ ದಶ ।
ದ್ವಿತೀಯೋಽನ್ಯೋ ಮನುರ್ದೃಷ್ಟಃ ಪುತ್ರಪೌತ್ರಸಮನ್ವಿತಃ ॥ ೨೨ ॥
ಅಗಾಧೇ ಭ್ರಮತೇ ಸೋಽಪಿ ತಮೋಭೂತೇ ಮಹಾರ್ಣವೇ ।
ಅವಿಶ್ರಮನ್ಮುಹೂರ್ತಂ ತು ಚಕ್ರಾರೂಢ ಇವ ಭ್ರಮನ್ ॥ ೨೩ ॥
ಅಥಾಽಹಂ ಭಯಾದುದ್ವಿಗ್ನಸ್ತರನ್ಬಾಹುಭಿರರ್ಣವಂ ।
ತತ್ರಸ್ಥೋಽಹಂ ಮಹಾಮತ್ಸ್ಯಮಪಶ್ಯಂ ಮದಸಂಯುತಂ ॥ ೨೪ ॥
ತತೋಽಬ್ರವೀತ್ಸ ಮಾಂ ದೃಷ್ಟ್ವಾ ಏಹ್ಯೇಹೀತಿ ಚ ಭಾರತ ।
ಪರಂ ಪ್ರಧಾನಃ ಸರ್ವೇಷಾಂ ಮತ್ಸ್ಯರೂಪೋ ಮಹೇಶ್ವರಃ ॥ ೨೫ ॥

---

೧೯. ದೇವದೇವನೂ, ಲೋಕನಿಯಾಮಕನೂ ಆದ ಮಹಾವಿಷ್ಣುವಿನ ಅನುಗ್ರಹದಿಂದ ನಾನು ಮತ್ತೆ ಮತ್ತೆ ಏಳು ಕಲ್ಪಗಳ ಅಂತ್ಯದಲ್ಲಿ ನಡೆದ ಘೋರ ಪ್ರಳಯಗಳನ್ನು ನೋಡಿರುವೆನು.

೨೦. ದ್ವಾದಶಸೂರ್ಯರಿಂದ ಸುಡಲ್ಪಟ್ಟ ಈ ಜಗತ್ತು ಒಂದೇ ಒಂದು ಮಹಾಸಮುದ್ರವಾಗಿ ಪರಿಣಮಿಸಲು ನಾನು ಬಾಹುಬಲದಿಂದ ದಿಕ್ಕುದಿಕ್ಕಿಗೂ ಈಜಾಡುತ್ತ ಬಹಳವಾಗಿ ಆಯಾಸಗೊಂಡೆನು.

೨೧–೨೨. ಎಲೈ ರಾಜನೆ! ಆಗ ನಾನು ಆ ನೀರಿನಲ್ಲಿ ಸೂರ್ಯನನ್ನು ಹೋಲುವವನೂ, ಆದ್ಯಂತರಹಿತನೂ, ಸರ್ವೇಶ್ವರನೂ ಆದ ಪುರಾಣಪುರುಷನನ್ನು ಕಂಡೆನು. ಆದರ ಮಧ್ಯದಲ್ಲಿ ಒಂದು ಪರ್ವತಶಿಖರವನ್ನೂ ಅಲ್ಲಿ ಪುತ್ರಪೌತ್ರರೊಡಗೂಡಿ ಹತ್ತು ದಿಕ್ಕುಗಳನ್ನೂ ಬೆಳಗುತ್ತಿರುವ ಎರಡನೆಯ ಮನುವನ್ನೂ ನೋಡಿದೆನು.

೨೩–೨೪. ಅಂಧಕಾರಾವೃತವಾದ ಅಗಾಧ ಜಲದಲ್ಲಿ ಆತನೂ ಸುತ್ತಾಡುತ್ತಿದ್ದನು. ಚಕ್ರವಾಹಿತನಂತೆ ಅವನು ಮುಹೂರ್ತಮಾತ್ರವೂ ನಿಲ್ಲದೆ ಭ್ರಮಿಸುತ್ತಿದ್ದನು. ಇಂತು ಸಮುದ್ರದಲ್ಲಿ ಈಜುತ್ತ ಭಯಭ್ರಾಂತನಾಗಿರಲು ನಾನು ಅಲ್ಲಿಯೇ ಮದಿಸಿದ್ದ ಒಂದು ಮಹಾಮತ್ಸ್ಯವನ್ನು ನೋಡಿದೆನು.

೨೫. ಸಕಲರಿಗೂ ಮುಖ್ಯನೂ, ಪರತತ್ತ್ವಸ್ವರೂಪನೂ ಆದ ಮಹೇಶ್ವರನೇ ಆ ಮತ್ಸ್ಯರೂಪವನ್ನು ತಾಳಿ ಬಂದು ನನ್ನನ್ನು ಕಂಡು, “ಇಲ್ಲಿ ಬಾ” ಎಂದನು.

**ತತೋಽಹಂ ತ್ವರಯಾ ಗತ್ವಾ ತನ್ಮುಖೇ ಮನುಜೇಶ್ವರ ।**
**ಸುಶ್ರಾಂತೋ ವಿಗತಜ್ಞಾನಃ ಪರಂ ನಿರ್ವೇದಮಾಗತಃ ॥ ೨೬ ॥**
**ತತೋಽದ್ರಾಕ್ಷಂ ಸಮುದ್ರಾಂತೇ ಮಹದಾವರ್ತಸಂಕುಲಾಂ ।**
**ಉದ್ಯತ್ತರಂಗಸಲಿಲಾಂ ಫೇನಪುಂಜಾಟ್ಟಹಾಸಿನೀಂ ॥ ೨೭ ॥**
**ನದೀಂ ಕಾಮಗಮಾಂ ಪುಣ್ಯಾಂ ಝುಷಮೀನಸಮಾಕುಲಾಂ ।**
**ನದ್ಯಾಸ್ತಸ್ಯಾಸ್ತು ಮಧ್ಯಸ್ಥಾ ಪ್ರಮದಾ ಕಾಮರೂಪಿಣೀ ॥ ೨೮ ॥**
**ನೀಲೋತ್ಪಲದಲಶ್ಯಾಮಾ ಮಹತ್ಕ್ಷೋಭವಾಹಿನೀ ।**
**ದಿವ್ಯಹಾಟಕಚಿತ್ರಾಂಗೀ ಕನಕೋಜ್ಜ್ವಲಶೋಭಿತಾ ॥ ೨೯ ॥**
**ದ್ವಾಭ್ಯಾಂ ಸಂಗೃಹ್ಯ ಜಾನುಭ್ಯಾಂ ಮಹತ್ಪ್ಲೋತಂ ವ್ಯವಸ್ಥಿತಾ ।**
**ತಾಂ ಮನುಃ ಪ್ರತ್ಯುವಾಚೇದಂ ಕಾ ತ್ವಂ ದಿವ್ಯವರಾಂಗನೇ ॥ ೩೦ ॥**
**ತಿಷ್ಠಸೇ ಕೇನ ಕಾರ್ಯೇಣ ತ್ವಮತ್ರ ಸುರಸುಂದರಿ ।**
**ಸುರಾಽಸುರಗಣೇ ನಷ್ಟೇ ಭ್ರಮಸೇ ಲೀಲಯಾಽರ್ಣವೇ ॥ ೩೧ ॥**
**ಸರಿತಃ ಸಾಗರಾಃ ಶೈಲಾಃ ಕ್ಷಯಂ ಪ್ರಾಪ್ತಾ ಹ್ಯನೇಕಶಃ ।**
**ತ್ವಮೇಕಾ ತು ಕಥಂ ಸಾಧ್ವಿ ತಿಷ್ಠಸೇ ಕಾರಣಂ ಮಹತ್ ।**
**ಶ್ರೋತುಮಿಚ್ಛಾಮ್ಯಹಂ ದೇವಿ ಕಥಯಸ್ವ ಹ್ಯಶೇಷತಃ ॥ ೩೨ ॥**

---

೨೬. ರಾಜೇಂದ್ರ! ಆಗ ನಾನು ವೇಗದಿಂದ ಆ ಮೀನಿನ ಮುಖದೊಳಕ್ಕೆ ಹೋಗಿ ಆಯಾಸದಿಂದ ಜ್ಞಾನಶೂನ್ಯನಾಗಿ ಅಲ್ಲಿ ನಿರ್ವೇದಗೊಂಡಿದ್ದೆನು.

೨೭. ಬಳಿಕ ಸಮುದ್ರದ ಮಧ್ಯದಲ್ಲಿ ನಾನೊಂದು ನದಿಯನ್ನು ಕಂಡೆನು. ಅದು ದೊಡ್ಡ ಸುಳಿಗಳಿಂದ ಕೂಡಿ ಎತ್ತರವಾದ ಅಲೆಗಳನ್ನೆರಚುತ್ತ ನೊರೆಗಳ ಸಾಲುಗಳಿಂದ ನಗುತ್ತಿದ್ದಂತೆ ತೋರುತ್ತಿದ್ದಿತು.

೨೮. ಇಚ್ಛಾಪ್ರವಾಹವುಳ್ಳದ್ದೂ, ಪುಣ್ಯಪ್ರದವೂ, ಮೀನುಗಳ ನೆಲೆಮನೆಯೂ ಆದ ಆ ನದಿಯ ಮಧ್ಯದಲ್ಲಿ ಕಾಮರೂಪಧಾರಿಣಿಯಾದ ಒಬ್ಬ ಸ್ತ್ರೀಯಿದ್ದಳು.

೨೯. ಕನ್ನೈದಿಲೆಗಳ ದಳಗಳನ್ನು ಹೋಲುವ ಮೈಬಣ್ಣದವಳೂ, ಮಹಾಕ್ಷೋಭಕಾರಿಣಿಯೂ ಆದ ಆಕೆಯು ಚಿನ್ನದ ಆಭರಣಗಳಿಂದ ಶೋಭಿಸುತ್ತಿದ್ದಳು.

೩೦. ಎರಡು ಮೊಣಕಾಲುಗಳಿಂದ ಒಂದು ದೋಣಿಯನ್ನು ಹಿಡಿದುಕೊಂಡುಬರುತ್ತಿದ್ದ ಆಕೆಯನ್ನು ಮನುವು ಮಾತನಾಡಿಸಿದನು. "ಎಲೌ ದಿವ್ಯಕನ್ಯೆಯೆ! ನೀನು ಯಾರು?

೩೧. ಸುಂದರಿ! ನೀನು ಯಾವ ಕಾರ್ಯಕ್ಕಾಗಿ ಇಲ್ಲಿ ನಿಂತಿರುವೆ? ಸಕಲ ದೇವರಾಕ್ಷಸಗಣಗಳೆಲ್ಲವೂ ನಾಶವಾಗಿರಲು ನೀನೊಬ್ಬಳು ಮಾತ್ರ ಆನಂದದಿಂದ ಸಮುದ್ರಮಧ್ಯದಲ್ಲಿ ತಿರುಗುತ್ತಿರುವೆಯಲ್ಲ!

೩೨. ಅಸಂಖ್ಯಾತಗಳಾದ ನದಿಗಳೂ, ಸಮುದ್ರಗಳೂ, ಪರ್ವತಗಳೂ

ಅಬಲೋವಾಚ :—

ಈಶ್ವರಾಂಗಸಮುದ್ಭೂತಾ ಹ್ಯಮೃತಾ ನಾಮ ವಿಶ್ರುತಾ ।
ಸರಿತ್ಪಾಪಹರಾ ಪುಣ್ಯಾ ಮಾಮಾಶ್ರಿತ್ಯ ಭಯಂ ಕುತಃ ॥ ೩೩ ॥
ಸಾಽಹಂ ಪೋತಮಿಮಂ ತುಭ್ಯಂ ಗೃಹೀತ್ವಾ ಹ್ಯಾಗತಾ ದ್ವಿಜ ।
ನಹ್ಯಸ್ಯ ಪೋತಸ್ಯ ಕ್ಷಯೋ ಯತ್ರ ತಿಷ್ಠತಿ ಶಂಕರಃ ॥ ೩೪ ॥
ತಸ್ಯಾಸ್ತದ್ವಚನಂ ಶ್ರುತ್ವಾ ವಿಸ್ಮಯೋತ್ಫುಲ್ಲಲೋಚನಃ ।
ಮುನಿನಾ ಸಹ ರಾಜೇಂದ್ರ ಪೋತಾರೂಢೋ ಹ್ಯಹಂ ತದಾ ॥ ೩೫ ॥
ಕೃತಾಂಜಲಿಪುಟೋ ಭೂತ್ವಾ ಪ್ರಣಮ್ಯ ಶಿರಸಾ ವಿಭುಂ ।
ವ್ಯಾಪಿನಂ ಪರಮೇಶಾನಮಸ್ತೌಷಮಭಯಪ್ರದಂ ॥ ೩೬ ॥
ಸದ್ಯೋಜಾತಾಯ ದೇವಾಯ ವಾಮದೇವಾಯ ವೈ ನಮಃ ।
ಭವೇ ಭವೇ ನಮಸ್ತುಭ್ಯಂ ಭಕ್ತಿಗಮ್ಯಾಯ ತೇ ನಮಃ ॥ ೩೭ ॥
ಭೂರ್ಭುವಾಯ ನಮಸ್ತುಭ್ಯಂ ರಾಮಜ್ಯೇಷ್ಠಾಯ ವೈ ನಮಃ ।
ನಮಸ್ತೇ ಭದ್ರಕಾಲಾಯ ಕಲಿರೂಪಾಯ ವೈ ನಮಃ ॥ ೩೮ ॥

---

ಕ್ಷಯವನ್ನು ಹೊಂದಿದುವು. ದೇವಿಯೆ! ನೀನೊಬ್ಬಳು ಮಾತ್ರ ನಿಂತಿರಲು ಮಹತ್ತರವಾದ ಕಾರಣವಿರಬೇಕು. ಅದನ್ನು ಕೇಳಲಿಚ್ಛಿಸುವೆನು. ನಿಶ್ಶೇಷವಾಗಿ ತಿಳಿಸು.

೩೩. ಸ್ತ್ರೀಯು ಹೇಳುತ್ತಾಳೆ:—"ನಾನು ಮಹೇಶ್ವರನ ದೇಹದಿಂದ ಹುಟ್ಟಿ ಅಮೃತೆಯೆಂಬ ಹೆಸರಿನಿಂದ ಪ್ರಖ್ಯಾತಳಾಗಿರುವೆನು. ಪಾಪಹರೆಯೂ, ಪುಣ್ಯಪ್ರದೆಯೂ, ನದೀರೂಪಳೂ ಆದ ನನ್ನನ್ನಾಶ್ರಯಿಸಿದವರಿಗೆ ಭಯವೆಲ್ಲಿಯದು?

೩೪. ಅಂತಹ ನಾನು ನಿನಗಾಗಿಯೆ ಈ ದೋಣಿಯನ್ನು ತಂದಿರುವೆನು. ಮಾರ್ಕಂಡೇಯ! ಈ ದೋಣಿಯಲ್ಲಿ ಶಂಕರನೇ ಸನ್ನಿಹಿತನಾಗಿರುವುದರಿಂದ ಇದಕ್ಕೆಂದಿಗೂ ನಾಶವೆಂಬುದೇ ಇಲ್ಲವು."

೩೫. ಎಲೈ ಧರ್ಮರಾಜನೆ! ಆಕೆಯ ಮಾತನ್ನು ಕೇಳಿ ನಾನು ವಿಸ್ಮಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಮುನುವಿನೊಡನೆ ಆ ದೋಣಿಯನ್ನೇರಿದೆನು.

೩೬. ಆಗ ನಾನು ಕೈಗಳನ್ನು ಮುಗಿದು ತಲೆಬಾಗಿ ನಮಸ್ಕಾರವನ್ನು ಮಾಡಿ ಸರ್ವಸ್ವಾಮಿಯೂ, ವ್ಯಾಪಕನೂ, ಅಭಯಪ್ರದನೂ ಆದ ಪರಮೇಶ್ವರನನ್ನು ಸ್ತುತಿಸಿದೆನು.

೩೭–೩೮. ಸದ್ಯೋಜಾತನೂ, ದೇವದೇವನೂ, ವಾಮದೇವನೂ ಆದ ನಿನಗೆ ನಮಸ್ಕಾರವು. ಭಕ್ತಿಮಾತ್ರದಿಂದ ಲಭ್ಯನಾದ ನಿನಗೆ ಜನ್ಮಜನ್ಮಗಳಲ್ಲಿಯೂ ನಮಸ್ಕರಿಸುವೆನು. ಭೂರಾದಿ ಲೋಕಗಳಿಗೆ ಉತ್ಪತ್ತಿಯೂ, ಮಹಾವಿಷ್ಣುವಿಗೂ ಮೊದಲಿಗನೂ, ಮಂಗಳಪ್ರದನೂ, ಕಲಿಸ್ವರೂಪಿಯೂ ಆದ ನಿನಗೆ ನಮಸ್ಕಾರವಿರಲಿ!

ಅಚಿಂತ್ಯಾಽವ್ಯಕ್ತರೂಪಾಯ ಮಹಾದೇವಾಯ ಧಾಮನೇ ।
ವಿದ್ಮಹೇ ದೇವದೇವಾಯ ತನ್ನೋ ರುದ್ರ ನಮೋನಮಃ ॥ ೩೯ ॥
ಜಗತ್ಸೃಷ್ಟಿವಿನಾಶಾನಾಂ ಕಾರಣಾಯ ನಮೋನಮಃ ।
ಏವಂ ಸ್ತುತೋ ಮಹಾದೇವಃ ಪೂರ್ವಂ ಸೃಷ್ಟ್ಯಾ ಮಯಾಽನಘ ॥ ೪೦ ॥
ಪ್ರಸನ್ನೋ ಮಾಽವದತ್ಪಶ್ಚಾದ್ವರಂ ವರಯ ಸುವ್ರತ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
ಮಾರ್ಕಂಡೇಯಕೃತ "ಪ್ರೋತಾರೋಹಣವೃತ್ತಾಂತವರ್ಣನಂ"
ನಾಮ ತೃತೀಯೋಽಧ್ಯಾಯಃ

---

೩೯. ಮನಸ್ಸಿಗೆ ನಿಲುಕದ ಅವ್ಯಕ್ತರೂಪವುಳ್ಳವನೂ, ಮಹಾದೇವನೂ, ಸಮಸ್ತಬ್ರಹ್ಮಾಂಡದ ನಿವಾಸವೂ, ದೇವದೇವನೂ, ಶತ್ರುಭಯಂಕರನೂ ಆದ ನಿನಗೆ ನಮಸ್ಕಾರಗಳನ್ನು ಮಾಡುವೆನು.

೪೦. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದ ನಿನಗೆ ನಮಸ್ಕಾರವು. ಧರ್ಮರಾಜನೆ! ಇಂತು ಸೃಷ್ಟಿಗೆ ಪೂರ್ವದಲ್ಲಿ ನಾನು ಮಹೇಶ್ವರನನ್ನು ಸ್ತೋತ್ರಮಾಡಿದೆನು.

೪೧. ಈ ನನ್ನ ಸ್ತೋತ್ರದಿಂದ ಪ್ರಸನ್ನಮನಸ್ಕನಾಗಿ ಪರಮೇಶ್ವರನು ನನ್ನನ್ನು ಕುರಿತು, "ಎಲೈ ಭಕ್ತನೆ! ಬೇಕಾದ ವರವನ್ನು ಕೇಳಿಕೊ" ಎಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಾರ್ಕಂಡೇಯಕೃತಪ್ರೋತಾರೋಹಣವೃತ್ತಾಂತವರ್ಣನ"ವೆಂಬ
ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಸಮುದ್ರಾಪಂಚದಶನಾಮ ವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋಽರ್ಣವಾತ್ಸಮುತ್ತೀರ್ಯ ತ್ರಿಕೂಟಶಿಖರೇ ಸ್ಥಿತಂ ।
ಮಹಾಕನಕವರ್ಣಾಭೇ ನಾನಾವರ್ಣಶಿಲಾಚಿತೇ ॥ ೧ ॥

ಮಹಾಶೃಂಗೇ ಸಮಾಸೀನಂ ರುದ್ರಕೋಟಿಸಮನ್ವಿತಂ ।
ಮಹಾದೇವಂ ಮಹಾತ್ಮಾನಮೀಶಾನಮಜಮವ್ಯಯಂ ॥ ೨ ॥

ಸರ್ವಭೂತಮಯಂ ತಾತ ಮನುನಾ ಸಹ ಸುವ್ರತ ।
ಭೂಯೋ ವವಂದೇ ಚರಣೌ ಸರ್ವದೇವನಮಸ್ಕೃತೌ ॥ ೩ ॥

ತತ್ಕಾಲೇ ಯುಗಸಾಹಸ್ರಂ ಸಹರುದ್ರೇಣ ಮಾನದ ।
ತಸ್ಮಿನ್ನೇಕಾರ್ಣವೇ ಘೋರೇ ಸ್ಥಿತೋಽಹಂ ಕುರುನಂದನ ॥ ೪ ॥

ಯುಧಿಷ್ಠಿರ ಉವಾಚ :—

ಏತಚ್ಛ್ರುತ್ವಾ ತು ಮೇ ತಾತ ಪರಂ ಕೌತೂಹಲಂ ಹೃದಿ ।
ಜಾತಂ ತತ್ಕಥಯಸ್ವೇತಿ ಶೃಣ್ವತಃ ಸಹಬಾಂಧವೈಃ ॥ ೫ ॥

---

## ಕನ್ನಡದ ಅನುವಾದ

### ಸಮುದ್ರಾಪಂಚದಶನಾಮ ವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ನಾನು ಸಮುದ್ರದಿಂದೆದ್ದುಬಂದು ಪುಟಕ್ಕಿಟ್ಟ ಚಿನ್ನದ ಬಣ್ಣವುಳ್ಳುದೂ, ವಿಚಿತ್ರಶಿಲೆಗಳಿಂದ ರಂಜಿತವೂ ಆದ ತ್ರಿಕೂಟಶಿಖರದಲ್ಲಿ ಮಹಾದೇವನನ್ನು ಕಂಡೆನು.

೨. ಕೋಟಿರುದ್ರಗಣಗಳಿಂದ ಪರಿವಾರಿತನಾಗಿ ಮಹಾತ್ಮನೂ, ಲೋಕೇಶ್ವರನೂ, ಜರಾಮರಣವರ್ಜಿತನೂ ಆದ ಆ ಮಹೇಶ್ವರನು ಆ ಪರ್ವತ ಶೃಂಗದಲ್ಲಿ ಮಂಡಿಸಿದ್ದನು.

೩. ಧರ್ಮನಿರತನೆ! ಸಕಲಪ್ರಾಣಿಮಯನಾದ ಆತನನ್ನು ಕಂಡು ಮನುವಿನೊಡನೆ ನಾನೂ ಸಕಲದೇವವಂದ್ಯಗಳಾದ ಆತನ ಚರಣಕಮಲಗಳಿಗೆ ವಂದಿಸಿದೆನು.

೪. ಕುರುಶ್ರೇಷ್ಠನೆ! ಆ ಕಾಲದಲ್ಲಿ ಪ್ರಪಂಚವೆಲ್ಲವೂ ಒಂದೇ ಸಮುದ್ರವಾಗಿ ಘೋರವಾಗಿರಲು ನಾನು ಒಂದುಸಾವಿರ ವರ್ಷಗಳವರೆಗೂ ಮಹಾದೇವನ ಸಮೀಪದಲ್ಲಿಯೇ ನಿಂತುಬಿಟ್ಟೆನು.

೫. ಯುಧಿಷ್ಠಿರನು ಹೇಳುತ್ತಾನೆ:—ಮಹರ್ಷಿಯೆ! ಇದನ್ನು ಕೇಳಿ ನನಗೆ ಅತ್ಯಂತ ಕುತೂಹಲವುಂಟಾಗಿರುವುದು. ಬಾಂಧವರೊಡನೆ ಕೇಳುತ್ತಿರುವ ನನಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳು.

ಕಾ ಸಾ ಪದ್ಮಪಲಾಶಾಕ್ಷೀ ತನೋಽಭೂತೇ ಮಹಾರ್ಣವೇ ।
ಯೋಗಿವದ್ಭ್ರಮತೇ ನಿತ್ಯಂ ರುದ್ರಜಾಂ ಸ್ವಾಂ ಚ ಯಾಽಬ್ರವೀತ್ ॥ ೬ ॥
ಶ್ರೀ ಮಾರ್ಕಂಡೇಯ ಉವಾಚ :—
ಏತನ್ಮೇವ ಮಯಾ ಪ್ರಶ್ನಂ ಪುರಾ ಪೃಷ್ಟೋ ಮನುಃ ಸ್ವಯಂ ।
ತದೇವ ತೇಽದ್ಯ ವಕ್ಷ್ಯಾಮಿ ಅಬಲಾಯಾಃ ಸಮುದ್ಭವಂ ॥ ೭ ॥
ವ್ಯತೀತಾಯಾಂ ನಿಶಾಯಾಂ ತು ಬ್ರಹ್ಮಣಃ ಪರಮೇಷ್ಠಿನಃ ।
ತತಃ ಪ್ರಭಾತೇ ವಿಮಲೇ ಸೃಜ್ಯಮಾನೇಷು ಜಂತುಷು ॥ ೮ ॥
ಮನುಂ ಪ್ರಣಮ್ಯ ಶಿರಸಾ ಪೃಚ್ಛಾಮ್ಯೇತದ್ಯುಧಿಷ್ಠಿರ ।
ಕೇಯಂ ಪದ್ಮಪಲಾಶಾಕ್ಷೀ ಶ್ಯಾಮಾ ಚಂದ್ರನಿಭಾನನಾ ॥ ೯ ॥
ಏಕಾರ್ಣವೇ ಭ್ರಮತ್ಯೇಕಾ ರುದ್ರಜಾಽಸ್ಮೀತಿ ವಾದಿನೀ ।
ಸಾವಿತ್ರೀ ವೇದಮಾತಾ ಚ ಹ್ಯಥವಾ ಸಾ ಸರಸ್ವತೀ ॥ ೧೦ ॥
ಮಂದಾಕಿನೀ ಸರಿಚ್ಛ್ರೇಷ್ಠಾ ಲಕ್ಷ್ಮೀರ್ವಾ ಕಿಮುಥೋ ಉಮಾ ।
ಕಾಲರಾತ್ರಿರ್ಭವೇತ್ಸಾಕ್ಷಾತ್ಪ್ರಕೃತಿರ್ವಾ ಸುಖೋಚಿತಾ ॥ ೧೧ ॥
ಏತದಾಚಕ್ಷ್ವ ಭಗವನ್ಕಾ ಸಾ ಹ್ಯಮೃತಸಂಭವಾ ।
ಚರತ್ಯೇಕಾರ್ಣವೇ ಘೋರೇ ಪ್ರಣಷ್ಟೋರಗರಾಕ್ಷಸೇ ॥ ೧೨ ॥

---

೬. ಆ ಮಹಾಸಮುದ್ರವು ಅಂಧಕಾರಾವೃತವಾಗಿರಲು ಯೋಗಿಯಂತೆ ತಿರುಗುತ್ತ ತಾನು ಮಹೇಶ್ವರಸಂಭೂತೆಯೆಂದು ಹೇಳಿದ ಆ ಕಮಲದಳನೇತ್ರೆ ಯಾರು?

೭. ಮಾರ್ಕಂಡೇಯನು ಹೇಳುತ್ತಾನೆ:—ಅಂದು ಮನುವಿನಲ್ಲಿ ಸಹ ನಾನು ಇದೇ ಪ್ರಶ್ನೆಯನ್ನೇ ಕೇಳಿದೆನು. ಆ ಸ್ತ್ರೀಯು ಹುಟ್ಟಿದ ಕಥೆಯನ್ನು ನಿನಗೆ ವಿವರಿಸುವೆನು.

೮. ಸೃಷ್ಟಿಕರ್ತನಾದ ಬ್ರಹ್ಮನ ರಾತ್ರಿಯು ಕಳೆದು ಪ್ರಾತಃಕಾಲವಾಗಲು ಪ್ರಾಣಿಗಳ ಸೃಷ್ಟಿಯು ಆರಂಭವಾಯಿತು.

೯. ಯುಧಿಷ್ಠಿರನೆ! ಆಗ ನಾನು ಮನುವಿಗೆ ನಮಸ್ಕಾರವನ್ನು ಮಾಡಿ ಪ್ರಶ್ನೆಮಾಡಿದೆನು. ಪದ್ಮದಳಲೋಚನೆಯೂ, ಶ್ಯಾಮಲವರ್ಣದವಳೂ, ಚಂದ್ರನನ್ನು ಹೋಲುವ ಮುಖವುಳ್ಳವಳೂ ಆದ ಈಕೆಯು ಯಾರು ?

೧೦–೧೧. ರುದ್ರಸಂಭೂತಳೆಂದು ಹೇಳಿಕೊಳ್ಳುತ್ತ ಈಕೆಯು ಮಹಾಸಮುದ್ರದಲ್ಲಿ ಸಂಚರಿಸುತ್ತಿರುವಳು. ಈಕೆಯು ವೇದಮಾತೆಯಾದ ಸಾವಿತ್ರಿಯೊ, ಅಥವಾ ಸರಸ್ವತಿಯೊ, ನದೀಶ್ರೇಷ್ಠಳಾದ ಗಂಗೆಯೊ, ಮಹಾಲಕ್ಷ್ಮಿಯೊ, ಅಥವಾ ಪಾರ್ವತಿಯೊ, ಪ್ರಾಯಶಃ ಕಾಳರಾತ್ರಿಯೊ, ಸುಖಾರ್ಹಳಾದ ಪ್ರಕೃತಿದೇವಿಯೊ ಆಗಿರಬಹುದು.

೧೨. ಮಹಾತ್ಮನೆ! ನಾಗರಾಕ್ಷಸಾದಿ ಸಕಲಜೀವರಾಶಿಗಳೂ ನಷ್ಟವಾಗಿರಲು

ಮನುರುವಾಚ :—

ಶೃಣು ವತ್ಸ ಯಥಾನ್ಯಾಯಮಸ್ಯಾ ವಕ್ಷ್ಯಾಮಿ ಸಂಭವಂ ।
ಯಯಾ ರುದ್ರಸಮುದ್ಭೂತಾ ಯಾ ಚೇಯಂ ವರವರ್ಣಿನೀ ॥ ೧೩ ॥
ಪುರಾ ಶಿವಃ ಶಾಂತತನುಶ್ಚಚಾರ ವಿಪುಲಂ ತಪಃ ।
ಹಿತಾರ್ಥಂ ಸರ್ವಲೋಕಾನಾಮುಮಯಾ ಸಹ ಶಂಕರಃ ॥ ೧೪ ॥
ಋಕ್ಷಶೈಲಂ ಸಮಾರುಹ್ಯ ತಪಸ್ತೇಪೇ ಸುದಾರುಣಂ ।
ಅದೃಶ್ಯಃ ಸರ್ವಭೂತಾನಾಂ ಸರ್ವಭೂತಾತ್ಮಕೋ ವಶೀ ॥ ೧೫ ॥
ತಪತಸ್ತಸ್ಯ ದೇವಸ್ಯ ಸ್ವೇದಃ ಸಮಭವತ್ಕಿಲ ।
ತಂ ಗಿರಿಂ ಪ್ಲಾವಯಾಮಾಸ ಸಸ್ವೇದೋ ರುದ್ರಸಂಭವಃ ॥ ೧೬ ॥
ತಸ್ಮಾದಾಸೀತ್ಸಮುದ್ಭೂತಾ ಮಹಾಪುಣ್ಯಾ ಸರಿದ್ವರಾ ।
ಯಾ ಸಾ ತ್ವಯಾಽರ್ಣವೇ ದೃಷ್ಟಾ ಪದ್ಮಪತ್ರಾಯತೇಕ್ಷಣಾ ॥ ೧೭ ॥
ಸ್ತ್ರೀರೂಪಂ ಸಮವಸ್ಥಾಯ ರುದ್ರಮಾರಾಧಯತ್ಪುರಾ ।
ಆದ್ಯೇ ಕೃತಯುಗೇ ತಸ್ಮಿನ್ ಸಮಾನಾಮಯುತಂ ನೃಪ ॥ ೧೮ ॥

---

ಘೋರವಾದ ಸಮುದ್ರದಲ್ಲಿ ತಿರುಗುತ್ತಿರುವ ಅಪ್ರತಿಮೋದ್ಭವೆಯಾದ ಈಕೆಯು ಯಾರೆಂಬುದನ್ನು ನನಗೆ ಹೇಳು.

೧೩. ಮನುವು ಹೇಳುತ್ತಾನೆ:—ವತ್ಸನೆ! ಈಕೆಯುದ್ಭವಿಸಿದುದನ್ನು ಯಥಾರ್ಥವಾಗಿ ಹೇಳುವೆನು, ಕೇಳು. ಈ ಸುಂದರಿಯು ರುದ್ರನಿಂದ ಹುಟ್ಟಿದ ಪರಿಯನ್ನು ತಿಳಿಸುತ್ತೇನೆ.

೧೪. ಹಿಂದೆ ಪ್ರಶಾಂತನೂ, ಜಿತೇಂದ್ರಿಯನೂ, ಸುಖಪ್ರದನೂ ಆದ ಮಹಾದೇವನು ಜಗದ್ಧಿತಾರ್ಥವಾಗಿ ಪಾರ್ವತಿಯೊಡನೆ ದುಸ್ಸಾಧ್ಯವಾದ ತಪಸ್ಸನ್ನಾಚರಿಸಿದನು.

೧೫. ಸರ್ವಭೂತಗಳ ಅಂತರ್ಯಾಮಿಯೂ, ಸಂಯಮಿಯೂ ಆದ ಆತನು ಯಾರ ಕಣ್ಣಿಗೂ ಕಾಣಿಸದೆ ಋಕ್ಷಪರ್ವತವನ್ನೇರಿ ದಾರುಣವಾದ ತಪಸ್ಸಿನಲ್ಲಿ ನಿರತನಾದನು.

೧೬. ತಪೋನಿರತನಾಗಿದ್ದ ಆತನ ದೇಹದಿಂದ ಬೆವರು ಸುರಿಯಲು ಉಪಕ್ರಮಿಸಿ ಕ್ರಮವಾಗಿ ಆ ಪರ್ವತವನ್ನೆಲ್ಲ ಅದರಲ್ಲಿ ಮುಳುಗಿಸಿತು.

೧೭. ಅದರಿಂದ ಮಹಾಪುಣ್ಯಪ್ರದೆಯಾದ ನದಿಯೊಂದುಂಟಾಯಿತು. ಪದ್ಮಪತ್ರಗಳಂತೆ ವಿಶಾಲನೇತ್ರಗಳುಳ್ಳ ಆ ನದ್ಯಭಿಮಾನಿದೇವತೆಯನ್ನೇ ನೀನು ಸಮುದ್ರದಲ್ಲಿ ನೋಡಿದುದು.

೧೮. ಆಕೆಯು ಸ್ತ್ರೀರೂಪವನ್ನು ಧರಿಸಿ ಮೊದಲು ಕೃತಯುಗದ ಆದಿಯಲ್ಲಿ ಹತ್ತುಸಾವಿರ ವರ್ಷಗಳು ಮಹೇಶ್ವರನನ್ನು ಕುರಿತು ತಪವನ್ನಾಚರಿಸಿದಳು.

ತತಸ್ತುಷ್ಟೋ ಮಹಾದೇವ ಉಮಯಾ ಸಹ ಶಂಕರಃ ।
ಬ್ರೂಹಿ ತ್ವಂ ತು ಮಹಾಭಾಗೇ ಯತ್ತೇ ಮನಸಿ ವರ್ತತೇ ॥ ೧೯ ॥

ಸರಿದುವಾಚ :—

ಪ್ರಲಯೇ ಸಮನುಪ್ರಾಪ್ತೇ ನಷ್ಟೇ ಸ್ಥಾವರಜಂಗಮೇ ।
ಪ್ರಸಾದಾತ್ತವ ದೇವೇಶ ಅಕ್ಷಯಾಽಹಂ ಭವೇ ಪ್ರಭೋ ॥ ೨೦ ॥
ಸರಿತ್ಸು ಸಾಗರೇಷ್ವೇವ ಪರ್ವತೇಷು ಕ್ಷಯಿಷ್ವಪಿ ।
ತವ ಪ್ರಸಾದಾದ್ದೇವೇಶ ಪುಣ್ಯಾಽಕ್ಷಯ್ಯಾ ಭವೇ ಪ್ರಭೋ ॥ ೨೧ ॥
ಪಾಪೋಪಪಾತಕೈರ್ಯುಕ್ತಾ ಮಹಾಪಾತಕಿನೋಽಪಿ ಯೇ ।
ಮುಚ್ಯಂತೇ ಸರ್ವಪಾಪೇಭ್ಯೋ ಭಕ್ತ್ಯಾ ಸ್ನಾತ್ವಾ ತು ಶಂಕರ ॥ ೨೨ ॥
ಉತ್ತರೇ ಜಾಹ್ನವೀ ದೇಶೇ ಮಹಾಪಾತಕನಾಶಿನೀ ।
ಭವಾಮಿ ದಕ್ಷಿಣೇ ಮಾರ್ಗೇ ಯದ್ಯೇವಂ ಸುರಪೂಜಿತಾ ॥ ೨೩ ॥
ಸ್ವರ್ಗಾದಾಗಮ್ಯ ಗಂಗೇತಿ ಯಥಾ ಖ್ಯಾತಾ ಕ್ಷಿತೌ ವಿಭೋ ।
ತಥಾ ದಕ್ಷಿಣಗಂಗೇತಿ ಭವೇಯಂ ತ್ರಿದಶೇಶ್ವರ ॥ ೨೪ ॥
ಪೃಥಿವ್ಯಾಂ ಸರ್ವತೀರ್ಥೇಷು ಸ್ನಾತ್ವಾ ಯಲ್ಲಭತೇ ಫಲಂ ।
ತತ್ಫಲಂ ಲಭತೇ ಮರ್ತ್ಯೋ ಭಕ್ತ್ಯಾ ಸ್ನಾತ್ವಾ ಮಹೇಶ್ವರ ॥ ೨೫ ॥

---

೧೯. ಆಗ ಸಂತುಷ್ಟನಾದ ಮಹಾದೇವನು ಪಾರ್ವತಿಯೊಡನೆ ಸಾಕ್ಷಾತ್ಕರಿಸಿ ಹೇಳಿದನು. ಭಾಗ್ಯಶಾಲಿನಿಯೆ ! ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯನ್ನು ತಿಳಿಸು.

೨೦. ನದೀದೇವತೆಯು ಹೇಳುತ್ತಾಳೆ :—ಸರ್ವೇಶ್ವರನೆ ! ಪ್ರಳಯಕಾಲದಲ್ಲಿ ಸಕಲ ಸ್ಥಾವರಜಂಗಮಗಳು ನಷ್ಟವಾದರೂ ನಾನು ಮಾತ್ರ ನಿನ್ನ ಅನುಗ್ರಹ ದಿಂದ ನಾಶಗೊಳ್ಳದಿರಬೇಕು.

೨೧. ದೇವಾಧಿದೇವನೆ ! ನದಿಗಳೂ, ಸಾಗರಗಳೂ, ಪರ್ವತಗಳೂ ನಾಶ ವನ್ನು ಹೊಂದಿದರೂ ನಿನ್ನ ಪ್ರಸಾದದಿಂದ ನಾನು ಪುಣ್ಯಪ್ರದೆಯೂ, ಶಾಶ್ವತಳೂ ಆಗಿರಬೇಕು.

೨೨. ಎಲೈ ಶಂಕರನೆ ! ಪಾತಕಗಳನ್ನೂ, ಉಪಪಾತಕಗಳನ್ನೂ, ಮಹಾ ಪಾತಕಗಳನ್ನೂ ಮಾಡಿದವರೂ ಭಕ್ತಿಯಿಂದ ನನ್ನಲ್ಲಿ ಸ್ನಾನವನ್ನು ಮಾಡಿದ ಮಾನವರು ಸಮಸ್ತ ಪಾಪಗಳನ್ನೂ ಕಳೆದುಕೊಳ್ಳಲಿ.

೨೩. ಉತ್ತರದಿಕ್ಕಿನಲ್ಲಿ ಗಂಗಾನದಿಯು ಮಹಾಪಾತಕಗಳನ್ನು ಕಳೆಯುವು ದಾಗಿರುವುದು. ಹಾಗೆಯೇ ನಾನೂ ದಕ್ಷಿಣದಿಕ್ಕಿನಲ್ಲಿ ದೇವವಂದಿತಳಾಗಿರಬೇಕು.

೨೪. ದೇವೇಶ್ವರನೆ ! ಸರ್ವವ್ಯಾಪಿಯೆ ! ಸ್ವರ್ಗದಿಂದ ಬಂದು ಗಂಗೆಯು ಹೇಗೆ ಭೂಮಿಯಲ್ಲಿ ಪ್ರಖ್ಯಾತಳಾಗಿರುವಳೊ, ಹಾಗೆಯೇ ನಾನೂ ದಕ್ಷಿಣ ಗಂಗೆಯೆಂಬ ಹೆಸರುಳ್ಳವಳಾಗಬೇಕು.

೨೫. ಮಹೇಶ್ವರ ! ಭೂಮಂಡಲದಲ್ಲಿರುವ ಸಮಸ್ತ ತೀರ್ಥಗಳಲ್ಲಿಯೂ

**ಬ್ರಹ್ಮಹತ್ಯಾದಿಕಂ ಪಾಪಂ ಯದಾಸ್ತೇ ಸಂಚಿತಂ ಕ್ವಚಿತ್ ।**
**ಮಾಸಮಾತ್ರೇಣ ತದ್ದೇವ ಕ್ಷಯಂ ಯಾತ್ವವಗಾಹನಾತ್ ॥ ೨೬ ॥**
**ಯತ್ಫಲಂ ಸರ್ವವೇದೇಷು ಸರ್ವಯಜ್ಞೇಷು ಶಂಕರ ।**
**ಅವಗಾಹೇನ ತತ್ಸರ್ವಂ ಭವತ್ವಿತಿ ಮತಿರ್ಮಮ ॥ ೨೭ ॥**
**ಸರ್ವದಾನೋಪವಾಸೇಷು ಸರ್ವತೀರ್ಥಾವಗಾಹನೇ ।**
**ತತ್ಫಲಂ ಮಮ ತೋಯೇನ ಜಾಯತಾಮಿತಿ ಶಂಕರ ॥ ೨೮ ॥**
**ಮಮ ತೀರೇ ನರಾ ಯೇತು ಅರ್ಚಯಂತಿ ಮಹೇಶ್ವರಂ ।**
**ತೇ ಗತಾಸ್ತವ ಲೋಕಂ ಸ್ಯುರೇತದೇವ ಭವೇಚ್ಛಿವ ॥ ೨೯ ॥**
**ಮಮ ಕೂಲೇ ಮಹೇಶಾನ ಉಮಯಾ ಸಹ ದೈವತೈಃ ।**
**ವಸ ನಿತ್ಯಂ ಜಗನ್ನಾಥ ಏಷ ಏವ ವರೋ ಮಮ ॥ ೩೦ ॥**
**ಸುಕರ್ಮಾ ವಾ ವಿಕರ್ಮಾ ವಾ ಶಾಂತೋ ದಾಂತೋ ಜಿತೇಂದ್ರಿಯಃ ।**
**ಮೃತೋ ಜಂತುರ್ಮಮ ಜಲೇ ಗಚ್ಛತಾದಮರಾವತೀಂ ॥ ೩೧ ॥**

---

ಮಾಡಲು ಯಾವ ಫಲವುಂಟೊ, ಅದನ್ನೇ ಭಕ್ತಿಯಿಂದ ನನ್ನಲ್ಲಿ ಸ್ನಾನ ಮಾಡುವ ಮನುಜನೂ ಪಡೆಯಬೇಕು.

೨೬. ಬ್ರಹ್ಮಹತ್ಯಾದಿ ಮಹಾ ಪಾತಕಗಳನ್ನು ಯಾವನಾದರೂ ಗಳಿಸಿದ್ದರೂ ಒಂದು ತಿಂಗಳು ನನ್ನಲ್ಲಿ ಸ್ನಾನವನ್ನು ಮಾಡುವುದರಿಂದ ಅವನ್ನು ಕಳೆದು ಕೊಳ್ಳಬೇಕು.

೨೭. ಸಕಲ ವೇದಗಳ ಅಧ್ಯಯನದಿಂದ ಯಾವ ಫಲವೊ, ಸಮಸ್ತ ಯಜ್ಞಗಳನ್ನು ಮಾಡುವುದರಿಂದ ಯಾವ ಪುಣ್ಯವೊ, ನನ್ನಲ್ಲಿ ಸ್ನಾನಮಾಡು ವುದರಿಂದ ಅವೆಲ್ಲವೂ ಲಭಿಸಬೇಕೆಂಬುದೇ ನನ್ನ ಕೋರಿಕೆಯಾಗಿರುವುದು.

೨೮. ಎಲೈ ಶಂಕರನೆ! ಸಕಲ ದಾನಗಳಿಂದಲೂ, ಉಪವಾಸ ವ್ರತಗಳಿಂದಲೂ, ಸಮಸ್ತ ತೀರ್ಥಗಳ ಸೇವೆಯಿಂದಲೂ ದೊರಕುವ ಫಲವೇ ನನ್ನ ಉದಕದ ಸೇವನೆಯಿಂದ ಲಭಿಸಬೇಕೆಂಬುದಾಗಿ ಬೇಡುವೆನು.

೨೯. ನನ್ನ ತೀರದಲ್ಲಿ ಯಾರು ಮಹೇಶ್ವರನ ಪೂಜೆಯನ್ನು ಮಾಡುವರೊ, ಅವರು ನಿನ್ನ ಲೋಕದ ನಿವಾಸಿಗಳಾಗುವಂತೆ ನೀನು ಅನುಗ್ರಹಿಸಬೇಕು.

೩೦. ಲೋಕನಾಥನೆ! ಸಕಲ ದೇವತೆಗಳೊಡಗೂಡಿ ಪಾರ್ವತೀಸಮೇತ ನಾದ ನೀನೂ ಶಾಶ್ವತವಾಗಿ ನನ್ನ ತೀರದಲ್ಲಿ ವಾಸಮಾಡುತ್ತಿರಬೇಕೆಂಬುದೇ ನನ್ನ ವರವಾಗಿರುವುದು.

೩೧. ಸತ್ಕರ್ಮನಿಷ್ಠನಾಗಲಿ, ಪಾಪನಿರತನಾಗಲಿ, ಶಮ ದಮ ಜಿತೇಂದ್ರಿ ಯತ್ವಾದಿ ಸದ್ಗುಣಭರಿತನಾಗಲಿ, ಯಾವ ಪ್ರಾಣಿಯೇ ಆದರೂ ನನ್ನ ಜಲದಲ್ಲಿ ಮಡಿದರೂ ಸ್ವರ್ಗಲೋಕವನ್ನು ಸೇರಬೇಕು.

ತ್ರಿಷು ಲೋಕೇಷು ವಿಖ್ಯಾತಾ ಮಹಾಪಾತಕನಾಶಿನೀ ।
ಭವಾಮಿ ದೇವದೇವೇಶ ಪ್ರಸನ್ನೋ ಯದಿ ಮನ್ಯಸೇ ॥ ೩೨ ॥
ಏತಾಂಶ್ಚಾನ್ಯಾನ್ವರಾನ್ದಿವ್ಯಾನ್ಪ್ರಾರ್ಥಿತೋ ನೃಪಸತ್ತಮ ।
ನರ್ಮದಾಯಾ ತತಃ ಪ್ರಾಹ ಪ್ರಸನ್ನೋ ವೃಷವಾಹನಃ ॥ ೩೩ ॥

ಶ್ರೀ ಮಹೇಶ ಉವಾಚ :—

ಏವಂ ಭವತು ಕಲ್ಯಾಣಿ ಯತ್ತ್ವಯೋಕ್ತಮನಿಂದಿತೇ ।
ನಾಽನ್ಯಾ ವರಾಽರ್ಹಾ ಲೋಕೇಷು ಮುಕ್ತ್ವಾ ತ್ವಾಂ ಕಮಲೇಕ್ಷಣೇ ॥೩೪॥
ಯದೈವ ಮಮ ದೇಹಾತ್ತ್ವಂ ಸಮುದ್ಭೂತಾ ವರಾನನೇ ।
ತದೈವ ಸರ್ವಪಾಪಾನಾಂ ಮೋಚಿನೀ ತ್ವಂ ನ ಸಂಶಯಃ ॥ ೩೫ ॥
ಕಲ್ಪಕ್ಷಯಕರೇ ಕಾಲೇ ಕಾಲೇ ಘೋರೇ ವಿಶೇಷತಃ ।
ಉತ್ತರಂ ಕೂಲಮಾಶ್ರಿತ್ಯ ನಿವಸಂತಿ ಚ ಯೇ ನರಾಃ ॥ ೩೬ ॥
ಅಪಿ ಕೀಟಪತಂಗಾಶ್ಚ ವೃಕ್ಷಗುಲ್ಮಲತಾದಯಃ ।
ಆದೇಹಪತನಾದ್ದೇವಿ ತೇಽಪಿ ಯಾಸ್ಯಂತಿ ಸದ್ಗತಿಂ ॥ ೩೭ ॥
ದಕ್ಷಿಣಂ ಕೂಲಮಾಶ್ರಿತ್ಯ ಯೇ ದ್ವಿಜಾ ಧರ್ಮವತ್ಸಲಾಃ ।
ಆಮೃತ್ಯೋರ್ನಿವಸಿಷ್ಯಂತಿ ತೇ ಗತಾಃ ಪಿತೃಮಂದಿರೇ ॥ ೩೮ ॥

---

೩೨. ನೀನು ಪ್ರಸನ್ನನಾಗಿ ನಿನ್ನ ಇಚ್ಛೆಗೆ ಬಂದರೆ ನಾನು ಮಹಾಪಾತಕ ಹಾರಿಣಿಯೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತಳಾಗುವಂತೆ ಮಾಡು.

೩೩. ಧರ್ಮರಾಜನೆ! ನರ್ಮದೆಯು ಇವುಗಳನ್ನೂ ಇತರ ದಿವ್ಯ ವರ ಗಳನ್ನೂ ಕೇಳಿಕೊಳ್ಳಲು ವೃಷಭವಾಹನನಾದ ಶಿವನು ಪ್ರಸನ್ನನಾಗಿ ಹೇಳಿದನು.

೩೪. ಮಹೇಶ್ವರನು ಹೇಳುತ್ತಾನೆ :—ಮಂಗಳಪ್ರದಯೆ ! ನಿಷ್ಕಲ್ಮಷೆಯೆ ! ನೀನು ಹೇಳಿದಂತೆಯೇ ಎಲ್ಲವೂ ನಡೆಯಲಿ. ಕಮಲಲೋಚನೆಯಾದ ನೀನಲ್ಲದೆ ವರಗಳನ್ನು ಕೇಳಲು ಅರ್ಹರಾದ ಬೇರೊಬ್ಬರನ್ನು ಕಾಣೆನು.

೩೫. ಸುಂದರಿಯೆ ! ನೀನು ಯಾವಾಗ ನನ್ನ ದೇಹದಿಂದ ಉದ್ಭವಿಸಿದೆಯೊ, ಆಗಲೇ ಸಕಲಪಾತಕಪರಿಹಾರಿಣಿಯಾದೆಯೆಂಬುದರಲ್ಲಿ ಸಂದೇಹವಿಲ್ಲ.

೩೬–೩೭. ದೇವಿಯೆ ! ಕಲ್ಪಾಂತಕಾಲಗಳಲ್ಲಿಯೂ ಕ್ಷಾಮಾದಿ ಇತರ ಘೋರಸಮಯಗಳಲ್ಲಿಯೂ ವಿಶೇಷವಾಗಿ ಯಾರು ನಿನ್ನ ಉತ್ತರ ತೀರ ವನ್ನಾಶ್ರಯಿಸಿರುವರೊ, ಅವರೂ, ಸಾಯುವವರೆಗೂ ಅಲ್ಲಿ ವಾಸಿಸುವ ಕೀಟ ಗಳೂ, ಪತಂಗಗಳೂ, ಮರಗಿಡಬಳ್ಳಿಗಳೂ ಸದ್ಗತಿಯನ್ನು ಪಡೆಯುವರು.

೩೮. ನಿನ್ನ ದಕ್ಷಿಣತೀರವನ್ನಾಶ್ರಯಿಸಿ ಯಾವ ಬ್ರಾಹ್ಮಣರು ಧರ್ಮೈಕ ನಿರತರಾಗಿರುವರೊ, ಮತ್ತು ದೇಹಪಾತದವರೆಗೆ ಅಲ್ಲಿ ವಾಸಮಾಡುವರೊ, ಅವರು ಪಿತೃಲೋಕವನ್ನು ಸೇರುವರು.

ಅಹಂ ಹಿ ತವ ವಾಕ್ಯೇನ ಕಸ್ಮಿಂಶ್ಚಿತ್ಕಾರಣಾಂತರೇ ।
ತ್ವತ್ತೀರೇ ನಿವಸಿಷ್ಯಾಮಿ ಸದೈವ ಹ್ಯುಮಯಾ ಸಮಂ ॥ ೩೯ ॥
ಏವಂ ದೇವಿ ಮಹಾದೇವಿ ಏವಮೇವ ನ ಸಂಶಯಃ ॥ ೪೦ ॥
ಬ್ರಹ್ಮೇಂದ್ರಚಂದ್ರವರುಣೈಃ ಸಾಧ್ಯೈಶ್ಚ ಸಹ ವಿಷ್ಣುನಾ ।
ಉತ್ತರೇ ದೇವಿ ತೇ ಕೂಲೇ ವಸಿಷ್ಯಂತಿ ಮಮಾಜ್ಞಯಾ ॥ ೪೧ ॥
ದಕ್ಷಿಣೇ ಪಿತೃಭಿಃ ಸಾರ್ಧಂ ತಥಾಽನ್ಯೇ ಸುರಸುಂದರಿ ।
ವಸಿಷ್ಯಂತಿ ಮಯಾ ಸಾರ್ಧಮೇಷ ತೇ ವರ ಉತ್ತಮಃ ॥ ೪೨ ॥
ಗಚ್ಛ ಗಚ್ಛ ಮಹಾಭಾಗೇ ಮರ್ತ್ಯಾನ್ಪಾಪಾದ್ವಿಮೋಚಯ ।
ಸಹಿತಾ ಋಷಿಸಂಘೈಶ್ಚ ತಥಾ ಸಿದ್ಧಸುರಾಽಸುರೈಃ ॥ ೪೩ ॥
ಏವಮುಕ್ತ್ವಾ ಮಹಾದೇವ ಉಮಯಾ ಸಹಿತೋ ವಿಭುಃ ।
ವಂದ್ಯಮಾನೋಽಥ ಮುನುನಾ ಮಯಾ ಚಾದರ್ಶನಂ ಗತಃ ॥ ೪೪ ॥
ತೇನ ಚೈಷಾ ಮಹಾಪುಣ್ಯಾ ಮಹಾಪಾತಕನಾಶಿನೀ ।
ಕಥಿತಾ ಪೃಚ್ಛ್ಯತೇ ಯಾ ತೇ ಮಾ ತೇ ಭವತು ವಿಸ್ಮಯಃ । ॥ ೪೫ ॥

---

೩೯. ನಿನ್ನ ಇಷ್ಟದಂತೆ ನಾನೂ ಕೆಲವು ಕಾಲಾನಂತರ ಒಂದಾನೊಂದು ಕಾರಣದಿಂದ ಉಮಾಸಮೇತವಾಗಿ ಬಂದು ಶಾಶ್ವತವಾಗಿ ನಿನ್ನ ತೀರದಲ್ಲಿ ವಾಸ ಮಾಡುವೆನು.

೪೦. ಎಲೌ ಮಹಾದೇವಿಯೆ! ಹೀಗೆ ನಡೆಯುವುದರಲ್ಲಿ ಸಂದೇಹವಿಲ್ಲ.

೪೧. ನನ್ನ ಅಪ್ಪಣೆಯಂತೆ ಬ್ರಹ್ಮ, ಇಂದ್ರ, ಚಂದ್ರ, ವರುಣ, ಸಾಧ್ಯರು ಮಹಾವಿಷ್ಣುವಿನೊಡನೆ ನಿನ್ನ ಉತ್ತರತೀರದಲ್ಲಿ ವಾಸಮಾಡುವರು.

೪೨. ದೇವಿಯೆ! ದಿವ್ಯಕನ್ಯೆಯಾದ ನಿನ್ನ ದಕ್ಷಿಣತೀರದಲ್ಲಿ ಪಿತೃಗಳೂ ಇತರರೂ ನನ್ನೊಡನೆ ವಾಸಿಸುತ್ತಿರುವರು. ಈ ಉತ್ತಮವರವನ್ನು ನಿನಗೆ ಕೊಟ್ಟಿರುವೆನು.

೪೩. ಮಹಾಭಾಗ್ಯಶಾಲಿನಿಯೆ! ಇನ್ನು ಹೊರಡು. ಮಹರ್ಷಿಗಳ ಸಂಘಗಳಿಂದಲೂ, ಸಿದ್ಧರಿಂದಲೂ, ದೇವದಾನವರಿಂದಲೂ ಸೇವಿತಳಾಗಿ ಮನುಷ್ಯರ ಪಾತಕಗಳನ್ನು ಕಳೆಯುತ್ತಿರು.

೪೪. ಇಂತೆಂದು ಪಾರ್ವತೀಸಮೇತನಾದ ಪರಮೇಶ್ವರನು ಮನುವಿನ ಮತ್ತು ನನ್ನ ಅಭಿವಾದನೆಗಳನ್ನು ಸ್ವೀಕರಿಸಿ ಅಲ್ಲಿಯೇ ಅಂತರ್ಹಿತನಾದನು.

೪೫. ಆದುದರಿಂದಲೇ ಈ ನದಿಯು ಮಹಾಪಾತಕಪರಿಹಾರಕವೆಂದೂ ಪುಣ್ಯಪ್ರದೆಯೆಂದೂ ಕರೆಯಲ್ಪಡುವುದು. ನೀನು ಕೇಳಿದ ಈ ವಿಷಯದಲ್ಲಿ ವಿಸ್ಮಯಗೊಳ್ಳಬೇಡ.

ಏಷಾ ಗಂಗಾ ಮಹಾಪುಣ್ಯಾ ತ್ರಿಷುಲೋಕೇಷು ವಿಶ್ರುತಾ ।
ದಶಭಿಃ ಪಂಚಭಿಃ ಸ್ರೋತ್ಯೈಃ ಪ್ಲಾವಯಂತೀ ದಿಶೋ ದಶ ॥ ೪೬ ॥
ಶೋಣೋ ಮಹಾನದಶ್ಚೈವ ನರ್ಮದಾ ಸುರಸಾ ಕೃತಾ ।
ಮಂದಾಕಿನೀ ದಶಾರ್ಣಾ ಚ ಚಿತ್ರಕೂಟಾ ತಥೈವ ಚ ॥ ೪೭ ॥
ತಮಸಾ ವಿದಶಾ ಚೈವ ಕರಭಾ ಯಮುನಾ ತಥಾ ।
ಚಿತ್ರೋತ್ಪಲಾ ವಿಪಾಶಾ ಚ ರಂಜನೀ ವಾಲುವಾಹಿನೀ ॥ ೪೮ ॥
ಋಕ್ಷಪಾದಪ್ರಸೂತಾಸ್ತಾಃ ಸರ್ವಾ ವೈ ರುದ್ರಸಂಭವಾಃ ।
ಸರ್ವಪಾಪಹರಾಃ ಪುಣ್ಯಾಃ ಸರ್ವಮಂಗಲದಾಃ ಶಿವಾಃ ॥ ೪೯ ॥
ಇತ್ಯೇತೈರ್ನಾಮಭಿರ್ದಿವ್ಯೈಃ ಸ್ತೂಯತೇ ವೇದಪಾರಗೈಃ ।
ಪುರಾಣಜ್ಞೈರ್ಮಹಾಭಾಗೈರಾಜ್ಯಪೈಃ ಸೋಮಪೈಸ್ತಥಾ ॥ ೫೦ ॥
ಇತ್ಯೇತತ್ಸರ್ವಮಾಖ್ಯಾತಂ ಮಹಾಭಾಗ್ಯಂ ನರೋತ್ತಮ ।
ಮನುನೋಕ್ತಂ ಪುರಾ ಮಹ್ಯಮಮೃತಾಯಾಃ ಸಮುದ್ಭವಂ ॥ ೫೧ ॥
ಪುಣ್ಯಂ ಪವಿತ್ರಮತುಲಂ ರುದ್ರೋದ್ಗೀತಮಿದಂ ಶುಭಂ ।
ಯೇ ನರಾಃ ಕೀರ್ತಯಿಷ್ಯಂತಿ ಭಕ್ತ್ಯಾ ಶೃಣ್ವಂತಿ ಯೇಽಪಿ ಚ ॥ ೫೨ ॥

---

೪೬. ಇದೇ ಮಹಾಪುಣ್ಯಪ್ರದೆಯಾದ ಗಂಗೆಯೆಂದು ಮೂರು ಲೋಕಗಳಲ್ಲಿಯೂ ವಿಖ್ಯಾತಿಯನ್ನು ಪಡೆದು ಹದಿನೈದು ಪ್ರವಾಹಗಳಿಂದ ಹತ್ತು ದಿಕ್ಕುಗಳನ್ನೂ ತೋಯಿಸುತ್ತಿರುವುದು.

೪೭–೪೮. ಶೋಣ ಮಹಾನದ, ನರ್ಮದೆ, ಸುರಸೆ, ಕೃತೆ, ಮಂದಾಕಿನಿ, ದಶಾರ್ಣ, ಚಿತ್ರಕೂಟಾ, ತಮಸಾ, ವಿದಶಾ, ಕರಭಾ, ಯಮುನಾ, ಚಿತ್ರೋತ್ಪಲಾ, ವಿಪಾಶಾ, ರಂಜನೀ, ವಾಲುವಾಹಿನಿಗಳೆಂಬಿವೇ ಈ ಹದಿನೈದು ನದಿಗಳು.

೪೯. ಇವೆಲ್ಲವೂ ಮಹಾದೇವನಿಂದ ಹುಟ್ಟಿದುವು. ಋಕ್ಷಪರ್ವತದಿಂದ ಹರಿಯುವುವು. ಎಲ್ಲವೂ ಸಕಲಪಾತಕಪರಿಹಾರಕಗಳೂ, ಪುಣ್ಯದಾಯಕಗಳೂ, ಮಾಂಗಲ್ಯವರ್ಧಕಗಳೂ, ಶುಭಪ್ರದಗಳೂ ಆಗಿರುವುವು.

೫೦. ವೇದಪಾರಂಗತರೂ, ಪುರಾಣಜ್ಞರೂ, ಮಹಾಪ್ರಾಜ್ಞರಾದ ಆಜ್ಯಪಾಯಿಗಳೂ, ಸೋಮಪೀಥಿಗಳೂ ಈ ನದಿಯನ್ನು ಈ ನಾಮಗಳಿಂದಲೇ ಹೊಗಳುತ್ತಿರುವರು.

೫೧. ರಾಜೇಂದ್ರನೆ! ಇಂತು ಅಮೃತನದಿಗೆ ಸಂಬಂಧಿಸಿದ ಮಹಾಭಾಗ್ಯಪ್ರದವಾದ ಚರಿತ್ರೆಯನ್ನು ನಿಶ್ಶೇಷವಾಗಿ ಹಿಂದೆ ಮನುವು ನನಗೆ ಹೇಳಿದಂತೆ ವಿವರಿಸಿರುವೆನು.

೫೨–೫೩. ರುದ್ರನಿಗೆ ಸಂಬಂಧಿಸಿದ ಈ ಅಧ್ಯಾಯವು ಪುಣ್ಯಪ್ರದವೂ,

**ಪ್ರಾತರುತ್ಥಾಯ ನಾಮಾನಿ ದಶ ಪಂಚ ಚ ಭಾರತ ।**
**ತೇ ನರಾಃ ಸಕಲಂ ಪುಣ್ಯಂ ಲಭಿಷ್ಯಂತ್ಯವಗಾಹಜಂ ॥ ೫೩ ॥**
**ವಿಮಾನೇನಾರ್ಕವರ್ಣೇನ ಘಂಟಾಶತನಿನಾದಿನಾ ।**
**ತ್ಯಕ್ತ್ವಾ ಮನುಷ್ಯಕಂ ಭಾವಂ ಯಾಸ್ಯಂತಿ ಪರಮಾಂ ಗತಿಂ ॥ ೫೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ನರ್ಮದಾಪಂಚದಶನಾಮವರ್ಣನಂ" ನಾಮ ಚತುರ್ಥೋಽಧ್ಯಾಯಃ**

---

ಅತ್ಯಂತ ಪವಿತ್ರವೂ, ಮಂಗಳಕರವೂ ಆಗಿರುವುದು. ಧರ್ಮರಾಜನೆ! ಇದನ್ನು ಯಾವ ಮಾನವರು ಪ್ರವಚನಮಾಡುವರೊ, ಯಾರು ಭಕ್ತಿಯಿಂದ ಕೇಳುವರೊ, ಬೆಳಿಗ್ಗೆ ಎದ್ದಕೂಡಲೆ ಮೇಲೆ ಹೇಳಿದ ಹದಿನೈದು ನಾಮಗಳನ್ನು ಯಾರು ಪಾರಾಯಣಮಾಡುವರೊ, ಇವರೆಲ್ಲರೂ ನರ್ಮದಾತೀರ್ಥದಲ್ಲಿ ಸ್ನಾನಮಾಡಿದ ಪುಣ್ಯಸರ್ವಸ್ವಕ್ಕೆ ಭಾಗಿಗಳಾಗುವರು.

೫೪. ಅವರು ನೂರಾರು ಕಿರುಗಂಟೆಗಳ ಶಬ್ದದಿಂದ ಧ್ವನಿತವಾದ ಸೂರ್ಯಕಾಂತಿಯ ವಿಮಾನದಲ್ಲಿ ಕುಳಿತು ಮನುಷ್ಯಭಾವವನ್ನು ತ್ಯಜಿಸಿ ಉತ್ತಮಗತಿಯನ್ನು ಹೊಂದುವರು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ನರ್ಮದಾಪಂಚದಶನಾಮವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ನರ್ಮದಾನಾಮನಿರುಕ್ತಿವರ್ಣನಂ

ಯುಧಿಷ್ಠಿರ ಉವಾಚ :—

ಆಶ್ಚರ್ಯಮೇತದಖಿಲಂ ಕಥಿತಂ ಭೋ ದ್ವಿಜೋತ್ತಮ ।
ವಿಸ್ಮಯಂ ಪರಮಾಪನ್ನಾ ಋಷಿಸಂಘಾ ಮಯಾ ಸಹ ॥ ೧ ॥
ಅಹೋ ಭಗವತೀ ಪುಣ್ಯಾ ನರ್ಮದೇಯಮಯೋನಿಜಾ ।
ರುದ್ರದೇಹಾದ್ವಿನಿಷ್ಕ್ರಾಂತಾ ಮಹಾಪಾಪಕ್ಷಯಂಕರೀ ॥ ೨ ॥
ಸಪ್ತಕಲ್ಪಕ್ಷಯೇ ಪ್ರಾಪ್ತೇ ತ್ವಯೇಯಂ ಸಹ ಸುವ್ರತ ।
ನ ಮೃತಾ ಚ ಮಹಾಭಾಗಾ ಕಿಮತಃ ಪುಣ್ಯಮುತ್ತಮಂ ॥ ೩ ॥
ಕೇ ತೇ ಕಲ್ಪಾಃ ಸಮುದ್ದಿಷ್ಟಾಃ ಸಪ್ತಕಲ್ಪಕ್ಷಯಂಕರಾಃ ।
ನ ಮೃತಾ ಚೇದಿಯಂ ದೇವೀ ತ್ವಂ ಚೈವ ಋಷಿಪುಂಗವ ॥ ೪ ॥
ಅಪಕ್ಷಿಗಣಸಂಘಾತೇ ಜಗತ್ಯೇಕಾರ್ಣವೀಕೃತೇ ।
ಕೀದೃಗ್ರೂಪಃ ಸಮಭವನ್ಮಹಾದೇವೋ ಯುಗಕ್ಷಯೇ ॥ ೫ ॥

---

### ಕನ್ನಡದ ಅನುವಾದ

#### ನರ್ಮದಾನಾಮನಿರುಕ್ತಿವರ್ಣನ

೧. ಯುಧಿಷ್ಠಿರನು ಹೇಳುತ್ತಾನೆ :—ಬ್ರಾಹ್ಮಣೋತ್ತಮನೆ! ನೀನು ನಮಗೆ ವಿವರಿಸಿರುವ ಈ ಚರಿತ್ರೆಯು ಅತ್ಯಾಶ್ಚರ್ಯಮಯವಾಗಿರುವುದು. ನನ್ನೊಡನಿರುವ ಈ ಮಹರ್ಷಿಸಮೂಹಗಳು ಸಹ ವಿಸ್ಮಯಗೊಂಡಿರುವುವು.

೨. ಅಯೋನಿಜೆಯೂ, ಮಹೇಶ್ವರನ ದೇಹದಿಂದ ಆವಿರ್ಭವಿಸಿ ಬಂದವಳೂ, ಸಕಲ ಪಾಪನಾಶಕಳೂ, ಭಾಗ್ಯಶಾಲಿನಿಯೂ ಆದ ಈ ನರ್ಮದೆಯು ಮಹಾ ಪುಣ್ಯವತಿಯು.

೩. ಎಲೈ ಭಾಗ್ಯಶಾಲಿಯೆ! ಏಳು ಕಲ್ಪಗಳು ಕೊನೆಗಂಡರೂ ನಿನ್ನೊಡನೆ ಇವಳು ಜೀವಂತಳಾಗಿಯೇ ಇರುವಳು. ಇದಕ್ಕಿಂತಲೂ ಹೆಚ್ಚಿನ ಪುಣ್ಯವು ಯಾವುದು ?

೪. ಈ ಕಲ್ಪಗಳು ಯಾವುವು? ಏಳು ಕಲ್ಪಗಳನ್ನೂ ಕೊನೆಗಾಣಿಸುವ ಕಾರಣಗಳಾವುವು? ಋಷಿಪುಂಗವನಾದ ನೀನೂ ಈ ದೇವಿಯೂ ಮೃತರಾಗದಿದ್ದುದು ಹೇಗೆ?

೫. ಪಕ್ಷಿಗಳಿಗೂ ಪ್ರಳಯವೊದಗಲು ಭೂಮಿಯು ಸಮುದ್ರದಲ್ಲಿ ಮುಳುಗಿ ಯುಗಕ್ಷಯವಾದಾಗ ಮಹಾದೇವನು ಯಾವ ರೂಪವನ್ನು ತಾಳಿದ್ದನು ?

ಕಥಂ ಸಂಹರತೇ ವಿಶ್ವಂ ಕಥಂ ಚಾಪ್ತೇ ಮಹಾರ್ಣವೇ ।
ಕಥಂ ಚ ಸೃಜತೇ ವಿಶ್ವಂ ಕಥಂ ಧಾರಯತೇ ಪ್ರಜಾಃ ॥ ೬ ॥
ಕೀದೃಗ್ರೂಪಾ ಭವೇದ್ದೇವೀ ಸರಿದೇಕಾರ್ಣವೀಕೃತೇ ।
ಕಿಮರ್ಥಂ ನರ್ಮದಾ ಪ್ರೋಕ್ತಾ ರೇವೇತಿ ಚ ಕಥಂ ಸ್ಮೃತಾ ॥ ೭ ॥
ಅಂಜನೇತಿ ಕಿಮರ್ಥಂ ವಾ ಕಿಮರ್ಥಂ ಸುರಸೇತಿ ಚ ।
ಮಂದಾಕಿನೀ ಕಿಮರ್ಥಂ ಚ ಶೋಣಶ್ಚೇತಿ ಕಥಂ ಭವೇತ್ ॥ ೮ ॥
ತ್ರಿಕೂಟೇತಿ ಕಿಮರ್ಥಂ ವಾ ಕಿಮರ್ಥಂ ವಾಲುವಾಹಿನೀ ।
ಕೋಟಿಕೋಟ್ಯೋಹಿ ತೀರ್ಥಾನಾಂ ಪ್ರವಿಷ್ಟಾಯಾ ಮಹಾರ್ಣವಂ ॥ ೯ ॥
ಕಿಯತ್ಯಃ ಸರಿತಾಂ ಕೋಟ್ಯೋ ನರ್ಮದಾಂ ಸಮುಪಾಸತೇ ।
ಯಜ್ಞೋಪವೀತೈರ್ಋಷಿಭಿರ್ದೇವತಾಭಿಸ್ತಥೈವ ಚ ॥ ೧೦ ॥
ವಿಭಕ್ತೇಯಂ ಕಿಮರ್ಥಂ ಚ ಶ್ರೂಯತೇ ಮುನಿಸತ್ತಮ ।
ವೈಷ್ಣವೀತಿ ಪುರಾಣಜ್ಞೈಃ ಕಿಮರ್ಥಮಿಹ ಚೋಚ್ಯತೇ ॥ ೧೧ ॥
ಕೇಷು ಸ್ಥಾನೇಷು ತೀರ್ಥೇಷು ಪೂಜನೀಯಾ ಸರಿದ್ವರಾ ।
ತೀರ್ಥಾನಿ ಚ ಪೃಥಗ್ಬ್ರೂಹಿ ಯತ್ರ ಸನ್ನಿಹಿತೋ ಹರಃ ॥ ೧೨ ॥

---

೬. ಆತನು ಬ್ರಹ್ಮಾಂಡವನ್ನು ಹೇಗೆ ಉಪಸಂಹರಿಸುವನು? ಹೇಗೆ ಮಹಾಸಮುದ್ರದಲ್ಲಿರುವನು? ಪುನಃ ಹೇಗೆ ಬ್ರಹ್ಮಾಂಡವನ್ನು ಸೃಜಿಸುವನು? ಸೃಷ್ಟಿಮಾಡಿದ ಜೀವರನ್ನು ಹೇಗೆ ಪರಿಪಾಲಿಸುವನು?

೭. ಪ್ರಳಯದ ಏಕಾರ್ಣವದಲ್ಲಿ ಈ ನದ್ಯಭಿಮಾನಿದೇವತೆಯು ಯಾವ ರೂಪದಿಂದಿರುವಳು? ಈಕೆಯು ನರ್ಮದೆಯೆಂದು ಕರೆಯಲ್ಪಡಲು ಕಾರಣ ವೇನು? ರೇವಾ ಎಂಬ ಹೆಸರೇಕೆ ಬಂದಿತು?

೮. ಹಾಗೆಯೇ ಅಂಜನಾ, ಸುರಸಾ, ಮಂದಾಕಿನೀ ಮತ್ತು ಶೋಣ ಗಳೆಂಬ ಹೆಸರುಗಳೇಕೆ ಬಂದುವು?

೯. ತ್ರಿಕೂಟವೆಂದೂ ವಾಲುಕಾವಾಹಿನಿಯೆಂದೂ ಆ ನದಿಯು ಕರೆಯಲ್ಪ ಡಲು ಕಾರಣವೇನು? ಪ್ರಳಯಮಹಾಸಮುದ್ರದಲ್ಲಿ ಅನಂತ ಕೋಟಿ ತೀರ್ಥಗಳು ಲಯಿಸುವುವಷ್ಟೆ.

೧೦. ಅವುಗಳಲ್ಲಿ ಎಷ್ಟು ಕೋಟಿ ತೀರ್ಥಗಳು ನರ್ಮದೆಯನ್ನು ಸೇವಿಸು ವುವು? ಯಜ್ಞದೀಕ್ಷಿತರಾದ ಋಷಿವರ್ಯರೂ, ದೇವತಾಗಣಗಳೂ ಇದನ್ನು ಏಕೆ ಸೇವಿಸುತ್ತಿರುವರು?

೧೧. ಮುನಿವರ್ಯನೆ! ಇದಕ್ಕೆ ವಿಭಕ್ತೆಯೆಂಬ ಹೆಸರುಂಟಾಗಲು ಕಾರಣವೇನು? ಪುರಾಣಜ್ಞರು ಇದನ್ನು ವೈಷ್ಣವಿಯೆಂದು ಏತಕ್ಕೆ ಕರೆಯುವರು?

೧೨. ಈ ಉತ್ತಮ ನದಿಯನ್ನು ಯಾವ ಸ್ಥಾನಗಳಲ್ಲಿಯೂ, ತೀರ್ಥ

ಯತ್ಪ್ರಮಾಣಾ ಚ ಸಾ ದೇವೀ ಯಾ ರುದ್ರೇಣ ವಿನಿರ್ಮಿತಾ ।
ಕೀದೃಶಾನಿ ಚ ಕರ್ಮಾಣಿ ರುದ್ರೇಣ ಕಥಿತಾನಿ ತೇ ॥ ೧೩ ॥
ಕಥಂ ಮ್ಲೇಚ್ಛಸಮಾಕೀರ್ಣೋ ದೇಶೋಽಯಂ ದ್ವಿಜಸತ್ತಮ ।
ಏತದಾಚಕ್ಷ್ವ ಮಾಂ ಬ್ರಹ್ಮನ್ ಮಾರ್ಕಂಡೇಯ ಮಹಾಮತೇ ॥ ೧೪ ॥
ಶ್ರೀ ಮಾರ್ಕಂಡೇಯ ಉವಾಚ :—
ಶೃಣ್ವಂತು ಋಷಯಃ ಸರ್ವೇ ತ್ವಂ ಚ ತಾತ ಯುಧಿಷ್ಠಿರ ।
ಪುರಾಣಂ ನರ್ಮದಾಯಾಸ್ತು ಕಥಿತಂ ಚ ತ್ರಿಶೂಲಿನಾ ॥ ೧೫ ॥
ವಾಯೋಃ ಸಕಾಶಾಚ್ಚ ಮಯಾ ತೇನಾಽಪಿ ಚ ಮಹೇಶ್ವರಾತ್ ।
ಅಶಕ್ಯತ್ವಾನ್ಮನುಷ್ಯಾಣಾಂ ಸಂಕ್ಷಿಪ್ತಮೃಷಿಭಿಃ ಪುರಾ ॥ ೧೬ ॥
ಮಾಯೂರಂ ಪ್ರಥಮಂ ತಾತ ಕೌರ್ಮ್ಯಂ ಚ ತದನಂತರಂ ।
ಪುರಂ ತಥಾ ಕೌಶಿಕಂ ಚ ಮಾತ್ಸ್ಯಂ ದ್ವಿರದಮೇವ ಚ ॥ ೧೭ ॥
ವಾರಾಹಂ ಯನ್ಮಯಾ ದೃಷ್ಟಂ ವೈಷ್ಣವಂ ಚಾಷ್ಟಮಂ ಪರಂ ।
ನ್ಯಗ್ರೋಧಾಖ್ಯಮತಶ್ಚಾಽಽಸೀದಾಕಾಂಕ್ಷಂ ಪುನರುತ್ತಮಂ ॥ ೧೮ ॥

---

ಗಳಲ್ಲಿಯೂ ವಿಶೇಷವಾಗಿ ಪೂಜಿಸಬೇಕು ? ಪರಮೇಶ್ವರನು ಸನ್ನಿಹಿತನಾಗಿರುವ ತೀರ್ಥವಿಶೇಷಗಳನ್ನು ಬೇರೆ ಬೇರೆಯಾಗಿ ವಿವರಿಸು.

೧೩. ರುದ್ರನಿಂದ ನಿರ್ಮಿತಳಾದ ನರ್ಮದೆಯು ಯಾವ ಪ್ರಮಾಣ ವವಳೆಂಬುದನ್ನೂ, ಇಲ್ಲಿ ಯಾವ ಯಾವ ಕರ್ಮಗಳನ್ನು ಮಾಡಬೇಕೆಂಬ ವಿಷಯದಲ್ಲಿ ಮಹಾದೇವನ ಅಪ್ಪಣೆಗಳನ್ನೂ ನಮಗೆ ತಿಳಿಸು.

೧೪. ದ್ವಿಜೋತ್ತಮನೂ, ಮಹಾಪ್ರಾಜ್ಞನೂ ಆದ ಎಲೈ ಮಾರ್ಕಂಡೇಯನೆ! ಈ ದೇಶವು ಮ್ಲೇಚ್ಛರಿಂದ ಹೇಗೆ ಆಕ್ರಾಂತವಾಯಿತೆಂಬುದನ್ನೂ ನನಗೆ ವಿವರಿಸಿ ಹೇಳು.

೧೫. ಮಾರ್ಕಂಡೇಯನು ಹೇಳುತ್ತಾನೆ:—ಮಹರ್ಷಿಗಳಿರಾ! ವತ್ಸನಾದ ಯುಧಿಷ್ಠಿರನೆ! ಎಲ್ಲರೂ ಕೇಳಿರಿ. ಈ ನರ್ಮದಾ ಪುರಾಣವನ್ನು ಮೊದಲು ಮಹೇಶ್ವರನು ಹೇಳಿದನು.

೧೬. ನಾನು ವಾಯುವಿನಿಂದಲೂ, ಆತನು ಮಹೇಶ್ವರನಿಂದಲೂ ಇದನ್ನು ತಿಳಿದೆವು. ಇದು ವಿಸ್ತಾರವಾಗಿ ಮಾನವರಿಗೆ ಪಠಿಸಲಶಕ್ಯವಾಗಿರಲು ಪೂರ್ವದ ಮಹರ್ಷಿಗಳು ಇದನ್ನು ಸಂಕ್ಷೇಪಗೊಳಿಸಿರುವರು.

೧೭–೧೯. ಎಲೈ ಧರ್ಮರಾಜನೆ! ಮೊದಲನೆಯದು ಮಯೂರಕಲ್ಪವು. ಬಳಿಕ ಕೂರ್ಮ, ಪುರ, ಕೌಶಿಕ, ಮತ್ಸ್ಯ, ದ್ವಿರದಗಳೆಂಬುವು ಕಳೆದು ಏಳನೆಯ ದಾದ ವಾರಾಹಕಲ್ಪವನ್ನೂ ನಾನು ನೋಡಿದೆನು. ಎಂಟನೆಯದೇ ವೈಷ್ಣವವು. ನ್ಯಗ್ರೋಧ, ಉತ್ತಮ, ಪಾದ್ಮ, ತಾಮಸ, ಸಂವರ್ತ, ಉದ್ವರ್ತಗಳು

ಪದ್ಮಂ ಚ ತಾಮಸಂ ಚೈವ ಸಂವರ್ತೋऽದ್ವರ್ತಮೇವ ಚ ।
ಮಹಾಪ್ರಲಯಮಿತ್ಯಾಹುಃ ಪುರಾಣೇ ವೇದಚಿಂತಕಾಃ ॥ ೧೯ ॥
ಏತತ್ಸಂಕ್ಷೇಪತಃ ಸರ್ವಂ ಸಂಕ್ಷಿಪ್ತಂ ತೈರ್ಮಹಾತ್ಮಭಿಃ ।
ವಿಭಕ್ತಂ ಚ ಚತುರ್ಭಾಗೈರ್ಬ್ರಹ್ಮಾದ್ಯೈಶ್ಚ ಮಹರ್ಷಿಭಿಃ ॥ ೨೦ ॥
ತದಹಂ ಸಂಪ್ರವಕ್ಷ್ಯಾಮಿ ಪುರಾಣಾರ್ಥವಿಶಾರದ ।
ಸಪ್ತಕಲ್ಪಾ ಮಹಾಘೋರಾ ಯೈರಿಯಂ ನ ಮೃತಾ ಸರಿತ್ ॥ ೨೧ ॥
ಆಜಂಗಮಂ ತಮೋಭೂತಮಪ್ರಜ್ಞಾತಮಲಕ್ಷಣಂ ।
ನಷ್ಟಚಂದ್ರಾರ್ಕಕಿರಣಮಾಸೀದ್ಭೂತವಿವರ್ಜಿತಂ ॥ ೨೨ ॥
ತಮಸೋऽಂತೇ ಮಹಾನಾಮ್ನಾ ಪುರುಷಃ ಸ ಜಗದ್ಗುರುಃ ।
ಚಚಾರ ತಸ್ಮಿನ್ನೇಕಾಕೀ ವ್ಯಕ್ತಾऽವ್ಯಕ್ತಃ ಸನಾತನಃ ॥ ೨೩ ॥
ಸ ಚೋಂಕಾರಮಯೋऽತೀತೋ ಗಾಯತ್ರೀಮಸೃಜದ್ದ್ವಿಜ ।
ಸ ತಯಾ ಸಾರ್ಧಮೀಶಾನಶ್ಚಿಕ್ರೀಡ ಪುರುಷೋ ವಿರಾಟ್ ॥ ೨೪ ॥
ಸ್ವದೇಹಾದಸೃಜದ್ವಿಶ್ವಂ ಪಂಚಭೂತಾತ್ಮಸಂಜ್ಞಿತಂ ।
ಕ್ರೀಡನ್ ಸಮಸೃಜದ್ವಿಶ್ವಂ ಪಂಚಭೂತಾತ್ಮಸಂಜ್ಞಿತಂ ॥ ೨೫ ॥

---

ನಡೆಯುಲಿರುವುವು. ಆಮೇಲೆ ಮಹಾಪ್ರಳಯವುಂಟಾಗುವುದೆಂದು ವೇದ ಸಾರಜ್ಞರಾದ ಮುನಿಗಳು ಪುರಾಣಗಳಲ್ಲಿ ವಿಸ್ತಾರವಾಗಿ ನಿರೂಪಿಸಿರುವರು.

೨೦. ಇದೇ ಕಲ್ಪಗಳ ಸಂಕ್ಷೇಪಕಥನವು. ಈ ಪುರಾಣ ಭಾಗವನ್ನು ಹಿಂದಿನ ಮಹಾತ್ಮರು ಸ್ವಲ್ಪವಾಗಿ ಹೇಳಿರುವರು. ಅದನ್ನೂ ಬ್ರಹ್ಮಾದಿ ಮಹರ್ಷಿಗಳು ನಾಲ್ಕು ಭಾಗಗಳಾಗಿ ಮಾಡಿರುವರು.

೨೧. ಪುರಾಣಸಾರಗ್ರಾಹಿಯಾದ ಯುಧಿಷ್ಠಿರನೆ! ಘೋರಗಳಾದ ಏಳು ಮಹಾ ಕಲ್ಪಾಂತಗಳಾದರೂ ಈ ದಿವ್ಯನದಿಯು ನಾಶವಾಗದಿರುವ ಚರಿತ್ರೆಯನ್ನು ಹೇಳುತ್ತೇನೆ.

೨೨. ಪ್ರಳಯದಲ್ಲಿ ಜಂಗಮಾದಿಯಾಗಿ ಸರ್ವವೂ ಅಂಧಕಾರಾವೃತವೂ, ತಿಳಿಯಲಸಾಧ್ಯವೂ, ನಾಮರೂಪರಹಿತವೂ, ಚಂದ್ರಸೂರ್ಯಾದಿ ತೇಜೋಹೀನವೂ, ಪ್ರಾಣಿವರ್ಜಿತವೂ ಆಗಿದ್ದಿತು.

೨೩. ತಮಸ್ಸಿನ ಕಡೆಯಲ್ಲಿ ಜಗದ್ಗುರುವೂ, ಆದ್ಯಂತರಹಿತನೂ ಆದ ಏಕ ಪುರುಷನು ಏಕಾಕಿಯಾಗಿ ಮಹತ್ತೆಂಬ ಹೆಸರಿನಿಂದ ಆ ಮಹಾಸಮುದ್ರದಲ್ಲಿ ಕಂಡೂ ಕಾಣದಂತೆ ಸಂಚರಿಸುತ್ತಿದ್ದನು.

೨೪. ಪ್ರಣವಾತ್ಮಕನೂ, ಲೋಕಾತೀತನೂ ಆದ ಆತನು ಗಾಯತ್ರಿಯನ್ನು ಸೃಜಿಸಿದನು. ಆ ವಿರಾಟ್ಪುರುಷನೇ ಆಕೆಯೊಡನೆ ಕ್ರೀಡಿಸುತ್ತಿದ್ದನು.

೨೫. ಲೀಲಾಮಾತ್ರದಿಂದಲೇ ಆತನು ತನ್ನ ಶರೀರದಿಂದ ಪಂಚಭೂತಾತ್ಮಕವಾದ ಬ್ರಹ್ಮಾಂಡವನ್ನು ಸೃಜಿಸಿದನು.

ಕ್ರೀಡನ್ ಸೃಜದ್ವಿರಾಟ್ಸಂಜ್ಞಃ ಸಬೀಜಂ ಚ ಹಿರಣ್ಮಯಂ ।
ತಚ್ಚಾಂಡಮಭವದ್ದಿವ್ಯಂ ದ್ವಾದಶಾದಿತ್ಯಸನ್ನಿಭಂ ॥ ೨೬ ॥
ತದ್ಭಿತ್ವಾ ಪುರುಷೋ ಜಜ್ಞೇ ಚತುರ್ವಕ್ತ್ರಃ ಪಿತಾಮಹಃ ।
ಸೋಽಸೃಜದ್ವಿಶ್ವಮೇವಂ ತು ಸದೇವಾಸುರಮಾನುಷಂ ॥ ೨೭ ॥
ಸ ತಿರ್ಯಕ್ಪಶುಪಕ್ಷೀಕಂ ಸ್ವೇದಾಂಡಜಜರಾಯುಜಂ ।
ಏತದಂಡಂ ಪುರಾಣೇಷು ಪ್ರಥಮಂ ಪರಿಕೀರ್ತಿತಂ ॥ ೨೮ ॥
ಪೂರ್ವಕಲ್ಪೇ ನೃಪಶ್ರೇಷ್ಠ ಕ್ರೀಡಂತ್ಯಾ ಪರಮೇಷ್ಠಿನಾ ।
ಉಮಯಾ ಸಹ ರುದ್ರಸ್ಯ ಕ್ರೀಡತಶ್ಚಾರ್ಣವೀಕೃತಃ ॥ ೨೯ ॥
ಹರ್ಷಾಜ್ಜಜ್ಞೇ ಶುಭಾ ಕನ್ಯಾ ಉಮಾಯಾಃ ಸ್ವೇದಸಂಭವಾ ।
ಶರ್ವಸ್ಯೋರಸ್ಥಲಾಜ್ಜಜ್ಞೇ ಉಮಾಕುಚವಿಮರ್ದನಾತ್ ॥ ೩೦ ॥
ಸ್ವೇದಾದ್ವಿಜಜ್ಞೇ ಮಹತೀ ಕನ್ಯಾ ರಾಜೀವಲೋಚನಾ ।
ದ್ವಿತೀಯಃ ಸಂಭವೋ ಯಸ್ಯಾ ರುದ್ರದೇಹಾದ್ಯುಧಿಷ್ಠಿರ ॥ ೩೧ ॥

---

೨೬. ಕ್ರೀಡಿಸುತ್ತಲೇ ವಿರಾಟ್ಪುರುಷನು ಹೇಮಮಯವಾದ ಬೀಜವನ್ನು ಜಲದಲ್ಲಿ ಬಿಡಲು ಅದು ದ್ವಾದಶಾದಿತ್ಯರ ಕಾಂತಿಯಿಂದ ಹೊಳೆಯುವ ದಿವ್ಯವಾದ ಅಂಡವಾಯಿತು.

೨೭. ಅದು ಒಡೆದು ಒಳಗಿನಿಂದ ನಾಲ್ಕುಮುಖದವನೂ, ಲೋಕಪಿತಾಮಹನೂ ಆದ ಬ್ರಹ್ಮದೇವನು ಹುಟ್ಟಿದನು. ಆತನೇ ಸಕಲ ದೇವದಾನವ ಮಾನವ ಸಮೂಹಗಳಿಂದ ತುಂಬಿದ ಈ ವಿಶ್ವವನ್ನು ಸೃಷ್ಟಿಮಾಡಿದನು.

೨೮. ಇದರಲ್ಲಿ ತಿರ್ಯಗ್ಜಂತುಗಳೂ, ಪಶುಪಕ್ಷಿಗಳೂ ಮೊದಲಾಗಿ ಸ್ವೇದಜ, ಅಂಡಜ, ಜರಾಯುಜಾದಿಗಳಿರುವುವು. ಈ ಬ್ರಹ್ಮಾಂಡವನ್ನೇ ಪುರಾಣಗಳಲ್ಲಿ ಮೊದಲು ವರ್ಣಿಸಿರುವರು.

೨೯. ರಾಜೇಂದ್ರನೆ! ಹಿಂದಿನ ಕಲ್ಪದಲ್ಲಿ ವಿಹರಿಸುತ್ತಿದ್ದ ಪಾರ್ವತಿಯೊಡನೆ ರುದ್ರನೂ ಕ್ರೀಡಿಸುತ್ತಿರಲು ಆ ಪರಮೇಷ್ಠಿಯಿಂದ ಮಹಾ ಸಮುದ್ರವುಂಟಾಯಿತು.

೩೦. ಆನಂದತುಂದಿಲಳಾದ ಉಮೆಯ ಮೈಬೆವರಿನಿಂದ ಒಬ್ಬ ಸುಂದರ ಕನ್ಯೆಯುದ್ಭವಿಸಿದಳು. ಮಹೇಶ್ವರನನ್ನಾಲಿಂಗಿಸಲು ಆಕೆಯ ಸ್ತನಗಳ ಮರ್ದನದಿಂದ ಮಹಾದೇವನ ಹೃದಯ ಪ್ರದೇಶದಲ್ಲಿ ಬೆವರು ಸೇರಲು ಆ ಕನ್ಯೆಯು ಆತನ ಹೃದಯದಿಂದಲೂ ಹುಟ್ಟಿದವಳೆನಿಸಿದಳು.

೩೧. ಅಯ್ಯಾ ಯುಧಿಷ್ಠಿರನೆ! ಇಂತು ಪಾರ್ವತಿಯ ಸ್ವೇದದಿಂದ ಹುಟ್ಟಿದ ಕಮಲಲೋಚನೆಯಾದ ಕನ್ಯೆಯೇ ಎರಡನೆಯ ಜನ್ಮವನ್ನು ರುದ್ರದೇಹದಿಂದ ಪಡೆದಳು.

ಸಾ ಪರಿಭ್ರಮತೇ ಲೋಕಾನ್ ಸದೇವಾಽಸುರಮಾನವಾನ್ ।
ತ್ರೈಲೋಕ್ಯೇಽಸ್ಮಾದಜನನೀ ರೂಪೇಣಾಽಪ್ರತಿಮಾ ಮತಾ ॥ ೩೨ ॥
ತಾಂ ದೃಷ್ಟ್ವಾ ದೇವದೈತ್ಯೇಂದ್ರಾ ಮೋಹಿತಾ ಲಭತೇ ಕಥಂ ।
ಮೃಗಯಂತಿಸ್ಮ ತಾಂ ಕನ್ಯಾಮಿತಶ್ಚೇತಶ್ಚ ಭಾರತ ॥ ೩೩ ॥
ಹಾವಭಾವವಿಲಾಸೈಶ್ಚ ಮೋಹಯತ್ಯಖಿಲಂ ಜಗತ್ ।
ಭ್ರಮತೇ ದಿವ್ಯರೂಪಾ ಸಾ ವಿದ್ಯುತ್ಸೌದಾಮಿನೀ ಯಥಾ ॥ ೩೪ ॥
ಮೇಘಮಧ್ಯೇ ಸ್ಥಿತಾ ಭಾಭಿಃ ಸರ್ವಯೋಷಿದನುತ್ತಮಾ ।
ತತೋ ರುದ್ರಂ ಸುರಾಃ ಸರ್ವೇ ದೈತ್ಯಾಶ್ಚ ಸಹದಾನವೈಃ ॥ ೩೫ ॥
ವರಯಂತಿಸ್ಮ ತಾಂ ಕನ್ಯಾಂ ಕಾಮೇನಾಕುಲಿತಾ ಭೃಶಂ ।
ತತೋಽಬ್ರವೀನ್ಮಹಾದೇವೋ ದೇವದಾನವಯೋರ್ದ್ವಯೋಃ ॥ ೩೬ ॥
ಬಲೇನ ತೇಜಸಾ ಚೈವ ಹ್ಯಧಿಕೋ ಯೋ ಭವಿಷ್ಯತಿ ।
ಸ ಇಮಾಂ ಪ್ರಾಪ್ಸ್ಯತೇ ಕನ್ಯಾಂ ನಾಽನ್ಯಥಾ ವೈ ಸುರೋತ್ತಮಾಃ ॥ ೩೭ ॥
ತತೋ ದೇವಾಸುರಾಃ ಸರ್ವೇ ಕನ್ಯಾಂ ವೈ ಸಮುಪಾಗಮನ್ ।
ಅಹಮೇನಾಂ ಗ್ರಹೀಷ್ಯಾಮಿ ಅಹಮೇನಾಮಿತಿ ಬ್ರುವನ್ ॥ ೩೮ ॥

---

೩೨. ಆ ಕನ್ಯೆಯು ಅಸದೃಶಸೌಂದರ್ಯವತಿಯಾಗಿ ಮೂರುಲೋಕಗಳ ನಿವಾಸಿಗಳಾದ ದೇವತೆಗಳು, ಮನುಷ್ಯರು, ರಾಕ್ಷಸರೆಲ್ಲರಿಗೂ ಕಾಮವಿಕಾರವನ್ನುಂಟುಮಾಡುತ್ತ ತಿರುಗುತ್ತಿದ್ದಳು.

೩೩–೩೪. ದೇವದಾನವಾದಿಗಳಲ್ಲಿ ಶ್ರೇಷ್ಠರಾದವರೆಲ್ಲ ಆಕೆಯನ್ನು ಕಂಡು "ಈಕೆಯು ಹೇಗೆ ಲಭಿಸುವಳು ?" ಎಂದು ಚಿಂತಿಸುತ್ತ ಆಕೆಯನ್ನೇ ಅಲ್ಲಲ್ಲಿ ಅರಸುತ್ತಿದ್ದರು. ಹಾವ, ಭಾವ, ವಿಲಾಸಗಳಿಂದ ಬ್ರಹ್ಮಾಂಡವೆಲ್ಲವನ್ನೂ ಮೋಹಪರವಶವಾಗಿ ಮಾಡುವ ದಿವ್ಯರೂಪದಿಂದ ಆಕೆಯು ಮಿಂಚಿನ ಬಳ್ಳಿಯಂತೆ ಸುಳಿದಾಡುತ್ತಿದ್ದಳು.

೩೫–೩೬. ಮೇಘಮಧ್ಯದಲ್ಲಿ ನಿಂತು ಬೆಳಗುತ್ತಿರುವ ಆ ಉತ್ತಮ ಸ್ತ್ರೀಯನ್ನು ನೋಡಿ ಸಕಲ ದೇವತೆಗಳೂ, ದೈತ್ಯರೂ, ದಾನವರೂ ಆಕೆಗಾಗಿ ಮಹೇಶ್ವರನನ್ನು ಯಾಚಿಸಿದರು. ಆ ಕನ್ಯೆಯ ವಿಷಯದಲ್ಲಿ ಅತ್ಯಂತ ಕಾಮಾತುರರಾಗಿದ್ದ ದೇವದಾನವರಿಬ್ಬರನ್ನೂ ಕಂಡು ಮಹಾದೇವನು ಅವರಿಗಿಂತೆಂದನು.

೩೭. "ದೇವೋತ್ತಮರಿರಾ! ಬಲದಿಂದಲೂ ತೇಜಸ್ಸಿನಿಂದಲೂ ಯಾವನು ಸರ್ವೋತ್ತಮನೆನಿಸುವನೊ, ಅವನಿಗೆ ಮಾತ್ರ ಈ ಕನ್ಯೆಯು ಲಭಿಸುವಳಲ್ಲದೆ ಇತರರಿಗೆ ಸಿಕ್ಕಲಾರಳು.

೩೮. ಆಗ ದೇವದಾನವಾದಿಗಳಾದ ಸಕಲರೂ, "ನಾನು ಈಕೆಯನ್ನು ಗ್ರಹಿಸುತ್ತೇನೆ; ನಾನು ಮೊದಲು" ಎಂದು ಕೂಗುತ್ತ ಆಕೆಯ ಬಳಿಗೆ ಬಂದರು.

ಪಶ್ಯತಾಮೇವ ಸರ್ವೇಷಾಂ ಸಾ ಕನ್ಯಾಽಂತರಧೀಯತ ।
ಪುನಸ್ತಾಂ ದದೃಶುಃ ಸರ್ವೇ ಯೋಜನಾಂತರಧಿಷ್ಠಿತಾಂ ॥ ೩೯ ॥
ಜಗ್ಮುಸ್ತೇ ತ್ವರಿತಾಃ ಸರ್ವೇ ಯತ್ರ ಸಾ ಸಮದೃಶ್ಯತ ।
ತ್ರಿಭಿಶ್ಚತುರ್ಭಿಶ್ಚ ತಥಾ ಯೋಜನೈರ್ದಶಭಿಃ ಪುನಃ ॥ ೪೦ ॥
ಧಿಷ್ಠಿತಾಂ ಸಮಪಶ್ಯಂಸ್ತೇ ಸರ್ವೇ ಮಾತಂಗಗಾಮಿನೀಂ ।
ಯೋಜನಾನಾಂ ಶತೈರ್ಭೂಯಃ ಸಹಸ್ರೈಶ್ಚಾಽಪ್ಯಧಿಷ್ಠಿತಾಂ ॥ ೪೧ ॥
ತಥಾ ಶತಸಹಸ್ರೇಣ ಲಘುತ್ವಾತ್ಸಮದೃಶ್ಯತ ।
ಅಗ್ರತಃ ಪೃಷ್ಠತಶ್ಚೈವ ದಿಶಾಸು ವಿದಿಶಾಸು ಚ ॥ ೪೨ ॥
ತಾಂ ಪಶ್ಯಂತಿ ವರಾರೋಹಾಮೇಕಧಾ ಬಹುಧಾ ಪುನಃ ।
ದಿವ್ಯವರ್ಷಸಹಸ್ರಂ ತು ಭ್ರಾಮಿತಾಸ್ತೇ ತಯಾ ಪುರಾ ॥ ೪೩ ॥
ನ ಚಾಽವಾಪ್ತಾ ತು ಸಾ ಕನ್ಯಾ ಮಹಾದೇವಾಂಗಸಂಭವಾ ।
ಸಹೋಮಯಾ ತತೋ ದೇವೋ ಜಹಾಸೋಚ್ಚೈಃ ಪುನಃ ಪುನಃ ॥ ೪೪ ॥
ಗಣಾಸ್ತಾಲಕಸಂಪಾತೈರ್ನೃತ್ಯಂತಿ ಚ ಮುದಾನ್ವಿತಾಃ ।
ಅಕಸ್ಮಾದ್ದೃಶ್ಯತೇ ಕನ್ಯಾ ಶಂಕರಸ್ಯ ಸಮೀಪಗಾ ॥ ೪೫ ॥

---

೩೯. ಆದರೆ ಎಲ್ಲರೂ ನೋಡುತ್ತಿರುವಂತೆಯೇ ಆ ಕನ್ಯೆಯು ಅಂತರ್ಧಾನಳಾಗಿ ಉತ್ತರಕ್ಷಣದಲ್ಲಿಯೇ ಯೋಜನದ ದೂರದಲ್ಲಿ ಕಾಣಿಸುತ್ತಿದ್ದ ಆಕೆಯನ್ನು ಕಂಡರು.

೪೦. ಎಲ್ಲರೂ ಆಕೆಯಿದ್ದ ಕಡೆಗೆ ಓಡತೊಡಗಲು ಆಕೆಯು ಪುನಃ ಪುನಃ ಅದೃಶ್ಯಳಾಗುತ್ತ ಮೂರು, ನಾಲ್ಕು, ಹತ್ತುಗಾವುದಗಳ ದೂರದಲ್ಲಿ ಕಾಣುತ್ತಿದ್ದಳು.

೪೧–೪೨. ಬಳಿಕ ಮದಗಜಗಾಮಿನಿಯಾದ ಆಕೆಯು ನೂರು ಯೋಜನಗಳ ದೂರದಲ್ಲಿಯೂ, ಸಾವಿರ ಯೋಜನಗಳ ದೂರದಲ್ಲಿಯೂ ನಿಂತಿದ್ದುದನ್ನು ಕಾಣುತ್ತಿದ್ದರು. ಅವರೆಲ್ಲರೂ ನೆಟ್ಟನೆ ನೋಡುತ್ತಿರುವಂತೆಯೆ ಆ ಲಲನಾಮಣಿಯು ಲಕ್ಷಯೋಜನಗಳ ಅಂತರದಲ್ಲಿಯೂ, ಹಿಂದೆಯೂ, ಮುಂದೆಯೂ, ದಿಕ್ಕು ವಿದಿಕ್ಕುಗಳಲ್ಲಿಯೂ ಸೂಕ್ಷ್ಮರೂಪವುಳ್ಳವಳಾಗಿ ಕಾಣಿಸುತ್ತಿದ್ದಳು.

೪೩. ಆ ಸುಂದರಾಂಗಿಯು ಒಂದೇ ರೂಪದಿಂದಲೂ ಹಲವು ರೂಪಗಳಿಂದಲೂ ಕಾಣುತ್ತಿರಲು ಸಕಲರೂ ಒಂದು ಸಾವಿರ ದಿವ್ಯವರ್ಷಗಳವರೆಗೂ ಆಕೆಯ ಮೋಹಜಾಲದಲ್ಲಿ ಸಿಕ್ಕಿಬಿದ್ದು ಭ್ರಮಿಸುತ್ತಿದ್ದರು.

೪೪. ಮಹೇಶ್ವರದೇಹಸಮುದ್ಭವೆಯಾದ ಆಕೆಯು ಯಾರಿಗೂ ಸಿಕ್ಕದಿರಲು ಮಹಾದೇವನೂ, ಪಾರ್ವತಿಯೂ ಮತ್ತೆ ಮತ್ತೆ ಗಟ್ಟಿಯಾಗಿ ನಗುತ್ತಿದ್ದರು.

೪೫. ಗಣಗಳೆಲ್ಲರೂ ಸಂತೋಷದಿಂದ ಚಪ್ಪಾಳೆಗಳನ್ನು ಹೊಡೆಯುತ್ತ

ತಾಂ ದೃಷ್ಟ್ವಾ ವಿಸ್ಮಯಾಪನ್ನಾ ದೇವಾ ಯಾಂತಿ ಪರಾಙ್ಮುಖಾಃ ।
ತಸ್ಯಾಶ್ಚಕ್ರೇ ತತೋ ನಾಮ ಸ್ವಯಮೇವ ಪಿನಾಕಧೃಕ್ ॥ ೪೬ ॥
ನರ್ಮ ಚೈಭ್ಯೋ ದದೇ ಯಸ್ಮಾತ್ತತ್ತೈಶ್ಚೇಷ್ಟಿತೈಃ ಪೃಥಕ್ ।
ಭವಿಷ್ಯಸಿ ವರಾರೋಹೇ ಸರಿಚ್ಛ್ರೇಷ್ಠಾ ತು ನರ್ಮದಾ ॥ ೪೭ ॥
ಸ್ವರೂಪಮಾಸ್ಥಿತೋ ದೇವಃ ಪ್ರಾಪ ಹಾಸ್ಯಂ ಯತೋ ಭುವಿ ।
ನರ್ಮದಾ ತೇನ ಚೋಕ್ತೇಯಂ ಸುಶೀತಲಜಲಾ ಶಿವಾ ॥ ೪೮ ॥
ಸಪ್ತಕಲ್ಪಕ್ಷಯೇ ಜಾತೇ ಯದುಕ್ತಂ ಶಂಭುನಾ ಪುರಾ ।
ನ ಮೃತಾ ತೇನ ರಾಜೇಂದ್ರ ನರ್ಮದಾ ಖ್ಯಾತಿಮಾಗತಾ ॥ ೪೯ ॥
ತತಸ್ತಾಮದದಾತ್ಕನ್ಯಾಂ ಶೀಲವತೀಂ ಸುಶೋಭನಾಂ ।
ಮಹಾರ್ಣವಾಯ ದೇವೇಶಃ ಸರ್ವಭೂತಪತಿಃ ಪ್ರಭುಃ ॥ ೫೦ ॥
ತತಃ ಸಾ ಋಕ್ಷಶೈಲೇಂದ್ರಾತ್ಫೇನಪುಂಜಾಟ್ಟಹಾಸಿನೀ ।
ವಿವೇಶ ನರ್ಮದಾ ದೇವೀ ಸಮುದ್ರಂ ಸರಿತಾಂ ಪತಿಂ ॥ ೫೧ ॥

---

ಕುಣಿಯುತ್ತಿರಲು ಅಕಸ್ಮಾತ್ತಾಗಿ ಆಕೆಯು ಮಹೇಶ್ವರನ ಬಳಿಯಲ್ಲಿ ಸುಳಿದಾಡುತ್ತಿದ್ದಳು.

೪೬. ಆಕೆಯನ್ನು ಕಂಡು ಆಶ್ಚರ್ಯಚಕಿತರಾದ ದೇವತೆಗಳೆಲ್ಲರೂ ಹಿಂದಿರುಗಿದರು. ಆಗ ಪಿನಾಕಪಾಣಿಯು ತಾನೇ ಆಕೆಗೆ ಹೆಸರನ್ನು ಕೊಟ್ಟನು.

೪೭. "ಎಲೌಸುಂದರಿಯೆ! ನೀನು ಅನೇಕ ಚೇಷ್ಟೆಗಳಿಂದ ಈ ದೇವ ದಾನವಾದಿಗಳೆಲ್ಲರಿಗೂ ವಿನೋದವನ್ನುಂಟುಮಾಡಿದೆಯಾದುದರಿಂದ ನರ್ಮದೆಯೆಂಬ ಹೆಸರಿನಿಂದ ಉತ್ತಮನದಿಯಾಗಿರುವೆ.

೪೮. ಸ್ವರೂಪನಿಷ್ಠನಾದ ನಾನು ನಿನ್ನ ಕಾರಣದಿಂದ ಹಾಸ್ಯಭರಿತನಾದ ಕಾರಣ ನೀನು ನರ್ಮದೆಯೆಂದು ಕರೆಯಲ್ಪಟ್ಟು ಶೀತಲ ಜಲದಿಂದ ಮಂಗಳಪ್ರದೆಯೆನಿಸುವೆ."

೪೯. ಯುಧಿಷ್ಠಿರಮಹಾರಾಜ! ಇಂತು ಮಹಾದೇವನು ಹೇಳಿದ ಕಾರಣದಿಂದ ನರ್ಮದೆಯೆಂದು ಪ್ರಖ್ಯಾತಿಯನ್ನು ಪಡೆದಿರುವ ಈ ನದಿಯು ಏಳುಕಲ್ಪಗಳು ಕಳೆದುಹೋದರೂ ನಾಶವನ್ನು ಹೊಂದದಿರುವುದು.

೫೦. ಬಳಿಕ ದೇವದೇವನೂ, ಸರ್ವಜೀವಪತಿಯೂ, ಲೋಕೇಶ್ವರನೂ ಆದ ಪರಮೇಶ್ವರನು ಸದ್ಗುಣವತಿಯೂ, ಮಂಗಳಪ್ರದೆಯೂ ಆದ ಆ ನರ್ಮದೆಯನ್ನು ಸಮುದ್ರರಾಜನಿಗೆ ಮದುವೆಮಾಡಿಕೊಟ್ಟನು.

೫೧. ಆಗ ಋಕ್ಷಪರ್ವತಶಿಖರದಿಂದ ನರ್ಮದೆಯು ನೊರೆಗಳ ಸಾಲುಗಳಿಂದ ನಗುತ್ತಿರುವಂತೆ ತೋರುತ್ತ ಸಕಲನದಿಗಳಿಗೂ ಒಡೆಯನಾದ ಸಮುದ್ರರಾಜನನ್ನು ಸೇರಿತು.

**ಏವಂ ಬ್ರಾಹ್ಮೇ ಪುರಾ ಕಲ್ಪೇ ಸಮುದ್ಭೂತೇಯಮೀಶ್ವರಾತ್ ।**
**ಮಾತ್ಸ್ಯೇ ಕಲ್ಪೇ ಮಯಾ ದೃಷ್ಟಾ ಸಮಾಖ್ಯಾತಾ ಮಯಾ ಶೃಣು ॥ ೫೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ನರ್ಮದಾನಾಮನಿರುಕ್ತಿವರ್ಣನಂ"**
**ನಾಮ ಪಂಚಮೋಽಧ್ಯಾಯಃ**

---

೫೨. ಇಂತು ಈ ನರ್ಮದೆಯು ಬ್ರಹ್ಮಕಲ್ಪದಲ್ಲಿ ಮಹೇಶ್ವರನ ದೇಹದಿಂದ ಹುಟ್ಟಿದಳು. ಇನ್ನು ಮಾತ್ಸ್ಯಕಲ್ಪದಲ್ಲಿ ನಾನು ಆಕೆಯನ್ನು ನೋಡಿದ ಕಥೆಯನ್ನು ಹೇಳುವೆನು, ಕೇಳು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ**
**ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ**
**"ನರ್ಮದಾನಾಮನಿರುಕ್ತಿವರ್ಣನ"ವೆಂಬ**
**ಐದನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಮಯೂರಕಲ್ಪಸಮುದ್ಭವವರ್ಣನಂ

**ಮಾರ್ಕಂಡೇಯ ಉವಾಚ :—**

**ಪುನರ್ಯುಗಾಂತೇ ಸಂಪ್ರಾಪ್ತೇ ತೃತೀಯೇ ನೃಪಸತ್ತಮ ।**
**ದ್ವಾದಶಾರ್ಕವಪುರ್ಭೂತ್ವಾ ಭಗವಾನ್ನೀಲಲೋಹಿತಃ ॥ ೧ ॥**
**ಸಪ್ತದ್ವೀಪಸಮುದ್ರಾಂತಾಂ ಸಶೈಲವನಕಾನನಾಂ ।**
**ನಿರ್ದಗ್ಧಾಂ ತು ಮಹೀಂ ಕೃತ್ಸ್ನಾಂ ಕಾಲೋ ಭೂತ್ವಾ ಮಹೇಶ್ವರಃ ॥ ೨ ॥**
**ತತೋ ಮಹಾಘನೋ ಭೂತ್ವಾ ಪ್ಲಾವಯಾಮಾಸ ವಾರಿಣಾ ।**
**ಕೃಷ್ಣಂ ಕೃಷ್ಣವಪುಸ್ತ್ವೇನಾಂ ವಿದ್ಯುಚ್ಚಂದ್ರಾಯುಧಾಂಕಿತಾಂ ॥ ೩ ॥**
**ಪ್ಲಾವಯಿತ್ವಾ ಜಗತ್ಸರ್ವಂ ತಸ್ಮಿನ್ನೇಕಾರ್ಣವೀಕೃತೇ ।**
**ಸುಷ್ವಾಪ ವಿಮಲೇ ತೋಯೇ ಜಗತ್ಸಂಕ್ಷಿಪ್ಯ ಮಾಯಯಾ ॥ ೪ ॥**
**ತತೋಽಹಂ ಭ್ರಮಮಾಣಸ್ತು ತಮೋಭೂತೇ ಮಹಾರ್ಣವೇ ।**
**ದಿವ್ಯಂ ವರ್ಷಸಹಸ್ರಂ ತು ವಾಯುಭೂತೇ ಮಹೇಶ್ವರೇ ॥ ೫ ॥**

---

### ಕನ್ನಡದ ಅನುವಾದ

#### ಮಯೂರಕಲ್ಪಸಮುದ್ಭವವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಚಕ್ರವರ್ತಿಯೆ! ಮೂರನೆಯ ಯುಗದ ಅಂತ್ಯವು ಪ್ರಾಪ್ತವಾಗಲು ಲೋಕೇಶ್ವರನಾದ ಮಹಾದೇವನು ದ್ವಾದಶಾದಿತ್ಯರ ರೂಪಗಳನ್ನು ತಾಳಿದನು.

೨. ಸಪ್ತದ್ವೀಪಗಳಿಂದಲೂ ಪರ್ವತಾರಣ್ಯಗಳಿಂದಲೂ, ಕೂಡಿದ ಸಮುದ್ರ ಪರ್ಯಂತವಾದ ಭೂಮಿಯೆಲ್ಲವನ್ನೂ ಕಾಲರೂಪವನ್ನು ತಳೆದು ಆ ದೇವನು ಸುಟ್ಟುಹಾಕಿದನು.

೩. ಬಳಿಕ ಮಹತ್ತರವಾದ ಮೇಘರಾಶಿಯಾಗಿ ನೀರಿನಲ್ಲಿ ಮುಳುಗಿಸಿದನು. ಆ ಕಾರ್ಮುಗಿಲು ಎಲ್ಲೆಡೆಗಳಲ್ಲೂ ಮಿಂಚು, ಸಿಡಿಲುಗಳನ್ನು ಚೆಲ್ಲುತ್ತಿದ್ದಿತು.

೪. ಇಂತು ಪ್ರಪಂಚವೆಲ್ಲವನ್ನೂ ಜಲದಲ್ಲಿ ಮುಳುಗಿಸಿ ಸಮುದ್ರವೊಂದೇ ಕಾಣಬರುತ್ತಿರಲು ಪರಮೇಶ್ವರನು ತನ್ನ ಮಾಯೆಯಿಂದ ಜಗತ್ತನ್ನು ತನ್ನೊಳಗಿಟ್ಟುಕೊಂಡು ಆ ಸಮುದ್ರದ ನಿರ್ಮಲ ಜಲದ ಮಧ್ಯದಲ್ಲಿ ಪವಳಿಸಿದ್ದನು.

೫. ಆಗ ಸಮುದ್ರವು ಅಂಧಕಾರಾವೃತವಾಗಿರಲು ನಾನು ಒಂದು ಸಾವಿರ ದಿವ್ಯವರ್ಷಗಳು ಕಳೆಯುವವರೆಗೂ ದಿಗ್ಭ್ರಾಂತನಾಗಿ ತಿರುಗುತ್ತಿದ್ದೆನು. ಆಗ ಮಹೇಶ್ವರನು ವಾಯುವಿನ ರೂಪವನ್ನು ತಾಳಿದನು.

ಓಂ ಕೃತ್ವಾ ದೇವದೇವೇಶಂ ಯೇನೇದಂ ಗಹನೀಕೃತಂ ।
ಧ್ಯಾಯಮಾನಸ್ತತೋ ದೇವಂ ರಾಜೇಂದ್ರ ವಿಮಲೇ ಜಲೇ ॥ ೬ ॥
ತಸ್ಮಿನ್ಮಹಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।
ಮಯೂರಂ ಸ್ವರ್ಣಪತ್ರಾಢ್ಯಮಪಶ್ಯಂ ಸಹಸಾ ಜಲೇ ।
ವಿಚಿತ್ರಚಂದ್ರಕೋಪೇತಂ ನೀಲಕಂಠಂ ಸುಲೋಚನಂ ॥ ೭ ॥

ತತೋ ಮಯೂರಃ ಸ ಮಹಾರ್ಣವಾಂತೇ
ವಿಕ್ಷೋಭಯಿತ್ವಾಹಿ ಮಹಾರವೇಣ ।
ಚಚಾರ ದೇವಸ್ತ್ರಿಶಿಖೀ ಶಿಖಂಡೀ
ತ್ರೈಲೋಕ್ಯಗೋಪ್ತಾ ಸ ಮಹಾನುಭಾವಃ ॥ ೮ ॥
ಶಿವಶ್ಚ ರೌದ್ರೇಣ ಮಯೂರರೂಪಿಣಾ
ವಿಕ್ಷೋಭ್ಯಮಾಣೇ ಸಲಿಲೇಽಪಿ ತಸ್ಮಿನ್ ।
ಸಹ ಭ್ರಮಂತೀಂ ಚ ಮಹಾರ್ಣವಾಂತೇ
ಸರಿನ್ಮಹೌಘಾಂ ಸುಮಹಾನ್ ದದರ್ಶ ॥ ೯ ॥
ಸ ತಾಂ ಮಹಾದೇವ ಮಯೂರರೂಪೋ
ದೃಷ್ಟ್ವಾ ಭ್ರಮಂತೀಂ ಸಹಸೋರ್ಮಿಜಾಲೈಃ ।
ಕಾ ತ್ವಂ ಶುಭೇ ಶಾಶ್ವತದೇಹಭೂತಾ
ಕ್ಷಯಂ ನ ಯಾತಾಽಸಿ ಮಹಾಕ್ಷಯಾಂತೇ ॥ ೧೦ ॥

---

೬. ರಾಜೇಂದ್ರನೆ! ಈ ಬ್ರಹ್ಮಾಂಡವೆಲ್ಲವೂ ಯಾರಿಂದ ನಿಗೂಢವಾಯಿತೊ, ಆ ದೇವದೇವೇಶ್ವರನನ್ನು ನಮಸ್ಕರಿಸಿ, ಜಲಮಧ್ಯದಲ್ಲಿ ಮಲಗಿದ್ದ ಆತನನ್ನು ನಾನು ಈರೀತಿ ಧ್ಯಾನಿಸಿದೆನು.

೭. ಆಗ ನಾನು ಸಮಸ್ತ ಸ್ಥಾವರಜಂಗಮಗಳನ್ನುನಾಶಗೊಳಿಸಿದ ಘೋರವಾದ ಆ ಪ್ರಳಯಾರ್ಣವದಲ್ಲಿ ಚಿನ್ನದ ಗರಿಗಳಿಂದಲೂ, ವಿಚಿತ್ರಗಳಾದ ಪುಕ್ಕದ ಕಣ್ಣುಗಳಿಂದಲೂ, ನೀಲವಾದ ಕೊರಳಿನಿಂದಲೂ, ಸುಂದರಲೋಚನಗಳಿಂದಲೂ ಒಪ್ಪುತ್ತಿದ್ದ ಒಂದು ಮಯೂರವನ್ನು ಕಂಡೆನು.

೮–೯. ಮೂರು ಶಿಖೆಗಳಿಂದೊಪ್ಪುತ್ತ ಮೂರುಲೋಕಗಳನ್ನೂ ತನ್ನಲ್ಲಿ ಅಡಗಿಸಿಕೊಂಡ ಮಹಾನುಭಾವನಾದ ಆ ಪರಮೇಶ್ವರನು ಮಯೂರ ರೂಪದಿಂದ ಮಹಾ ಧ್ವನಿಯನ್ನು ಮಾಡುತ್ತ, ಸಮುದ್ರವನ್ನೆಲ್ಲ ಕ್ಷೋಭಗೊಳಿಸುತ್ತ, ಸಂಚರಿಸುತ್ತಿದ್ದನು. ಇಂತು ಜಲವೆಲ್ಲವೂ ಅಲ್ಲಕಲ್ಲೋಲವಾಗಿರಲು ಮಹಾ ಸಮುದ್ರದಲ್ಲಿ ತನ್ನೊಡನೆಯೇ ಸಂಚರಿಸುತ್ತಿದ್ದ ಮಹಾಪ್ರವಾಹದಿಂದೊಡಗೂಡಿದ ನದಿಯನ್ನೂ ಮಯೂರರೂಪಿಯಾದ ಮಹಾದೇವನು ಕಂಡನು.

೧೦. ಆ ಮಹಾದೇವನು ಆ ಸ್ತ್ರೀಯನ್ನು ಕಂಡು ಮಹಾ ಸಮುದ್ರದಲ್ಲಿ ಲೀಲೆಯಿಂದ ತಿರುಗುತ್ತಿರುವ ಆಕೆಯನ್ನು ಕುರಿತು ಇಂತೆಂದನು. "ಮಂಗ

ದೇವಾಽಸುರಗಣೇ ನಷ್ಟೇ ಸರಿತ್ಸರವಮಹಾರ್ಣವೇ ।
ಕಾ ತ್ವಂ ಭ್ರಮಸಿ ಪದ್ಮಾಕ್ಷಿ ಕ್ವ ಗತಾಽಸಿ ಚ ನ ಕ್ಷಯಂ ॥ ೧೧ ॥
ನರ್ಮದೋವಾಚ :—
ತವ ಪ್ರಸಾದಾದ್ದೇವೇಶ ಮೃತ್ಯುರ್ಮಮ ನ ವಿದ್ಯತೇ ।
ಸೃಜ ದೇವ ಪುನರ್ವಿಶ್ವಂ ಶರ್ವರೀ ಕ್ಷಯಮಾಗತಾ ॥ ೧೨ ॥
ಏವಮುಕ್ತೋ ಮಹಾದೇವೋ ವ್ಯಧುನೋತ್ಪಕ್ಷಪಂಜರಂ ।
ತಾವತ್ಪಂಜರಮಧ್ಯಾಂತೇ ತಸ್ಯ ಪಕ್ಷಾದ್ವಿನಿಃಸೃತಾಃ ॥ ೧೩ ॥
ತಾವಂತೋ ದೇವದೈತ್ಯೇಂದ್ರಾಃ ಪಕ್ಷಾಭ್ಯಾಂ ತಸ್ಯ ಜಜ್ಞಿರೇ ।
ತೇಷಾಂ ಮಧ್ಯೇ ಪುನಃ ಸಾ ತು ನರ್ಮದಾ ಭ್ರಮತೇ ಸರಿತ್ ॥ ೧೪ ॥
ತತಶ್ಚಾಽನ್ಯೋ ಮಹಾಶೈಲೋ ದೃಶ್ಯತೇ ಭರತರ್ಷಭ ।
ತ್ರಿಭಿಃಕೂಟೈಃ ಸುವಿಸ್ತೀರ್ಣೈಃ ಶೃಂಗವಾನಿವ ಗೋವೃಷಃ ॥ ೧೫ ॥
ತ್ರಿಕೂಟ ಇತಿ ವಿಖ್ಯಾತಃ ಸರ್ವರತ್ನೈರ್ವಿಭೂಷಿತಃ ।
ತತಸ್ತಸ್ಮಾತ್ತ್ರಿಕೂಟಾಚ್ಚ ಪ್ಲಾವಯಂತೀಂ ಮಹೀಂ ಯಯೌ ॥ ೧೬ ॥

---

ಳಾಂಗಿಯೆ! ಶಾಶ್ವತದೇಹವನ್ನು ತಾಳಿರುವ ನೀನು ಯಾರು? ಮಹಾ ಪ್ರಳಯ ದಲ್ಲಿಯೂ ನೀನು ನಾಶವನ್ನು ಹೊಂದದಿರುವೆಯಲ್ಲವೆ?

೧೧. ಓ ಕಮಲನೇತ್ರೆಯೆ! ಸಮಸ್ತ ದೇವರಾಕ್ಷಸಗಣಗಳೂ, ನದಿಗಳೂ, ಸರೋವರಗಳೂ ಈ ಮಹಾ ಸಮುದ್ರದಲ್ಲಿ ಲಯವನ್ನು ಹೊಂದಿರಲು ಕ್ಷಯ ವನ್ನು ಕಾಣದೆ ಸಂಚರಿಸುತ್ತಿರುವ ನೀನು ಯಾರು? ಎಲ್ಲಿಗೆ ಹೊರಟಿರುವೆ?''

೧೨. ನರ್ಮದೆಯು ಹೇಳುತ್ತಾಳೆ:—''ಮಹಾದೇವನೆ! ನಿನ್ನ ಪ್ರಸಾದ ದಿಂದ ನನಗೆ ಮೃತ್ಯುವೆಂಬುದಿಲ್ಲ. ರಾತ್ರಿಯು ಕೊನೆಗಾಣುತ್ತಿರುವುದರಿಂದ ನೀನಿನ್ನು ಪುನಃ ವಿಶ್ವವನ್ನು ಸೃಜಿಸು.''

೧೩. ಇಂತೆಂದು ಹೇಳಲು ಮಹೇಶ್ವರನು ತನ್ನ ರೆಕ್ಕೆಗಳನ್ನು ಕೊಡಹಿದನು. ಆ ಪಕ್ಷಪಂಜರದ ಮಧ್ಯದಿಂದ ಸಕಲ ಪ್ರಾಣಿಗಳೂ ಹುಟ್ಟಿದರು.

೧೪. ಆ ಮಯೂರದ ರೆಕ್ಕೆಗಳಿಂದ ದೇವತೆಗಳೂ ರಾಕ್ಷಸರೂ ಹುಟ್ಟಲು ಪುನಃ ಅವರ ಮಧ್ಯದಲ್ಲಿ ನರ್ಮದೆಯು ಹರಿದಾಡುತ್ತಿದ್ದಳು.

೧೫. ಭರತಶ್ರೇಷ್ಠನೆ! ಬಳಿಕ ಸಮುದ್ರಮಧ್ಯದಲ್ಲಿ ಮೂರು ಶೃಂಗ ಗಳಿಂದ ರಂಜಿಸುತ್ತ, ಕೋಡುಗಳಿಂದ ಮೆರೆಯುತ್ತಿರುವ ಮಹಾವೃಷಭವನ್ನು ಹೋಲುವ ವಿಶಾಲವಾದ ಪರ್ವತವೊಂದು ಕಾಣಿಸಿಕೊಂಡಿತು.

೧೬. ತ್ರಿಕೂಟವೆಂದು ಪ್ರಖ್ಯಾತವಾದ ಆ ಪರ್ವತವು ಸಕಲ ರತ್ನಮಯ ವಾಗಿದ್ದಿತು. ಆ ತ್ರಿಕೂಟಶಿಖರದಿಂದ ನರ್ಮದೆಯು ಹರಿದು ಭೂಮಿಯನ್ನು ತೋಯಿಸಿದಳು.

ತ್ರಿಕೂಟೇ ತೇನ ವಿಖ್ಯಾತಾ ಪಿತೄಣಾಂ ತ್ರಾಯಣೀ ಪರಾ ।
ದ್ವಿತೀಯಾಚ್ಚ ತತೋ ಗಂಗಾ ವಿಸ್ತೀರ್ಣಾ ಧರಣೀತಲೇ ॥ ೧೭ ॥
ತೃತೀಯಂ ಚ ತತಃ ಶೃಂಗಂ ಸಪ್ತಧಾ ಖಂಡಶೋ ಗತಂ ।
ಜಂಬೂದ್ವೀಪೇ ತು ಸಂಜಾತಾಃ ಸಪ್ತ ತೇ ಕುಲಪರ್ವತಾಃ ॥ ೧೮ ॥
ಚಂದ್ರನಕ್ಷತ್ರಸಹಿತಾ ಗ್ರಹಗ್ರಾಮನದೀನದಾಃ ।
ಅಂಡಜಂ ಸ್ವೇದಜಂ ಜಾತಮುದ್ಭಿಜ್ಜಂ ಚ ಜರಾಯುಜಂ ॥ ೧೯ ॥
ಏವಂ ಜಗದಿದಂ ಸರ್ವಂ ಮಯೂರಾದಭವತ್ಪುರಾ ।
ಸಮಸ್ತಂ ನರಶಾರ್ದೂಲ ಮಹಾದೇವಸಮುದ್ಭವಂ ॥ ೨೦ ॥
ತತೋ ನದೀಃ ಸಮುದ್ರಾಂಶ್ಚ ಸಂವಿಭಜ್ಯ ಪೃಥಕ್ ಪೃಥಕ್ ।
ನರ್ಮದಾಮಾಹ ದೇವೇಶೋ ಗಚ್ಛ ತ್ವಂ ದಕ್ಷಿಣಾಂ ದಿಶಂ ॥ ೨೧ ॥
ಏವಂ ಸಾ ದಕ್ಷಿಣಾ ಗಂಗಾ ಮಹಾಪಾತಕನಾಶಿನೀ ।
ಉತ್ತರೇ ಜಾಹ್ನವೀ ದೇಶೇ ಪುಣ್ಯಾ ತ್ವಂ ದಕ್ಷಿಣೇ ಶುಭಾ ॥ ೨೨ ॥
ಯಥಾ ಗಂಗಾ ಮಹಾಪುಣ್ಯಾ ಮಮ ಮಸ್ತಕಸಂಭವಾ ।
ತದ್ವಿಶಿಷ್ಟಾ ಮಹಾಭಾಗೇ ತ್ವಂ ಚೈವೇತಿ ನ ಸಂಶಯಃ ॥ ೨೩ ॥

---

೧೭. ಆದುದರಿಂದಲೇ ಆಕೆಯು ತ್ರಿಕೂಟಿಯಿಂದ ಕರೆಯಲ್ಪಟ್ಟು ಪಿತೃಗಳಿಗೆ ಅತ್ಯಂತ ಸುಖಪ್ರದೆಯಾಗಿರುವಳು. ಎರಡನೆಯ ಶಿಖರದಿಂದ ಗಂಗೆಯು ಪ್ರವಹಿಸಿ ಭೂಮಿಗೆ ಬಂದಳು.

೧೮. ಮೂರನೆಯ ಶೃಂಗವು ಏಳು ಭಾಗವಾಗಿ ಸಿಡಿದುಹೋಯಿತು. ಆ ಏಳು ಖಂಡಗಳೇ ಜಂಬೂದ್ವೀಪದಲ್ಲಿ ಏಳು ಕುಲ ಪರ್ವತಗಳಾಗಿರುವುವು.

೧೯. ಬಳಿಕ ಕ್ರಮವಾಗಿ ಚಂದ್ರ, ನಕ್ಷತ್ರಗಳು, ಗ್ರಹಮಂಡಲ, ನದಿಗಳು, ನದಗಳು, ಅಂಡಜ ಸ್ವೇದಜ, ಉದ್ಭಿಜ್ಜ, ಜರಾಯುಜಗಳೆಂಬ ನಾಲ್ಕು ವಿಧದ ಜೀವರಾಶಿಗಳೂ ಹುಟ್ಟಿದುವು.

೨೦. ಇಂತು ಈ ಜಗತ್ತೆಲ್ಲವೂ ಮೊದಲು ಮಯೂರದಿಂದ ಉಂಟಾಯಿತು. ಮನುಜೇಂದ್ರನೆ! ಸಮಸ್ತ ಬ್ರಹ್ಮಾಂಡವೂ ಮಹಾದೇವನಿಂದಲೇ ಹುಟ್ಟಿರುವುದು.

೨೧. ಆಗ ದೇವದೇವನು ನದಿಗಳನ್ನೂ ನದಗಳನ್ನೂ ಬೇರೆಬೇರೆಯಾಗಿ ವಿಂಗಡಿಸಿದ ಮೇಲೆ ನರ್ಮದೆಯನ್ನು ಕುರಿತು "ನೀನು ದಕ್ಷಿಣದಿಕ್ಕಿಗೆ ಹೋಗು" ಎಂದು ಅಪ್ಪಣೆಮಾಡಿದನು.

೨೨. "ಇಂತು ನೀನು ದಕ್ಷಿಣಗಂಗೆಯೆನಿಸಿ ಮಹಾಪಾತಕಗಳನ್ನೂ ಕಳೆಯುವ ಉತ್ತರದೇಶದಲ್ಲಿ ಗಂಗೆಯು ಪವಿತ್ರಳಾದಂತೆ ದಕ್ಷಿಣದಲ್ಲಿ ನೀನು ಶುಭಪ್ರದೆಯಾಗುವೆ.

೨೩. ಭಾಗ್ಯವತಿಯೆ! ಗಂಗೆಯು ನನ್ನ ತಲೆಯಿಂದ ಹೊರಬಿದ್ದುದರಿಂದ

ತ್ವಯಾ ಸಹ ಭವಿಷ್ಯಾಮಿ ಏಕೇನಾಂಶೇನ ಸುವ್ರತೇ ।
ಮಹಾಪಾತಕಯುಕ್ತಾನಾಮೌಷಧಂ ತ್ವಂ ಭವಿಷ್ಯಸಿ ॥ ೨೪ ॥
ಏವಮುಕ್ತಾ ತು ದೇವೇನ ಮಹಾಪಾತಕನಾಶಿನೀ ।
ದಕ್ಷಿಣಂ ದಿಗ್ವಿಭಾಗಂ ತು ಸಾ ಜಗಾಮಾಶುವಿಕ್ರಮಾ ॥ ೨೫ ॥
ಋಕ್ಷಶೈಲೇಂದ್ರಮಾಸಾದ್ಯ ಚಂದ್ರಮೌಲೇರನುಗ್ರಹಾತ್ ।
ವಾರ್ಯೌಘೈಃ ಪ್ರಸ್ಥಿತಾ ಯಸ್ಮಾನ್ಮಹಾದೇವಪ್ರಚೋದಿತಾ ॥ ೨೬ ॥
ಮಹತಾ ಚಾಽಪಿ ವೇಗೇನ ಯಸ್ಮಾದೇಷಾ ಸಮುಚ್ಛ್ರಿತಾ ।
ಮಹತೀ ತೇನ ಸಾ ಪ್ರೋಕ್ತಾ ಮಹಾದೇವಾನ್ಮಹೀಪತೇ ॥ ೨೭ ॥
ತಪತಸ್ತಸ್ಯ ದೇವಸ್ಯ ಶೂಲಾಗ್ರಾದ್ಬಿಂದವೋಽಪತನ್ ।
ತೇನೈಷಾ ಶೋಣಸಂಜ್ಞಾ ತು ದಶಸಪ್ತ ಚ ತಾಃ ಸ್ಮೃತಾಃ ॥ ೨೮ ॥
ಸರ್ವೇಷಾಂ ನರ್ಮದಾ ಪುಣ್ಯಾ ರುದ್ರದೇಹಾದ್ವಿನಿಃಸೃತಾ ।
ಸರ್ವಾಭ್ಯಶ್ಚ ಸರಿದ್ಭ್ಯಶ್ಚ ವರದಾನಾನ್ಮಹಾತ್ಮನಃ ॥ ೨೯ ॥

---

ಮಹಾಪುಣ್ಯಪ್ರದೆಯೆನಿಸಿದಳು. ನೀನು ಅವಳಿಗೂ ಮಿಗಿಲೆನಿಸುವುದರಲ್ಲಿ ಸಂದೇಹವಿಲ್ಲ.

೨೪. ಎಲೌ ಉತ್ತಮಳೆ! ನಾನು ಸಹ ಒಂದಂಶದಿಂದ ನಿನ್ನಲ್ಲಿ ಸೇರಿರುವೆನು. ಮಹಾಪಾತಕಗಳನ್ನು ಮಾಡಿರುವವರಿಗೂ ನೀನು ಔಷಧಪ್ರಾಯಳಾಗುವೆ.''

೨೫. ಇಂತು ನುಡಿದ ಮಹಾದೇವನ ಮಾತನ್ನು ಕೇಳಿ ಜಯಶಾಲಿನಿಯಾದ ನರ್ಮದೆಯು ಮಹಾಪಾತಕನಾಶಿನಿಯೆಂದು ಪ್ರಖ್ಯಾತಳಾಗಿ ದಕ್ಷಿಣದಿಕ್ಕಿಗೆ ಹೊರಟುಹೋದಳು.

೨೬. ಚಂದ್ರಶೇಖರನ ಅನುಗ್ರಹದಿಂದ ಋಕ್ಷಮಹಾಪರ್ವತವನ್ನೇರಿ ಮಹಾದೇವನಿಂದಲೇ ಪ್ರಚೋದಿತಳಾಗಿ ನರ್ಮದೆಯು ಜಲರಾಶಿಗಳನ್ನು ಚೆಲ್ಲುತ್ತ ಹೊರಟು ಬಂದಳು.

೨೭. ಮಹಾರಾಜ! ಈಕೆಯು ಮಹತ್ತರವಾದ ವೇಗದಿಂದ ಹೊರಟ ಕಾರಣದಿಂದ ಮಹೇಶ್ವರನೇ ಈಕೆಗೆ ಮಹತೀ ಎಂಬ ಹೆಸರನ್ನು ಕೊಟ್ಟನು.

೨೮. ಆತನು ತಪಸ್ಸನ್ನು ಮಾಡುತ್ತಿರಲು ತ್ರಿಶೂಲದ ಕೊನೆಯಿಂದ ಜಲ ಬಿಂದುಗಳುದುರಿದುವು. ಅವುಗಳಲ್ಲಿ ಇದೂ ಒಂದಾದುದರಿಂದ ಈ ನದಿಗೆ ಶೋಣೆ ಯೆಂದೂ ಹೆಸರು. ಇಂತಹ ಹದಿನೇಳು ನದಿಗಳಿರುವುವೆಂದು ಹೇಳುವರು.

೨೯. ಇವುಗಳೆಲ್ಲವುಗಳಲ್ಲಿಯೂ ಪರಮೇಶ್ವರನ ದೇಹದಿಂದ ಹುಟ್ಟಿದ ನರ್ಮದೆಯೇ ಆತನ ವರದಾನದ ಫಲವಾಗಿ ಸಕಲ ಸರಿಚ್ಛ್ರೇಷ್ಠೆಯೆನಿಸಿ ಪುಣ್ಯ ಪ್ರದೆಯಾಗಿರುವಳು.

ಶಂಕರಾಽನುಗ್ರಹಾದ್ದೇವೀ ಮಹಾಪಾತಕನಾಶಿನೀ ।
ಯಸ್ಮಾನ್ಮಹಾರ್ಣವೇ ಘೋರೇ ದೃಶ್ಯತೇ ಮಹತೀ ಚ ಸಾ ॥ ೩೦ ॥
ಸುವ್ಯಕ್ತಾಂಗೀ ಮಹಾಕಾಯಾ ಮಹತೀ ತೇನ ಸಾ ಸ್ಮೃತಾ ।
ತಸ್ಮಾದ್ವಿಕ್ಷೋಭ್ಯಮಾಣಾ ಹಿ ದಿಗ್ಗಜೈರಂಬುದೋಪಮೈಃ ॥ ೩೧ ॥
ಕಲುಷತ್ವಂ ನಯತ್ಯೇವ ರಸೇನ ಸುರಸಾ ತಥಾ ।
ಕೃಪಾಂ ಕರೋತಿ ಸಾ ಯಸ್ಮಾಲ್ಲೋಕಾನಾಮಭಯಪ್ರದಾ ॥ ೩೨ ॥
ಸಂಸಾರಾರ್ಣವಮಗ್ನಾನಾಂ ತೇನ ಚೈಷಾ ಕೃಪಾ ಸ್ಮೃತಾ ।
ಪುರಾ ಕೃತಯುಗೇ ಪುಣ್ಯೇ ದಿವ್ಯಮಂದಾರಭೂಷಿತಾ ॥ ೩೩ ॥
ಕಲ್ಪವೃಕ್ಷಸಮಾಕೀರ್ಣಾ ರೋಹೀತಕಸಮಾಕುಲಾ ।
ವಹತ್ಯೇಷಾ ಚ ಮಂದೇನ ತೇನ ಮಂದಾಕಿನೀ ಸ್ಮೃತಾ ॥ ೩೪ ॥
ಭಿತ್ವಾ ಮಹಾರ್ಣವಂ ಕ್ಷಿಪ್ರಂ ಯಸ್ಮಾಲ್ಲೋಕಮಿಹಾಗತಾ ।
ಪೂಜ್ಯಾ ಸುರೈಶ್ಚ ಸಿದ್ಧೈಶ್ಚ ತಸ್ಮಾದೇಷಾ ಮಹಾರ್ಣವಾ ॥ ೩೫ ॥

---

೩೦. ಶಂಕರನ ಅನುಗ್ರಹದಿಂದ ಈಕೆಯು ಮಹಾಪಾತಕಗಳನ್ನೂ ಕಳೆಯುವಳು. ಪ್ರಳಯ ಮಹಾರ್ಣವದಲ್ಲಿಯೂ ಕಾಣುವಳಾದುದರಿಂದ ಈಕೆಯನ್ನು ಮಹತೀ ಎಂದೂ ಕರೆಯುವರು.

೩೧. ವ್ಯಕ್ತಗಳಾದ ಅವಯವಗಳಿಂದ ಕೂಡಿದ ದೊಡ್ಡ ದೇಹವುಳ್ಳವಳಾದುದರಿಂದಲೂ ಮಹತೀ ಎಂದು ಸ್ಮೃತಳಾಗಿರುವಳು. ಮಹಾಮೇಘಗಳನ್ನು ಹೋಲುವ ದಿಗ್ಗಜಗಳಿಂದ ಈಕೆಯು ಕ್ಷೋಭಗೊಳ್ಳುವಳು.

೩೨. ಜಲವು ಇದರಿಂದ ಕಲುಷಿತವಾಗುವ ಕಾರಣದಿಂದ ಸುರಸೆಯೆಂದೂ ಕರೆಯಲ್ಪಡುವಳು. ಲೋಕವಾಸಿಗಳಲ್ಲ ಅಭಯಪ್ರದೆಯಾಗಿ ಅವರಲ್ಲಿ ಕೃಪೆಯನ್ನು ತೋರುತ್ತಿರುವಳು.

೩೩. ಸಂಸಾರಸಮುದ್ರದಲ್ಲಿ ಮುಳುಗುತ್ತಿರುವವರನ್ನುಉದ್ಧರಿಸುವುದರಿಂದ ಕೃಪೆಯೆಂದೂ ಕರೆಯುವರು. ಹಿಂದೆ ಪುಣ್ಯಭೂಯಿಷ್ಠವಾದ ಕೃತಯುಗದಲ್ಲಿ ಈಕೆಯು ದಿವ್ಯಮಂದಾರಪುಷ್ಪಗಳಿಂದಲಂಕೃತೆಯಾಗಿದ್ದಳು.

೩೪. ನದಿಯ ಎರಡು ತೀರಗಳಲ್ಲಿಯೂ ಕಲ್ಪವೃಕ್ಷಗಳು ನಿಬಿಡವಾಗಿದ್ದುವು. ಮುಳ್ಳುಮುತ್ತುಗದ ಮರಗಳ ಮಧ್ಯದಲ್ಲಿ ನಿಧಾನವಾಗಿ ಪ್ರವಹಿಸುವುದರಿಂದ ಇದಕ್ಕೆ ಮಂದಾಕಿನಿಯೆಂದೂ ಹೆಸರು.

೩೫. ಮಹಾಸಮುದ್ರವನ್ನು ಭೇದಿಸಿಕೊಂಡು ಈ ಲೋಕಕ್ಕೆ ಬಂದು ದೇವತೆಗಳಿಗೂ ಸಿದ್ಧರಿಗೂ ಪೂಜಾರ್ಹವಾಗಿರುವುದರಿಂದ ಇದಕ್ಕೆ ಮಹಾರ್ಣವೆಯೆಂಬ ಹೆಸರೂ ಇರುವುದು.

ವಿಚಿತ್ರೋತ್ಪಲಸಂಘಾತೈರ್ಋಕ್ಷದ್ವಿಪಸಮಾಕುಲಾ ।
ಭಿತ್ವಾ ಶೈಲಂ ಚ ವಿಪುಲಂ ಪ್ರಯಾತ್ಯೇವಂ ಮಹಾರ್ಣವಂ ॥ ೩೬ ॥
ಭ್ರಾಮಯಂತೀ ದಿಶಃ ಸರ್ವಾ ರವೇಣ ಮಹತಾ ಪುರಾ ।
ಪ್ಲಾವಯಂತೀ ವಿರಾಜಂತೀ ತೇನ ರೇವಾ ಇತಿ ಸ್ಮೃತಾ ॥ ೩೭ ॥
ಭಾರ್ಯಾಪುತ್ರಸುದುಃಖಾಢ್ಯಾನ್ನರಾನ್ಪಾಪೈಃ ಸಮಾವೃತಾನ್ ।
ವಿಪಾಪಾನ್ಕುರುತೇ ಯಸ್ಮಾದ್ವಿಪಾಪಾ ತೇನ ಸಾ ಸ್ಮೃತಾ ॥ ೩೮ ॥
ವಿಣ್ಮೂತ್ರನಿಚಯಾಂ ಘೋರಾಂ ಪಾಂಶುಶೋಣಿತಕರ್ದಮಾಂ ।
ಪಾಶೈರ್ನಿತ್ಯಂ ತು ಸಂಬಾಧಾಂ ಯಸ್ಮಾನ್ಮೋಚಯತೇ ಭೃಶಂ ॥ ೩೯ ॥
ವಿಪಾಶೇತಿ ಚ ಸಾ ಪ್ರೋಕ್ತಾ ಸಂಸಾರಾರ್ಣವತಾರಿಣೀ ।
ನರ್ಮದಾ ವಿಮಲಾಽಂಭಾ ಚ ವಿಮಲೇಂದುಶುಭಾನನಾ ॥ ೪೦ ॥
ತಮೋಭೂತೇ ಮಹಾಘೋರೇ ಯಸ್ಮಾದೇಷಾ ಮಹಾಪ್ರಭಾ ।
ವಿಮಲಾ ತೇನ ಸಾ ಪ್ರೋಕ್ತಾ ವಿದ್ವದ್ಭಿರ್ನೃಪಸತ್ತಮ ॥ ೪೧ ॥

---

೩೬. ಇದು ವಿಚಿತ್ರಗಳಾದ ಕನ್ನೈದಿಲೆಗಳಿಂದ ಕರಡಿ, ಆನೆಗಳೇ ಮುಂತಾದ ವನ್ಯಮೃಗಗಳಿಂದ ಸೇವಿತವಾಗಿ ವಿಸ್ತಾರವಾದ ಪರ್ವತವನ್ನು ಭೇದಿಸಿಕೊಂಡು ಉಚ್ಚತರವಾದ ಧ್ವನಿಯಿಂದ ಹತ್ತು ದಿಕ್ಕುಗಳನ್ನೂ ಅಲ್ಲ ಕಲ್ಲೋಲಗೊಳಿಸುತ್ತ ಸಮುದ್ರವನ್ನು ಸೇರಿದಳು.

೩೭. ನೆಲವನ್ನು ತೋಯಿಸಿ ವಿರಾಜಿಸುತ್ತಿರುವುದರಿಂದ ಈ ನದಿಯನ್ನು ರೇವಾ ಎಂದು ಕರೆಯುವರು.

೩೮. ಹೆಂಡತಿ ಮಕ್ಕಳಿಂದ ಅತಿದುಃಖಕ್ಕೊಳಗಾದವರೂ ಶಾಪಾಭಿಭೂತರಾದವರೂ ಇದರ ಸೇವೆಯಿಂದ ನಿಷ್ಪಾಪರಾಗುವುದರಿಂದ ಇದಕ್ಕೆ ವಿಪಾಪೆಯೆಂದೂ ಹೆಸರಿರುವುದು.

೩೯. ಮೂತ್ರಾಮೇಧ್ಯಗಳಿಂದ ತುಂಬಿ, ಭಯಂಕರವೂ, ದೂಳು ರಕ್ತಗಳ ಕೆಸರುಳ್ಳದುದೂ ಆದ ಮಹಾನರಕಕ್ಕೆ ಕಾರಣಗಳಾದ ಪಾಶಗಳನ್ನು ಇದು ನಿತ್ಯವೂ ನಾಶಮಾಡುವುದು.

೪೦. ಆದುದರಿಂದ ಸಂಸಾರಸಮುದ್ರವನ್ನು ಕಡೆಹಾಯಿಸುತ್ತಿರುವ ಇದು ವಿಪಾಶೆಯೆಂದೂ ಕರೆಯಲ್ಪಡುವುದು. ಈ ನರ್ಮದೆಯು ನಿರ್ಮಲ ಜಲಭರಿತವೂ ನಿರ್ಮಲಚಂದ್ರನನ್ನು ಹೋಲುವುದೂ ಶುಭಾನನೆಯೂ ಆಗಿರುವುದು.

೪೧. ಪ್ರಳಯದ ಮಹಾಭಯಂಕರವಾದ ಅಂಧಕಾರದಲ್ಲಿ ಇದೇ ದಿವ್ಯ ಪ್ರಭಾಮಂಡಿತವಾಗಿದ್ದುದರಿಂದ ಇದನ್ನು ವಿದ್ವಾಂಸರು ವಿಮಲೆಯೆಂದೂ ಕರೆಯುವರು.

ಕರ್ರೈರಿಂದುಕರಪ್ರಖ್ಯೈಃ ಸೂರ್ಯರಶ್ಮಿಸಮಪ್ರಭಾ ।
ಕ್ಷರಂತೀ ಮೋದತೇ ವಿಶ್ವಂ ಕರಭಾ ತೇನ ಚೋಚ್ಯತೇ ॥ ೪೨ ॥
ಯಸ್ಮಾದ್ರಂಜಯತೇ ಲೋಕಾನ್ದರ್ಶನಾದೇವ ಭಾರತ ।
ರಂಜನಾದ್ರಂಜನಾ ಪ್ರೋಕ್ತಾ ಧಾತ್ವರ್ಥೇ ರಾಜಸತ್ತಮ ॥ ೪೩ ॥
ತೃಣವೀರುಧಗುಲ್ಮಾದ್ಯಾಸ್ತಿರ್ಯಂಚಃ ಪಕ್ಷಿಣಸ್ತಥಾ ।
ತಾನುದ್ಧೃತಾನ್ನಯೇತ್ಸ್ವರ್ಗಂ ತೇನೋಕ್ತಾ ವಾಯುವಾಹಿನೀ ॥ ೪೪ ॥
ಏವಂ ಯೋ ವೇತ್ತಿ ನಾಮಾನಿ ನಿರ್ಗಮಂ ಚ ವಿಶೇಷತಃ ।
ಸ ಯಾತಿ ಪಾಪನಿರ್ಮುಕ್ತೋ ರುದ್ರಲೋಕಂ ನ ಸಂಶಯಃ ॥ ೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಮಯೂರಕಲ್ಪಸಮುದ್ಭವವರ್ಣನಂ" ನಾಮ ಷಷ್ಠೋಽಧ್ಯಾಯಃ

---

೪೨. ಚಂದ್ರಕಿರಣಗಳಂತೆ ಹೃದ್ಯವಾದರೂ ಸೂರ್ಯರಶ್ಮಿಗಳಂತೆ ಪ್ರಬಲವಾದ ಕಾಂತಿಯಿಂದ ಲೋಕವನ್ನು ಆನಂದಗೊಳಿಸುತ್ತಿರುವ ಇದನ್ನು ಕರಭಾ ಎಂದೂ ಹೇಳುವರು.

೪೩. ಅಯ್ಯಾ ಯುಧಿಷ್ಠಿರನೆ! ದರ್ಶನದಿಂದಲೇ ಜನರನ್ನು ಸಂತೋಷಗೊಳಿಸುವುದರಿಂದ "ರಂಜ್" ಧಾತುವಿನ ಅರ್ಥವನ್ನನುಸರಿಸಿ ಇದಕ್ಕೆ ರಂಜನಿಯೆಂಬ ಹೆಸರೂ ಬಂದಿರುವುದು.

೪೪. ತನಗೆ ಸಂಬಂಧಿಸಿದ ಹುಲ್ಲು, ಮರ, ಗಿಡಗಳನ್ನೂ, ತಿರ್ಯಗ್ಜಂತುಗಳನ್ನೂ, ಪಕ್ಷಿಗಳನ್ನೂ ಉದ್ಧರಿಸಿ ಸ್ವರ್ಗಕ್ಕೆ ಕರೆದುಕೊಂಡು ಹೋಗುವ ಇದನ್ನು ವಾಯುವಾಹಿನಿಯೆಂದು ಕರೆಯುವರು.

೪೫. ಇಂತು ನರ್ಮದೆಯ ನಾಮಗಳನ್ನೂ ಅದರ ಉತ್ಪತ್ತಿಯನ್ನೂ ಯಾವನು ಚೆನ್ನಾಗಿ ತಿಳಿಯುವನೊ, ಅವನು ತನ್ನ ಪಾತಕಗಳೆಲ್ಲವನ್ನೂ ಕಳೆದುಕೊಂಡು ರುದ್ರಲೋಕವನ್ನು ಸೇರುವುದರಲ್ಲಿ ಸಂದೇಹವಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಯೂರಕಲ್ಪಸಮುದ್ಭವವರ್ಣನ" ವೆಂಬ
ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ಕೂರ್ಮಕಲ್ಪಸಮುದ್ಭವವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ಪುನರೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।**
**ಸಲಿಲೇನಾಪ್ಲುತೇ ಲೋಕೇ ನಿರಾಲೋಕೇ ತಮೋದ್ಭವೇ ॥ ೧ ॥**
**ಬ್ರಹ್ಮೈಕೋ ವಿಚರಂಸ್ತತ್ರ ತಮೋಭೂತೇ ಮಹಾರ್ಣವೇ ।**
**ದಿವ್ಯವರ್ಷಸಹಸ್ರಂ ತು ಖದ್ಯೋತ ಇವ ರೂಪವಾನ್ ॥ ೨ ॥**
**ಶೇತೇ ಯೋಜನಸಾಹಸ್ರಮಪ್ರಮೇಯಮನುತ್ತಮಂ ।**
**ದ್ವಾದಶಾದಿತ್ಯಸಂಕಾಶಂ ಸಹಸ್ರಚರಣೇಕ್ಷಣಂ ।**
**ಪ್ರಸುಪ್ತಂ ಚಾರ್ಣವೇ ಘೋರೇ ಹ್ಯಪಶ್ಯತ್ಕೂರ್ಮರೂಪಿಣಂ ॥ ೩ ॥**
**ತಂ ದೃಷ್ಟ್ವಾ ವಿಸ್ಮಯಾಪನ್ನೋ ಬ್ರಹ್ಮಾ ಬೋಧಯತೇ ಶನೈಃ ॥ ೪ ॥**
**ಸ್ತುತಿಭಿರ್ಮಂಗಲೈಶ್ಚೈವ ವೇದವೇದಾಂಗಸಂಭವೈಃ ।**
**ವಾಚಸ್ಪತೇ ವಿಬುಧ್ಯಸ್ವ ಮಹಾಭೂತ ನಮೋಽಸ್ತು ತೇ ॥ ೫ ॥**

---

### ಕನ್ನಡದ ಅನುವಾದ

#### ಕೂರ್ಮಕಲ್ಪಸಮುದ್ಭವವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಪುನಃ ಪ್ರಳಯಕಾಲವಾಗಲು ಆ ಘೋರಸಮಯದಲ್ಲಿ ಸಮಸ್ತ ಚರಾಚರಗಳೂ ನಾಶಹೊಂದಿದುವು. ಪ್ರಪಂಚವು ನೀರಿನಿಂದಾವೃತವಾಗಿ ಕಣ್ಣುಗಳು ಕಾಣದಂತಹ ಅಂಧಕಾರವು ವ್ಯಾಪಿಸಿದ್ದಿತು.

೨. ಆ ಅಂಧಕಾರದಲ್ಲಿ ಬ್ರಹ್ಮನೊಬ್ಬನೇ ಸಂಚರಿಸುತ್ತ ಒಂದು ಸಾವಿರ ದೇವಮಾನದ ವರ್ಷಗಳವರೆಗೂ ಮಿಂಚುಹುಳುವಿನಂತೆ ಕಾಣುತ್ತಿದ್ದನು.

೩. ಆ ಬ್ರಹ್ಮನಾದರೋ ಆಗ, ಒಂದು ಸಾವಿರ ಯೋಜನ ವಿಸ್ತಾರವಾಗಿ ಅನಾದ್ಯಂತವೂ, ಸರ್ವೋತ್ತಮವೂ, ದ್ವಾದಶಸೂರ್ಯಕಾಂತಿಯುಕ್ತವೂ, ಅಸಂಖ್ಯಾತ ಪಾದನೇತ್ರಾದ್ಯವಯವಸಹಿತವೂ ಆದ ಕೂರ್ಮವೊಂದು ಸಮುದ್ರದಲ್ಲಿ ಮಲಗಿರುವುದನ್ನು ನೋಡಿದನು.

೪. ಆ ಮಹಾಭಯಂಕರ ಸಮುದ್ರದಲ್ಲಿ ಮಲಗಿರುವ ಕೂರ್ಮರೂಪಿಯಾದ ಆ ಪರಮಾತ್ಮನನ್ನು ಕಂಡು ವಿಸ್ಮಯಾವಿಷ್ಟನಾಗಿ ಚತುರ್ಮುಖನು ಮೆಲ್ಲಗೆ ಆತನನ್ನು ಎಚ್ಚರಿಸಿದನು.

೫. ಆತನು ಮಂಗಳ ಶಬ್ದಸಹಿತಗಳೂ, ವೇದಶಾಸ್ತ್ರಸಮ್ಮತಗಳೂ ಆದ ಸ್ತೋತ್ರಗಳಿಂದ ಆತನನ್ನೆಬ್ಬಿಸಿದನು. ''ವಾಗ್ವ್ಯಾಪಾರಕ್ಕೆ ಪ್ರೇರಕನಾದ ಓ ಪರಮಾತ್ಮನೆ! ಎಚ್ಚರಗೊಳ್ಳು. ಮಹಾಭೂತನೆ! ಇದೋ ನಿನ್ನನ್ನು ನಮಸ್ಕರಿಸುವೆನು.

ತವೋದರೇ ಜಗತ್ಸರ್ವಂ ತಿಷ್ಠತೇ ಪರಮೇಶ್ವರ ।
ತದ್ವಿಮುಂಚ ಮಹಾಸತ್ವ ಯತ್ಪೂರ್ವಂ ಸಂಹೃತಂ ತ್ವಯಾ ॥ ೬ ॥
ವ್ಯತೀತಾ ರಜನೀ ಬ್ರಾಹ್ಮೀ ದಿನಂ ಸಮನುವರ್ತತೇ ।
ನಿರೀಕ್ಷ್ಯ ಸರ್ವಲೋಕೇಶ ಯೇನ ಸಂಭವತೇ ಜಗತ್ ॥ ೭ ॥
ಸ ನಿಶಮ್ಯ ವಚಸ್ತಸ್ಯ ಉತ್ಥಿತಃ ಪರಮೇಶ್ವರಃ ।
ಸಮುದ್ಗಿರನ್ ಸಲೋಕಾಂಸ್ತ್ರೀನ್ಗ್ರಸ್ತಾನ್ಕಲ್ಪಕ್ಷಯೇ ತದಾ ॥ ೮ ॥
ದೇವದಾನವಗಂಧರ್ವಾಃ ಸ ಯಕ್ಷೋರಗರಾಕ್ಷಸಾಃ ।
ಸ ಚಂದ್ರಾಽರ್ಕಗ್ರಹಾಃ ಸರ್ವೇ ಶರೀರಾತ್ತಸ್ಯ ನಿರ್ಗತಾಃ ॥ ೯ ॥
ತತೋ ಹ್ಯೇಕಾರ್ಣವಂ ಸರ್ವಂ ವಿಭಜ್ಯ ಪರಮೇಶ್ವರಃ ।
ವಿಸ್ತೀರ್ಣೋಪಲತೋಯೌಘಾಂ ಸರಿತ್ಸರವಿವರ್ಧಿತಾಂ ॥ ೧೦ ॥
ಪಶ್ಯತೇ ಮೇದಿನೀಂ ದೇವಃ ಸ ವೃಕ್ಷೌಷಧಿಪಲ್ಲವಾಂ ।
ಹಿಮವಂತಂ ಗಿರಿಶ್ರೇಷ್ಠಂ ಶ್ವೇತಂ ಪರ್ವತಮುತ್ತಮಂ ॥ ೧೧ ॥
ಶೃಂಗವಂತಂ ಮಹಾಶೈಲಂ ಯೇ ಚಾಽನ್ಯೇ ಕುಲಪರ್ವತಾಃ ।
ಜಂಬೂದ್ವೀಪಂ ಕುಶಂ ಕ್ರೌಂಚಂ ಸಗೋಮೇದಂ ಸಶಾಲ್ಮಲಂ ॥ ೧೨ ॥

---

೬–೭. ಪರಮೇಶ್ವರನೆ! ನಿನ್ನ ಉದರದಲ್ಲಿ ಸಮಸ್ತ ಪ್ರಪಂಚವೂ ಅಡಗಿರುವುದು. ಹಿಂದೆ ನುಂಗಿರುವ ಬ್ರಹ್ಮಾಂಡವನ್ನು ಮಹಾಭೂತನಾದ ನೀನು ಇದೀಗ ಹೊರಕ್ಕೆ ಹಾಕು. ಬ್ರಹ್ಮನ ರಾತ್ರಿಯು ಕಳೆದು ಸುಪ್ರಭಾತವಾಗುತ್ತಿರುವುದು. ಸರ್ವಲೋಕೇಶ್ವರನೆ! ನಿನ್ನ ಉದರದಿಂದಲೇ ಜಗತ್ತುಂಟಾಗಬೇಕೆಂಬುದನ್ನು ಜ್ಞಾಪಿಸಿಕೊ."

೮–೯. ಆತನ ಮಾತುಗಳನ್ನು ಕೇಳಿ ಪರಮೇಶ್ವರನು ಎಚ್ಚತ್ತು ಹಿಂದಿನ ಕಲ್ಪದ ಕೊನೆಯಲ್ಲಿ ಅಡಗಿಸಿಕೊಂಡಿದ್ದ ಮೂರು ಲೋಕಗಳನ್ನೂ ಹೊರಕ್ಕೆ ಉಗುಳಿದನು. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ನಾಗರು, ರಾಕ್ಷಸರು, ಚಂದ್ರಾದಿತ್ಯಾದಿ ಗ್ರಹಗಳು, ಮುಂತಾದವರೆಲ್ಲರೂ ಆತನ ಶರೀರದಿಂದ ಹೊರಕ್ಕೆ ಬಂದರು.

೧೦. ಬಳಿಕ ಪರಮೇಶ್ವರನು ವಿಶಾಲಗಳಾದ ಕಲ್ಲುಗಳಿಂದಲೂ, ಜಲರಾಶಿಗಳಿಂದಲೂ, ನದೀಸರೋವರಗಳಿಂದಲೂ ಕೂಡಿದ ಭೂಮಿಯನ್ನು ವಿಭಜಿಸಿದನು.

೧೧. ವೃಕ್ಷಗಳು, ಓಷಧಿಗಳು, ಕುಂಟೆಗಳೇ ಮೊದಲಾದುವುಗಳಿಂದ ಕೂಡಿದ ಭೂಮಿಯನ್ನೂ, ಪರ್ವತಶ್ರೇಷ್ಠನೆನಿಸಿದ ಹಿಮವಂತನನ್ನೂ ಶ್ವೇತ ಪರ್ವತವನ್ನೂ ವಿಂಗಡಿಸಿದನು.

೧೨. ಶಿಖರಸಹಿತವಾದ ಮಹಾಶೈಲವನ್ನೂ, ಇತರ ಕುಲಪರ್ವತಗಳನ್ನೂ, ಜಂಬೂ, ಕುಶ, ಕ್ರೌಂಚ, ಗೋಮೇದ, ಶಾಲ್ಮಲೀ ದ್ವೀಪಗಳನ್ನೂ ವಿಭಜಿಸಿದನು.

ಪುಷ್ಕರಾಂತಾಶ್ಚ ಯೇ ದ್ವೀಪಾ ಯೇ ಚ ಸಪ್ತ ಮಹಾರ್ಣವಾಃ ।
ಲೋಕಾಲೋಕಂ ಮಹಾಶೈಲಂ ಸರ್ವಂ ಚ ಪುರತಃ ಸ್ಥಿತಂ ॥ ೧೩ ॥
ಚತುಃಪ್ರಕೃತಿಸಂಯುಕ್ತಂ ಜಗತ್ ಸ್ಥಾವರಜಂಗಮಂ ।
ಯುಗಾಂತೇ ತು ವಿನಿಷ್ಕ್ರಾಂತಮಪಶ್ಯತ್ಸಮಹೇಶ್ವರಃ ॥ ೧೪ ॥
ವಿಪ್ರಕೀರ್ಣಶಿಲಾಜಾಲಾಮಪಶ್ಯತ್ಸವಸುಂಧರಾಂ ।
ಕೂರ್ಮಪೃಷ್ಠೋಪಗಾಂ ದೇವೀಂ ಮಹಾರ್ಣವಗತಾಂ ಪ್ರಭುಃ ॥ ೧೫ ॥
ತಸ್ಮಿನ್ವಿಶೀರ್ಣಶೈಲಾಗ್ರೇ ಸರಿತ್ಸರೋವಿವರ್ಜಿತೇ ।
ನಾನಾತರಂಗಭಿನ್ನೋದ ಆವರ್ತೋದ್ವರ್ತಸಂಕುಲೇ ॥ ೧೬ ॥
ನಾನೌಷಧಿಪ್ರಜ್ವಲಿತೇ ನಾನೋತ್ಪಲಶಿಲಾತಲೇ ।
ನಾನಾವಿಹಂಗಸಂಘುಷ್ಟಾಂ ಮತ್ಸ್ಯಕೂರ್ಮಸಮಾಕುಲಾಂ ॥ ೧೭ ॥
ದಿವ್ಯಮಾಯಾಮಯೀಂ ದೇವೀಮುತ್ಕೃಷ್ಟಾಂಬುದಸನ್ನಿಭಾಂ ।
ನದೀಮಪಶ್ಯದ್ದೇವೇಶೋ ಹ್ಯನೌಪಮ್ಯಜಲಾಶಯಾಂ ॥ ೧೮ ॥
ಮಧ್ಯೇ ತಸ್ಯಾಂಬುದಶ್ಯಾಮಾಂ ಪೀನೋರುಜಘನಸ್ತನೀಂ ।
ವಸ್ತ್ರೈರನುಪಮೈರ್ದಿವ್ಯೈರ್ನಾನಾಭರಣಭೂಷಿತಾಂ ॥ ೧೯ ॥

---

೧೩. ಪುಷ್ಕರಾಂತಗಳಾದ ಈ ದ್ವೀಪಗಳೂ, ಏಳು ಮಹಾಸಮುದ್ರಗಳೂ, ಲೋಕಾಲೋಕವೆಂಬ ಮಹಾಶೈಲವೂ ಆತನ ಮುಂದೆ ರೂಪುಗೊಂಡುವು.

೧೪. ನಾಲ್ಕುಬಗೆಯಾದ ಸ್ಥಾವರಜಂಗಮಾತ್ಮಕವಾದ ಭೂತಗ್ರಾಮವೆಲ್ಲವೂ ಯುಗಾಂತ್ಯದಲ್ಲಿ ತನ್ನಿಂದ ಹೊರಗೆ ಬಂದುದನ್ನು ಆ ಮಹೇಶ್ವರನು ಕಂಡನು.

೧೫. ಆಗಲಾ ಲೋಕನಾಥನು ವಿಶಾಲಗಳಾದ ಶಿಲೆಗಳಿಂದ ಕೂಡಿದುದಾಗಿ ಮಹಾಸಮುದ್ರದ ಮಧ್ಯದಲ್ಲಿ ಕೂರ್ಮದ ಬೆನ್ನಿನಮೇಲೆ ನಿಂತಿರುವ ಭೂಮಿಯನ್ನೂ ನೋಡಿದನು.

೧೬. ಆ ಸಮುದ್ರವು ಎಲ್ಲೆಲ್ಲಿಯೂ ತಲೆದೋರುತ್ತಿರುವ ಪರ್ವತ ಶಿಖರಗಳಿಂದಲೂ, ರೂಪುಗೊಳ್ಳುವ ನದೀಸರೋವರಗಳಿಂದಲೂ, ಅನೇಕ ತರಂಗಗಳಿಂದಲೂ, ಅಲ್ಲಕಲ್ಲೋಲವಾಗಿ ಸುಳಿಗಳ ಸಮೂಹಗಳಿಂದಲೂ ಕೂಡಿದ್ದಿತು.

೧೭–೧೮. ಅನೇಕ ಓಷಧಿ ವನಸ್ಪತಿಗಳಿಂದ ಜ್ವಲಿಸುತ್ತ, ವಿಚಿತ್ರಗಳಾದ ಶಿಲಾತಲಗಳನ್ನೊಳಗೊಂಡ ಆ ಸಮುದ್ರಮಧ್ಯದಲ್ಲಿ ಬಹುಪಕ್ಷಿಸಂಕುಲನಾದಿತವೂ ಮತ್ಸ್ಯಕೂರ್ಮಾದಿ ಜಲಚರನಿಬಿಡವೂ, ದೇವಮಾಯೆಯ ಸ್ವರೂಪಮಯವೂ, ಉತ್ತಮಮೇಘವನ್ನು ಹೋಲುತ್ತಿರುವುದೂ, ಸಾಟಿಯಿಲ್ಲದ ಜಲರಾಶಿಯುಳ್ಳದುದೂ ಆದ ಒಂದು ಮಹಾನದಿಯನ್ನು ಪರಮೇಶ್ವರನು ಕಂಡನು.

೧೯–೨೧. ಆ ಪ್ರವಾಹದ ಮಧ್ಯದಲ್ಲಿ ಕನ್ನೈದಿಲೆಯಂತೆ ಶ್ಯಾಮಲವರ್ಣದವಳೂ, ದುಂಡಗಿರುವ ಜಘನಗಳಿಂದಲೂ ಸ್ತನಗಳಿಂದಲೂ ಒಪ್ಪುವಳೂ,

ಸ ನೂಪುರರವೋದ್ದಾಮಾಂ ಹಾರಕೇಯೂರಮಂಡಿತಾಂ ।
ತಾದೃಶೀಂ ನರ್ಮದಾಂ ದೇವೀಂ ಸ್ವಯಂ ಸ್ತ್ರೀರೂಪಧಾರಿಣೀಂ ॥ ೨೦ ॥
ಯೋಗಮಾಯಾಮಯೈಶ್ಚಿತ್ರೈರ್ಭೂಷಣೈಃ ಸ್ವೈರ್ವಿಭೂಷಿತಾಂ ।
ಅವ್ಯಕ್ತಾಂಗೀಂ ಮಹಾಭಾಗಾಮಪಶ್ಯತ್ಸತು ನರ್ಮದಾಂ ॥ ೨೧ ॥
ಅಥೋರ್ಧ್ವಕೃತಭುಜಾಂ ಬಾಲಾಂ ಪದ್ಮಪತ್ರಾಯತೇಕ್ಷಣಾಂ ।
ಸ್ತುವಂತೀಂ ದೇವದೇವೇಶಮುತ್ಥಿತಾಂ ತು ಜಲಾತ್ತದಾ ॥ ೨೨ ॥
ವಿಸ್ಮಯಾವಿಷ್ಟಹೃದಯೋ ಹ್ಯಹಮುದ್ವೀಕ್ಷ್ಯ ತಾಂ ಶುಭಾಂ ।
ಸ್ನಾತ್ವಾ ಜಲೇ ಶುಭೇ ತಸ್ಯಾಃ ಸ್ತೋತುಮಭ್ಯುದ್ಯತಸ್ತತಃ ॥ ೨೩ ॥
ಅರ್ಚಯಾಮಾಸ ಸಂಹೃಷ್ಟೋ ಮಂತ್ರೈರ್ವೇದಾಂಗಸಂಭವೈಃ ।
ಸೃಷ್ಟಂ ಚ ತತ್ಪುರಾ ರಾಜನ್ ಪಶ್ಯೇಯಂ ಸಚರಾಚರಂ ॥ ೨೪ ॥
ಸದೇವಾಸುರಗಂಧರ್ವಂ ಸಪನ್ನಗಮಹೋರಗಂ ।
ಪಶ್ಯಾಮ್ಯೇಷಾ ಮಹಾಭಾಗಾ ನೈವ ಯಾತಾ ಕ್ಷಯಂ ಪುರಾ ॥ ೨೫ ॥

---

ಅಪ್ರತಿಮಗಳೂ ದಿವ್ಯಗಳೂ ಆದ ವಸ್ತ್ರಗಳಿಂದಲೂ ಆಭರಣಗಳಿಂದಲೂ ಅಲಂಕೃತಳಾಗಿ, ಕಾಲ್ಗಡಗಗಳ ನಾದದಿಂದ ಕೂಡಿದ ಮಂದಗಮನವುಳ್ಳವಳಾಗಿ ಯೋಗಮಾಯೆಯಿಂದ ನಿರ್ಮಿತಗಳಾದ ತನ್ನ ಹಾರಪದಕಾದಿ ಭೂಷಣಗಳನ್ನು ಧರಿಸಿ ನೀರಿನಲ್ಲಿ ಕಂಡು ಕಾಣದಿರುವ ದೇಹವುಳ್ಳವಳೂ ಆದ ಸ್ತ್ರೀರೂಪವನ್ನು ಧರಿಸಿ ಮಹಾಭಾಗ್ಯಶಾಲಿನಿಯಾಗಿರುವ ನರ್ಮದಾದೇವಿಯನ್ನು ನೋಡಿದನು.

೨೨. ಆ ಬಾಲಕಿಯು ಕೈಗಳನ್ನು ತಲೆಗೆತ್ತಿ ಜೋಡಿಸಿ ನೀರಿನಿಂದ ಮೇಲಕ್ಕೇಳುತ್ತ ಮಹಾದೇವನನ್ನು ಸ್ತೋತ್ರಮಾಡುತ್ತಿರಲು ಆ ಕಮಲನೇತ್ರೆಯನ್ನು ಆತನು ಕಂಡನು.

೨೩. ನಾನೂ ವಿಸ್ಮಯದಿಂದ ಕೂಡಿದ ಮನಸ್ಸುಳ್ಳವನಾಗಿ ಆ ಮಂಗಳಾಂಗಿಯನ್ನು ಕಂಡು ನದಿಯ ಜಲದಲ್ಲಿ ಮಿಂದು ಆಕೆಯನ್ನು ಸ್ತುತಿಸಲುಪಕ್ರಮಿಸಿದೆನು.

೨೪. ಆನಂದದಿಂದ ವೇದಪ್ರೋಕ್ತಗಳಾದ ಮಂತ್ರಗಳನ್ನು ಪಠಿಸಿಕೊಂಡು ಆಕೆಯ ಪೂಜೆಯನ್ನು ಮಾಡಿದೆನು. ರಾಜೇಂದ್ರನೆ! ಬಳಿಕ ಹಿಂದಿನಂತೆಯೇ ಚರಾಚರಾತ್ಮಕವಾದ ಬ್ರಹ್ಮಾಂಡವು ಸೃಷ್ಟವಾದುದನ್ನು ಕಂಡೆನು.

೨೫. ದೇವತೆಗಳೂ, ರಾಕ್ಷಸರು, ಗಂಧರ್ವರು, ನಾಗರು, ಮಹೋರಗರೇ ಮುಂತಾದವರನ್ನೂ ನೋಡಿದೆನು. ಈ ಮಹಾಭಾಗ್ಯಶಾಲಿನಿಯು ಮಾತ್ರ ಯಾವಾಗಲೂ ನಾಶವನ್ನು ಹೊಂದಲಿಲ್ಲ.

ಮಹಾದೇವಪ್ರಸಾದಾಚ್ಚ ತಚ್ಛರೀರಸಮುದ್ಭವಾ ।
ಭೂಯೋ ಭೂಯೋ ಮಯಾ ದೃಷ್ಟಾ ಕಥಿತಾ ತೇ ನೃಪೋತ್ತಮ ॥೨೬॥
ಪ್ರಾದುರ್ಭಾವಮಿಮಂ ಕೌರ್ಮ್ಯಂ ಯೇಽಧೀಯಂತೇ ದ್ವಿಜೋತ್ತಮಾಃ ।
ಯೇಽಪಿ ಶೃಣ್ವಂತಿ ವಿದ್ವಾಂಸೋ ಮುಚ್ಯಂತೇ ತೇಽಪಿ ಕಿಲ್ಬಿಷೈಃ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
" ಕೂರ್ಮಕಲ್ಪಸಮುದ್ಭವವರ್ಣನಂ "ನಾಮ ಸಪ್ತಮೋಽಧ್ಯಾಯಃ

---

೨೬. ಮಹಾದೇವನ ಅನುಗ್ರಹದಿಂದಲೂ ಆತನ ದೇಹದಿಂದ ಹುಟ್ಟಿದವ ಳಾದುದರಿಂದಲೂ ಪುನಃ ಪುನಃ ನಾನು ನರ್ಮದೆಯನ್ನು ನೋಡಿದೆನು. ರಾಜೋತ್ತಮನೆ! ಇಂತು ನಿನಗೆ ಈ ಚರಿತ್ರೆಯನ್ನು ಹೇಳಿರುವೆನು.

೨೭. ಕೂರ್ಮಕಲ್ಪದ ಸೃಷ್ಟಿಗೆ ಸಂಬಂಧಿಸಿದ ಈ ಅಧ್ಯಾಯವನ್ನು ಯಾವ ಬ್ರಾಹ್ಮಣೋತ್ತಮರು ಪಠಿಸುವರೊ, ಯಾವ ಪ್ರಾಜ್ಞರು ಕೇಳುವರೊ, ಅವರು ಸಮಸ್ತ ಪಾತಕಗಳನ್ನೂ ಕಳೆದುಕೊಳ್ಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
" ಕೂರ್ಮಕಲ್ಪಸಮುದ್ಭವವರ್ಣನ "ವೆಂಬ
ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

## ಬಕಕಲ್ಪಸಮುದ್ಭವವರ್ಣನಂ

ಮಾರ್ಕಂಡೇಯ ಉವಾಚ :—

ನಷ್ಟೇ ಲೋಕೇ ಪುನಶ್ಚಾಽನ್ಯೇ ಸಲಿಲೇನ ಸಮಾವೃತೇ ।
ಮಹಾರ್ಣವಸ್ಯ ಮಧ್ಯಸ್ಥೋ ಬಾಹುಭ್ಯಾಮುತರಂ ಜಲಂ ॥ ೧ ॥
ದಿವ್ಯೇ ವರ್ಷಶತೇ ಪೂರ್ಣೇ ಶ್ರಾಂತೋಽಹಂ ನೃಪಸತ್ತಮ ।
ಧ್ಯಾತುಂ ಸಮಾರಭಂ ದೇವಂ ಮಹದರ್ಣವತಾರಣಂ ॥ ೨ ॥
ಧ್ಯಾಯಮಾನಸ್ತತಃ ಕಾಲೇ ಅಪಶ್ಯಂ ಪಕ್ಷಿಣಂ ಪರಂ ।
ಹಾರಕುಂದೇಂದು ಸಂಕಾಶಂ ಬಕಂ ಗೋಕ್ಷೀರಪಾಂಡುರಂ ॥ ೩ ॥
ತತೋಽಹಂ ವಿಸ್ಮಯಾವಿಷ್ಟಸ್ತಂ ಬಕಂ ಸಮುದೀಕ್ಷ್ಯ ವೈ ।
ಅಸ್ಮಿನ್ಮಹಾರ್ಣವೇ ಘೋರೇ ಕುತೋಽಯಂ ಪಕ್ಷಿಸಂಭವಃ ॥ ೪ ॥
ತರನ್ಬಾಹುಭಿರಶ್ರಾಂತಸ್ತಂ ಬಕಂ ಪ್ರತ್ಯಭಾಷಿಷಿ ।
ಪಕ್ಷಿರೂಪಂ ಸಮಾಸ್ಥಾಯ ಕಸ್ತ್ವಮೇಕಾರ್ಣವೀಕೃತೇ ॥ ೫ ॥

---

## ಕನ್ನಡದ ಅನುವಾದ

### ಬಕಕಲ್ಪಸಮುದ್ಭವವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಪುನಃ ಪ್ರಳಯದಲ್ಲಿ ಲೋಕವೆಲ್ಲವೂ ನೀರಿನಿಂದಾವೃತವಾಗಿ ನಷ್ಟವಾಗಲು ಆ ಮಹಾಸಮುದ್ರದ ಮಧ್ಯದಲ್ಲಿ ನಾನು ಕೈಗಳಿಂದ ಈಜಿಕೊಂಡು ಹೋಗುತ್ತಿದ್ದೆನು.

೨. ಯುಧಿಷ್ಠಿರನೆ! ಇಂತು ದೇವಮಾನದ ಒಂದುನೂರು ವರ್ಷಗಳು ಕಳೆಯಲು ನಾನು ಆಯಾಸಗೊಂಡು ಸಂಸಾರಸಮುದ್ರದಿಂದ ಕಡೆಹಾಯಿಸುವ ಮಹಾದೇವನನ್ನು ಧ್ಯಾನಮಾಡಲು ಪ್ರಾರಂಭಿಸಿದೆನು.

೩. ಧ್ಯಾನಿಸುತ್ತಿದ್ದಂತೆಯೇ ಪೂರ್ಣಚಂದ್ರನನ್ನೂ, ಹಸುವಿನ ಹಾಲನ್ನೂ ಹೋಲುವ ಬೆಳ್ಳಗಿರುವ ಸರ್ವಶ್ರೇಷ್ಠವಾದ ಬಕಪಕ್ಷಿಯೊಂದನ್ನು ಕಂಡೆನು.

೪. ಆ ಬಕನನ್ನು ಕಂಡು ನಾನು, "ಭಯಂಕರವಾದ ಈ ಮಹಾಸಮುದ್ರದಲ್ಲಿ ಈ ಪಕ್ಷಿಯುಂಟಾದುದು ಹೇಗೆ?" ಎಂದು ವಿಸ್ಮಯಾವಿಷ್ಟಚೇತನನಾದೆನು.

೫. ಬಾಹುಗಳಿಂದ ಅದರ ಸಮೀಪಕ್ಕೆ ಈಜಿಕೊಂಡು ಹೋಗಿ ಆ ಬಕನನ್ನು ಮಾತನಾಡಿಸಿದೆನು. "ಜಗತ್ತೆಲ್ಲವೂ ಒಂದೇ ಸಮುದ್ರವಾಗಿರಲು ಪಕ್ಷಿರೂಪವನ್ನು ತಾಳಿ ಸಂಚರಿಸುತ್ತಿರುವ ನೀನು ಯಾರು ?

ಭ್ರಮಸೇ ದಿವ್ಯಯೋಗಾತ್ಮನ್ಮೋಹಯನ್ನಿವ ಮಾಂ ಪ್ರಭೋ ।
ಏತತ್ಕಥಯ ಮೇ ಸರ್ವಂ ಯೋಽಸಿ ಸೋಽಸಿ ನಮೋಽಸ್ತು ತೇ ॥ ೬ ॥
ಸೋಽಬ್ರವೀನ್ಮಾಂ ಮಹಾದೇವೋ ಬ್ರಹ್ಮಾಽಹಂ ವಿಷ್ಣುರೇವ ಚ ।
ಜಗತ್ಸರ್ವಂ ಮಯಾ ವತ್ಸ ಸಂಹೃತಂ ಕಿಂ ನ ಬುಧ್ಯಸೇ ॥ ೭ ॥
ತವ ಮಾತಾ ಪಿತಾಽಹಂ ವೈ ವಿಶ್ವಸ್ಯ ಚ ಮಹಾಮುನೇ ।
ಕಾರುಣ್ಯಂ ಮಮ ಸಂಜಾತಂ ದೃಷ್ಟ್ವಾ ಮಗ್ನಂ ಮಹಾರ್ಣವೇ ॥ ೮ ॥
ಪಕ್ಷಿರೂಪಂ ಸಮಾಸ್ಥಾಯ ಅತೋಽತ್ರಾಽಹಂ ಸಮಾಗತಃ ।
ಕಿಮರ್ಥಮಾತುರೋ ಭೂತ್ವಾ ಭ್ರಮಸೀತ್ಥಂ ಮಹಾರ್ಣವೇ ॥ ೯ ॥
ಶೀಘ್ರಂ ಪ್ರವಿಶ ಮತ್ಪಕ್ಷೌ ಯೇನ ವಿಶ್ರಮಸೇ ದ್ವಿಜ ।
ಏವಮುಕ್ತ ಸ್ತತಸ್ತೇನ ದೇವೇನಾಽಹಂ ನರೇಶ್ವರ ॥ ೧೦ ॥
ತತೋಽಹಂ ತಸ್ಯ ಪಕ್ಷಾಂತೇ ಪ್ರಲೀನಸ್ತು ಭ್ರಮಂಜಲೇ ।
ಕಾಲೇ ಯುಗಸಹಸ್ರಾಂತೇ ಅಶ್ರಾಂತೋಽರ್ಣವಮಧ್ಯಗಃ ॥ ೧೧ ॥
ತತಃ ಶೃಣೋಮಿ ಸಹಸಾ ದಿಕ್ಷು ಸರ್ವಾಸು ಸುವ್ರತ ।
ಕಿಂಚಿನ್ನೂಪುರಸಂಮಿಶ್ರಮದ್ಭುತಂ ಶಬ್ದಮುತ್ತಮಂ ॥ ೧೨ ॥

---

೬. ದೇವಮಾಯೆಯೊಡಗೂಡಿದ ಎಲೈ ಸ್ವಾಮಿಯೆ! ನನ್ನನ್ನು ಮೋಹೆಗೊಳಿಸುತ್ತಿರುವಂತೆ ತೋರುತ್ತ ತಿರುಗುತ್ತಿರುವೆ. ನಿನ್ನ ವೃತ್ತಾಂತವನ್ನೆಲ್ಲ ನನಗೆ ತಿಳಿಸು. ನೀನು ಯಾರೇ ಆಗಿದ್ದರೂ ನಿನ್ನನ್ನು ನಮಸ್ಕರಿಸುವೆನು."

೭. ಆ ಮಹಾದೇವನು ನನ್ನನ್ನು ಕುರಿತು ಇಂತೆಂದನು. "ವತ್ಸ! ನಾನೇ ಬ್ರಹ್ಮನು. ನಾನೇ ಮಹಾವಿಷ್ಣುವು. ಈ ಜಗತ್ತೆಲ್ಲವೂ ನನ್ನಿಂದಲೇ ಕೊನೆಗಾಣಿಸಲ್ಪಟ್ಟಿತೆಂಬುದನ್ನು ನೀನು ತಿಳಿಯಲಿಲ್ಲವೆ?

೮. ಮಹಾಮುನಿಯೆ! ನಾನೇ ನಿನಗೂ ಈ ಪ್ರಪಂಚಕ್ಕೂ ತಾಯಿಯೂ ತಂದೆಯೂ ಆಗಿರುವೆನು. ನೀನು ಮಹಾ ಸಮುದ್ರದಲ್ಲಿ ಮುಳುಗುತ್ತಿದ್ದುದನ್ನು ನೋಡಿ ನನಗೆ ಅನುಕಂಪವುಂಟಾಯಿತು.

೯. ಆದುದರಿಂದಲೇ ಪಕ್ಷಿರೂಪವನ್ನು ಧರಿಸಿ ಇಲ್ಲಿಗೆ ಬಂದಿರುವೆನು. ಭ್ರಾಂತನಾಗಿ ನೀನೇಕೆ ಈ ಸಮುದ್ರದಲ್ಲಿ ಭ್ರಮಿಸುತ್ತಿರುವೆ?

೧೦-೧೧. ಅಯ್ಯಾ ಬ್ರಾಹ್ಮಣನೆ! ನೀನು ಬೇಗ ನನ್ನರೆಕ್ಕೆಗಳನ್ನಾಶ್ರಯಿಸಲು ವಿಶ್ರಾಂತಿಯನ್ನು ಪಡೆಯುವೆ." ರಾಜೇಂದ್ರನೆ! ಇಂತು ಮಹಾದೇವನು ನನಗೆ ಹೇಳಿದನು. ಆಗ ನಾನು ಜಲದಲ್ಲಿ ಚರಿಸುವುದನ್ನು ಬಿಟ್ಟು ಆ ಪಕ್ಷಿಯ ಗರಿಗಳ ಮಧ್ಯದಲ್ಲಿ ಅಡಗಿಕೊಂಡೆನು. ಇಂತು ಸಾವಿರ ಯುಗಗಳು ಕಳೆದರೂ ಸಮುದ್ರ ಮಧ್ಯದಲ್ಲಿ ನನಗೆ ಆಯಾಸವಾಗಲಿಲ್ಲ.

೧೨. ಬಳಿಕ ಹತ್ತು ದಿಕ್ಕುಗಳಲ್ಲಿಯೂ ಅಕಸ್ಮಾತ್ತಾಗಿ ಕಾಲಂದಿಗೆಗಳ ಝಣತ್ಕಾರದಿಂದ ಮಿಶ್ರಿತವಾದ ಮಧುರಧ್ವನಿಯನ್ನು ಕೇಳಿದೆನು.

ತದಾರ್ಣವಜಲಂ ಸರ್ವಂ ಸಂಕ್ಷಿಪ್ತಂ ಸಹಸಾಽಭವತ್ ।
ಕಿಮೇತದಿತಿ ಸಂಚಿಂತ್ಯ ದಿಶಃ ಸಮವಲೋಕಯಂ ॥ ೧೩ ॥
ದಶಕನ್ಯಾಸ್ತತೋ ದಿಕ್ಷು ಆಗತಾಶ್ಚ ಮಹಾರ್ಣವೇ ।
ವಸ್ತ್ರಾಲಂಕಾರಸಹಿತಾ ದಿಗ್ಭ್ಯೋ ನೂಪುರಭೂಷಿತಾಃ ॥ ೧೪ ॥
ಕಾಚಿಚ್ಚಂದ್ರಸಮಾಭಾಸಾ ಕಾಚಿದಾದಿತ್ಯಸಪ್ರಭಾ ।
ಕಾಚಿದಂಜನಪುಂಜಾಭಾ ಕಾಚಿದ್ರಕ್ತೋತ್ಪಲಪ್ರಭಾ ॥ ೧೫ ॥
ನಾನಾರೂಪಧರಾ ಸೌಮ್ಯಾ ನಾನಾಭರಣಭೂಷಿತಾ ।
ಅರ್ಘ್ಯಪಾದ್ಯಾದಿಭಿರ್ಮಾಲ್ಯೈರ್ಬಕಮಭ್ಯರ್ಚ್ಯ ಸುವ್ರತಾಃ ॥ ೧೬ ॥
ತತಸ್ತಂ ಪರ್ವತಾಕಾರಂ ಗುಹ್ಯಂ ಪಕ್ಷಿಣಮವ್ಯಯಂ ।
ಪ್ರವಿವೇಶ ಮಹಾಘೋರಂ ಪರ್ವತೋಹ್ಯರ್ಣವಂ ಸ್ವರಾಟ್ ॥ ೧೭ ॥
ಯೋಜನಾನಾಂ ಸಹಸ್ರಾಣಿ ತಾವಂತ್ಯೇವ ಶತಾನಿ ಚ ।
ತ್ರಿಂಶದ್ಯೋಜನಸಾಹಸ್ರಂ ಯಾವದ್ಭೂಮಂಡಲಂ ಕ್ಷಿತಿ ॥ ೧೮ ॥
ತತೋ ಭೂಮಂಡಲಂ ದಿವ್ಯಂ ಪಂಚರತ್ನಸಮಾಕುಲಂ ।
ದಿವ್ಯಸ್ಫಟಿಕಸೋಪಾನಂ ರುಕ್ಮಸ್ತಂಭಮನೋರಮಂ ॥ ೧೯ ॥

---

೧೩. ಆಗ ಸಮುದ್ರಜಲವೆಲ್ಲವೂ ಒಮ್ಮೆಯೇ ಸಂಕೋಚವನ್ನು ಹೊಂದಲು ಇದೇನೆಂದು ಯೋಚಿಸುತ್ತ ದಿಕ್ಕುಗಳೆಲ್ಲವನ್ನೂ ನೋಡಿದೆನು.

೧೪. ಹತ್ತು ದಿಕ್ಕುಗಳಿಂದಲೂ ನೂಪುರಗಳಿಂದಲಂಕೃತರಾದ ಹತ್ತು ಕನ್ಯೆಯರು ವಸ್ತ್ರಭೂಷಣಾನ್ವಿತರಾಗಿ ಸಮುದ್ರ ಮಧ್ಯಪ್ರದೇಶಕ್ಕೆ ಬಂದರು.

೧೫. ಕೆಲವರು ಚಂದ್ರನನ್ನು ಹೋಲುವ ಮೈಬಣ್ಣದವರೂ, ಕೆಲವರು ಸೂರ್ಯಸಮಾನರೂ, ಆಗಿದ್ದರು. ಒಬ್ಬಳು ಅಂಜನದಂತೆ ಕಪ್ಪುಬಣ್ಣದವಳೂ, ಒಬ್ಬಳು ನೀಲರಕ್ತಮಿಶ್ರವರ್ಣದವಳೂ ಆಗಿದ್ದರು.

೧೬. ನಾನಾ ರೂಪಗಳನ್ನುತಾಳಿ ಬಹು ವಿಧಗಳಾದ ಆಭರಣಗಳಿಂದೊಪ್ಪುತಿದ್ದ ಅವರು ಅರ್ಘ್ಯಪಾದ್ಯಗಳಿಂದಲೂ, ಕುಸುಮ ಮಾಲೆಗಳಿಂದಲೂ ಆ ಬಕನನ್ನು ಪೂಜಿಸಿದರು.

೧೭–೧೮. ಆಗ ಪರ್ವತಾಕಾರವೂ, ಏಕಾಂತವೂ, ಅನಂತವೂ ಆದ ಆ ಪಕ್ಷಿಯು ಬಳಿಯಲ್ಲಿ ತೇಜೋಮಯವಾದ ಮಹಾಪರ್ವತವೊಂದು ಘೋರ ಸಮುದ್ರವನ್ನು ಪ್ರವೇಶಿಸಿತು. ಅದು ಸಾವಿರದ ನೂರು ಯೋಜನಗಳ ಅಗಲವೂ, ಮುವ್ವತ್ತುಸಾವಿರ ಯೋಜನಗಳ ಉದ್ದವೂ ಆದ ಭೂಮಂಡಲವೆನಿಸಿದ್ದಿತು.

೧೯. ದಿವ್ಯವಾದ ಈ ಭೂಮಂಡಲವು ಪಂಚರತ್ನಗಳಿಂದಲಂಕೃತವಾಗಿ ಹೊಳೆಯುವ ಸ್ಫಟಿಕದ ಮೆಟ್ಟಲುಗಳಿಂದಲೂ ಬೆಳ್ಳಿಯ ಕಂಬಗಳಿಂದಲೂ ಮನೋಹರವಾಗಿದ್ದಿತು.

ಯೋಜನಾನಾಂ ಸಹಸ್ರಂ ತು ವಿಸ್ತರಾದ್ದ್ವಿಗುಣಾಯತಂ ।
ವಾಪೀಕೂಪಸಮಾಕೀರ್ಣಂ ಪ್ರಾಸಾದಾಟ್ಟಾಲಕಾವೃತಂ ॥ ೨೦ ॥
ಕಲ್ಪವೃಕ್ಷಸಮಾಕೀರ್ಣಂ ಧ್ವಜಯಷ್ಟಿವಿಭೂಷಿತಂ ।
ತಸ್ಮಿನ್ಪುರವರೇ ರಮ್ಯೇ ನಾನಾರತ್ನೋಪಶೋಭಿತಂ ॥ ೨೧ ॥
ತಥಾಽನ್ಯಚ್ಚ ಪುರಂ ರಮ್ಯಂ ಪತಾಕೋಜ್ಜ್ವಲವೇದಿಕಂ ।
ಶತಯೋಜನವಿಸ್ತೀರ್ಣಂ ತಾವದ್ದ್ವಿಗುಣಮಾಯತಂ ॥ ೨೨ ॥
ಪುರಮಧ್ಯೇ ತತಸ್ತಸ್ಮಿನ್ನದೀಪರಮಶೋಭನಾ ।
ಮಹತೀ ಪುಣ್ಯಸಲಿಲಾ ನಾನಾರತ್ನಶಿಲಾ ತಥಾ ॥ ೨೩ ॥
ತಸ್ಯಾಸ್ತೀರೇ ಮಯಾ ದೃಷ್ಟಂ ತಡಿತ್ಸೂರ್ಯಸಮಪ್ರಭಂ ।
ಇಂದ್ರನೀಲಮಹಾನೀಲೈಶ್ಚಿತ್ರಂ ರತ್ನೈಃ ಸಮಂತತಃ ॥ ೨೪ ॥
ಕ್ವಚಿದ್ವಹ್ನಿಸಮಾಕಾರಂ ಕ್ವಚಿದಿಂದ್ರಾಯುಧಪ್ರಭಂ ।
ಕ್ವಚಿದ್ಧೂಮ್ರಂ ಕ್ವಚಿತ್ಪೀತಂ ಕ್ವಚಿದ್ರಕ್ತಂ ಕ್ವಚಿತ್ಸಿತಂ ॥ ೨೫ ॥
ನಾನಾವರ್ಣೈಃ ಸಮಾಯುಕ್ತಂ ಲಿಂಗಮದ್ಭುತದರ್ಶನಂ ।
ಬ್ರಹ್ಮವಿಷ್ಣ್ವಿಂದ್ರಸಾಧ್ಯೈಶ್ಚ ಸಮಂತಾತ್ಪರಿವಾರಿತಂ ॥ ೨೬ ॥

---

೨೦. ಅದರ ಮಧ್ಯದಲ್ಲಿ ಪಟ್ಟಣವೊಂದಿದ್ದಿತು. ಅದು ಒಂದು ಸಾವಿರ ಯೋಜನದಗಲವೂ, ಎರಡರಷ್ಟು ಉದ್ದವೂ ಉಳ್ಳದ್ದಾಗಿ ಬಾವಿಕೊಳಗಳಿಂದಲೂ, ಮಹಡಿ ಮೇಡುಗಳಿಂದಲೂ ಕೂಡಿದ್ದಿತು.

೨೧–೨೨. ಕಲ್ಪವೃಕ್ಷಗಳಿಂದ ಸಿಬಿಡಿತವಾಗಿ ಅರುವತ್ತು ಧ್ವಜಗಳಿಂದ ಭೂಷಿತವಾದ ಆ ಸುಂದರ ನಗರದಲ್ಲಿ ನಾನಾ ರತ್ನಮಂಡಿತವಾದ ಮತ್ತೊಂದು ಪುರವಿದ್ದಿತು. ಪತಾಕೆಗಳಿಂದ ಶೋಭಿಸುವ ವೇದಿಕೆಗಳಿಂದೊಪ್ಪುವ ಅದು ನೂರು ಯೋಜನಗಳ ಅಗಲವೂ, ಎರಡು ನೂರು ಗಾವುದಗಳ ಉದ್ದವೂ ಉಳ್ಳದ್ದಾಗಿದ್ದಿತು.

೨೩. ಆ ಪಟ್ಟಣದ ಮಧ್ಯದಲ್ಲಿಯೇ ಪರಮ ಮಂಗಳಪ್ರದವೂ, ನಿರ್ಮಲ ಜಲಭರಿತವೂ, ವಿಚಿತ್ರಶಿಲಾರಂಜಿತವೂ ಆದ ನದಿಯು ಪ್ರವಹಿಸುತ್ತಿದ್ದಿತು.

೨೪. ಅದರ ತೀರದಲ್ಲಿ ನಾನೊಂದು ಸೂರ್ಯಸಮಾನ ತೇಜಸ್ಸಿನ ಮಿಂಚಿನ ಬಳ್ಳಿಯಂತಿದ್ದ ಪದಾರ್ಥವನ್ನು ಕಂಡೆನು. ಅದರ ಸುತ್ತಲೂ ಇಂದ್ರನೀಲ ಮಹಾರತ್ನಗಳು ಪಸರಿಸಿದ್ದುವು.

೨೫–೨೬. ಒಂದೊಂದೆಡೆಯಲ್ಲಿ ಅದು ಅಗ್ನಿಯನ್ನೂ, ವಜ್ರಾಯುಧವನ್ನೂ ಹೋಲುತ್ತ ಕಪ್ಪಾಗಿಯೂ, ಹಳದಿಯಾಗಿಯೂ, ಕೆಂಪಾಗಿಯೂ, ಬೆಳ್ಳಗೂ ಕಾಣುತ್ತಿದ್ದಿತು. ನಾನಾ ವರ್ಣಗಳಿಂದ ಕೂಡಿದಂತಿದ್ದ ಅದ್ಭುತವಾದ ಈ ಲಿಂಗದ ಸುತ್ತಲೂ ಬ್ರಹ್ಮ ವಿಷ್ಣು ಮಹೇಂದ್ರರೂ, ಸಾಧ್ಯರೂ ಗುಂಪುಗೂಡಿದ್ದರು.

ನಂದೀಶ್ವರ ಗಣಾಧ್ಯಕ್ಷೈಶ್ಚೇಂದ್ರಾದಿತ್ಯೈಶ್ಚ ತದ್ವೃತಂ ।
ಪಶ್ಯಾಮಿ ಲಿಂಗಮೀಶಾನಂ ಮಹಾಲಿಂಗಂ ತಮೇವ ಚ ॥ ೨೭ ॥
ಪರಿವಾರ್ಯ ತತಸ್ತಂ ತು ಪ್ರಸುಪ್ತಾನ್ದೇವದಾನವಾನ್ ।
ನಿಮೀಲಿತಾಕ್ಷಾನ್ಪಶ್ಯಾಮಿ ದಿವ್ಯಾಭರಣಭೂಷಿತಾನ್ ॥ ೨೮ ॥
ತತಸ್ತಾಃ ಪದ್ಮಪತ್ರಾಕ್ಷ್ಯೋ ನಾರ್ಯಃ ಪರಮಸಮ್ಮತಾಃ ।
ನದ್ಯಾಸ್ತಸ್ಯಾ ಜಲೇ ಸ್ನಾತ್ವಾ ದಿವ್ಯಪುಷ್ಪೈರ್ಮನೋರಮೈಃ ॥ ೨೯ ॥
ದತ್ವಾಽರ್ಘ್ಯಪಾದ್ಯಂ ವಿಧಿವಲ್ಲಿಂಗಸ್ಯ ಸಹಪಕ್ಷಿಣಾ ।
ಅರ್ಚಯಂತೀರ್ವರಾರೋಹಾ ದಶ ತಾಃ ಪ್ರಮದೋತ್ತಮಾಃ ॥ ೩೦ ॥
ತತಸ್ತ್ವಭ್ಯರ್ಥ್ಯ ತಲ್ಲಿಂಗಂ ತಸ್ಮಿನ್ನೇವ ಪುರೋತ್ತಮೇ ।
ಸರ್ವಾ ಅದರ್ಶನಂ ಜಗ್ಮುರ್ವಿದ್ಯುತೋಽಭ್ರಗಣೇಷ್ವಿವ ॥ ೩೧ ॥
ನ ಚಾಽಸೌ ಪಕ್ಷಿರಾಟ್ ತಸ್ಮಿನ್ ನ ಸ್ತ್ರಿಯೋ ನ ಚ ದೇವತಾಃ ।
ತದೇವೈಕಂ ಸ್ಥಿತಂ ಲಿಂಗಮರ್ಚಯನ್ವಿಸ್ಮಯಾನ್ವಿತಃ ॥ ೩೨ ॥
ತತೋಽಹಂ ದುಃಖಮೂಢಾತ್ಮಾ ರುದ್ರಮಾಯೇತಿ ಚಿಂತಯನ್ ।
ತತಃ ಕನ್ಯಾಃ ಸಮುತ್ತಸ್ಥುರ್ದಿವ್ಯಾಂಬರವಿಭೂಷಣಾಃ ॥ ೩೩ ॥

---

೨೭. ಮತ್ತು ನಂದಿಕೇಶನೂ, ಗಣನಾಯಕರೂ, ಚಂದ್ರಸೂರ್ಯರೂ ಸಹ ಆ ಮಾಹೇಶ್ವರ ಮಹಾಲಿಂಗವನ್ನು ಬಳಸಿ ನಿಂತಿದ್ದುದನ್ನು ಕಂಡೆನು.

೨೮. ಬಳಿಕ ಅದರ ಸುತ್ತಲೂ ಕಣ್ಣುಗಳನ್ನು ಮುಚ್ಚಿಕೊಂಡು ನಿದ್ದೆ ಮಾಡುತ್ತಿದ್ದ ದಿವ್ಯಾಲಂಕಾರಮಂಡಿತರಾದ ದೇವದಾನವ ಸಮೂಹವನ್ನೂ ನೋಡಿದೆನು.

೨೯. ಆ ಪದ್ಮಲೋಚನೆಯರು ಸರ್ವಾಂಗಸುಂದರಿಯರಾಗಿ ಆ ನದಿಯ ಜಲದಲ್ಲಿ ಸ್ನಾನವನ್ನು ಮಾಡಿ ದಿವ್ಯಗಳೂ ಮನೋಹರಗಳೂ ಆದ ಪುಷ್ಪಗಳನ್ನು ಹಿಡಿದು ಬಂದರು.

೩೦. ಆ ಹತ್ತು ಮಂದಿ ಸುಂದರಾಂಗಿಯರೂ ಅರ್ಘ್ಯಪಾದ್ಯಾದಿಗಳನ್ನಿತ್ತು ಆ ಬಕಪಕ್ಷಿಯೊಡಗೂಡಿ ವಿಧಿವಿಹಿತವಾದ ಪೂಜೆಯನ್ನು ಲಿಂಗಕ್ಕೆ ಸಲ್ಲಿಸಿದರು.

೩೧. ಇಂತು ಆ ಲಿಂಗದ ಪೂಜೆಯನ್ನು ಮುಗಿಸಿಕೊಂಡು ಆ ಲಲನೆಯರು ಮೇಘಜಾಲದಲ್ಲಿ ಅಡಗುವ ಮಿಂಚುಗಳಂತೆ ಆ ನಗರದಲ್ಲಿಯೇ ಅದೃಶ್ಯರಾದರು.

೩೨. ಆ ಪಕ್ಷಿರಾಜನಾಗಲಿ, ಸ್ತ್ರೀಯರಾಗಲಿ, ದೇವತೆಗಳಾಗಲಿ ಕಾಣದಿರಲು ನಾನು ವಿಸ್ಮಯಗೊಂಡು ಆ ಲಿಂಗವನ್ನೇ ಪೂಜಿಸುತ್ತ ನಿಂತೆನು.

೩೩. ಆಗ ಇದೆಲ್ಲವೂ ರುದ್ರಮಾಯೆಯೆಂಬುದನ್ನು ತಿಳಿದು ನಾನು ಅತ್ಯಂತ ದುಃಖದಿಂದ ಮೂಢನಂತೆ ನಿಂತಿರಲು ಪುನಃ ಆ ಕನ್ಯೆಯರು ದಿವ್ಯವಸ್ತ್ರಾಭರಣ ಸಹಿತರಾಗಿ ಕಾಣಿಸಿಕೊಂಡರು.

ಭಾಸಯಂತ್ಯೋ ಜಗತ್ಸರ್ವಂ ವಿದ್ಯುತೋಽಭ್ರಗಣಾನಿವ ।
ಪದ್ಮೈರ್ಹಿರಣ್ಮಯೈರ್ದಿವ್ಯೈರರ್ಚಯಿತ್ವಾ ಶುಭಾನನಾಃ ॥ ೩೪ ॥
ವಿವಿಶುಸ್ತಜ್ಜಲಂ ಕ್ಷಿಪ್ರಂ ಸಮಂತಾದ್ವರಭೂಷಣಾಃ ।
ತಸ್ಮಿನ್ಪುರವರೇ ಚಾಽನ್ಯೇ ತಾಮೇವಾಽಹಂ ಪುನಃ ಪುನಃ ॥ ೩೫ ॥
ಪಶ್ಯಾಮಿ ಹ್ಯಮರಾಂ ಕನ್ಯಾಂ ಅರ್ಚಯಂತೀಂ ಮಹೇಶ್ವರಂ ।
ತತೋಽಹಂ ತಾಂ ವರಾರೋಹಾಮಪೃಚ್ಛಂ ಕಮಲೇಕ್ಷಣಾಂ ॥ ೩೬ ॥
ಕಾತ್ವಮಸ್ಮಿನ್ಪುರೇ ದೇವಿ ವಸಸೇ ಶಿವಮರ್ಚತೀ ।
ತಾಶ್ಚಾಗತಾಸ್ತ್ರಿಯಃ ಸರ್ವಾಃ ಕ್ವ ಗತಾಸ್ತೇ ಗಣೇಶ್ವರಾಃ ॥ ೩೭ ॥
ನಮೋಽಸ್ತು ತೇ ಮಹಾಭಾಗೇ ಬ್ರೂಹಿ ಪುಣ್ಯೇ ಮಹೇಶ್ವರಿ ।
ತವ ಪ್ರಸಾದಾದ್ವಿಜ್ಞಾತುಮೇತದಿಚ್ಛಾಮಿ ಸುವ್ರತೇ ।
ದಯಾಂ ಕೃತ್ವಾ ಮಹಾದೇವಿ ಕಥಯಸ್ವ ಮಮಾಽನಘೇ ॥ ೩೮ ॥

ಸ್ತ್ರ್ಯುವಾಚ :—

ವಿಸ್ಮೃತಾಽಹಂ ಕಥಂ ವಿಪ್ರ ದೃಷ್ಟ್ವಾ ಕಲ್ಪೇ ಪುರಾತನೇ ।
ಮಾ ತೇಽಭೂತ್ ಸ್ಮೃತಿವಿಭ್ರಂಶಃ ಸಾ ಚಾಽಹಂ ಕಲ್ಪವಾಹಿನೀ ॥ ೩೯ ॥

---

೩೪. ಅವರು, ಮಿಂಚುಗಳು ಮೇಘರಾಜಿಗಳನ್ನು ಬೆಳಗಿಸುವಂತೆ ಲೋಕವನ್ನೆಲ್ಲ ಬೆಳಗಿಸುತ್ತ ದಿವ್ಯವಾದ ಚಿನ್ನದ ಕಮಲಗಳಿಂದ ಮತ್ತೆ ಆ ಶಿವಲಿಂಗವನ್ನು ಪೂಜಿಸಿದರು.

೩೫. ಬಳಿಕ ಅವರೆಲ್ಲರೂ ಆ ನದಿಯ ಜಲದಲ್ಲಿಳಿದು ಹೊರಟುಹೋದರು. ಆ ನಗರಿಯಲ್ಲಿ ಮತ್ತೊಂದು ನಗರವಿದ್ದು ಅದರಲ್ಲಿ ಒಬ್ಬಳೇ ಕನ್ನೆಯನ್ನು ಮತ್ತೆ ಮತ್ತೆ ನೋಡಿದೆನು.

೩೬. ಪರಮೇಶ್ವರನನ್ನು ಪೂಜಿಸುತ್ತಿರುವ ಆ ಕನ್ಯೆಯನ್ನು ಕಂಡು ದಿವ್ಯಸುಂದರಿಯೂ ಕಮಲನಯನೆಯೂ ಆದ ಆಕೆಯನ್ನು ಕೇಳಿದೆನು.

೩೭. "ಎಲೌ ದೇವಿಯೆ! ಶಿವಪೂಜಾನಿರತಳಾಗಿ ಈ ಪಟ್ಟಣದಲ್ಲಿ ವಾಸಿಸುತ್ತಿರುವ ನೀನು ಯಾರು? ಹಿಂದೆ ನೋಡಿದ ಆ ಸ್ತ್ರೀಯರೂ ಗಣನಾಯಕರೂ ಎಲ್ಲರೂ ಎಲ್ಲಿಗೆ ಹೊರಟುಹೋದರು?

೩೮. ಮಹಾಭಾಗ್ಯಶಾಲಿನಿಯೆ! ಪುಣ್ಯವಂತಳೆ! ನಿನ್ನನ್ನು ನಮಸ್ಕರಿಸುವೆನು. ನಿನ್ನ ವಿಷಯವನ್ನು ತಿಳಿಸು. ನಿನ್ನ ಅನುಗ್ರಹದಿಂದ ಇದೆಲ್ಲವನ್ನೂ ತಿಳಿಯಲಪೇಕ್ಷಿಸುತ್ತೇನೆ. ನನ್ನಲ್ಲಿ ದಯೆಮಾಡಿ ನನಗೆ ಹೇಳುವವಳಾಗು."

೩೯. ಸ್ತ್ರೀಯು ಹೇಳುತ್ತಾಳೆ:—ಬ್ರಾಹ್ಮಣನೆ! ಹಿಂದಿನ ಕಲ್ಪದಲ್ಲಿ ನೀನು ನನ್ನನ್ನು ನೋಡಿದ್ದರೂ ಈಗ ಮರೆತುಬಿಟ್ಟೆಯಲ್ಲವೆ? ನಿನಗೆ ಚಿತ್ತಭ್ರಮಣೆಯುಂಟಾಗದಿರಲಿ. ನಾನು ಕಲ್ಪಾಂತರಗಳಿಂದಿರುವವಳೇ ಆಗಿರುವೆನು.

ನರ್ಮದಾ ನಾಮ ವಿಖ್ಯಾತಾ ರುದ್ರದೇಹಾದ್ವಿನಿಃಸೃತಾ ।
ಯಾಸ್ತಾಃ ಕನ್ಯಾಸ್ತ್ವಯಾ ದೃಷ್ಟಾಹ್ಯರ್ಚಯಂತ್ಯೋ ಮಹೇಶ್ವರಂ ॥೪೦॥
ಯಾಭಿಸ್ತ್ವಿಹ ಸಮಾನೀತಃ ಪಕ್ಷಿರಾಜಸಮನ್ವಿತಾಃ ।
ದಿಶಸ್ತಾ ವಿದ್ಧಿ ಸರ್ವೇಶಾಃ ಸರ್ವಾಸ್ತ್ವಂ ಮುನಿಸತ್ತಮ ॥ ೪೧ ॥
ತಿರ್ಯಕ್ಪಕ್ಷಿಸ್ವರೂಪೇಣ ಮಹಾಯೋಗೀ ಮಹೇಶ್ವರಃ ।
ಏಭಿಃ ಶಿವಪುರಾದ್ವಿಪ್ರ ಆನೀತಃ ಸ ಮಹೇಶ್ವರಃ ॥ ೪೨ ॥
ಸೈಷ ದೇವೋ ಮಹಾದೇವೋ ಲಿಂಗಮೂರ್ತಿರ್ವ್ಯವಸ್ಥಿತಃ ।
ಅರ್ಚ್ಯತೇ ಬ್ರಹ್ಮವಿಷ್ಣ್ವಿಂದ್ರೈಃ ಸುರಾಸುರಜಗದ್ಗುರುಃ ॥ ೪೩ ॥
ಲಯಮಾಯಾತಿ ಯಸ್ಮಾದ್ಧಿ ಜಗತ್ಸರ್ವಂ ಚರಾಚರಂ ।
ತೇನ ಲಿಂಗಮಿತಿ ಪ್ರೋಕ್ತಂ ಪುರಾಣಜ್ಞೈರ್ಮಹರ್ಷಿಭಿಃ ॥ ೪೪ ॥
ತೇನ ದೇವಗಣಾಃ ಸರ್ವೇ ಸಂಕ್ಷಿಪ್ತಾ ಮಾಯಯಾ ಪುರಾ ।
ಪುಳಿನಾಶ್ಚೈವ ಲೋಕೇಶ ನ ದೃಶ್ಯಂತೇ ಹಿ ಸಾಂಪ್ರತಂ ॥ ೪೫ ॥
ಪುನರ್ದೃಶ್ಯಾ ಭವಿಷ್ಯಂತಿ ಸೃಜಮಾನಾಃ ಸ್ವಯಂಭುವಾ ।
ಸಾಽಹಂ ಲಿಂಗಾರ್ಚನಪರಾ ನರ್ಮದಾ ನಾಮ ನಾಮತಃ ॥ ೪೬ ॥

---

೪೦. ಮಹೇಶ್ವರನ ದೇಹದಿಂದ ಹೊರಟು ಬಂದು ನರ್ಮದೆಯೆಂದು ವಿಖ್ಯಾತಳಾದವಳೇ ನಾನು. ಮಹೇಶ್ವರಲಿಂಗವನ್ನು ಪೂಜಿಸುತ್ತಿದ್ದ ಕನ್ಯೆಯರನ್ನು ನೋಡಿದೆಯಲ್ಲವೆ.

೪೧. ಮುನಿವರ್ಯನೆ! ಯಾರೊಡನೆ ನೀನು ಬಂದೆಯೋ, ಯಾರು ಪಕ್ಷಿ ರಾಜನೊಡನಿದ್ದರೊ, ಆ ಸ್ತ್ರೀಯರೇ ಸರ್ವಶಕ್ತರಾದ ದಿಗ್ದೇವತೆಯರೆಂದು ತಿಳಿ.

೪೨. ಎಲೈ ವಿಪ್ರನೆ! ಕೈಲಾಸದಲ್ಲಿದ್ದ ಮಹಾಯೋಗಿಯಾದ ಪರಮಶಿವ ನನ್ನು ಈ ನಂದಿಕೇಶ್ವರಾದಿ ಗಣನಾಯಕರೇ ಪಕ್ಷಿರೂಪದಿಂದ ಇಲ್ಲಿಗೆ ಕರೆತಂದರು.

೪೩. ಆ ದೇವಾಧಿದೇವನೇ ಲಿಂಗದ ರೂಪದಿಂದ ಇಲ್ಲಿ ನೆಲಸಿರುವನು. ಅಲ್ಲದೆ ದೇವದಾನವರ ಗುರುವೆನಿಸಿ ಬ್ರಹ್ಮ, ವಿಷ್ಣು, ಮಹೇಂದ್ರಾದಿಗಳಿಂದ ಪೂಜೆಯನ್ನು ಕೈಗೊಳ್ಳುತ್ತಿರುವನು.

೪೪. ಚರಾಚರಾತ್ಮಕವಾದ ಬ್ರಹ್ಮಾಂಡವೆಲ್ಲವೂ ಇದರಲ್ಲಿ ಲಯವನ್ನು ಹೊಂದುವುದರಿಂದ ಪುರಾಣನಿಷ್ಣಾತರಾದ ಮಹರ್ಷಿಗಳು ಇದನ್ನು ಲಿಂಗವೆಂದು ಕರೆಯುವರು.

೪೫. ಆತನಿಂದಲೇ ಮಾಯೆಯ ಮೂಲಕವಾಗಿ ದೇವತಾಗಣಗಳೆಲ್ಲರೂ ಸಂಕೋಚಗೊಂಡರು. ಆತನಲ್ಲಿ ಲಯವನ್ನು ಹೊಂದಿದ ಲೋಕಪಾಲಕರೂ ಈಗ ಕಾಣುವುದಿಲ್ಲ.

೪೬. ಬ್ರಹ್ಮದೇವನು ಮತ್ತೆ ಸೃಷ್ಟಿಮಾಡಲು ಕಾಣಿಸಿಕೊಳ್ಳುವರು.

**ಕಾಲಂ ಯುಗಸಹಸ್ರಸ್ಯ ರುದ್ರಸ್ಯ ಪರಿಚಾರಿಕಾ ।**
**ಅಸ್ಯ ಪ್ರಸಾದಾದಮರಾಸ್ತಥಾ ತ್ವಂ ದ್ವಿಜಪುಂಗವ ॥ ೪೭ ॥**
**ಸತ್ಯಾರ್ಜವದಯಾಯುಕ್ತಃ ಸಿದ್ಧೋಽಸಿ ತ್ವಂ ಶಿವಾರ್ಚನಾತ್ ।**
**ಏವಮುಕ್ತ್ವಾ ತು ಸಾ ದೇವೀ ತತ್ರೈವಾಂತರಧೀಯತ ॥ ೪೮ ॥**
**ತಾಃ ಸ್ತ್ರಿಯಃ ಸ ಚ ದೇವೇಶೋ ಬಕರೂಪೋ ಮಹೇಶ್ವರಃ ।**
**ತಸ್ಯಾಸ್ತದ್ವಚನಂ ಶ್ರುತ್ವಾ ಅವತೀರ್ಯ ಮಹಾನದೀಂ ॥ ೪೯ ॥**
**ಸ್ನಾತ್ವಾ ಸಮರ್ಚಯ ತ್ವಂ ಹಿ ವಿಧಿನಾ ಮಂತ್ರಪೂರ್ವಕಂ ।**
**ತತೋಽಹಂ ಸಹಸಾ ತಸ್ಮಾತ್ಸಮುತ್ತೀರ್ಯ ಜಲಾಶಯಾತ್ ॥ ೫೦ ॥**
**ನ ಚ ಪಶ್ಯಾಮಿ ತಲ್ಲಿಂಗಂ ನ ಚ ತಾಂ ನಿಮ್ನಗಾಂ ನೃಪ ।**
**ತದೈವ ಲೋಕಾಸ್ಸಂಜಾತಾಃ ಕ್ಷಿತಿಶ್ಚೈವ ಸಕಾನನಾ ।**
**ಋಕ್ಷಚಂದ್ರಾರ್ಕವಿತತಂ ತದೇವ ಚ ನಭಸ್ತಲಂ ॥ ೫೧ ॥**
**ಯಥಾ ಪೂರ್ವಮದೃಷ್ಟಂ ತು ತಥೈವ ಚ ಪುನಃ ಕೃತಂ ।**
**ನತೋಽಹಂ ಮನಸಾ ದೇವಮಪೂಜಯಂ ಮಹೇಶ್ವರಂ ॥ ೫೨ ॥**

---

ಹಿಂದಿನ ಕಲ್ಪಗಳಲ್ಲಿದ್ದ ನರ್ಮದೆಯೆಂಬ ಹೆಸರಿನವಳೇ ನಾನು. ಆ ನಾನೇ ಈಗ ಲಿಂಗಪೂಜಾನಿರತಳಾಗಿರುವೆನು. ಇಂತು ಒಂದುಸಾವಿರ ಯುಗಗಳ ಕಾಲ ನಾನು ಮಹಾದೇವನ ಪರಿಚಾರಿಕೆಯಾಗಿರುವೆನು.

೪೭. ಎಲೈ ಬ್ರಾಹ್ಮಣೋತ್ತಮನೆ! ಈ ಮಹಾಲಿಂಗದ ಅನುಗ್ರಹದಿಂದಲೇ ನೀನೂ ಮರಣವಿಲ್ಲದವನೂ, ಸತ್ಯ, ಧರ್ಮ, ದಯಾದಿ ಗುಣವಂತನೂ, ಸಿದ್ಧನೂ ಆಗಿರುವೆ.''

೪೮. ಇಂತೆಂದು ಆ ದೇವಿಯು ಹೇಳಲು, ಆಕೆಯೂ, ಆ ಸ್ತ್ರೀಯರೂ, ಬಕರೂಪಧಾರಿಯಾಗಿದ್ದ ಮಹೇಶ್ವರನೂ ಕ್ಷಣಮಾತ್ರದಲ್ಲಿಯೆ ಅದೃಶ್ಯರಾದರು.

೪೯. ''ನೀನೂ ಈ ಮಹಾನದಿಯಲ್ಲಿಳಿದು ಸ್ನಾನಮಾಡಿ ವಿಧ್ಯುಕ್ತರೀತಿಯಿಂದಲೂ, ಮಂತ್ರಸಹಿತವಾಗಿಯೂ ಶಿವಲಿಂಗದ ಪೂಜೆಯನ್ನು ಮಾಡು.'' ಇಂತೆಂದು ಆಕೆಯು ನನಗೆ ಅಪ್ಪಣೆ ಮಾಡಿದಳು.

೫೦. ಆಗ ನಾನು ಸಂಭ್ರಮದಿಂದ ಸಮುದ್ರಮಧ್ಯದಿಂದ ಮೇಲಕ್ಕೆ ಬಂದು ನೋಡಲು, ಆ ಲಿಂಗವಾಗಲಿ ಆ ಮಹಾನದಿಯಾಗಲಿ ಕಾಣಿಸಲಿಲ್ಲ.

೫೧. ಆಗಲೇ ಲೋಕಗಳೂ, ಅರಣ್ಯಸಹಿತವಾದ ಭೂಮಿಯೂ, ನಕ್ಷತ್ರಗಳೂ, ಚಂದ್ರಸೂರ್ಯರೂ, ಹಿಂದಿದ್ದಂತೆ ಆಕಾಶವೂ ಮತ್ತೆ ಹುಟ್ಟಿದುವು.

೫೨. ಹಿಂದೆ ನಾನು ನೋಡಿದ್ದಂತೆಯೇ ಪುನಃ ಸೃಷ್ಟಿಯಾದುದನ್ನು ನೋಡಿ ಮನಸ್ಸಿನಲ್ಲಿಯೇ ಮಹಾದೇವನನ್ನು ನಮಸ್ಕರಿಸಿ ಪೂಜಿಸಿದೆನು.

ಏವಂ ಬಕೇ ಪುರಾ ಕಲ್ಪೇ ಮಯಾ ದೃಷ್ಟೇಯಮವ್ಯಯಾ ।
ನರ್ಮದಾ ಮರ್ತ್ಯಲೋಕಸ್ಯ ಮಹಾಪಾತಕನಾಶಿನೀ ॥ ೫೩ ॥
ತಸ್ಮಾದ್ಧರ್ಮಪರೈರ್ವಿಪ್ರೈಃ ಕ್ಷತ್ರಶೂದ್ರವಿಶಾದಿಭಿಃ ।
ಸದಾ ಸೇವ್ಯಾ ಮಹಾಭಾಗಾ ಧರ್ಮವೃದ್ಧ್ಯರ್ಥಕಾರಿಭಿಃ ॥ ೫೪ ॥
ಯೇಽಪಿ ಭಕ್ತ್ಯಾ ಸಕೃತ್ತ್ರೋಯೇ ನರ್ಮದಾಯಾ ಮಹೇಶ್ವರಂ ।
ಸ್ನಾತ್ವಾಽರ್ಚಯಂತಿ ತೇ ಸರ್ವಂ ಪಾಪಂ ನಾಶ್ಯಂತ್ಯಸಂಶಯಂ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಬಕಕಲ್ಪಸಮುದ್ಭವವರ್ಣನಂ"ನಾಮಾಷ್ಟಮೋಽಧ್ಯಾಯಃ

---

೫೩. ಇಂತು ನಾಶರಹಿತಳೂ, ಮಾನವರ ಮಹಾಪಾತಕಗಳನ್ನು ನಾಶಗೊಳಿಸುವವಳೂ ಆದ ನರ್ಮದೆಯನ್ನು ಹಿಂದೆ ಬಕಕಲ್ಪದಲ್ಲಿ ನಾನು ಕಂಡೆನು.

೫೪. ಆದುದರಿಂದ ಧರ್ಮಪರರೂ, ಧರ್ಮವೃದ್ಧಿಯನ್ನು ಬಯಸುವವರೂ ಆದ ಬ್ರಾಹ್ಮಣರೂ, ಕ್ಷತ್ರಿಯರೂ, ಶೂದ್ರರೂ, ವೈಶ್ಯರೂ ಸರ್ವಕಾಲಗಳಲ್ಲಿಯೂ ಮಹಾ ಪುಣ್ಯಪ್ರದೆಯಾದ ಈ ನದಿಯನ್ನು ಸೇವಿಸಬೇಕು.

೫೫. ಯಾರು ಒಮ್ಮೆಯಾದರೂ ನರ್ಮದಾನದಿಯಲ್ಲಿ ಸ್ನಾನವನ್ನು ಮಾಡಿ ಮಹಾದೇವನ ಪೂಜೆಯನ್ನು ಮಾಡುತ್ತಾರೆಯೊ, ಅವರ ಸರ್ವಪಾತಕಗಳೂ ನಾಶವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಬಕಕಲ್ಪಸಮುದ್ಭವವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ಸರ್ಗದೋತ್ಪತ್ತಿ–ತತ್ಸ್ನಾನಫಲಾದಿಕಥನಂ

ಶ್ರೀ ಮಾರ್ಕಂಡೇಯ ಉವಾಚ :—

**ಪುನರ್ಯುಗಾಂತಂ ತೇ ಚಾನ್ಯಂ ಸಂಪ್ರವಕ್ಷ್ಯಾಮಿ ತಚ್ಛೃಣು ।**
**ಸೂರ್ಯೈರ್ದ್ವಾದಶಭಿರ್ದೀಪಿತೇ ಲೋಕೇ ಜಂಗಮೇ ಸ್ಥಾವರೇ ಪುರಾ ॥ ೧ ॥**
**ಸರಿತ್ಸರಸ್ಸಮುದ್ರೇಷು ಕ್ಷಯಂ ಯಾತೇಷು ಸರ್ವಶಃ ।**
**ನಿರ್ಮಾನುಷವಷಟ್ಕಾರೇ ಹ್ಯಮರ್ಯಾದಗತಿಂ ಗತೇ ॥ ೨ ॥**
**ನಾನಾರೂಪೈಸ್ತತೋ ಮೇಘೈಃ ಶಕ್ರಾಯುಧವಿರಾಜಿತೈಃ ।**
**ಸರ್ವಮಾಪೂರಿತಂ ವ್ಯೋಮ ವಾಯೌರ್ಘೈಃ ಪೂರಿತೇ ತದಾ ॥ ೩ ॥**
**ತತಸ್ತ್ವೇಕಾರ್ಣವೀಭೂತೇ ಸರ್ವತಸ್ಸಲಿಲಾವೃತೇ ।**
**ಜಗತ್ಕೃತ್ಸ್ನೋದರೇ ಸರ್ವಂ ಸುಷ್ವಾಪ ಭಗವಾನ್ ಹರಃ ॥ ೪ ॥**
**ಪ್ರಕೃತಿಂ ಸ್ವಾಮವಷ್ಟಭ್ಯ ಯೋಗಾತ್ಮಾ ಸ ಪ್ರಜಾಪತಿಃ ।**
**ಶೇತೇ ಯುಗಸಹಸ್ರಾಂತಂ ಕಾಲಮಾವಿಶ್ಯ ಸಾರ್ಣವಂ ॥ ೫ ॥**

---

### ಕನ್ನಡದ ಅನುವಾದ

#### ಸರ್ಗದೋತ್ಪತ್ತಿ—ತತ್ಸ್ನಾನಫಲಾದಿಕಥನ

೧. ಮಾರ್ಕಂಡೇಯನು ಹೇಳುತ್ತಾನೆ :—ಮತ್ತೊಂದು ಪ್ರಳಯದ ಚರಿತ್ರೆಯನ್ನು ಹೇಳುವೆನು, ಕೇಳು. ದ್ವಾದಶಾದಿತ್ಯರು ಪ್ರಜ್ವಲಿಸಿ ಹಿಂದೆ ಸಕಲ ಸ್ಥಾವರಜಂಗಮಗಳನ್ನೂ ಸುಟ್ಟರಷ್ಟೆ !

೨. ಆಗ ಎಲ್ಲೆಲ್ಲಿಯೂ ನದಿಗಳೂ, ಸರೋವರಗಳೂ, ಸಮುದ್ರಗಳೂ ಬತ್ತಿಹೋದುವು. ಮನುಷ್ಯರು ಹವನಾದಿಗಳನ್ನು ತ್ಯಜಿಸಲು ಲೋಕದಲ್ಲಿ ಕಟ್ಟಳೆಗಳೇ ಇಲ್ಲದಂತಾಯಿತು.

೩. ಬಳಿಕ ನಾನಾರೂಪಗಳನ್ನು ತಳೆದು ಸಿಡಿಲುಗಳಿಂದ ರಾರಾಜಿಸುತ್ತ ನೀರುಗಳನ್ನು ತಂದ ಮೇಘಗಳಿಂದ ಆಕಾಶವೆಲ್ಲವೂ ಆಚ್ಛಾದಿತವಾಯಿತು.

೪. ಮಳೆಗರೆದು ಭೂಮಿಯೆಲ್ಲವೂ ಒಂದೇ ಸಮುದ್ರವಾಗಿ ಕಾಣುತ್ತಿರಲು ಪರಮೇಶ್ವರನು ಸಕಲಬ್ರಹ್ಮಾಂಡವನ್ನೂ ತನ್ನ ಹೊಟ್ಟೆಯಲ್ಲಿಟ್ಟುಕೊಂಡು ನಿದ್ರಿಸಿದನು.

೫. ಯೋಗಶಕ್ತಿಯುಕ್ತನಾದ ಪ್ರಜೇಶ್ವರನು ತನ್ನ ಪ್ರಕೃತಿಯನ್ನು ಆಶ್ರಯಿಸಿ ಕಾಲವನ್ನೂ, ಸಮುದ್ರವನ್ನೂ ಆವರಿಸಿ ಒಂದುಸಾವಿರ ಯುಗಗಳವರೆಗೂ ನಿದ್ರಾಸಕ್ತನಾಗಿದ್ದನು.

ತತ್ರ ಸುಪ್ತಂ ಮಹಾತ್ಮಾನಂ ಬ್ರಹ್ಮಲೋಕನಿವಾಸಿನಃ ।
ಭೃಗ್ವಾದಿಋಷಯಸ್ಸರ್ವೇ ಯೇ ಚಾಽನ್ಯೇ ಸನಕಾದಯಃ ॥ ೬ ॥
ಪರ್ಯಂಕೇ ವಿಮಲೇ ಶುಭ್ರೇ ನಾನಾಸ್ತರಣಸಂಸ್ತೃತೇ ।
ಶಯಾನಂ ದದೃಶುರ್ದೇವಂ ಸಪತ್ನೀಕಂ ವೃಷಧ್ವಜಂ ॥ ೭ ॥
ವಿಶ್ವರೂಪಾ ತು ಸಾ ನಾರೀ ವಿಶ್ವರೂಪೋ ಮಹೇಶ್ವರಃ ।
ಗಾಢಮಾಲಿಂಗ್ಯ ಸುಪ್ತಸ್ತಾಂ ದದೃಶೇ ಚಾಽಹಮವ್ಯಯಂ ॥ ೮ ॥
ಪಾದಮೂಲೇ ತತಸ್ತಸ್ಯ ಶ್ಯಾಮಾಂ ತಾಂ ಪದ್ಮಲಕ್ಷಣಾಂ ।
ಕನ್ಯಾಂ ಪಶ್ಯಾಮಿ ಸುಶ್ರೋಣೀಂ ಚರಣೌ ತಸ್ಯ ಮೃದ್ನತೀಂ ॥ ೯ ॥
ವಿಮಲಾಂಬರಸಂವೀತಾಂ ವ್ಯಾಲಯಜ್ಞೋಪನೀತಿನೀಂ ।
ಶ್ಯಾಮಾಂ ಕಮಲಪತ್ರಾಕ್ಷೀಂ ಸರ್ವಾಭರಣಭೂಷಿತಾಂ ॥ ೧೦ ॥
ಸಕಲಂ ಯುಗಸಾಹಸ್ರಂ ನರ್ಮದೇಯಂ ವಿಜಾನತೀ ।
ಪ್ರಸುಪ್ತಂ ದೇವದೇವೇಶಮುಪಾಸ್ತೇ ವರವರ್ಣಿನೀ ॥ ೧೧ ॥
ಹೃತೈರ್ವೇದೈಶ್ಚತುರ್ಭಿಶ್ಚ ಬ್ರಹ್ಮಾಽಪ್ಯೇವಂ ಮಹೇಶ್ವರಃ ।
ಭೃಗ್ವಾದ್ಯೈರ್ಮಾನಸೈಃ ಪುತ್ರೈಃ ಸ್ತೌತಿ ಶಂಕರಮವ್ಯಯಂ ॥ ೧೨ ॥

---

೬-೭. ಇಂತು ಗಾಢನಿದ್ರೆಯಲ್ಲಿದ್ದ ಆ ಮಹಾತ್ಮನನ್ನು ಸತ್ಯಲೋಕದಲ್ಲಿ ವಾಸಮಾಡುತ್ತಿದ್ದ ಭೃಗ್ವಾದಿ ಮಹರ್ಷಿಗಳೂ, ಸನಕಾದಿಗಳೂ ಕಂಡರು. ಅವರು ಪರಿಶುಭ್ರವೂ, ಅನೇಕಾಸ್ತರಣಗಳಿಂದ ಕಂಗೊಳಿಸುತ್ತಿರುವುದೂ ಆದ ಪರ್ಯಂಕದಲ್ಲಿ ಪತ್ನೀಸಮೇತನಾಗಿ ಮಲಗಿದ್ದ ಆ ಮಹೇಶ್ವರನನ್ನು ನೋಡಿದರು.

೮. ಆ ಪಾರ್ವತಿಯು ವಿಶ್ವರೂಪಳು. ಪರಮೇಶ್ವರನೂ ವಿಶ್ವರೂಪನು. ಇಬ್ಬರೂ ಗಾಢಾಲಿಂಗನದಲ್ಲಿ ಆಸಕ್ತರಾಗಿ ನಿದ್ರಿಸುತ್ತಿದ್ದುದನ್ನು ನಾನೂ ನೋಡಿದೆನು.

೯. ಆತನ ಪಾದಪ್ರದೇಶದಲ್ಲಿ ಶ್ಯಾಮಲವರ್ಣಳೂ, ಕಮಲಗಂಧಿಯೂ, ಉನ್ನತಜಘನದವಳೂ ಆದ ಕನ್ಯೆಯು ಪಾದಗಳನ್ನೊತ್ತುತ್ತಿದ್ದುದನ್ನು ಕಂಡೆನು.

೧೦. ಆಕೆಯು ಶುಭ್ರವಸ್ತ್ರಾವೃತಳಾಗಿ, ಸರ್ಪಗಳ ಯಜ್ಞೋಪವೀತವನ್ನು ಧರಿಸಿ, ಶ್ಯಾಮಲದೇಹದಲ್ಲಿ ಒಪ್ಪುವ ಕಮಲಪತ್ರಸದೃಶಗಳಾದ ಕಣ್ಣುಗಳಿಂದ ಕೂಡಿ ಸರ್ವಾಲಂಕಾರಭೂಷಿತೆಯಾಗಿದ್ದಳು.

೧೧. ಸರ್ವಜ್ಞಳಾದ ಆ ನರ್ಮದೆಯು ಒಂದುಸಾವಿರಯುಗಗಳೂ ಮಲಗಿದ್ದ ಮಹಾದೇವನಿಗೆ ಪರಿಚರ್ಯೆಯನ್ನು ಮಾಡುತ್ತಿದ್ದಳು.

೧೨. ಆಗ ಲೋಕೇಶ್ವರನಾದ ಬ್ರಹ್ಮದೇವನು ತನ್ನ ನಾಲ್ಕು ವೇದಗಳನ್ನೂ ಕಳೆದುಕೊಂಡು ಮಾನಸಪುತ್ರರಾದ ಭೃಗುವೇ ಮೊದಲಾದವರೊಡನೆ ಅನಾದಿನಿಧನನಾದ ಆ ಶಂಕರನನ್ನು ಸ್ತೋತ್ರಮಾಡತೊಡಗಿದನು.

ಭಕ್ತ್ಯಾ ಪರಮಯಾ ರಾಜಂಸ್ತತ್ರ ಶಂಭುಮನಾಮಯಂ ।
ಸ್ತುವಂತಸ್ತತ್ರ ದೇವೇಶಂ ಮಂತ್ರೈರೀಶ್ವರಸಂಭವೈಃ ॥ ೧೩ ॥
ಅಕಸ್ಮಾತ್ಸಂಪ್ರಲೀನಾಸ್ತೇ ಚತ್ವಾರಃ ಶ್ರುತಯೋಽರ್ಣವೇ ।
ವೇದೈಃ ಪ್ರಲೀನೈರ್ಭಗವಾನಜ್ಞಾನತಮಸಾಽವೃತಃ ॥ ೧೪ ॥
ಪ್ರಸುಪ್ತಂ ದೇವಮೀಶಾನಂ ಬೋಧಯನ್ ಸಮುಪಸ್ಥಿತಃ ।
ಉತ್ತಿಷ್ಠ ಹರ ಪಿಂಗಾಕ್ಷ ಮಹಾದೇವ ಮಹೇಶ್ವರ ॥ ೧೫ ॥
ಮಮ ವೇದಾ ಹೃತಾಸ್ಸರ್ವೇ ಅತೋಽಹಂ ಸ್ತೋತುಮುದ್ಯತಃ ।
ವೇದೈರ್ವ್ಯಾಪ್ತಂ ಜಗತ್ಸರ್ವಂ ದಿವ್ಯಾದಿವ್ಯಂ ಚರಾಚರಂ ॥ ೧೬ ॥
ಅತೀತಂ ವರ್ತಮಾನಂ ಚ ಸ್ಮರಾಮಿ ಚ ಸೃಜಾಮ್ಯಹಂ ।
ತೈರ್ವಿನಾ ಚಾಽಹಮೇಕಸ್ತು ಮೂಕೋಽಂಧೋ ಜಡವತ್ಸದಾ ॥ ೧೭ ॥
ಗತಿರ್ವೀರ್ಯಂ ಬಲೋತ್ಸಾಹೌ ತೈರ್ವಿನಾ ನ ಪ್ರಜಾಯತೇ ।
ತೈರ್ವಿನಾ ದೇವದೇವೇಶ ನಾಹಂ ಕಿಂಚಿತ್ ಸ್ಮರಾಮಿ ವೈ ॥ ೧೮ ॥
ತಾನ್ವೇದಾನ್ ದೇವದೇವೇಶ ಶೀಘ್ರಂ ಮೇ ದಾತುಮರ್ಹಸಿ ।
ಜಡಾಂಧಬಧಿರಂ ಸರ್ವಂ ಜಗತ್ಸ್ಥಾವರಜಂಗಮಂ ॥ ೧೯ ॥

---

೧೩. ಎಲೈ ರಾಜಶ್ರೇಷ್ಠನೆ! ಎಲ್ಲರೂ ಪರಮಭಕ್ತಿಯುಕ್ತರಾಗಿ ಈಶ್ವರನೇ ಅನುಗ್ರಹಿಸಿದ ಮಂತ್ರಗಳಿಂದ ದೇವದೇವನಾದ ಪರಮಶಿವನನ್ನು ಸ್ತುತಿಸಿದರು.

೧೪. ನಾಲ್ಕು ವೇದಗಳೂ ನಿಷ್ಕಾರಣವಾಗಿಯೇ ಸಮುದ್ರದಲ್ಲಿ ಮುಳುಗಿ ಹೋದುವು. ವೇದಗಳು ನಾಶವಾದುದರಿಂದ ಚತುರ್ಮುಖಬ್ರಹ್ಮನು ಅಜ್ಞಾನ ವೆಂಬ ಕತ್ತಲೆಯಲ್ಲಿದ್ದನು.

೧೫–೧೬. ಆಗಲಾತನು, ಮಲಗಿದ್ದ ಮಹಾದೇವನನ್ನು ಎಬ್ಬಿಸಲು ಪ್ರಯತ್ನಿ ಸಿದನು. "ಲೋಕಸಂಹಾರಕನೆ! ಲೋಹಿತಾಕ್ಷನೆ! ಮಹಾದೇವನೆ! ಮಹೇಶ್ವರನೆ! ಎಚ್ಚರಗೊಳ್ಳು! ನನ್ನ ವೇದಗಳೆಲ್ಲವೂ ಕಳೆದುಹೋದುದರಿಂದ ನಿನ್ನನ್ನು ಸ್ತೋತ್ರ ಮಾಡುತ್ತಿರುವೆನು. ಊರ್ಧ್ವಾಧೋಲೋಕಗಳನ್ನೂ, ಸ್ಥಾವರಜಂಗಮಗಳನ್ನೂ ಒಳಗೊಂಡ ಬ್ರಹ್ಮಾಂಡವೇ ವೇದಗಳಿಂದ ವ್ಯಾಪ್ತವಾಗಿರುವುದು.

೧೭. ಹಿಂದಿನ ಸೃಷ್ಟಿಯನ್ನು ಸ್ಮರಿಸಿಕೊಂಡು ನಾನು ಹೊಸ ಸೃಷ್ಟಿಯನ್ನು ಮಾಡಬೇಕು. ವೇದಗಳ ಸಹಾಯವಿಲ್ಲದೆ ನಾನು ಮೂಗನೂ, ಕುರುಡನೂ, ನಿಶ್ಚೇಷ್ಟನೂ ಆಗಿರುವೆನು.

೧೮. ಮಹಾದೇವ! ಅವುಗಳಿಲ್ಲದೆ ನನಗೆ ಗತಿಯಾಗಲಿ, ಶಕ್ತಿಯಾಗಲಿ, ಬಲವಾಗಲಿ, ಉತ್ಸಾಹವಾಗಲಿ ಇರುವುದಿಲ್ಲ. ಅವುಗಳ ಸಹಾಯವಿಲ್ಲದೆ ಏನನ್ನು ಸ್ಮರಿಸುವುದಕ್ಕೂ ನನ್ನಿಂದ ಸಾಧ್ಯವಿಲ್ಲ.

೧೯. ದೇವದೇವ! ಆ ವೇದಗಳನ್ನು ಬೇಗ ನನಗೆ ತಂದುಕೊಡಬೇಕು. ಚರಾಚರಾತ್ಮಕವಾದ ಜಗತ್ತೆಲ್ಲವೂ ಜಡವೂ, ಅಂಧವೂ, ಬಧಿರವೂ ಆಗಿರುವುದು.

ಸ್ಥಾನಾದಿ ದಶ ಚತ್ವಾರಿ ನ ಶೋಭಂತೇ ಸುರೇಶ್ವರ ।
ಪ್ರಣಮಾಮ್ಯಲ್ಪವೀರ್ಯತ್ವಾದ್ವೇದಹೀನಸ್ಸುರೇಶ್ವರ ॥ ೨೦ ॥
ವೇದೇಭ್ಯಸ್ಸಕಲಂ ಜಾತಂ ಯತ್ಕಿಂಚಿತ್ಸಚರಾಚರಂ ।
ತಾವಚ್ಛೋಭಂತಿ ಶಾಸ್ತ್ರಾಣಿ ಸಮಸ್ತಾನಿ ಜಗದ್ಗುರೋ ।
ಯಾವದ್ವೇದನಿಧಿರಯಂ ನೋಪತಿಷ್ಠೇತ್ಸನಾತನಃ ॥ ೨೧ ॥
ಯಥೋದಿತೇನ ಸೂರ್ಯೇಣ ತಮೋ ಯಾತಿ ವಿನಾಶತಾಂ ।
ಏವಂ ಸಮಸ್ತಪಾಪಾನಿ ಯಾಂತಿ ವೇದಸ್ಯ ಧಾರಣಾತ್ ॥ ೨೨ ॥
ವೇದೇ ರಹಸಿ ಯತ್ಸೂಕ್ಷ್ಮಂ ಯತ್ತದ್ಬ್ರಹ್ಮ ಸನಾತನಂ ।
ಹೃದಿಸ್ಥಂ ದೇವ ಜಾನಾಮಿ ಗತಂ ತದ್ವೇದಗರ್ಜನಾತ್ ॥ ೨೩ ॥
ವೇದಾನುಚ್ಚರತೋ ಮೇಽದ್ಯ ತವ ಶಂಕರ ಚಾಗ್ರತಃ ।
ಅಕಸ್ಮಾತ್ತೇ ಗತಾ ವೇದಾ ನ ಸೃಜೇಯಂ ವಿಭೋ ಭುವಂ ॥ ೨೪ ॥
ತೇಽಪಿ ಸರ್ವೇ ಮಹಾದೇವ ಪ್ರವಿಷ್ಟಾಃ ಸಂಮುಖಾರ್ಣವಂ ।
ತೇ ಯಾಚ್ಯಮಾನಾ ದೇವೇಶ ತಿಷ್ಠಂತು ಸ್ಮರಣೇ ಮಮ ॥ ೨೫ ॥

---

೨೦. ಜ್ಞಾನದ ಹದಿನಾಲ್ಕು ಸ್ಥಾನಗಳೂ ಬುದ್ಧಿಗೆ ಗೋಚರವಾಗುವುದಿಲ್ಲ. ದೇವೋತ್ತಮನೆ! ವೇದಗಳನ್ನು ಕಳೆದುಕೊಂಡು ನಿಶ್ಶಕ್ತನಾಗಿರುವ ನಾನು ನಿನ್ನನ್ನು ನಮಸ್ಕರಿಸುತ್ತಿರುವೆನು.

೨೧. ವೇದಗಳಿಂದಲೇ ಚರಾಚರಾತ್ಮಕವಾದ ಸಕಲವೂ ಹುಟ್ಟಿರುವುದಲ್ಲವೆ. ಲೋಕಗುರುವೆ! ಸನಾತನವಾದ ಈ ವೇದರಾಶಿಯು ಇಲ್ಲದಿರುವೆಡೆಗಳಲ್ಲಿ ಮಾತ್ರವೇ ಇತರ ಸಕಲ ಶಾಸ್ತ್ರಗಳೂ ಶೋಭಿಸಲು ತಕ್ಕವುಗಳಾಗಿರುವುವು.

೨೨. ಸೂರ್ಯನುದಯಿಸುತ್ತಲೇ ಅಂಧಕಾರವು ಹೇಗೆ ನಾಶವನ್ನು ಹೊಂದುವುದೊ, ಹಾಗೆಯೇ ವೇದಧಾರಣೆಯಿಂದ ಸಮಸ್ತಪಾಪಗಳೂ ನಾಶವಾಗುವುವು.

೨೩. ಏಕಾಂತವಾದ ವೇದಾಧ್ಯಯನದಿಂದ ಸೂಕ್ಷ್ಮವೂ, ಶಾಶ್ವತವೂ ಆದ ಯಾವ ಬ್ರಹ್ಮವು ಹೃದಯದಲ್ಲಿರುವುದನ್ನು ತಿಳಿದಿದ್ದೆನೊ, ಅದು ಸಹ ವೇದಗಳೊಡನೆಯೇ ಕಣ್ಮರೆಯಾಯಿತು.

೨೪. ಶಂಕರ! ನಿನ್ನ ಮುಂದೆ ವೇದಗಳನ್ನುಚ್ಚರಿಸುತ್ತಿದ್ದಂತೆಯೇ ನಿಷ್ಕಾರಣವಾಗಿ ಅವು ನಷ್ಟಗಳಾಗಿ ನನಗೆ ಜಗತ್ಸೃಷ್ಟಿಯನ್ನು ಮಾಡಲು ಶಕ್ತಿಯಿಲ್ಲದಾಗಿರುವುದು.

೨೫. ಮಹಾದೇವ! ಅವುಗಳೆಲ್ಲವೂ ಮಹಾಸಮುದ್ರದಲ್ಲಿ ಮುಳುಗಿ ಹೋದುವು. ಕೇಳಿದೊಡನೆಯೇ ಅವು ನನ್ನ ಸ್ಮೃತಿಗೆ ಬರುವಂತೆ ಅನುಗ್ರಹಿಸು.

ದುಹಿತೇಯಂ ವಿಶಾಲಾಕ್ಷೀ ಸರ್ವಸ್ಸರ್ವಂ ವಿಜಾನತೇ ।
ಜಾಯತೀ ಯುಗಸಾಹಸ್ರಂ ನಾನ್ಯಾ ಕಾಚಿತ್ ಭವೇದೃಶೀ ॥ ೨೬ ॥
ಋಷಿಶ್ಚಾಯಂ ಮಹಾಭಾಗೋ ಮಾರ್ಕಂಡೋ ಧೀಮತಾಂ ವರಃ ।
ಕಲ್ಪೇ ಕಲ್ಪೇ ಮಹಾದೇವ ತ್ವಾಮಯಂ ಪರ್ಯುಪಾಸತೇ ॥ ೨೭ ॥
ಜಗತ್ತ್ರಯಹಿತಾರ್ಥಾಯ ಚರತೇ ವ್ರತಮುತ್ತಮಂ ॥ ೨೮ ॥
ಏವಮುಕ್ತಸ್ತು ದೇವೇಶೋ ಬ್ರಹ್ಮಣಾ ಪರಮೇಷ್ಠಿನಾ ।
ಉವಾಚ ಶ್ಲಕ್ಷ್ಣಯಾ ವಾಚಾ ನರ್ಮದಾಂ ಸರಿತಾಂ ವರಾಂ ॥ ೨೯ ॥
ಕಥಯಸ್ವ ಮಹಾಭಾಗೇ ಬ್ರಹ್ಮಣಸ್ತ್ವಂ ತು ಪೃಚ್ಛತಃ ।
ಕೇನ ವೇದಾ ಹೃತಾಸ್ಸರ್ವೇ ವೇಧಸೋ ಜಗತೀ ಗುರೋ ॥ ೩೦ ॥
ಏವಮುಕ್ತಾ ತು ರುದ್ರೇಣ ಉವಾಚ ಮೃಗಲೋಚನಾ ।
ಬ್ರಹ್ಮಣೋ ಜಪತೋ ವೇದಾಂಸ್ತ್ವಯಿ ಸುಪ್ತೇ ಮಹೇಶ್ವರ ॥ ೩೧ ॥
ಭವತಶ್ಛಿದ್ರಮಾಸಾದ್ಯ ಘೋರೇಽಸ್ಮಿನ್ ಸಲಿಲಾವೃತೇ ।
ಪೂರ್ವಕಲ್ಪಸಮುದ್ಭೂತಾವಸುರೌ ಸುರದುರ್ಜಯೌ ॥ ೩೨ ॥

---

೨೬-೨೭. ನಿನ್ನ ಮಗಳಾದ ಈ ವಿಶಾಲನೇತ್ರೆಯು ಸಮಸ್ತವನ್ನೂ ತಿಳಿದಿರುವಳು. ಸಾವಿರ ಯುಗಗಳಿಂದಲೂ ಶಾಶ್ವತಳಾಗಿರುವ ಈಕೆಗೆ ಸಮಾನಳು ಮತ್ತೊಬ್ಬಳಿಲ್ಲ. ಮಹಾಭಾಗ್ಯಶಾಲಿಯೂ, ಪ್ರಾಜ್ಞರಲ್ಲಿ ಅಗ್ರಗಣ್ಯನೂ ಆದ ಈ ಮಾರ್ಕಂಡೇಯಮಹಾಮುನಿಯೂ ಪ್ರತಿಕಲ್ಪದಲ್ಲಿಯೂ ನಿನ್ನ ಪರಿಚರ್ಯೆಯನ್ನು ಮಾಡುತ್ತಿರುವನು.

೨೮. ಈತನು ಮೂರುಲೋಕಗಳ ಹಿತಕ್ಕಾಗಿಯೇ ಉತ್ತಮವಾದ ತಪಸ್ಸನ್ನಾಚರಿಸುತ್ತಿರುವನು.''

೨೯. ಲೋಕಪಿತಾಮಹನಾದ ಬ್ರಹ್ಮನು ಇಂತೆಂದು ಹೇಳಲು ಮಹೇಶ್ವರನು ಮೃದುವಚನದಿಂದ ನದಿಶ್ರೇಷ್ಠಳಾದ ನರ್ಮದೆಗೆ ಹೇಳತೊಡಗಿದನು.

೩೦. ''ಎಲೌ ಮಹಾಭಾಗ್ಯಶಾಲಿನಿಯೆ! ಚತುರ್ಮುಖನು ಕೇಳುತ್ತಿರುವನು. ಲೋಕಗುರುವಾದ ಆತನಿಗೆ ಸಕಲವೇದಗಳನ್ನೂ ಯಾರು ಕದ್ದಿರುವರೆಂಬುದನ್ನು ತಿಳಿಸು.''

೩೧. ರುದ್ರನಿಂದ ಆಜ್ಞಪ್ತಳಾದ ಆ ನರ್ಮದೆಯು ಇಂತೆಂದು ಹೇಳಿದಳು. ''ಮಹೇಶ್ವರ! ನೀನು ಮಲಗಿರಲು ಬ್ರಹ್ಮನು ವೇದಗಳನ್ನು ಜಪಿಸುತ್ತಿದ್ದನು.

೩೨. ನಿನ್ನ ನಿದ್ರೆಯ ಸಮಯದ ಛಿದ್ರವನ್ನೇ ಕಾಯುತ್ತಲಿದ್ದವರೂ, ಪೂರ್ವಕಲ್ಪದಲ್ಲಿ ಹುಟ್ಟಿದವರೂ, ದೇವತೆಗಳಿಗೆ ಅಜೇಯರೂ ಆದ ಇಬ್ಬರು ರಾಕ್ಷಸರು ಈ ಮಹಾಸಮುದ್ರದ ಮಧ್ಯದಿಂದ ಮೇಲಕ್ಕೆದ್ದು ಬಂದರು.

ಶ್ರಿಯಾ ವೃತೌ ಮಹಾದೇವ ತ್ವಯಾ ಚೋತ್ಪಾದಿತೌ ಪುರಾ ।
ಸುರಾಸುರಸುದುರ್ಜೇಯೌ ದಾನವೌ ಮಧುಕೈಟಭೌ ॥ ೩೩ ॥
ತೌ ವಾಯುಭೂತೌ ಸೂಕ್ಷ್ಮೌ ಚ ಪಠತೋಽಸ್ಮತ್ಪಿತಾಮಹಾತ್ ।
ತಾವಾಶು ಹೃತ್ವಾ ವೇದಾಂಶ್ಚ ಪ್ರವಿಷ್ಟೌ ಚ ಮಹಾರ್ಣವಂ ॥ ೩೪ ॥
ಏತಚ್ಛ್ರುತ್ವಾ ಮಹಾತೇಜಾ ಹ್ಯಮೃತಾಯಾಸ್ತತೋ ವಚಃ ।
ಸಸ್ಮಾರ ಸ ಚ ದೇವೇಶಂ ಶಂಖಚಕ್ರಗದಾಧರಂ ॥ ೩೫ ॥
ಸ ವಿವೇಶ ಮಹಾರಾಜ ಭೂತಲೇ ಸ ಸುರೋತ್ತಮಃ ।
ದಾನವಾಂತಕರೋ ದೇವಃ ಸರ್ವದೈವತಪೂಜಿತಃ ॥ ೩೬ ॥
ಮೀನರೂಪಧರೋ ದೇವೋ ಲೋಡಯಾಮಾಸ ಚಾರ್ಣವಂ ।
ವೇದಾಂಶ್ಚ ದದೃಶೇ ತತ್ರ ಪಾತಾಲೇ ನಿಹಿತಾನ್ ಪ್ರಭುಃ ॥ ೩೭ ॥
ತೌ ಚ ದೈತ್ಯೌ ಮಹಾವೀರ್ಯೌ ದೃಷ್ಟ್ವಾನ್ ಮಧುಸೂದನಃ ।
ಮಹಾವೇಗೌ ಮಹಾಬಾಹೂ ಸೂದಯಾಮಾಸ ತೇಜಸಾ ॥ ೩೮ ॥
ವೇದಾಂಸ್ತತ್ರಾಪಿ ತೋಯಸ್ಥಾನಾನಿನಾಯ ಜಗದ್ಗುರುಃ ।
ಚತುರ್ವಕ್ತ್ರಾಯ ದೇವಾಯಾದದಾಚ್ಚಕ್ರವಿಭೂಷಿತಃ ॥ ೩೯ ॥

---

೩೩. ಮಹಾದೇವ! ಇವರನ್ನು ಸರ್ವೈಶ್ವರ್ಯಭರಿತರನ್ನಾಗಿ ನೀನೇ ಸೃಷ್ಟಿಮಾಡಿದೆ. ಸಮಸ್ತ ದೇವದಾನವರಿಗೂ ಜಯಿಸಲಸಾಧ್ಯರಾದ ಈ ದಾನವರೇ ಮಧುಕೈಟಭರೆಂಬವರು.

೩೪. ಇವರಿಬ್ಬರೂ ಸೂಕ್ಷ್ಮರೂಪವನ್ನು ತಾಳಿ ವಾಯುವಿನೊಡನೆ ಸೇರಿ ಜಪಿಸುತ್ತಿರುವ ಬ್ರಹ್ಮದೇವನ ಮುಖದಿಂದ ವೇದಗಳನ್ನಪಹರಿಸಿಕೊಂಡು ಈ ಮಹಾ ಸಮುದ್ರವನ್ನು ಸೇರಿದರು.''

೩೫. ಇಂತೆಂದ ಅಮೃತನದಿಯ ಮಾತನ್ನು ಕೇಳಿ ಚತುರ್ಮುಖನು ತನ್ನ ಕೆಲಸಕ್ಕಾಗಿ ಶಂಖಚಕ್ರಗದಾಪಾಣಿಯಾದ ಮಹಾವಿಷ್ಣುವನ್ನು ಸ್ಮರಿಸಿದನು.

೩೬. ಧರ್ಮರಾಜನೆ! ದೇವೋತ್ತಮನೂ, ದಾನವವಿನಾಶಕನೂ, ಸರ್ವ ದೇವತೆಗಳಿಗೆ ವಂದ್ಯನೂ ಆದ ಆ ಮಹಾವಿಷ್ಣುವು ಭೂಮಿಯೊಳಕ್ಕೆ ಪ್ರವೇಶಿಸಿದನು.

೩೭. ಮೀನಿನ ರೂಪವನ್ನು ಧರಿಸಿ ಆತನು ಸಮಸ್ತ ಸಮುದ್ರವನ್ನೂ ಆಲೋಡಿಸಿ ಪಾತಾಳದಲ್ಲಿ ಹುದುಗಿದ್ದ ವೇದವನ್ನೂ, ಆ ದಾನವರನ್ನೂ ಕಂಡನು.

೩೮. ಆಗಲಾ ಮಧುಸೂದನನು ಮಹಾಪರಾಕ್ರಮಿಗಳಾದ ಆ ದಾನವರಿಬ್ಬರನ್ನೂ ಕಂಡು ಮಹಾವೇಗಿಗಳೂ ದೀರ್ಘಬಾಹುಗಳೂ ಆದ ಇಬ್ಬರನ್ನೂ ತನ್ನ ತೇಜಸ್ಸಿನಿಂದ ನಿಗ್ರಹಿಸಿದನು.

೩೯. ಇಂತು ಚಕ್ರಧಾರಿಯಾದ ಮಹಾವಿಷ್ಣುವು ಜಲಾಂತರ್ಗತಗಳಾಗಿದ್ದ ವೇದಗಳನ್ನು ಮೇಲಕ್ಕೆ ತಂದು ಬ್ರಹ್ಮದೇವನಿಗೊಪ್ಪಿಸಿದನು.

ತತಃ ಪ್ರಹೃಷ್ಟೋ ಭಗವಾನ್ ವೇದಾಂಲ್ಲಬ್ಧ್ವಾ ಪಿತಾಮಹಃ ।
ಜನಯಾಮಾಸ ನಿಖಿಲಂ ಜಗದ್ಭೂಯಶ್ಚರಾಚರಂ ॥ ೪೦ ॥
ಸಾ ಚ ದೇವೀ ನದೀ ಪುಣ್ಯಾ ರುದ್ರಸ್ಯ ಪರಿಚಾರಿಕಾ ।
ಪಾವನೀ ಸರ್ವಭೂತಾನಾಂ ಪ್ರೋವಾಹ ಸಲಿಲಂ ತದಾ ॥ ೪೧ ॥
ತಸ್ಯಾಸ್ತೀರೇ ತತೋ ದೇವಾ ಋಷಯಶ್ಚ ತಪೋಧನಾಃ ।
ಯಜಂತಿ ತ್ರ್ಯಂಬಕಂ ದೇವಂ ಪ್ರಹೃಷ್ಟೇನಾಽಂತರಾತ್ಮನಾ ॥ ೪೨ ॥
ಏಕಾ ಮೂರ್ತಿರ್ಮಹೇಶಸ್ಯ ಕಾರಣಾಂತರಮಾಗತಾ ।
ತ್ರೈಗುಣ್ಯಾ ಕುರುತೇ ಕರ್ಮ ಬ್ರಹ್ಮಚಕ್ರೇಶರೂಪತಃ ॥ ೪೩ ॥
ಏತೇಷಾಂ ತು ಪೃಥಗ್ಭಾವಂ ಯೇ ಕುರ್ವಂತಿ ಸುಮೋಹಿತಾಃ ।
ತೇಷಾಂ ಧರ್ಮಃ ಕುತಃ ಸಿದ್ಧಿರ್ಜಾಯತೇ ಪಾಪಕರ್ಮಣಾಂ ॥ ೪೪ ॥
ಏವಮೇತಾ ಮಹಾನದ್ಯಸ್ತಿಸ್ರೋ ರುದ್ರಸಮುದ್ಭವಾಃ ।
ಏಕಾ ಏವ ತ್ರಿಧಾ ಭೂತಾ ಗಂಗಾ ರೇವಾ ಸರಸ್ವತೀ ॥ ೪೫ ॥
ಗಂಗಾ ತು ವೈಷ್ಣವೀ ಮೂರ್ತಿಃ ಸರ್ವಪಾಪಪ್ರಣಾಶಿನೀ ।
ರುದ್ರದೇಹಸಮುದ್ಭೂತಾ ನರ್ಮದಾ ಚೈವಮೇವ ತು ॥ ೪೬ ॥

---

೪೦. ಆಗ ಪಿತಾಮಹನು ವೇದಗಳನ್ನು ಪಡೆದು ಸಂತುಷ್ಟನೂ, ಸರ್ವ ಶಕ್ತ್ಯನ್ವಿತನೂ ಆಗಿ ಸ್ಥಾವರಜಂಗಮಾತ್ಮಕವಾದ ಸಕಲಪ್ರಪಂಚವನ್ನೂ ಸೃಜಿಸಿದನು.

೪೧. ಮಹಾದೇವನ ಪರಿಚಾರಿಕೆಯಾಗಿದ್ದ ಈ ನದಿಯೂ ಪುಣ್ಯಪ್ರದೆಯಾಗಿ ಸಕಲ ಪ್ರಾಣಿಗಳ ಪಾತಕಗಳನ್ನೂ ಕಳೆಯುತ್ತ ಜಲಭರಿತವಾಗಿ ಹರಿಯಿತು.

೪೨. ದೇವತೆಗಳೂ, ತಪೋನಿರತರಾದ ಮಹರ್ಷಿಗಳೂ ಆನಂದಭರಿತರಾಗಿ ಆ ನದಿಯ ತೀರದಲ್ಲಿಯೇ ಮಹಾದೇವನ ಪ್ರೀತಿಗಾಗಿ ಯಜ್ಞಾದಿಗಳನ್ನು ಮಾಡುತ್ತಿರುವರು.

೪೩. ಸದಾಶಿವನ ಒಂದು ರೂಪವೇ ಕಾರಣಾಂತರದಿಂದ ಮೂರು ಗುಣಗಳಿಂದ ಕೂಡಿದ ಬ್ರಹ್ಮ, ವಿಷ್ಣು, ಮಹೇಶ್ವರರಾಗಿ ವ್ಯಾಪಾರವನ್ನು ನಡೆಸುತ್ತಿರುವುದು.

೪೪. ಭ್ರಮೆಯಿಂದ ಇವರು ಬೇರೆಬೇರೆಯೆಂಬ ಭಾವವನ್ನು ಯಾರು ಮಾಡುತ್ತಾರೆಯೊ, ಆ ಪಾಪಕರ್ಮಿಗಳಿಗೆ ಕಾರ್ಯಸಿದ್ಧಿಯಾಗುವುದೆಂತು?

೪೫. ಹಾಗೆಯೇ ರುದ್ರನ ದೇಹದಿಂದ ಒಂದು ನದಿಯೇ ಮೂರು ಮಹಾನದಿಗಳಾಗಿ ಪ್ರವಹಿಸಿ, ಗಂಗಾ, ನರ್ಮದಾ ಮತ್ತು ಸರಸ್ವತಿಯರೆಂದು ಪ್ರಖ್ಯಾತವಾಗಿರುವುದು.

೪೬. ಸಕಲ ಪಾತಕಗಳನ್ನೂ ಕಳೆಯುವ ಗಂಗೆಯೇ ವೈಷ್ಣವಮೂರ್ತಿಯು. ಮಹೇಶ್ವರನ ಅಂಶದಿಂದ ಕೂಡಿರುವುದೇ ನರ್ಮದಾನದಿಯು.

ಬ್ರಾಹ್ಮೀ ಸರಸ್ವತೀಮೂರ್ತಿಸ್ತ್ರಿಷು ಲೋಕೇಷು ವಿಶ್ರುತಾ ।
ದಿವ್ಯಾ ಕಾಮಗಮಾ ದೇವೀ ವಾಗ್ವಿಭೂತ್ಯೈ ತು ಸಂಸ್ಥಿತಾ ॥ ೪೭ ॥
ನರ್ಮದಾ ಪರಮಾ ಕಾಚಿನ್ಮರ್ತ್ಯಮೂರ್ತಿಕಲಾ ಶಿವಾ ।
ದಿವ್ಯಾ ಕಾಮಗಮಾ ದೇವೀ ಸರ್ವತ್ರ ಸುರಪೂಜಿತಾ ॥ ೪೮ ॥
ವ್ಯಾಪಿನೀ ಸರ್ವಭೂತಾನಾಂ ಸೂಕ್ಷ್ಮಾತ್ಸೂಕ್ಷ್ಮತರಾ ಸ್ಮೃತಾ ।
ಅಕ್ಷಯಾ ಹ್ಯಮೃತಾ ಹ್ಯೇಷಾ ಸ್ವರ್ಗಸೋಪಾನಮುತ್ತಮಾ ॥ ೪೯ ॥
ಸೃಷ್ಟಾ ರುದ್ರೇಣ ಲೋಕಾನಾಂ ಸಂಸಾರಾರ್ಣವತಾರಿಣೀ ॥ ೫೦ ॥

ಸರಿಜ್ಜಲಂ ಯೇಽಪಿ ಪಿಬಂತಿ ಲೋಕೇ
ಮುಚ್ಯಂತಿ ತೇ ಪಾಪವಿಶೇಷಸಂಘೈಃ ।
ವ್ರಜಂತಿ ಸಂಸಾರಮನಾದಿಭಾವಂ
ತ್ಯಕ್ತ್ವಾ ಚಿರಂ ಮೋಕ್ಷಪದಂ ವಿಶುದ್ಧಂ ॥ ೫೧ ॥

ಯಥಾ ಗಂಗಾ ತಥಾ ರೇವಾ ತಥಾ ಚೈವ ಸರಸ್ವತೀ ।
ಸಮಂ ಪುಣ್ಯಫಲಂ ಪ್ರೋಕ್ತಂ ಸ್ನಾನದರ್ಶನಚಿಂತನೈಃ ॥ ೫೨ ॥

---

೪೭. ದಿವ್ಯವೂ, ಸ್ವೇಚ್ಛಾವಾಹಿನಿಯೂ, ವಾಕ್ಪ್ರದಾತ್ರಿಯೂ ಆದ ಸರಸ್ವತಿಯು ಬ್ರಹ್ಮಾಂಶದಿಂದುದ್ಭವಿಸಿದುದೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು.

೪೮. ಸರ್ವೋತ್ತಮವೂ, ಮಂಗಳದಾಯಕವೂ, ಇಷ್ಟಪ್ರದವೂ ಆದ ನರ್ಮದೆಯು ಒಂದಂಶದಿಂದ ಮರ್ತ್ಯಲೋಕಕ್ಕೆ ಬಂದು ಎಲ್ಲೆಲ್ಲಿಯೂ ದೇವತೆಗಳಿಗೆಲ್ಲ ಪೂಜ್ಯಳಾಗಿರುವಳು.

೪೯. ಈ ನರ್ಮದೆಯೇ ಸರ್ವಭೂತಾಂತರ್ಯಾಮಿನಿಯೂ, ಅತಿ ಸೂಕ್ಷ್ಮರೂಪಳೂ, ನಾಶರಹಿತಳೂ, ಏಕಾಕಾರಳೂ, ಸ್ವರ್ಗಸೋಪಾನವೂ ಆಗಿರುವಳೆಂದು ಹೇಳುವರು.

೫೦. ಈಕೆಯು ಸಕಲರನ್ನೂ ಸಂಸಾರಸಮುದ್ರದಿಂದ ಕಡೆಹಾಯಿಸುವುದಕ್ಕಾಗಿಯೇ ರುದ್ರನಿಂದ ಸೃಷ್ಟಳಾಗಿರುವಳು.

೫೧. ಯಾವ ಮಾನವರು ಈ ನದಿಯ ಜಲವನ್ನು ಕುಡಿಯುವರೊ, ಅವರು ತಮ್ಮ ಪಾಪಸಮೂಹಗಳನ್ನು ಕಳೆದುಕೊಂಡು ಸಂಸಾರದಿಂದ ಮುಕ್ತರಾಗಿ ಶಾಶ್ವತವೂ, ದುಃಖರಹಿತವೂ ಆದ ಮೋಕ್ಷಪದವಿಯನ್ನು ಪಡೆಯುವರು.

೫೨. ಗಂಗೆಯು ಹೇಗೆಯೊ, ಹಾಗೆಯೇ ರೇವೆಯು. ಹಾಗೆಯೇ ಸರಸ್ವತಿಯು. ಈ ಮೂರರ ಸ್ನಾನ, ದರ್ಶನ, ಧ್ಯಾನಗಳಿಂದಲೂ ಸಮಾನವಾದ ಫಲವುಂಟೆಂದು ಶಾಸ್ತ್ರಗಳು ಹೇಳುವುವು.

ವರದಾನಾನ್ಮಹಾಭಾಗಾ ಹ್ಯಧಿಕಾ ಚೋಚ್ಯತೇ ಬುಧೈಃ ।
ಕಾರುಣ್ಯಾಂತರಭಾವೇನ ನ ನ್ಯ್ರತಾ ಸಮುಪಾಗತಾ ॥ ೫೩ ॥
ಮುಚ್ಯಂತೇ ದರ್ಶನಾತ್ತೇನ ಪಾತಕೈಃ ಸ್ನಾನಮಂಗಲೈಃ ।
ನರ್ಮದಾಯಾಂ ನೃಪಶ್ರೇಷ್ಠ ಯೇ ನಮಂತಿ ತ್ರಿಲೋಚನಂ ॥ ೫೪ ॥
ಉಮಾರುದ್ರಾಂಗಸಂಭೂತಾ ಯೇನ ಚೈಷಾ ಮಹಾನದೀ ।
ಲೋಕಾನ್ಪ್ರಾಪಯತೇ ಸ್ವರ್ಗಂ ತೇನ ಪುಣ್ಯತ್ವಮಾಗತಾ ॥ ೫೫ ॥
ಯ ಏವಮೀಶಾನವರಸ್ಯ ದೇಹಂ
ವಿಭಜ್ಯ ದೇವೀಮಿಹ ಸಂಶೃಣೋತಿ ।
ಸ ಯಾತಿ ರುದ್ರಂ ಮಹತಾ ರವೇಣ
ಗಂಧರ್ವಯಕ್ಷೈರಿವ ಗೀಯಮಾನಃ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ನರ್ಮದೋತ್ಪತ್ತಿ–ತತ್ಸ್ನಾನಫಲಾದಿಕಥನಂ" ನಾಮ ನವಮೋಽಧ್ಯಾಯಃ

---

೫೩. ಆದರೂ ಈಶ್ವರನ ವರಪ್ರದಾನದ ಕಾರಣದಿಂದ ನರ್ಮದೆಯೇ ಅಧಿಕಳೆಂದು ತಿಳಿದವರು ಹೇಳುವರು. ಜನರಲ್ಲಿನ ಕರುಣೆಯಿಂದಲೇ ಇದು ನಷ್ಟವಾಗದೆ ಭೂಮಿಗೆ ಬಂದಿರುವುದು.

೫೪. ರಾಜೇಂದ್ರ! ಇದರ ದರ್ಶನದಿಂದಲೂ, ಮಂಗಳಸ್ನಾನದಿಂದಲೂ ಕೂಡಿ ಯಾರು ಮಹಾದೇವನನ್ನು ನೋಡುವರೊ, ಅವರು ಸಕಲ ಪಾತಕಗಳಿಂದ ಮುಕ್ತರಾಗುವರು.

೫೫. ಪಾರ್ವತೀಪರಮೇಶ್ವರರ ದೇಹಗಳಿಂದ ಹುಟ್ಟಿರುವ ಈ ನದಿಯು ಸಮಸ್ತಜನರಿಗೂ ಸ್ವರ್ಗವನ್ನು ದೊರಕಿಸುವುದರಿಂದ ಇದು ಮಹಾಪುಣ್ಯಪ್ರದವಾಯಿತು.

೫೬. ಈಶ್ವರನ ದೇಹವನ್ನು ವಿಭಜಿಸಿ ಹುಟ್ಟಿದ ನರ್ಮದೆಯ ಈ ಚರಿತ್ರೆಯನ್ನು ಯಾವನು ಕೇಳುವನೊ, ಅವನು ಗಂಧರ್ವಯಕ್ಷಾದಿಗಳ ಮಹಾಘೋಷಸಹಿತವಾದ ಸ್ತೋತ್ರಗಳನ್ನು ಕೇಳುತ್ತ ಪರಮೇಶ್ವರನ ಸನ್ನಿಧಿವಿಶೇಷವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನರ್ಮದೋತ್ಪತ್ತಿ–ತತ್ಸ್ನಾನಫಲಾದಿಕಥನ"ವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ನರ್ಮದಾಸ್ನಾನಫಲಶ್ರುತಿಕಥನಂ

**ಯುಧಿಷ್ಠಿರ ಉವಾಚ :—**

**ಕಸ್ಮಿನ್ಕಲ್ಪೇ ಮಹಾಭಾಗಾ ನರ್ಮದೇಯಂ ದ್ವಿಜೋತ್ತಮ ।**
**ವಿಭಕ್ತಾ ಋಷಿಭಿಃ ಸರ್ವೈಸ್ತಪೋಯುಕ್ತೈರ್ಮಹಾತ್ಮಭಿಃ ॥ ೧ ॥**
**ಏತದ್ವಿಸ್ತರತಃ ಸರ್ವಂ ಬ್ರೂಹಿ ಮೇ ವದತಾಂ ವರ ।**
**ಕಲ್ಪಾಂತೇ ಯದ್ಭವೇತ್ಕಷ್ಟಂ ಲೋಕಾನಾಂ ತತ್ತ್ವಮೇವ ಚ ॥ ೨ ॥**
**ಅತೀತೇ ತು ಪುರಾಕಲ್ಪೇ ಯಥೇಯಂ ವರ್ತತೇಽನಘ ।**
**ಅಸ್ಯಾಂತ್ಯಸ್ಯ ಚ ಕಲ್ಪಸ್ಯ ವ್ಯವಸ್ಥಾಂ ಕಥಯ ಪ್ರಭೋ ।**
**ಏವಮುಕ್ತಃ ಸಭಾಮಧ್ಯೇ ಮಾರ್ಕಂಡೋ ವಾಕ್ಯಮಬ್ರವೀತ್ ॥ ೩ ॥**

**ಮಾರ್ಕಂಡೇಯ ಉವಾಚ :—**

**ವಕ್ಷ್ಯೇಽಹಂ ಶ್ರೂಯತಾಂ ಸರ್ವೈಃ ಕಥೇಯಂ ಪೂರ್ವತಃ ಶ್ರುತಾ ॥ ೪ ॥**
**ಮಹತ್ಕಥೇಯಂ ವೈಶಿಷ್ಟೇ ಕಲ್ಪಾದಸ್ಮಾತ್ಪರಂ ತು ಯಾ ।**
**ಲೋಕಕ್ಷಯಕರೋ ಘೋರ ಆಸೀತ್ಕಾಲಃ ಸುದಾರುಣಃ ॥ ೫ ॥**

## ಕನ್ನಡದ ಅನುವಾದ

### ನರ್ಮದಾಸ್ನಾನಫಲಶ್ರುತಿಕಥನ

೧. ಯುಧಿಷ್ಠಿರನು ಕೇಳುತ್ತಾನೆ:—"ದ್ವಿಜೋತ್ತಮನೆ! ತಪಸ್ಸಂಪನ್ನರೂ, ಮಹಾತ್ಮರೂ ಆದ ಋಷಿವರ್ಯರು ಪುಣ್ಯಪ್ರದೆಯಾದ ಈ ನದಿಯನ್ನು ಯಾವ ಕಲ್ಪದಲ್ಲಿ ವಿಭಾಗಿಸಿದರು ?

೨. ವಾಗ್ಮಿಶ್ರೇಷ್ಠನೆ! ಇದನ್ನು ನನಗೆ ವಿಸ್ತಾರವಾಗಿ ತಿಳಿಸು. ಕಲ್ಪಾಂತದಲ್ಲಿ ಸಕಲ ಲೋಕಗಳಿಗೂ ಯಾವ ಕಷ್ಟವುಂಟಾಗುವುದೆಂಬುದನ್ನೂ ಯಥಾರ್ಥವಾಗಿ ತಿಳಿಸು.

೩. ಕಳೆದ ಕಲ್ಪದಲ್ಲಿ ಈ ನದಿಯು ಹೇಗಿತ್ತೆಂಬುದನ್ನೂ, ಕೊನೆಯದಾದ ಈ ಕಲ್ಪದಲ್ಲಿ ಇದರ ವ್ಯವಸ್ಥಿತಿಯನ್ನೂ ನನಗೆ ಹೇಳುವವನಾಗು." ಇಂತೆಂದು ಸಭಾಮಧ್ಯದಲ್ಲಿದ್ದ ಯುಧಿಷ್ಠಿರನು ನುಡಿದ ವಾಕ್ಯಗಳನ್ನು ಕೇಳಿ ಮಾರ್ಕಂಡೇಯನು ಹೇಳತೊಡಗಿದನು.

೪. ಮಾರ್ಕಂಡೇಯನು ಹೇಳುತ್ತಾನೆ:— ಪೂರ್ವದಲ್ಲಿ ನಾನು ಕೇಳಿದ ಚರಿತ್ರೆಯನ್ನು ಹೇಳುವೆನು. ಸಕಲರೂ ಸಾವಧಾನದಿಂದ ಕೇಳಿರಿ.

೫. ಈ ಕಲ್ಪಕ್ಕೆ ಹಿಂದಿನ ಕಲ್ಪದಲ್ಲಿ ನಡೆದ ಈ ಕಥೆಯು ಅತ್ಯಂತ ವಿಶೇಷಸಹಿತವಾದುದು. ಆ ಕಲ್ಪಾಂತ್ಯದಲ್ಲಿ ಲೋಕನಾಶಕವಾದ ಭಯಂಕರ ಸಮಯವು ಪ್ರಾಪ್ತವಾಯಿತು.

ತಸ್ಮಿನ್ನಪಿ ಮಹಾಘೋರೇ ಯುಥೇಯಂ ನ ಮೃತಾ ಸತೀ ।
ಪರಿತುಷ್ಟೈರ್ವಿಭಕ್ತಾ ಚ ಶೃಣುಧ್ವಂ ತಾಂ ಕಥಾಮಿಮಾಂ ॥ ೬ ॥
ಯುಗಾಂತೇ ಸಮನುಪ್ರಾಪ್ತೇ ಪಿತಾಮಹದಿನತ್ರಯೇ ॥ ೭ ॥
ಮಾನಸಾ ಬ್ರಹ್ಮಣಃ ಪುತ್ರಾಃ ಸಾಕ್ಷಾದ್ಬ್ರಹ್ಮೇವ ಸತ್ತಮಾಃ ।
ಸನಕಾದ್ಯಾ ಮಹಾತ್ಮಾನೋ ಯೇ ಚ ವೈಮಾನಿಕಾ ಗಣಾಃ ॥ ೮ ॥
ಯಮೇಂದ್ರವರುಣಾದ್ಯಾಶ್ಚ ಲೋಕಪಾಲಾ ದಿನತ್ರಯೇ ।
ಕಾಲಾಪೇಕ್ಷಾಸ್ತು ತಿಷ್ಠಂತಿ ಲೋಕವೃತ್ತಾಂತತತ್ಪರಾಃ ॥ ೯ ॥
ತತಃ ಕಲ್ಪಕ್ಷಯೇ ಪ್ರಾಪ್ತೇ ತೇಷಾಂ ಜ್ಞಾನಮನುತ್ತಮಂ ।
ಸರ್ವೇಷಾಂ ನಶ್ಯತೇ ಚಾಯುರ್ಯುಗರೂಪಾನುಸಾರತಃ ॥ ೧೦ ॥
ಭೂರ್ಲೋಕಂ ತೇ ಪರಿತ್ಯಜ್ಯ ಅಗಮಂಶ್ಚ ಭುವಂ ತದಾ ।
ಸ್ವರ್ಲೋಕಂ ಚ ಮಹಶ್ಚೈವ ಜನಶ್ಚೈವ ತಪಸ್ತದಾ ॥ ೧೧ ॥
ಆಶ್ರಯಂ ಸತ್ಯಲೋಕಂ ಚ ಸರ್ವಲೋಕಮನುತ್ತಮಂ ।
ಕಾಲಂ ಯುಗಸಹಸ್ರಾಂತಂ ಪುತ್ರಪೌತ್ರಸಮನ್ವಿತಾಃ ।
ಸತ್ಯಲೋಕೇ ಚ ತಿಷ್ಠಂತಿ ಯಾವತ್ಸಂಜಾಯತೇ ಜಗತ್ ॥ ೧೨ ॥

---

೬. ಇಂತಹ ಮಹಾಘೋರಸಮಯದಲ್ಲಿಯೂ ಈ ನದಿಯು ನಷ್ಟವಾಗದಿರುವುದನ್ನು ಕಂಡು ಸಂತೋಷಭರಿತರಾದ ಮಹರ್ಷಿಗಳು ಇದನ್ನು ಹೇಗೆ ವಿಭಜನೆಮಾಡಿದರೆಂಬ ಕಥೆಯನ್ನು ಲಾಲಿಸಿರಿ.

೭. ಲೋಕಪಿತಾಮಹನ ಮೂರು ದಿನಗಳು ಕಳೆಯಲು ಮತ್ತೊಂದು ಕಲ್ಪಾಂತವುಂಟಾಯಿತು.

೮. ಬ್ರಹ್ಮನ ಮಾನಸಪುತ್ರರೂ, ಆತನಂತೆಯೇ ಮಹಾಮಹಿಮರೂ ಆದ ಸನಕಾದಿಮಹಾತ್ಮರೂ, ಇತರ ವಿಮಾನಸಂಚಾರಿಗಳಾದ ಗಣಗಳೂ ಇರುವರಷ್ಟೆ.

೯. ಯಮ, ಮಹೇಂದ್ರ, ವರುಣರೇ ಮೊದಲಾದ ದಿಕ್ಪಾಲಕರೂ ಲೋಕಪಾಲನತತ್ಪರರಾದುದರಿಂದ ಸೃಷ್ಟಿಕಾಲವನ್ನೇ ನಿರೀಕ್ಷಿಸುತ್ತಿದ್ದರು.

೧೦. ಕಲ್ಪಕ್ಷಯವುಂಟಾಗಲು ಯುಗಧರ್ಮವನ್ನನುಸರಿಸಿ ಇವರೆಲ್ಲರಿಗೂ ಇದ್ದ ಅಪ್ರತಿಮವಾದ ಜ್ಞಾನವೂ, ದೀರ್ಘಾಯುಷ್ಯವೂ ನಾಶವಾಗಿದ್ದುವು.

೧೧. ಅವರು ಭೂಲೋಕವನ್ನು ತ್ಯಜಿಸಿ, ಭುವರ್ಲೋಕವನ್ನು ಅಲ್ಲಿಂದ ಕ್ರಮವಾಗಿ ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕಗಳನ್ನೂ ಸೇರಿದರು.

೧೨. ಕಡೆಗೆ ತಮ್ಮ ಪುತ್ರಪೌತ್ರಸಹಿತರಾಗಿ ಉತ್ತಮಾಶ್ರಯವೆನಿಸಿದ ಸತ್ಯಲೋಕಕ್ಕೆ ಹೋಗಿ ಅಲ್ಲಿ ಒಂದುಸಾವಿರ ವರ್ಷಗಳ ಕಾಲವನ್ನು ಕಳೆದು ಪುನಃ ಲೋಕಸೃಷ್ಟಿಯಾಗುವುದನ್ನು ನಿರೀಕ್ಷಿಸುತ್ತಿದ್ದರು.

ಬ್ರಹ್ಮಪುತ್ರಾಶ್ಚ ಯೇ ಕೇಚಿತ್ಕಲ್ಪಾದೌ ನ ಭವಂತಿ ಹ ।
ತ್ರೈಲೋಕ್ಯಂ ತೇ ಪರಿತ್ಯಜ್ಯ ಅನಾಧಾರಂ ಭವಂತಿ ಚ ॥ ೧೩ ॥
ತೈಃ ಸಾರ್ಧಂ ಯೇ ತು ತೇ ವಿಪ್ರಾ ಅನ್ಯೇಚಾಽಪಿ ತಪೋಧನಾಃ ।
ಯಕ್ಷರಕ್ಷಃಪಿಶಾಚಾಶ್ಚ ಅನ್ಯೇ ವೈಮಾನಿಕಾ ಗಣಾಃ ॥ ೧೪ ॥
ಋಷಯಶ್ಚ ಮಹಾಭಾಗಾ ವರ್ಣಾಶ್ಚಾಽನ್ಯೇ ಪೃಥಗ್ವಿಧಾಃ ।
ಸೀದಂತಿ ಭೂಮ್ಯಾಂ ಸಹಿತಾ ಯೇ ಚಾಽನ್ಯೇ ತಲವಾಸಿನಃ ॥ ೧೫ ॥
ಅನಾವೃಷ್ಟಿರಭೂತ್ತತ್ರ ಮಹತೀ ಶತವಾರ್ಷಿಕೀ ।
ಲೋಕಕ್ಷಯಕರೀ ರೌದ್ರಾ ವೃಕ್ಷವೀರುದ್ವಿನಾಶಿನೀ ॥ ೧೬ ॥
ತ್ರೈಲೋಕ್ಯಸಂಕ್ಷೋಭಕರೀ ಸಪ್ತಾಽರ್ಣವವಿಶೋಷಣೀ ।
ತತೋ ಲೋಕಾಃ ಕ್ಷುಧಾವಿಷ್ಟಾ ಭ್ರಮಂತೀವ ದಿಶೋ ದಶ ॥ ೧೭ ॥
ಕಂದಮೂಲೈಃ ಫಲೈರ್ವಾಽಪಿ ವರ್ತಯಂತೇ ಸುದುಃಖಿತಾಃ ।
ಸರಿತಃ ಸಾಗರಾಃ ಕೂಪಾಃ ಸೇವಂತೇ ಪಾವನಾನಿ ಚ ॥ ೧೮ ॥
ತತ್ರಾಽಪಿ ಸರ್ವೇ ಶುಷ್ಯಂತಿ ಸರಿದ್ಭಿಃ ಸಹ ಸಾಗರಾಃ ।
ತತೋ ಯಾನ್ಯಲ್ಪಸಾರಾಣಿ ಸತ್ವಾನಿ ಪೃಥಿವೀತಲೇ ॥ ೧೯ ॥

---

೧೩. ಕಲ್ಪಾದಿಯಲ್ಲಿ ಜನ್ಮವಿಲ್ಲದಿರುವವರೂ ಬ್ರಹ್ಮಮಾನಸಪುತ್ರರಾದವರೂ ಆದ ಕೆಲವರು ಮೂರು ಲೋಕಗಳನ್ನೂ ಬಿಟ್ಟು ನಿಲ್ಲಲು ಬೇರೆ ನೆಲೆಯಿಲ್ಲದವರಾದರು.

೧೪–೧೫. ಅವರೊಡನೆಯೇ ಭೂಲೋಕದಲ್ಲಿದ್ದ ಬ್ರಾಹ್ಮಣೋತ್ತಮರೂ, ಇತರ ತಪೋನಿರತರೂ, ಯಕ್ಷರೂ, ರಾಕ್ಷಸರೂ, ಪಿಶಾಚರೂ, ಇತರ ವ್ಯೋಮಸಂಚಾರಿ ಗಣಗಳೂ, ಭಾಗ್ಯಶಾಲಿಗಳಾದ ಋಷಿವರ್ಯರೂ, ಇತರ ಅನೇಕ ವರ್ಣಗಳ ಜನರೂ, ಅತಲಾದಿ ಲೋಕನಿವಾಸಿಗಳೂ ಬಹಳ ಪರಿತಾಪಗೊಂಡರು.

೧೬. ಆಗ ಮಹತ್ತರವೂ, ಪ್ರಾಣಿಕ್ಷಯಕರವೂ, ವೃಕ್ಷಗುಲ್ಮಾದಿನಾಶಕರವೂ, ಮಹಾಘೋರವೂ ಆದ ಅನಾವೃಷ್ಟಿಯು ಒಂದುನೂರು ವರ್ಷಗಳವರೆಗೆ ನಡೆಯಿತು.

೧೭. ಮೂರು ಲೋಕಗಳನ್ನೂ ಕ್ಷೋಭೆಗೊಳಿಸುತ್ತ, ಆ ಪ್ರಳಯವು ಏಳು ಸಮುದ್ರಗಳನ್ನೂ ಒಣಗಿಸಿದ ಆ ಕಾಲದಲ್ಲಿ ಜನರೆಲ್ಲರೂ ಭ್ರಾಂತರಾಗಿ ಹತ್ತು ದಿಕ್ಕುಗಳಿಗೂ ಓಡಿದರು.

೧೮–೧೯. ಗಡ್ಡೆಗೆಣಸುಗಳಿಂದಲೂ, ಬೇರುಗಳಿಂದಲೂ, ಹಣ್ಣುಗಳಿಂದಲೂ ಬಹಳ ಕಷ್ಟದಿಂದ ಜೀವಿಸುತ್ತ ಪವಿತ್ರಗಳೆನಿಸಿದ ನದಿಗಳನ್ನೂ, ಸಮುದ್ರಗಳನ್ನೂ, ಕೊಳಗಳನ್ನೂ ಆಶ್ರಯಿಸಿ ತಿರುಗುತ್ತಿದ್ದರು. ಆ ನದಿಗಳೂ, ಸಾಗರಗಳೂ ಎಲ್ಲವೂ ಒಣಗಿಹೋಗಲು ಭೂಮಂಡಲದಲ್ಲಿ ಅಲ್ಪಸತ್ತ್ವವುಳ್ಳ ಯಾವ

ತಾನ್ಯೇವಾಗ್ರೇ ಪ್ರಲೀಯಂತೇ ಭಿನ್ನಾನ್ಯುರುಜಲೇನ ವೈ ।
ಅಥ ಸಂಕ್ಷೀಯಮಾಣಾಸು ಸರಿತ್ಸು ಸಹ ಸಾಗರೈಃ ॥ ೨೦ ॥
ಋಷೀಣಾಂ ಷಷ್ಟಿಸಾಹಸ್ರಂ ಕುರುಕ್ಷೇತ್ರನಿವಾಸಿನಾಂ ।
ಯೇ ಚ ವೈಖಾನಸಾ ವಿಪ್ರಾ ದಂತೋಲೂಖಲಿನಸ್ತಥಾ ॥ ೨೧ ॥
ಹಿಮಾಚಲಗುಹಾಗುಹ್ಯೇ ಯೇ ವಸಂತಿ ತಪೋಧನಾಃ ।
ಸರ್ವೇ ತೇ ಮಾಮುಪಾಗಮ್ಯ ಕ್ಷುತ್ತೃಷಾರ್ತಾಸ್ತಪೋಧನಾಃ ॥ ೨೨ ॥
ಊಚುಃ ಪ್ರಾಂಜಲಯಃ ಸರ್ವೇ ಸೀದಯಾಮೋ ಮಹಾಮುನೇ ।
ಸರಿತ್ಸಾಗರಶೈಲಾಂತಂ ಜಗತ್ಸಂಶುಷ್ಯತೇ ದ್ವಿಜ ॥ ೨೩ ॥
ಕುತ್ರ ಯಾಸ್ಯಾಮ ಸಹಿತಾ ಯಾವತ್ಕಾಲಸ್ಯ ಪರ್ಯಯಃ ।
ದೀರ್ಘಾಯುರಸಿ ವಿಪ್ರೇಂದ್ರ ನಮೃತಸ್ತ್ವಂ ಯುಗಕ್ಷಯೇ ॥ ೨೪ ॥
ಭೂತಂ ಭವ್ಯಂ ಭವಿಷ್ಯಚ್ಚ ಸರ್ವಂ ತವ ಹೃದಿ ಸ್ಥಿತಂ ।
ತಸ್ಮಾತ್ತ್ವಂ ವೇತ್ಸಿ ಸರ್ವಂ ಚ ಕಥಯಸ್ವ ಮಹಾವ್ರತ ॥ ೨೫ ॥

---

ಕ್ಷುದ್ರಜಂತುಗಳಿದ್ದುವೊ, ಅವುಗಳೇ ಮೊದಲು ನೀರಡಿಕೆಯಿಂದ ಪ್ರಾಣತ್ಯಾಗವನ್ನು ಮಾಡಿದುವು.

೨೦. ಇಂತು ಎಲ್ಲ ನದಿಗಳೂ, ಸಾಗರಗಳೂ ಬತ್ತಿಹೋಗುವ ಕಾಲದಲ್ಲಿ ಅರುವತ್ತುಸಾವಿರ ಮಂದಿ ಮಹರ್ಷಿಗಳು ಕುರುಕ್ಷೇತ್ರ ಮಹಾ ತೀರ್ಥದಲ್ಲಿ ವಾಸಮಾಡುತ್ತಿದ್ದರು.

೨೧. ಹಾಗೆಯೇ ಕೆಲವರು ವೈಖಾನಸರೂ, ದಂತೋಲೂಖಲಿಗಳೂ ಆದ ತಪಸ್ವಿಗಳು ಹಿಮಾಚಲಪರ್ವತದ ಏಕಾಂತ ಗುಹೆಗಳಲ್ಲಿ ವಾಸಮಾಡುತ್ತಿದ್ದರು.

೨೨. ಅವರೆಲ್ಲರೂ ಹಸಿವು ಬಾಯಾರಿಕೆಗಳಿಂದ ಬಹಳ ಸಂಕಟಗೊಂಡು ನನ್ನ ಬಳಿಗೆ ಬಂದು ಕೈಗಳನ್ನು ಜೋಡಿಸಿ ಇಂತೆಂದರು. "ಮಹಾಮುನಿಯೆ! ನಾವು ಬೆಂದುಹೋಗುತ್ತಿರುವೆವು.

೨೩. ಬ್ರಾಹ್ಮಣೋತ್ತಮ! ನದೀಸಾಗರಪರ್ವತಾದಿ ಸಕಲಪ್ರಪಂಚವೂ ಒಣಗಿಹೋಗುತ್ತಿರುವುದು. ಈ ದುಷ್ಕಾಲವು ಕಳೆಯುವವರೆಗೂ ನಾವೆಲ್ಲರೂ ಎಲ್ಲಿಗೆ ಹೋಗಿ ವಾಸಿಸೋಣ?

೨೪. ವಿಪ್ರೇಂದ್ರ! ನೀನು ದೀರ್ಘಾಯುವಾಗಿ ಕಲ್ಪಕ್ಷಯದಲ್ಲಿಯೂ ನಾಶವನ್ನು ಹೊಂದುವವನಲ್ಲ. ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿನ ಸರ್ವ ವಿಷಯಗಳೂ ನಿನ್ನ ಅಂತರಂಗದಲ್ಲಿ ನೆಲಸಿರುವುವು.

೨೫. ಮಹಾಮಹಿಮನೆ! ನೀನೆಲ್ಲವನ್ನೂ ತಿಳಿದವನಾದುದರಿಂದ ನಮಗೆ ಈಗಿನ ಕರ್ತವ್ಯವನ್ನು ತಿಳಿಸುವವನಾಗು.

ಕೀದೃಕ್ಕಾಲಂ ಮಹಾಭಾಗ ಕ್ಷಪಿಷ್ಯಾಮೋಽಥ ಸುವ್ರತ ।
ಅನಾವೃಷ್ಟಿಹತಂ ಸರ್ವಂ ಸೀದತೇ ಸ ಚರಾಚರಂ ॥ ೨೬ ॥
ಪರಿತ್ರಾಹಿ ಮಹಾಭಾಗ ನ ಯಥಾ ಯಾಮ ಸಂಕ್ಷಯಂ ।
ತತಃ ಸಂಚಿಂತ್ಯ ಮನಸಾ ತ್ವರನ್ನಿಪ್ರಾನಥಾಬ್ರವಂ ॥ ೨೭ ॥
ಕುರುಕ್ಷೇತ್ರಂ ತ್ಯಜಧ್ವಂ ಚ ಪುತ್ರದಾರಸಮನ್ವಿತಾಃ ॥ ೨೮ ॥
ತ್ಯಕ್ತ್ವೋದೀಚೀಂ ದಿಶಂ ಸರ್ವೇ ಯಾಮೋ ಯಾಮ್ಯಾಮನುತ್ತಮಾಂ ।
ನಗರಗ್ರಾಮಘೋಷಾಢ್ಯಾಂ ಪುರಪತ್ತನಶೋಭಿತಾಂ ॥ ೨೯ ॥
ಗಚ್ಛಾಮೋ ನರ್ಮದಾತೀರಂ ಬಹುಸಿದ್ಧನಿಷೇವಿತಂ ।
ರುದ್ರಾಂಗೀಂ ತಾಂ ಮಹಾಪುಣ್ಯಾಂ ಸರ್ವಪಾಪಪ್ರಣಾಶಿನೀಂ ॥ ೩೦ ॥
ಪಶ್ಯಾಮಸ್ತಾಂ ಮಹಾಭಾಗಾಂ ನ್ಯಗ್ರೋಧಾವಾರಸಂಕುಲಾಂ ।
ತರಂಗಾವರ್ತಸಲಿಲಾಂ ದರ್ದುರೀಮತ್ಸ್ಯಸಂಕುಲಾಂ ॥ ೩೧ ॥
ನಾನಾವಿಹಗಸಂಘುಷ್ಟಾಮೃಷಿಕೋಟಿನಿಷೇವಿತಾಂ ।
ಮಾಹೇಶ್ವರೈರ್ಭಾಗವತೈಃ ಸಾಂಖ್ಯೈಃ ಸಿದ್ಧೈಃ ಸುಸೇವಿತಾಂ ॥ ೩೨ ॥

---

೨೬. ಮಹಾಭಾಗ್ಯಶಾಲಿಯೆ ! ಹೀಗೆಯೇ ನಾವು ಎಷ್ಟುಕಾಲವನ್ನು ಕಳೆಯಬೇಕಾಗಿರುವುದು ? ಚರಾಚರಗಳನ್ನೊಳಗೊಂಡ ಸಕಲ ಬ್ರಹ್ಮಾಂಡವೂ ಅನಾವೃಷ್ಟಿಯಿಂದ ಸುಟ್ಟುಹೋಗಿ ಬಸವಳಿದಿರುವುದು.

೨೭. ನಾವು ನಾಶವನ್ನು ಹೊಂದದಿರುವ ಉಪಾಯವನ್ನು ಚಿಂತಿಸಿ ನೀನೇ ನಮ್ಮನ್ನು ಕಾಪಾಡು.'' ಇಂತೆಂದ ಮುನಿಗಳಿಗೆ ನಾನು ಬಹುಕಾಲ ಆಲೋಚಿಸಿ ಹೇಳಿದೆನು.

೨೮. '' ನೀವೆಲ್ಲರೂ ಪತ್ನೀಪುತ್ರಸಮೇತರಾಗಿ ಈ ಕುರುಕ್ಷೇತ್ರವನ್ನು ಬಿಟ್ಟು ಹೊರಡಿರಿ.

೨೯. ಈ ಉತ್ತರದಿಕ್ಕನ್ನು ತ್ಯಜಿಸಿ ಪಟ್ಟಣ, ಹಳ್ಳಿ, ದೊಡ್ಡಿಗಳಿಂದ ತುಂಬಿ ಕೋಟೆ, ನಗರಗಳಿಂದ ಶೋಭಿಸುತ್ತಿರುವ ಉತ್ತಮವಾದ ದಕ್ಷಿಣದಿಕ್ಕಿಗೆ ನಾವೆಲ್ಲರೂ ಹೋಗೋಣ.

೩೦. ಅನೇಕ ಸಿದ್ಧಸಮೂಹಗಳಿಂದ ಸೇವಿತವಾದ ನರ್ಮದಾತೀರವನ್ನು ಸೇರೋಣ. ರುದ್ರಶರೀರಸಂಭವೆಯಾದ ಆ ನರ್ಮದಾನದಿಯು ಮಹಾ ಪುಣ್ಯಪ್ರದವೂ, ಸಕಲ ಪಾತಕನಾಶಕವೂ ಆಗಿರುವುದು.

೩೧-೩೨. ಪರಮಪಾವನವಾದ ಆ ನದಿಯನ್ನು ನೋಡೋಣ. ಅದು ತೀರಗಳಲ್ಲಿ ಬೆಳೆದಿರುವ ಆಲದ ಮರಗಳಿಂದ ಶೋಭಿಸಿ, ತೆರೆಗಳಿಂದಲೂ, ಸುಳಿಗಳಿಂದಲೂ ಕೂಡಿದ ನೀರಿನಲ್ಲಿ ಮೀನು, ಕಪ್ಪೆಗಳೇ ಮೊದಲಾದ ಜಲಜಂತು

ಅನಾವೃಷ್ಟಿಭಯಾದ್ಭೀತಾಃ ಕೂಲಯೋರುಭಯೋರಪಿ ।
ಆಶ್ರಮೇ ಹ್ಯಾಶ್ರಮಾನ್ ದಿವ್ಯಾನ್ಕಾರಯಾಮೋ ಜಿತವ್ರತಾಃ ॥ ೩೩ ॥
ಏವಮುಕ್ತಾಸ್ತು ತೇ ಸರ್ವೇ ಸಮೇತಾಽನುಚರೈಃ ಸಹ ।
ನರ್ಮದಾತೀರಮಾಸಾದ್ಯ ಸ್ಥಿತಾಃ ಸರ್ವೇಽಕುತೋಭಯಾಃ ॥ ೩೪ ॥
ಕಿಂಚಿತ್ಪೂರ್ವಮನುಸ್ಮೃತ್ಯ ಪುರಾಕಲ್ಪಾದಿಭಿರ್ಭಯಂ ।
ಪ್ರಾಪ್ತಾಸ್ತು ನರ್ಮದಾತೀರಮಾದಾವೇವ ಕಲೌ ಯುಗೇ ॥ ೩೫ ॥
ತತೋ ವರ್ಷಶತಂ ಪೂರ್ಣಂ ದಿವ್ಯಂ ರೇವಾತಟೇಽವಸನ್ ।
ಷಡ್ತ್ರಿಂಶಚ್ಚ ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ಚ ॥ ೩೬ ॥
ತತ್ರಾಶ್ಚರ್ಯಂ ಮಯಾ ದೃಷ್ಟಮೃಷೀಣಾಂ ವಸತಾಂ ನೃಪ ।
ಅನಾವೃಷ್ಟಿಹತೇ ಲೋಕೇ ಸಂಶುಷ್ಕೇ ಸ್ಥಾವರೇ ಚರೇ ॥ ೩೭ ॥
ಭಿನ್ನೇ ಯುಗಾದಿಕಲನೇ ಹಾಹಾಭೂತೇ ವಿಚೇತನೇ ।
ಚಾತುರ್ವರ್ಣ್ಯೇ ಪ್ರಲೀನೇ ತು ನಷ್ಟೇ ಹೋಮಬಲಿಕ್ರಮೇ ॥ ೩೮ ॥

---

ಗಳುಳ್ಳದಾಗಿರುವುದು. ಅನೇಕ ಪಕ್ಷಿಗಳು ಅಲ್ಲಿ ಧ್ವನಿಗೈಯುತ್ತಿರುವುವು. ಅಸಂಖ್ಯಾತರಾದ ಮಹರ್ಷಿಗಳು ಅದನ್ನು ಸೇವಿಸುತ್ತಿರುವರು. ಪಾಶುಪತರು, ಸಾಂಖ್ಯರು, ಭಾಗವತರು, ಸಿದ್ಧರು ಮೊದಲಾಗಿ ಎಲ್ಲರೂ ಅಲ್ಲಿ ನೆರೆದಿರುವರು.

೩೩. ದಾರುಣವಾದ ಈ ಅನಾವೃಷ್ಟಿಯ ಭಯವನ್ನು ಹೊಂದಿರುವ ನಾವು ನದಿಯ ಎರಡು ತೀರಗಳಲ್ಲಿಯೂ ದಿವ್ಯಾಶ್ರಮಗಳನ್ನು ಕಟ್ಟಿಕೊಂಡು ವ್ರತ ನಿಯಮಗಳನ್ನು ನಡೆಸೋಣ.''

೩೪. ಇಂತೆಂದು ನಾನು ಹೇಳಲು, ಸಮಸ್ತರೂ ತಮ್ಮ ಪರಿವಾರಗಳೊಡನೆ ನರ್ಮದಾತೀರಗಳನ್ನು ಸೇರಿ ನಿರ್ಭಯರಾಗಿ ವಾಸಿಸುತ್ತಿದ್ದರು.

೩೫. ಹಿಂದೆ ಕಲ್ಪಾದಿಗಳಲ್ಲಿ ತಾವು ಇತರ ಸ್ಥಾನಗಳಲ್ಲಿ ಸಂಕಟಗಳಿಗೀಡಾದುದನ್ನು ನೆನೆದು ಕಲಿಯುಗದಲ್ಲಿ ಮೊದಲೇ ನರ್ಮದಾತೀರವನ್ನು ಸೇರಿದರು.

೩೬. ಇಂತು ರೇವಾತೀರದಲ್ಲಿ ಅವರು ಸಂಪೂರ್ಣವಾಗಿ ಒಂದುನೂರು ದಿವ್ಯವರ್ಷಗಳು (ಎಂದರೆ ಮುವ್ವತ್ತಾರುಸಾವಿರ ಮಾನವವರ್ಷಗಳು) ಅಲ್ಲಿ ವಾಸಮಾಡಿದರು.

೩೭. ಎಲೈ ಧರ್ಮರಾಜನೆ! ಆ ಋಷಿವರ್ಯರು ಅಲ್ಲಿ ವಾಸಮಾಡುತ್ತಿರಲು, ಅಲ್ಲಿ ನಾನೊಂದು ಆಶ್ಚರ್ಯವನ್ನು ನೋಡಿದೆನು. ಆಗ ಲೋಕವು ಅನಾವೃಷ್ಟಿಗೆ ಸಿಲುಕಿ ಸ್ಥಾವರಜಂಗಮ ಪ್ರಾಣಿಗಳೆಲ್ಲವೂ ಒಣಗಿಹೋದುವು.

೩೮–೩೯. ಯುಗಾದಿ ಕಾಲಮರ್ಯಾದೆಯು ನಷ್ಟವಾಯಿತು. ಲೋಕವು ಹಾಹಾಕಾರವನ್ನು ಮಾಡುತ್ತ ನಿಶ್ಚೇಷ್ಟವಾಯಿತು. ವರ್ಣಾಶ್ರಮವ್ಯವಸ್ಥೆಯು

ನಿಃಸ್ವಾಹೇ ನಿರ್ವಷಟ್ಕಾರೇ ಶೌಚಾಚಾರವಿವರ್ಜಿತೇ ।
ಇಯಮೇಕಾ ಸರಿಚ್ಛ್ರೇಷ್ಠಾ ಋಷಿಕೋಟಿನಿಷೇವಿತಾ ॥ ೩೯ ॥
ನಾನ್ಯಾ ಕಾಚಿತ್ತ್ರಿಲೋಕೇಽಪಿ ರಮಣೀಯಾ ನರೇಶ್ವರ ।
ಯಥೇಯಂ ಪುಣ್ಯಸಲಿಲಾ ಇಂದ್ರಸ್ಯೇವಾಮರಾವತೀ ॥ ೪೦ ॥
ದೇವತಾಯತನೈಃ ಶುಭ್ರೈರಾಶ್ರಮೈಶ್ಚ ಸುಕಲ್ಪಿತೈಃ ।
ಶೋಭತೇ ನರ್ಮದಾ ದೇವೀ ಸ್ವರ್ಗೇ ಮಂದಾಕಿನೀ ಯಥಾ ॥ ೪೧ ॥
ಯಾವದ್ವೃಕ್ಷಾ ಮಹಾಶೈಲಾ ಯಾವತ್ಸಾಗರಸಂಭವಾ ।
ಉಭಯೋಃ ಕೂಲಯೋಸ್ತಾವನ್ಮಂಡಿತಾಯತನೈಃ ಶುಭೈಃ ॥ ೪೨ ॥
ಹೂಯದ್ಭಿರಗ್ನಿಹೋತ್ರೈಶ್ಚ ಹವಿರ್ಧೂಮಸಮಾಕುಲಾ ।
ಬಭೂವ ನರ್ಮದಾ ದೇವೀ ಪ್ರಾವೃಟ್ಕಾಲೇವ ಶರ್ವರೀ ॥ ೪೩ ॥
ದೇವತಾಯತನೈರ್ನೈಕೈಃ ಪೂಜಾಸಂಸ್ಕಾರಶೋಭಿತಾ ।
ಸರಿದ್ಭಿರ್ಭ್ರಾಜತೇ ಶ್ರೇಷ್ಠಾ ಪುರೀ ಶಾಕ್ರೀ ಚ ಭಾಸ್ಕರೀ ॥ ೪೪ ॥

---

ಮಾಯವಾಗಿ ಹವ್ಯಕವ್ಯಕರ್ಮಗಳು ನಿಂತುಹೋದುವು. ಸ್ವಾಹಾಕಾರ ವಷಟ್ಕಾರಗಳು ಕೇಳಿಬರುತ್ತಿರಲಿಲ್ಲ. ಶೌಚಧರ್ಮಗಳು ಕಳೆದುಹೋದ ಆ ಕಾಲದಲ್ಲಿ ಈ ಉತ್ತಮನದಿಯೊಂದೇ ಅಸಂಖ್ಯಾತರಾದ ಮಹರ್ಷಿಗಳಿಂದ ಸಂಸೇವಿತವಾಗಿದ್ದಿತು.

೪೦. ರಾಜೇಂದ್ರನೆ! ಮೂರು ಲೋಕಗಳಲ್ಲಿಯೂ ಇಂತಹ ರಮಣೀಯವಾದ ನದಿಯು ಮತ್ತೊಂದಿರಲಿಲ್ಲ. ಇಂದ್ರನ ಅಮರಾವತಿಯಂತೆ ಪುಣ್ಯಜಲಾಶ್ರಯೆಯಾದ ಈ ನದಿಯು ಅನುಪಮವಾಗಿದ್ದಿತು.

೪೧. ಆಗ ಶುಭ್ರಗಳಾದ ದೇವಾಲಯಗಳಿಂದಲೂ, ರಮ್ಯಗಳಾದ ಆಶ್ರಮಗಳಿಂದಲೂ ನರ್ಮದೆಯು ದೇವಲೋಕದ ಮಂದಾಕಿನಿಯಂತೆ ಶೋಭಿಸುತ್ತಿದ್ದಿತು.

೪೨. ಎರಡು ದಡಗಳಲ್ಲಿಯೂ ವೃಕ್ಷಮಹಾಪರ್ವತಗಳು ತಡೆಯುವವರೆಗೂ, ಸಮುದ್ರವನ್ನು ಸೇರುವ ಪರ್ಯಂತವೂ ಈ ನದಿಯು ಎರಡೂ ದಡಗಳಲ್ಲಿ ಪವಿತ್ರ ದೇವಾಲಯಗಳಿಂದ ಅಲಂಕೃತವಾಗಿದ್ದಿತು.

೪೩. ಅಗ್ನಿಹೋತ್ರಗಳ ಹೋಮಗಳ ಹೊಗೆಯಿಂದ ತುಂಬಿದುದಾಗಿ ಆ ನದೀಪ್ರದೇಶವು ವರ್ಷಕಾಲದ ರಾತ್ರಿಯಂತೆ ಅಂಧಕಾರಮಯವಾಗಿದ್ದಿತು.

೪೪. ಅನೇಕ ದೇವಾಲಯಗಳಲ್ಲಿ ನಡೆದ ಪೂಜಾಭಿಷೇಕ ಜಲಗಳು ಉಪನದಿಗಳಂತೆ ಹರಿಯುತ್ತಿರಲು, ನರ್ಮದೆಯ ಪ್ರದೇಶವು ಮಹೇಂದ್ರಸೂರ್ಯರ ರಾಜಧಾನಿಗಳಂತೆ ಅತ್ಯಂತ ರಮಣೀಯವಾಗಿದ್ದಿತು.

ಕೇಚಿತ್ಪಂಚಾಗ್ನಿತಪಸಃ ಕೇಚಿದಪ್ಯಗ್ನಿಹೋತ್ರಿಣಃ ।
ಕೇಚಿದ್ಧೂಮಕಮಶ್ನಂತಿ ತಪಸ್ಯುಗ್ರೇ ವ್ಯವಸ್ಥಿತಾಃ ॥ ೪೫ ॥
ಆತ್ಮಯಜ್ಞರತಾಃ ಕೇಚಿದಪರೇ ಭಕ್ತಿಭಾಗಿನಃ ।
ವೈಷ್ಣವಜ್ಞಾನಮಾಸಾದ್ಯ ಕೇಚಿಚ್ಛೈವಂ ವ್ರತಂ ತಥಾ ॥ ೪೬ ॥
ಏಕರಾತ್ರಂ ದ್ವಿರಾತ್ರಂ ಚ ಕೇಚಿತ್ ಷಷ್ಠಾಽಹಭೋಜನಾಃ ।
ಚಾಂದ್ರಾಯಣವಿಧಾನೈಶ್ಚ ಕೃಚ್ಛ್ರಿಣಶ್ಚಾಽತಿಕೃಚ್ಛ್ರಿಣಃ ॥ ೪೭ ॥
ಏವಂ ವಿಧೈಸ್ತಪೋಭಿಶ್ಚ ನರ್ಮದಾತೀರಶೋಭಿತೈಃ ।
ಯಜದ್ಭಿಃ ಶಂಕರಂ ದೇವಂ ಕೇಶವಂ ಭಾತಿ ನಿತ್ಯದಾ ॥ ೪೮ ॥
ಏಕತ್ವೇ ಚ ಪೃಥಕ್ತ್ವೇ ಚ ಯಜತಾಂ ಚ ಮಹೇಶ್ವರಂ ।
ಕಲೌ ಯುಗೇ ಮಹಾಘೋರೇ ಪ್ರಾಪ್ತಾಃ ಸಿದ್ಧಿಮನುತ್ತಮಾಂ ॥ ೪೯ ॥
ಯಸ್ಯ ಯಸ್ಯ ಹಿ ಯಾ ಭಕ್ತಿರ್ವಿಜ್ಞಾನಂ ಯಸ್ಯ ಯಾದೃಶಂ ।
ಯಸ್ಮಿನ್ಯಸ್ಮಿಂಶ್ಚ ದೇವೇ ತು ತಾಂ ತಾಮಾಶೋಽದದಾತ್ಪ್ರಭುಃ ॥ ೫೦ ॥

---

೪೫. ಕೆಲವರು ಪಂಚಾಗ್ನಿಮಧ್ಯದಲ್ಲಿ ತಪೋನಿರತರಾಗಿದ್ದರು. ಕೆಲವರು ಅಗ್ನಿಹೋತ್ರಗಳನ್ನು ನಡೆಸುತ್ತಿದ್ದರು. ಕೆಲವರು ಉಗ್ರತಪಸ್ಸಿನಲ್ಲಿ ನಿಂತವರಾಗಿ ಹವಿರ್ಧೂಮವನ್ನು ಸೇವಿಸುತ್ತಿದ್ದರು.

೪೬. ಹಲವರು ಆತ್ಮಯಜ್ಞಪರಾಯಣರಾಗಿರಲು ಇತರರು ಭಕ್ತಿಮಾರ್ಗವನ್ನನುಸರಿಸುತ್ತಿದ್ದರು. ಕೆಲವರು ವೈಷ್ಣವಜ್ಞಾನವನ್ನೂ, ಕೆಲವರು ಶೈವ ನಿಯಮಗಳನ್ನೂ ಸಾಧಿಸುತ್ತಿದ್ದರು.

೪೭. ಕೆಲವರು ಪ್ರತಿರಾತ್ರಿಯಲ್ಲಿಯೂ, ಕೆಲವರು ಎರಡು ರಾತ್ರಿಗಳಿಗೊಮ್ಮೆಯೂ, ಹಲವರು ಆರು ದಿನಕ್ಕೊಮ್ಮೆಯೂ ಆಹಾರವನ್ನು ತೆಗೆದು ಕೊಳ್ಳುತ್ತಲಿದ್ದರು. ಇತರರು ಚಾಂದ್ರಾಯಣ, ಕೃಚ್ಛ್ರ, ಅತಿಕೃಚ್ಛ್ರಗಳನ್ನು ನಡೆಸುತ್ತಿದ್ದರು.

೪೮. ಈ ವಿಧಗಳಾದ ಅನೇಕ ತಪಸ್ಸುಗಳನ್ನು ಆಚರಿಸುತ್ತ ಶಿವನನ್ನೋ ಕೇಶವನನ್ನೋ ಪೂಜಿಸುತ್ತಿರುವ ಮಹಾತ್ಮರಿಂದ ಆ ನರ್ಮದಾತೀರವು ಯಾವಾಗಲೂ ಶೋಭಿಸುತ್ತಿದ್ದಿತು.

೪೯. ಗುಂಪಾಗಿಯೂ ಬೇರೆಯಾಗಿಯೂ ಲೋಕೇಶ್ವರನ ಅರ್ಚನೆಯನ್ನು ಮಾಡಿದುದರಿಂದ ಮಹಾಭಯಂಕರವಾದ ಈ ಕಲಿಯುಗದಲ್ಲಿಯೂ ಎಲ್ಲರೂ ಸರ್ವೋತ್ತಮವಾದ ಸಿದ್ಧಿಯನ್ನು ಪಡೆದರು.

೫೦. ಯಾವ ಯಾವನಿಗೆ ಯಾವ ಯಾವ ದೇವತೆಯಲ್ಲಿ ಭಕ್ತಿಭಾವವು ಅತ್ಯಧಿಕವಾಗಿದ್ದಿತೊ, ಯಾವನಿಗೆ ಯಾವ ವಿಧದ ತತ್ತ್ವಜ್ಞಾನವಿದ್ದಿತೊ, ಅದಕ್ಕೆ ತಕ್ಕ ಸದ್ಗತಿಯನ್ನೇ ಅವರವರಿಗೆ ಮಹೇಶ್ವರನು ಕರುಣಿಸಿದನು.

ಸ್ವಭಾವೈಕತಯಾ ಭಕ್ತ್ಯಾ ತಾವೇತ್ಯಾಂತಃಪ್ರಲೀಯತೇ ।
ಸಂಸಾರೇ ಪರಿವರ್ತಂತೇ ಯೇ ಪೃಥಗ್ಭಾಜಿನೋ ನರಾಃ ॥ ೫೧ ॥
ಯೇ ಮಹಾವೃಕ್ಷಮೀಶಾನಂ ತ್ಯಕ್ತ್ವಾ ಶಾಖಾವಲಂಬಿನಃ ।
ಪುನರಾವರ್ತಮಾನಾಸ್ತೇ ಜಾಯಂತೇ ಹಿ ಚತುರ್ಯುಗೇ ॥ ೫೨ ॥
ದೇವಾಂತೇ ಸ್ಥಾವರಾಂತೇ ಚ ಸಂಸಾರೇಚಾಭ್ರಮನ್ ಕ್ರಮಾತ್ ।
ಪುನರ್ಜನ್ಮ ಪುನಸ್ಸ್ವರ್ಗೇ ಪುನರ್ಘೋರೇ ಚ ರೌರವೇ ॥ ೫೩ ॥
ಯೇ ಪುನರ್ದೇವಮೀಶಾನಂ ಭವಂ ಭಕ್ತಿಸುಸಂಸ್ಥಿತಾಃ ।
ಯಜಂತಿ ನರ್ಮದಾತೀರೇ ನ ಪುನಸ್ತೇ ಭವಂತಿ ಚ ॥ ೫೪ ॥
ಆದೇಹಪತನಾತ್ಕೇಚಿದುಪಾಸಂತಃ ಪರಂಗತಾಃ ।
ಕೇಚಿತ್ ದ್ವಾದಶಭಿರ್ವರ್ಷೈಃ ಷಡ್ಭಿರನ್ಯೇ ತಪೋಧನಾಃ ॥ ೫೫ ॥
ತ್ರಿಭಿಸ್ಸಂವತ್ಸರೈಃ ಕೇಚಿತ್ಕೇಚಿತ್ಸಂವತ್ಸರೇಣ ತು ।
ಷಡ್ಭಿರ್ಮಾಸೈಸ್ತು ಸಂಸಿದ್ಧಾಸ್ತ್ರಿಭಿರ್ಮಾಸೈಸ್ತಥಾಽಪರೇ ॥ ೫೬ ॥
ಮುನಯೋ ದೇವಮಾಶ್ರಿತ್ಯ ನರ್ಮದಾಂ ಚ ಯಶಸ್ವಿನೀಂ ।
ಛಿತ್ವಾ ಸಂಸಾರದೋಷಾಂಶ್ಚ ಅಗಮನ್ ಬ್ರಹ್ಮ ಶಾಶ್ವತಂ ॥ ೫೭ ॥

---

೫೧. ಜ್ಞಾನಿಗಳು ಸಹಜವಾದ ಐಕ್ಯದಿಂದಲೂ, ಭಕ್ತರು ಭಕ್ತಿಯಿಂದಲೂ ತಮ್ಮ ಧ್ಯೇಯವನ್ನು ಹೊಂದಿ ಆದರಲ್ಲಿಯೇ ಲಯಿಸುವರು. ಇತರೋಪಾಯ ಗಳನ್ನನುಸರಿಸುವವರು ಈ ಸಂಸಾರದಲ್ಲಿಯೇ ಹುಟ್ಟಿ ಮಡಿಯುತ್ತಿರುವರು.

೫೨. ಮಹಾವೃಕ್ಷವಾದ ಮಹಾದೇವನನ್ನುಳಿದು ಆತನ ಶಾಖೆಗಳಂತಿರುವ ಇತರ ದೇವತೆಗಳನ್ನು ಯಾರು ಅವಲಂಬಿಸುವರೊ, ಅವರು ಪ್ರತಿ ಯುಗ ದಲ್ಲಿಯೂ ಪುನಃಪುನಃ ಹುಟ್ಟುತ್ತಿರುವರು.

೫೩. ಆಮೇಲೆ ದೇವತೆಗಳಾದಿಯಾಗಿ ಸ್ಥಾವರಾಂತಗಳಾದ ಜನ್ಮಗಳನ್ನು ತಾಳಿ ಸಂಸಾರದಲ್ಲಿ ಕ್ರಮವಾಗಿ ಸ್ವರ್ಗದಲ್ಲಿಯೂ, ಭಯಂಕರ ರೌರವನರಕ ದಲ್ಲಿಯೂ ಜನಿಸುವರು.

೫೪. ಆದರೆ ಯಾರು ದೇವಾಧಿದೇವನಾದ ಮಹೇಶ್ವರನನ್ನು ಭಕ್ತಿಭರಿತ ರಾಗಿ ನರ್ಮದಾತೀರದಲ್ಲಿ ಸೇವಿಸುವರೊ ಅವರಿಗೆ ಪುನರ್ಜನ್ಮವಿಲ್ಲ.

೫೫. ಕೆಲವು ತಪೋನಿರತರು ಸಾಯುವವರೆಗೂ, ಕೆಲವರು ಹನ್ನೆರಡು ವರ್ಷಗಳೂ, ಹಲವರು ಆರು ವರ್ಷಗಳೂ ಇಂತು ಉಪಾಸಿಸಿ ಪರಮಪದವನ್ನು ಪಡೆದಿರುವರು.

೫೬. ಹಾಗೆಯೇ ಕೆಲವರು ಮೂರು ವರ್ಷಗಳಲ್ಲಿಯೂ, ಇತರರು ಒಂದೇ ಸಂವತ್ಸರದಲ್ಲಿಯೂ, ಆರು ತಿಂಗಳಲ್ಲಿಯೂ, ಮೂರು ತಿಂಗಳಲ್ಲಿಯೂ ಸಿದ್ಧಿಯನ್ನು ಹೊಂದಿರುವರು.

೫೭. ಇಂತು ಅನೇಕ ಮುನಿಗಳು ಮಹಾದೇವನನ್ನೂ ಪ್ರಸಿದ್ಧಳಾದ

ಏವಂ ಕಲಿಯುಗೇ ಘೋರೇ ಶತಶೋಽಥ ಸಹಸ್ರಶಃ ।
ನರ್ಮದಾತೀರಮಾಶ್ರಿತ್ಯ ಮುನಯೋ ರುದ್ರಮಾವಿಶನ್ ॥ ೫೮ ॥
ಯೇ ನರ್ಮದಾತೀರಮುಪೇತ್ಯ ವಿಪ್ರಾಃ
ಶೈವೇ ವ್ರತೇ ಯತ್ನಮುಪಪ್ರಪನ್ನಾಃ ।
ತ್ರಿಕಾಲಮಂಭಃ ಪ್ರವಿಗಾಹ್ಯ ಭಕ್ತ್ಯಾ
ದೇವಂ ಸಮಭ್ಯರ್ಚ್ಯ ಶಿವಂ ವ್ರಜಂತಿ ॥ ೫೯ ॥
ಧ್ಯಾನಾರ್ಚನೈರ್ಜಾಪ್ಯಮಹಾವ್ರತೈಶ್ಚ
ನಾರಾಯಣಂ ವಾ ಸತತಂ ಸ್ಮರಂತಿ ।
ತೇ ಧೌತಪಾಂಡುರಪಟಾ ಇವ ರಾಜಹಂಸಾಃ
ಸಂಸಾರಸಾಗರಜಲಸ್ಯ ತರಂತಿ ಪಾರಂ ॥ ೬೦ ॥
ಸತ್ಯಂ ಸತ್ಯಂ ಪುನಸ್ಸತ್ಯಮುಕ್ಷಿಪ್ಯ ಭುಜಮುಚ್ಯತೇ ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ॥ ೬೧ ॥
ಯೋ ವಾ ಹರಂ ಪೂಜಯತೇ ಜಿತಾತ್ಮಾ
ಮಾಸಂ ಪಕ್ಷಂ ಚ ವಸೇನ್ನರೇಂದ್ರ ।
ರೇವಾಂ ಸಮಾಶ್ರಿತ್ಯ ಮಹಾನುಭಾವಃ
ಸ ದೇವದೇವೋಽಥ ಭವೇತ್ ಪಿನಾಕೀ ॥ ೬೨ ॥

---

ನರ್ಮದೆಯನ್ನೂ ಆಶ್ರಯಿಸಿ ತಮ್ಮ ಸಂಸಾರಕಲ್ಮಷಗಳನ್ನೆಲ್ಲ ಕಳೆದುಕೊಂಡು ಶಾಶ್ವತ ಬ್ರಹ್ಮಪದವಿಯನ್ನು ಸಾಧಿಸಿಕೊಂಡಿರುವರು.

೫೮. ಘೋರವಾದ ಈ ಕಲಿಯುಗದಲ್ಲಿಯೂ ನೂರಾರು, ಸಾವಿರಾರು ಮಂದಿ ಮಹಾಮುನಿಗಳು ನರ್ಮದಾತೀರವನ್ನಾಶ್ರಯಿಸಿ ಪರಮೇಶ್ವರನಲ್ಲಿ ಐಕ್ಯವನ್ನು ಪಡೆದಿರುವರು.

೫೯. ಯಾವ ಬ್ರಾಹ್ಮಣರು ನರ್ಮದಾತೀರವನ್ನು ಸೇರಿ, ಮಹಾಶೈವ ದೀಕ್ಷೆಯನ್ನು ಕೈಗೊಂಡು, ತ್ರಿಸಂಧ್ಯೆಗಳಲ್ಲಿಯೂ ಅದರ ನೀರಿನಲ್ಲಿ ಸ್ನಾನಮಾಡಿ, ಭಕ್ತಿಯಿಂದ ಶಿವನನ್ನು ಪೂಜಿಸುವರೊ, ಅವರು ಶಿವನನ್ನೇ ಸೇರುವರು.

೬೦. ಅಥವಾ ಶ್ರೀಮಹಾವಿಷ್ಣುವನ್ನೇ ಆಗಲಿ, ಧ್ಯಾನದಿಂದಲೂ, ಪೂಜೆಗಳಿಂದಲೂ, ಜಪಗಳಿಂದಲೂ, ವ್ರತೋಪವಾಸಗಳಿಂದಲೂ ಯಾರು ಸಂತತವಾಗಿ ಸ್ಮರಿಸುತ್ತಿರುವರೊ, ಅವರೂ ನಿರ್ಮಲಗಳಾದ ಬಿಳಿಯ ರೆಕ್ಕೆಗಳುಳ್ಳ ರಾಜಹಂಸಗಳಂತೆ ಈ ಸಂಸಾರಮಹಾಸಮುದ್ರದ ಆಚಿನ ದಡವನ್ನು ಸೇರುವರು.

೬೧. ಮೂರುಮೂರು ಮಾತಿಗೂ ಇದು ಸತ್ಯವೆಂದು ತಿಳಿಯಿರಿ. ಭುಜವನ್ನೆತ್ತಿ ಹೇಳುತ್ತಿರುವೆನು. ನಾರಾಯಣನನ್ನೇ ನಿತ್ಯದಲ್ಲಿಯೂ ಧ್ಯಾನಿಸಬೇಕೆಂಬುದೊಂದೇ ತತ್ತ್ವಾರ್ಥವಾಗಿರುವುದು.

೬೨. ಮಹಾರಾಜನೆ! ಯಾವ ಮನುಜನು ಒಂದು ತಿಂಗಳಾಗಲಿ,

ಕೀಟಾಃ ಪತಂಗಾಶ್ಚ ಪಿಪೀಲಿಕಾಶ್ಚ
ಯೇ ವೈ ಮ್ರಿಯಂತೇಂಭಸಿ ನರ್ಮದಾಯಾಃ ।
ತೇ ದಿವ್ಯರೂಪಾಸ್ತು ಕುಲಪ್ರಸೂತಾಃ
ಶತಂ ಸಮಾ ಧರ್ಮಪರಾ ಭವಂತಿ ॥ ೬೩ ॥
ಕಾಲೇನ ವೃಕ್ಷಾಃ ಪ್ರಪತಂತಿ ಯೇಽಪಿ
ಮಹಾತರಂಗೌಘನಿಕೃತ್ತಮೂಲಾಃ ।
ತೇ ನರ್ಮದಾಂಭೋಭಿರಪಾಸ್ತಪಾಪಾ
ದೇದೀಪ್ಯಮಾನಾಸ್ತ್ರಿದಿವಂ ಪ್ರಯಾಂತಿ ॥ ೬೪ ॥
ಅಕಾಮಕಾಮಾಶ್ಚ ತಥಾ ಸಕಾಮಾ
ರೇವಾಂತಮಾಶ್ರಿತ್ಯ ಮ್ರಿಯಂತಿ ತೀರೇ ।
ಜಡಾಂಧಮೂಕಾಸ್ತ್ರಿದಿವಂ ಪ್ರಯಾಂತಿ
ಕಿಮತ್ರ ವಿಪ್ರಾ ಭವಭಾವಯುಕ್ತಾಃ ॥ ೬೫ ॥
ಮಾಸೋಪವಾಸೈರಪಿ ಶೋಷಿತಾಂಗಾ
ನ ತಾಂ ಗತಿಂ ಯಾಂತಿ ವಿಮುಕ್ತದೇಹಾಃ ।
ಮ್ರಿಯಂತಿ ರೇವಾಜಲಪೂತಕಾಯಾಃ
ಶಿವಾರ್ಚನೇ ಕೇಶವಭಾವಯುಕ್ತಾಃ ॥ ೬೬ ॥

---

ಹದಿನೈದು ದಿನವಾಗಲಿ ರೇವಾತೀರವನ್ನು ಸೇರಿ ವಾಸಿಸುತ್ತ ಜಿತೇಂದ್ರಿಯನಾಗಿ ಮಹೇಶ್ವರನ ಪೂಜೆಯನ್ನು ಮಾಡುವನೊ, ಆ ಮಹಾನುಭಾವನು ದೇವದೇವ ನಾದ ಶಿವನೇ ಆಗುವನು.

೬೩. ಕೀಟಗಳೂ, ಪತಂಗಗಳೂ, ಪಿಪೀಲಿಕಗಳೂ ನರ್ಮದೆಯ ಜಲದಲ್ಲಿ ಬಿದ್ದು ಸಾಯಲು ಪುನಃ ದಿವ್ಯಶರೀರಗಳೊಡನೆ ಸತ್ಕುಲದಲ್ಲಿ ಜನಿಸಿ ನೂರು ವರ್ಷಗಳ ಪೂರ್ಣಾಯುಷ್ಯವನ್ನೂ ಧರ್ಮಕಾರ್ಯಗಳಲ್ಲಿಯೇ ಕಳೆಯುವರು.

೬೪. ಪ್ರವಾಹದ ದೊಡ್ಡ ಅಲೆಗಳಿಂದ ಹೊಡೆಯಲ್ಪಟ್ಟು ಬೇರು ಕಳಚಿ ಯಾವ ವೃಕ್ಷಗಳು ರೇವಾನದಿಯಲ್ಲಿ ಬೀಳುವುವೊ, ಅವೂ ನರ್ಮದಾಜಲಸಂಪರ್ಕ ದಿಂದ ಪಾಪಗಳನ್ನು ಕಳೆದುಕೊಂಡು ದಿವ್ಯರೂಪಗಳಿಂದ ಸ್ವರ್ಗವನ್ನು ಸೇರುವುವು.

೬೫. ಬುದ್ಧಿಪೂರ್ವಕವಾಗಿಯಾಗಲಿ, ಯಾದೃಚ್ಛಿಕವಾಗಿಯಾಗಲಿ ಈ ನರ್ಮದೆಯ ತೀರಕ್ಕೆ ಬಂದು ದೇಹವನ್ನು ಬಿಡುವ ಮೂರ್ಖರೂ, ಕುರುಡರೂ, ಮೂಗರೂ ಸ್ವರ್ಗಕ್ಕೆ ಹೋಗುವರೆಂದಮೇಲೆ ಶಿವಭಕ್ತಿಭರಿತರಾದ ಬ್ರಾಹ್ಮಣರ ಮಾತೇನು ?

೬೬. ರೇವಾಜಲದಿಂದ ಪರಿಶುದ್ಧಶರೀರರಾಗಿ ಶಿವನನ್ನೋ, ಕೇಶವನನ್ನೋ ಪೂಜಿಸುತ್ತ ಸಾಯುವ ಭಕ್ತರಿಗೆ ಲಭಿಸುವ ಸದ್ಗತಿಯು ಮಾಸೋಪವಾಸಾದಿ

ಯೇ ನರ್ಮದಾತೀರಮನುಪ್ರಪನ್ನಾ
ಅಭ್ಯರ್ಚಯಿತ್ವಾ ಶಿವಮವ್ಯಯಾಖ್ಯಂ ।
ನಾರಾಯಣಂ ವಾ ಮನಸಾ ಸುಪೂತಾಃ
ಪಿಬಂತಿ ಮಾತುರ್ನ ಪುನಃ ಸ್ತನಂ ತೇ ॥ ೭೭ ॥
ನೀವಾರಶ್ಯಾಮಾಕಯವೇಂಗುದಾದ್ಯೈ
ರನ್ಯೈರ್ಮುನೀಂದ್ರಾ ಇಹ ವರ್ತಯಂತಿ ।
ಆಶ್ರಿತ್ಯ ಕೂಲಂ ತ್ರಿದಶಾನುಗೀತಂ
ತೇ ನರ್ಮದಾಯಾ ನ ವಿಶಂತಿ ಮೃತ್ಯುಂ ॥ ೭೮ ॥
ಭ್ರಮಂತಿ ಯೇ ತೀರಮುಪೇತ್ಯ ದೇವ್ಯಾ
ಸ್ತ್ರಿಕಾಲದೇವಾರ್ಚನಸತ್ಯಪೂತಾಃ ।
ವಿಣ್ಮೂತ್ರಚರ್ಮಾಸ್ಥಿಶಿರೋಪಧಾನಾಃ
ಕುಕ್ಷೌ ಯುವತ್ಯಾ ನ ವಸಂತಿ ಭೂಯಃ ॥ ೭೯ ॥
ಕಿಂ ಯಜ್ಞದಾನೈರ್ಬಹುಭಿಶ್ಚ ತೇಷಾಂ
ನಿಷೇವಿತೈಸ್ತೀರ್ಥವರೈಃ ಸಮಸ್ತೈಃ ।
ರೇವಾತಟಂ ದಕ್ಷಿಣಮುತ್ತರಂ ವಾ
ಸೇವಂತಿ ತೇ ರುದ್ರಚರಾನುಪೂರ್ವಂ ॥ ೮೦ ॥

---

ಗಳಿಂದ ದೇಹವನ್ನು ಒಣಗಿಸಿಕೊಂಡು ಸಾಯುವವರಿಗೂ ತಪಸ್ಸು ಮಾಡಿದರೂ ಲಭಿಸಲಾರದು.

೭೭. ಯಾರು ನರ್ಮದಾತೀರವನ್ನು ಸೇರಿ ನಾಶರಹಿತನಾದ ಶಿವನನ್ನೊ, ನಾರಾಯಣನನ್ನೊ ಮನಃಪೂರ್ವಕವಾಗಿ ಪೂಜಿಸುವರೊ, ಆ ಪುಣ್ಯಾತ್ಮರು ಪುನಃ ತಾಯಿಯರ ಸ್ತನ್ಯವನ್ನು ಪಾನಮಾಡುವುದಿಲ್ಲ.

೭೮. ದೇವತೆಗಳಿಗೂ ಸ್ತೋತ್ರಾರ್ಹವೆನಿಸಿದ ಈ ನರ್ಮದೆಯ ತೀರಗಳನ್ನಾಶ್ರಯಿಸಿ ಯಾವ ಮುನಿವರ್ಯರು ನವಣೆ, ಸಾಮೆ, ಅಕ್ಕಿ, ಇಂಗುದೀಫಲಾದಿಗಳಿಂದಲೂ, ಇತರಾಹಾರಾದಿಗಳಿಂದಲೂ ಜೀವಿಸಿರುವರೊ, ಅವರು ಮರಣರಹಿತರಾಗುವರು.

೭೯. ರೇವಾನದೀತೀರವನ್ನು ಸೇರಿ ತ್ರಿಕಾಲಗಳಲ್ಲಿಯೂ ದೇವಪೂಜಾದಿಗಳನ್ನು ಮಾಡುತ್ತ ಸತ್ಯವಾಕ್ಯನಿರತರಾಗಿ ಯಾರು ಇಲ್ಲಿಯೇ ಸಂಚರಿಸುತ್ತಿರುವರೊ, ಅವರು ಮಲ, ಮೂತ್ರ, ಚರ್ಮ, ಅಸ್ಥಿ, ನರಗಳ ಮೂಟೆಯಾದ ಈ ದೇಹವನ್ನು ತಾಳಿ ಪುನಃ ಸ್ತ್ರೀಯ ಗರ್ಭವನ್ನು ಸೇರುವುದಿಲ್ಲ.

೮೦. ಪರಮೇಶ್ವರನ ಪರಿಚರ್ಯೆಯಲ್ಲಿ ನಿರತರಾಗಿ ರೇವಾನದಿಯ ಉತ್ತರ ದಕ್ಷಿಣತೀರಗಳಲ್ಲಿ ವಾಸಿಸುವರು ಸಹ ಬಹುವಿಧ ಯಜ್ಞದಾನಾದಿಗಳನ್ನೂ, ಸಮಸ್ತ ತೀರ್ಥಗಳ ಸೇವೆಯನ್ನೂ ಮಾಡಬೇಕೆ?

ತೇ ವಂಚಿತಾಃ ಪಂಗುಜಡಾಂಧಭೂತಾ
ಲೋಕೇಷು ಮರ್ತ್ಯಾಃ ಪಶುಭಿಶ್ಚ ತುಲ್ಯಾಃ ।
ಯೇ ನಾಽಽಶ್ರಿತಾಂ ರುದ್ರಶರೀರಭೂತಾಂ
ಸೋಪಾನಪಂಕ್ತಿಂ ತ್ರಿದಿವಸ್ಯ ರೇವಾಂ ॥ ೭೧ ॥
ಯುಗಂ ಕಲಿಂ ಘೋರಮಿಮಂ ಯ ಇಚ್ಛೇ
ದ್ದ್ರಷ್ಟುಂ ಕದಾಚಿನ್ನ ಪುನರ್ದ್ವಿಜೇಂದ್ರಃ ।
ಸ ನರ್ಮದಾತೀರಮುಪೇತ್ಯ ಸರ್ವಂ
ಸಂಪೂಜಯೇತ್ಸರ್ವವಿಮುಕ್ತಸಂಘಃ ॥ ೭೨ ॥
ವಿಘ್ನೈರನೇಕೈರತಿಯೋಜ್ಯಮಾನಾ
ಯೇ ತೀರಮುಜ್ಝಂತಿ ನ ನರ್ಮದಾಯಾಃ ।
ತೇ ಚೈವ ಸರ್ವಸ್ಯ ಹಿತಾರ್ಥಭೂತಾ
ವಂದ್ಯಾಶ್ಚ ತೇ ಸರ್ವಜನಸ್ಯ ಮಾನ್ಯಾಃ ॥ ೭೩ ॥
ಭೃಗ್ವತ್ರಿಗಾರ್ಗೇಯ ವಸಿಷ್ಠಕಂಕಾಃ
ಶತ್ಯೈಃ ಸಮೇತೈರ್ನಿಯುತಾಸ್ತ್ವಸಂಖ್ಯೈಃ ।
ಸಿದ್ಧಿಂ ಪರಾಂ ತೇಹಿ ಜಲಪ್ಲುತಾಂಗಾಃ
ಪ್ರಾಪ್ತಾಸ್ತು ಲೋಕಾನ್ಮರುತಾಂ ನ ಚಾಽನ್ಯೇ ॥ ೭೪ ॥

---

೭೧. ರುದ್ರಶರೀರಜಾತೆಯೂ, ಸ್ವರ್ಗಕ್ಕೆ ಸೋಪಾನಪಙ್ಕ್ತಿಯೂ ಆದ ನರ್ಮದೆಯನ್ನು ಯಾರು ಆಶ್ರಯಿಸಿಲ್ಲವೊ, ಅವರೇ ಮೋಸಹೋದವರು. ಕುಂಟರೂ, ಮೂರ್ಖರೂ, ಕುರುಡರೂ ಆದ ಆ ಮಾನವರು ಲೋಕದಲ್ಲಿ ಪಶುಗಳಿಗೆ ಸಮಾನರಾಗಿರುವರು.

೭೨. ಯಾವ ಬ್ರಾಹ್ಮಣೋತ್ತಮನು ಪುನಃ ಘೋರವಾದ ಈ ಕಲಿಯುಗವನ್ನೆಂದಿಗೂ ನೋಡಲೆಳಸುವುದಿಲ್ಲವೊ, ಅವನು ಸರ್ವಸಂಗಪರಿತ್ಯಾಗವನ್ನು ಮಾಡಿ ನರ್ಮದಾತೀರಕ್ಕೆ ಹೋಗಿ ಮಹಾದೇವನ ಪೂಜೆಯಲ್ಲಿ ನಿರತನಾಗಿರಬೇಕು.

೭೩. ಅನೇಕ ವಿಘ್ನಗಳೊದಗಿದರೂ ಯಾರು ನರ್ಮದಾತೀರವನ್ನೆಡಬಿಡದಿರುವರೊ, ಅವರೇ ಸರ್ವಭೂತಹಿತಸಾಧಕರೆಂದು ತಿಳಿಯಬೇಕು. ಅವರನ್ನು ಸಮಸ್ತರೂ ನಮಸ್ಕರಿಸಿ ಪೂಜಿಸಬೇಕು.

೭೪. ಭೃಗು, ಅತ್ರಿ, ಗಾರ್ಗೇಯ, ವಶಿಷ್ಠ, ಕಂಕರೆಂಬ ಮಹಾಮುನಿಗಳು ಲೆಕ್ಕವಿಲ್ಲದ ಅನುಚರರಿಂದೊಡಗೂಡಿ ಈ ನದಿಯ ಜಲದಲ್ಲಿ ಸ್ನಾನಮಾಡಿ ಪರಮಸಿದ್ಧಿಯನ್ನೂ, ಮರುತ್ತುಗಳ ಲೋಕಗಳನ್ನೂ ಹೊಂದುವವರಾದರು. ಇತರರಿಗೆ ಆ ಸದ್ಗತಿಯ ಲಾಭವಾಗಲಿಲ್ಲ.

ಜ್ಞಾನಂ ಮಹತ್ಪುಣ್ಯತಮಂ ಪವಿತ್ರಂ
ಪಠಂತ್ಯದೋ ನಿತ್ಯವಿಶುದ್ಧಸತ್ತ್ವಾಃ ।
ಗತಿಂ ಪರಾಂ ಯಾಂತಿ ಮಹಾನುಭಾವಾ
ರುದ್ರಸ್ಯ ವಾಕ್ಯಂ ಹಿ ಯಥಾ ಪ್ರಮಾಣಂ ॥ ೭೫ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ನರ್ಮದಸ್ನಾನಫಲಶ್ರುತಿಕಥನಂ" ನಾಮ ದಶಮೋಽಧ್ಯಾಯಃ**

---

೭೫. ಶುದ್ಧಸತ್ತ್ವಗುಣವಂತರಾದ ಮಹಾನುಭಾವರು ಜ್ಞಾನಪ್ರದವೂ, ಪುಣ್ಯತಮವೂ, ಪಾವನವೂ ಆದ ಈ ಅಧ್ಯಾಯವನ್ನು ಪಠನಮಾಡಲು ಉತ್ತಮ ಗತಿಯನ್ನು ಪಡೆಯುವರು. ಈ ವಿಷಯದಲ್ಲಿ ಪರಮೇಶ್ವರನ ವಾಕ್ಯವೇ ಪ್ರಮಾಣವಾಗಿರುವುದು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ನರ್ಮದಾಸ್ನಾನಫಲಶ್ರುತಿಕಥನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥೈಕಾದಶೋಽಧ್ಯಾಯಃ

## ಶ್ರೀ ನರ್ಮದಾ ಮಾಹಾತ್ಮ್ಯವರ್ಣನಂ

ಯುಧಿಷ್ಠಿರ ಉವಾಚ :—

ಅಹೋ ಮಹತ್ಪುಣ್ಯತಮಾ ವಿಶಿಷ್ಟಾ
ಕ್ಷಯಂ ನ ಯಾತಾ ಇಹ ಯಾ ಯುಗಾಂತೇ ।
ತಸ್ಮಾತ್ಸದಾ ಸೇವ್ಯತಮಾ ಮುನೀಂದ್ರೈ
ರ್ಧ್ಯಾನಾರ್ಚನಸ್ನಾನಪರಾಯಣೈಶ್ಚ ॥ ೧ ॥

ಯಾಮಾಶ್ರಿತ್ಯ ಗತಾ ಮೋಕ್ಷಮೃಷಯೋ ಧರ್ಮವತ್ಸಲಾಃ ।
ಯೇ ತ್ವಯೋಕ್ತಾಸ್ತು ನಿಯಮಾ ಋಷೀಣಾಂ ವೇದನಿರ್ಮಿತಾಃ ॥ ೨ ॥
ಮೋಕ್ಷಾಽವಾಪ್ತಿರ್ಭವೇದ್ಯೇಷಾಂ ನಿಯಮೈಶ್ಚ ಪೃಥಗ್ವಿಧೈಃ ।
ದಶದ್ವಾದಶಭಿರ್ವಾಽಪಿ ಷಡ್ಭಿರಷ್ಟಾಭಿರೇವ ವಾ ॥ ೩ ॥
ತ್ರಿಭಿಸ್ತಥಾ ಚತುರ್ಭಿರ್ವಾ ವರ್ಷೈರ್ಮಾಸೈಸ್ತಥೈವ ಚ ।
ಮುಚ್ಯಂತೇ ಕಲಿದೋಷೈಸ್ತೇ ದೇವೇಶಾನ ಸಮರ್ಚನಾತ್ ॥ ೪ ॥

---

## ಕನ್ನಡದ ಅನುವಾದ

### ನರ್ಮದಾ ಮಾಹಾತ್ಮ್ಯವರ್ಣನ

೧. ಯುಧಿಷ್ಠಿರನು ಹೇಳುತ್ತಾನೆ:—ಯುಗಾಂತ್ಯದಲ್ಲಿಯೂ ನಾಶವನ್ನು ಹೊಂದದಿರುವ ಈ ನದಿಯು ಅತ್ಯಂತ ಪುಣ್ಯತಮವೂ ಸರ್ವೋತ್ತಮವೂ ಆಗಿರುವುದು. ಆದುದರಿಂದಲೇ ಮುನಿಗಳೆಲ್ಲರೂ ಇದನ್ನು ಧ್ಯಾನ, ಸ್ನಾನ, ಪೂಜಾ, ಜಪಗಳಿಂದ ನಿತ್ಯವೂ ಸೇವಿಸುತ್ತಿರುವರು.

೨. ಧರ್ಮೈಕತತ್ಪರರಾದ ಮಹರ್ಷಿಗಳು ಇದನ್ನಾಶ್ರಯಿಸಿಯೇ ಮೋಕ್ಷಕ್ಕೆ ಸಂದರು. ಮತ್ತು ಆ ಋಷಿಗಳಿಗೆ ನೀನು ಹೇಳಿದ ನಿಯಮಗಳೆಲ್ಲವೂ ವೇದ ವಿಹಿತಗಳಾಗಿರುವುವು.

೩–೪. ಇಂತಹ ಅನೇಕ ವಿಧಗಳಾದ ನಿಯಮಗಳನ್ನು ಹತ್ತು, ಹನ್ನೆರಡು, ಆರು, ಎಂಟು, ಮೂರು, ನಾಲ್ಕುವರ್ಷಗಳವರೆಗೊ, ಅಥವ ಅಷ್ಟೇ ತಿಂಗಳುಗಳವರೆಗೊ ಪಾಲಿಸುವುದರಿಂದ ಅವರಿಗೆಲ್ಲರಿಗೂ ಮೋಕ್ಷಲಾಭವಾಗುವುದರಲ್ಲಿ ಸಂದೇಹವಿಲ್ಲ. ಎಲ್ಲರೂ ಮಹಾದೇವನನ್ನು ಪೂಜಿಸುವುದರಿಂದ ತಮ್ಮ ಕಲಿದೋಷಗಳನ್ನು ಕಳೆದುಕೊಳ್ಳುವರು.

ಬ್ರಹ್ಮಾಣಂ ವಾ ಸುರಶ್ರೇಷ್ಠಂ ಕೇಶವಂ ವಾ ಜಗದ್ಗುರುಂ ।
ಅರ್ಚಯನ್ಪಾಪಮಖಿಲಂ ಜಹಾತ್ಯೇವ ನ ಸಂಶಯಃ ॥ ೫ ॥
ಏತದ್ವಿಸ್ತರತಃ ಸರ್ವಂ ಕಥಯಸ್ವ ಮಮಾಽನಘ ।
ಯಸ್ಮಿನ್ ಸಂಸಾರಗಹನೇ ನಿಮಗ್ನಾಃ ಸರ್ವಜಂತವಃ ।
ತೇ ಕಥಂ ತ್ರಿದಿವಂ ಪ್ರಾಪ್ತಾ ಇತಿ ಮೇ ಸಂಶಯೋ ವದ ॥ ೬ ॥

ಶ್ರೀ ಮಾರ್ಕಂಡೇಯ ಉವಾಚ :—

ಜನ್ಮಾಂತರೈರನೇಕೈಸ್ತು ಮಾನುಷ್ಯಮುಪಲಭ್ಯತೇ ।
ಭಕ್ತಿರುತ್ಪದ್ಯತೇ ಚಾಽತ್ರ ಕಥಂಚಿದಪಿ ಶಂಕರೇ ॥ ೭ ॥
ತೀರ್ಥದಾನೋಪವಾಸಾನಾಂ ಯಜ್ಞೈರ್ದೇವದ್ವಿಜಾರ್ಚನೈಃ ।
ಅವಾಪ್ತಿರ್ಜಾಯತೇ ಪುಂಸಾಂ ಶ್ರದ್ಧಯಾ ಪರಯಾ ನೃಪ ॥ ೮ ॥
ತಸ್ಮಾಚ್ಛ್ರದ್ಧಾ ಪ್ರಕರ್ತವ್ಯಾ ಮಾನವೈರ್ಧರ್ಮವತ್ಸಲೈಃ ।
ಈಶೋಽಪಿ ಶ್ರದ್ಧಯಾ ಸಾಧ್ಯಸ್ತೇನ ಶ್ರದ್ಧಾ ವಿಶಿಷ್ಯತೇ ॥ ೯ ॥
ಅನ್ಯಥಾ ನಿಷ್ಫಲಂ ಸರ್ವಂ ಶ್ರದ್ಧಾಹೀನಂ ತು ಭಾರತ ।
ತಸ್ಮಾತ್ಸಮಾಶ್ರಯೇದ್ಭಕ್ತಿಂ ರುದ್ರಸ್ಯ ಪರಮೇಷ್ಠಿನಃ ।
ತೇಷಾಂ ಹಿ ಸಫಲಂ ಜನ್ಮ ಯೇಷಾಂ ಭಕ್ತಿರಚಂಚಲಾ ॥ ೧೦ ॥

---

೫. ಅಥವಾ ಸುರಶ್ರೇಷ್ಠನಾದ ಚತುರ್ಮುಖನನ್ನೊ, ಜಗದ್ಗುರುವಾದ ಮಹಾವಿಷ್ಣುವನ್ನೊ ಪೂಜಿಸುವುದರಿಂದಲೂ ಪಾಪಗಳನ್ನು ನೀಗುವುದರಲ್ಲಿ ಸಂದೇಹವಿಲ್ಲ.

೬. ಮಹರ್ಷಿಯೆ! ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸು. ಈ ಸಂಸಾರಸಮುದ್ರದಲ್ಲಿ ಮುಳುಗಿರುವ ಸಕಲ ಪ್ರಾಣಿಗಳೂ ಹೇಗೆ ಸ್ವರ್ಗವನ್ನು ಹೊಂದುವುವೆಂಬ ನನ್ನ ಸಂದೇಹಕ್ಕೆ ಉತ್ತರವನ್ನು ಕೊಡು.

೭. ಮಾರ್ಕಂಡೇಯನು ಹೇಳುತ್ತಾನೆ:—ಅನೇಕ ಯೋನಿಗಳಲ್ಲಿ ಜನ್ಮಗಳನ್ನು ತಾಳಿ ಜೀವನಿಗೆ ಮನುಷ್ಯತ್ವವು ಲಭಿಸುವುದು. ಮನುಷ್ಯರಲ್ಲಿಯೂ ಪರಮೇಶ್ವರನಲ್ಲಿ ಭಕ್ತಿಯುಂಟಾಗುವುದು ಅತಿ ದುರ್ಲಭವು.

೮. ಮಹಾರಾಜನೆ! ತೀರ್ಥಸೇವೆಗಳಿಂದಲೂ, ದಾನಗಳಿಂದಲೂ, ಉಪವಾಸ ವ್ರತಗಳಿಂದಲೂ, ಯಜ್ಞಗಳಿಂದಲೂ, ದೇವಬ್ರಾಹ್ಮಣಪೂಜೆಗಳಿಂದಲೂ, ಅತ್ಯಂತವಾದ ಶ್ರದ್ಧೆಯಿಂದಲೂ ಈ ಭಕ್ತಿಯು ಲಭ್ಯವಾಗುವುದು.

೯. ಆದುದರಿಂದ ಧರ್ಮವತ್ಸಲರಾದ ಮನುಷ್ಯರು ಶ್ರದ್ಧಾಸಹಿತರಾಗಿರಬೇಕು. ಪರಮಶಿವನನ್ನೂ ಶ್ರದ್ಧೆಯಿಂದಲೇ ನೋಡಬಹುದಾದುದರಿಂದ ಶ್ರದ್ಧೆಯೇ ಸರ್ವೋತ್ತಮವು.

೧೦. ಯುಧಿಷ್ಠಿರನೆ! ಶ್ರದ್ಧಾವಿರಹಿತವಾದ ಸಕಲ ಕರ್ಮವೂ ನಿಷ್ಫಲವೇ ಸರಿ. ಆದುದರಿಂದ ಲೋಕೇಶ್ವರನಾದ ಮಹಾದೇವನಲ್ಲಿ ಭಕ್ತಿಯನ್ನು ಮಾಡ

**ಸಾ ಚೈವ ತ್ರಿವಿಧಾ ಭಕ್ತಿಃ ಸಾತ್ವಿಕೀ ರಾಜಸೀ ತಥಾ ।**
**ತಾಮಸೀ ಸರ್ವಲೋಕಸ್ಯ ತ್ರಿವಿಧಂ ಚ ಫಲಂ ಲಭೇತ್ ॥ ೧೧ ॥**
**ತೇ ಕರ್ಮಫಲಸಂಯೋಗಾದಾವರ್ತಂತೇ ಪುನಃ ಪುನಃ ।**
**ಜನ್ಮಾಂತರಶತೈಸ್ತೇಷಾಂ ಜ್ಞಾನಿನಾಂ ದೇವಯಾಜಿನಾಂ ॥ ೧೨ ॥**
**ದೇವತ್ರಯೇ ಭವೇದ್ಭಕ್ತಿಃ ಕ್ಷಯಾತ್ಪಾಪಸ್ಯ ಕರ್ಮಣಃ ।**
**ಈಶಾನಾತ್ತು ಪುನರ್ಮೋಕ್ಷೋ ಜಾಯತೇ ಛಿನ್ನಸಂಶಯಃ ॥ ೧೩ ॥**
**ಯೇ ಪುನರ್ನರ್ಮದಾತೀರಮಾಶ್ರಿತ್ಯ ದ್ವಿಜಪುಂಗವಾಃ ।**
**ತ್ರಯೀಮಾರ್ಗಮಸಂದಿಗ್ಧಾಸ್ತೇ ಯಾಂತಿ ಪರಮಾಂ ಗತಿಂ ॥ ೧೪ ॥**
**ಏಕಾಗ್ರಮನಸೋ ಯೇತು ಶಂಕರಂ ಶಿವಮವ್ಯಯಂ ।**
**ಅರ್ಚಯಂತೀಹ ನಿರತಾಃ ಕ್ಷಿಪ್ರಂ ಸಿದ್ಧ್ಯಂತಿ ತೇ ಜನಾಃ ॥ ೧೫ ॥**
**ಕಾಲೇನ ಮಹತಾ ಸಿದ್ಧಿರ್ಜಾಯತೇಽನ್ಯತ್ರ ದೇಹಿನಾಂ ।**
**ನರ್ಮದಾಯಾಃ ಪುನಸ್ತೀರೇ ಕ್ಷಿಪ್ರಂ ಸಿದ್ಧಿರವಾಪ್ಯತೇ ॥ ೧೬ ॥**

---

ಬೇಕು. ಯಾರಿಗೆ ಈ ಭಕ್ತಿಯು ನಿಶ್ಚಂಚಲವಾಗಿರುವುದೊ, ಅವರ ಜನ್ಮವೇ ಸಾರ್ಥಕವು.

೧೧. ಇಂತಹ ಭಕ್ತಿಯು ಸಾತ್ತ್ವಿಕ, ರಾಜಸ, ತಾಮಸಗಳೆಂದು ಮೂರು ವಿಧವಾಗಿರುವುದು. ಸಮಸ್ತ ಪ್ರಾಣಿಗಳಿಗೂ ಇದಕ್ಕನುಸಾರವಾಗಿ ಮೂರು ವಿಧಗಳಾದ ಫಲಗಳು ಸಿಕ್ಕುವುವು.

೧೨. ಈ ಫಲಾಭಿಲಾಷಿಗಳು ಕರ್ಮಗಳಿಂದ ಮತ್ತೆ ಮತ್ತೆ ಜನ್ಮಗಳನ್ನು ತಾಳುತ್ತಿರುವರು. ಆದರೆ ನೂರಾರು ಜನ್ಮಗಳಿಂದ ದೇವತಾಪೂಜಾದಿ ಸಾಧನೆಗಳನ್ನು ಮಾಡುತ್ತಿರುವ ಜ್ಞಾನಿಗಳನೇಕರಿರುವರು.

೧೩. ಪಾಪಕರ್ಮದ ಕ್ಷಯದಿಂದಲೇ ತ್ರಿಮೂರ್ತಿಗಳಲ್ಲಿ ಭಕ್ತಿಯುಂಟಾಗುವುದು. ಆದರೆ, ಮಹೇಶ್ವರನಿಂದ ಮಾತ್ರ ವಿಕಲ್ಪರಹಿತವಾದ ಮೋಕ್ಷವು ಲಭಿಸುವುದು.

೧೪. ಯಾವ ಬ್ರಾಹ್ಮಣೋತ್ತಮರು ನರ್ಮದಾತೀರವನ್ನು ಸೇರಿ ಏಕಾಗ್ರವಾದ ಮನಸ್ಸಿನಿಂದ ವೇದಮಾರ್ಗವನ್ನವಲಂಬಿಸಿರುವರೊ, ಅವರು ಸದ್ಗತಿಯನ್ನು ಹೊಂದುವರು.

೧೫. ಯಾವ ಜನರು ತದೇಕಚಿತ್ತರಾಗಿ ಮಂಗಳಪ್ರದನೂ, ಅವಿನಾಶಿಯೂ ಆದ ಶಂಕರನನ್ನು ನಿತ್ಯವೂ ಭಜಿಸುತ್ತಿರುವರೊ, ಅವರು ಕ್ಷಿಪ್ರದಲ್ಲಿಯೇ ಮುಕ್ತರಾಗುವರು.

೧೬. ಇತರ ತೀರ್ಥಕ್ಷೇತ್ರಗಳಲ್ಲಿ ಅತಿದೀರ್ಘಕಾಲದ ಮೇಲೆ ಜೀವರಿಗೆ ಮೋಕ್ಷಸಿದ್ಧಿಯಾಗುವುದು. ನರ್ಮದಾತೀರದಲ್ಲಿಯಾದರೊ ಅದು ಕ್ಷಿಪ್ರದಲ್ಲಿಯೇ ಕೈಗೂಡುವುದು.

ಷಡ್ಭಿರ್ವರ್ಷೈಸ್ತು ಸಿದ್ಧ್ಯಂತಿ ಯೇ ತು ಸಾಂಖ್ಯಾವಿದೋ ಜನಾಃ ।
ವೈಷ್ಣವಾ ಜ್ಞಾನಸಂಪನ್ನಾಸ್ತೇಽಪಿ ಸಿದ್ಧ್ಯಂತಿ ಚಾಽಗ್ರತಃ ॥ ೧೭ ॥
ಸರ್ವಯೋಗವಿದೋ ಯೇ ಚ ಸಮುದ್ರಮಿವ ಸಿಂಧವಃ ।
ಏಕೀಭವಂತಿ ಕಲ್ಪಾಂತೇ ಯೋಗೇ ಮಾಹೇಶ್ವರೇ ಗತಾಃ ॥ ೧೮ ॥
ಸರ್ವೇಷಾಮೇವ ಯೋಗಾನಾಂ ಯೋಗೋ ಮಾಹೇಶ್ವರೋ ವರಃ॥೧೯॥
ತಮಾಸಾದ್ಯ ವಿಮುಚ್ಯಂತೇ ಯೇಽಪಿ ಸ್ಯುಃ ಪಾಪಯೋನಯಃ ।
ಶಿವಮರ್ಚ್ಯ ನದೀಕೂಲೇ ಜಾಯಂತೇ ತೇ ನ ಯೋನಿಷು ॥ ೨೦ ॥
ಗತಿರೇಷಾ ದುರಾರೋಹಾ ಸರ್ವಪಾಪಕ್ಷಯಂಕರೀ ।
ಮುಚ್ಯಂತೇ ಮಂಕ್ಷು ಸಂಸಾರಾದ್ರೇವಾಮಾಶ್ರಿತ್ಯ ಜಂತವಃ ॥ ೨೧ ॥
ತಸ್ಮಾತ್ಸ್ನಾಯೀ ಭವೇನ್ನಿತ್ಯಂ ತಥಾ ಭಸ್ಮವಿಲೇಪನಃ ।
ನರ್ಮದಾತೀರಮಾಸಾದ್ಯ ಕ್ಷಿಪ್ರಂ ಸಿದ್ಧಿಮವಾಪ್ನುಯಾತ್ ॥ ೨೨ ॥
ತ್ರಿಕಾಲಂ ಪೂಜಯೇಚ್ಛಾಂತೋ ಯೋ ನರೋ ಲಿಂಗಮಾದರಾತ್ ।
ಸರ್ವರೋಗವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಂ ॥ ೨೩ ॥

---

೧೭. ಯಾರು ಸಾಂಖ್ಯಮಾರ್ಗವನ್ನನುಸರಿಸುವರೊ, ಆ ಜನರಿಗೆ ಆರು ವರ್ಷಗಳಲ್ಲಿ ಸಿದ್ಧಿಯು ಲಭಿಸುವುದು. ಜ್ಞಾನಸಂಪನ್ನರಾದ ವೈಷ್ಣವರಿಗೂ ಬಹಳ ಬೇಗನೆ ಮೋಕ್ಷವಾಗುವುದು.

೧೮. ಸರ್ವಯೋಗಗಳನ್ನೂ ಅರಿತವರು ಕಲ್ಪಾಂತದಲ್ಲಿ ಮಾಹೇಶ್ವರ ಯೋಗದಲ್ಲಿ ನಿರತರಾಗಿ ಸಮುದ್ರದಲ್ಲಿ ಸೇರುವ ನದಿಗಳಂತೆ ಪರಮೇಶ್ವರನಲ್ಲಿ ಐಕ್ಯವನ್ನು ಪಡೆಯುವರು.

೧೯. ಸಮಸ್ತಯೋಗಗಳಲ್ಲಿಯೂ ಮಾಹೇಶ್ವರಯೋಗವೇ ಪರಮೋತ್ತಮವೆಂದು ಶಾಸ್ತ್ರಸಮ್ಮತವು.

೨೦. ಯಾವ ಪಾಪಜಂತುಗಳೇ ಆದರೂ ನರ್ಮದಾತೀರವನ್ನು ಸೇರಿ ಆ ಯೋಗದ ಅಭ್ಯಾಸದಿಂದ ಶಿವಪೂಜೆಯನ್ನು ಮಾಡುವುವೊ, ಅವು ಮತ್ತೆ ಜನ್ಮವನ್ನು ಪಡೆಯುವುದಿಲ್ಲ.

೨೧. ಸಕಲಪಾತಕಗಳನ್ನೂ ಕಳೆಯುವ ಈ ಸದ್ಗತಿಯು ಅತಿ ದುಸ್ಸಾಧ್ಯವಾದರೂ ರೇವಾನದಿಯನ್ನಾಶ್ರಯಿಸಿದ ಪ್ರಾಣಿಗಳು ಮಾತ್ರ ಅನಾಯಾಸವಾಗಿಯೇ ಸಂಸಾರದಿಂದ ಮೋಕ್ಷವನ್ನು ಸಂಪಾದಿಸುವುವು.

೨೨. ಆದುದರಿಂದ ಮಾನವನು ನರ್ಮದಾತೀರವನ್ನು ಸೇರಿ ನಿತ್ಯವೂ ಸ್ನಾನವನ್ನು ಮಾಡುತ್ತ ವಿಭೂತಿಯನ್ನು ಧರಿಸುತ್ತಿದ್ದರೆ ಬೇಗನೇ ಸಿದ್ಧಿಯನ್ನು ಪಡೆಯುವನು.

೨೩. ಯಾವನು ಶಾಂತಮನಸ್ಸಿನಿಂದಲೂ, ಆಸಕ್ತಿಯಿಂದಲೂ ತ್ರಿಕಾಲ

ಷಡ್ಭಿಃ ಸಿದ್ಧ್ಯತಿ ಮಾಸೈಸ್ತು ಯದ್ಯಪಿ ಸ್ಯಾತ್ಸಪಾಪಕೃತ್ ।
ಯೇ ಪುನಃ ಶುದ್ಧಮನಸೋ ಮಾಸೈಃ ಶುಧ್ಯಂತಿ ತೇ ತ್ರಿಭಿಃ ॥ ೨೪ ॥
ಯಥಾ ದಿನಕರಸ್ಪೃಷ್ಟಂ ಹಿಮಂ ಶೈಲಾದ್ವಿಶೀರ್ಯತೇ ।
ತದ್ವದ್ವಿಲೀಯತೇ ಪಾಪಂ ಸ್ಪೃಷ್ಟಂ ಭಸ್ಮಕಣೈಃ ಶುಭೈಃ ॥ ೨೫ ॥
ಸದ್ಯೋಜಾತಾದಿಯುಕ್ತೇನ ಭಸ್ಮನಾ ಯೇ ಸಮುಕ್ಷಿತಾಃ ।
ಸೂರ್ಯವದ್ವಿಮಲಾ ಭಾಂತಿ ದ್ವಿಜಾ ರುದ್ರಪರಾಯಣಾಃ ॥ ೨೬ ॥
ವೈನತೇಯಭಯತ್ರಸ್ತಾ ಯಥಾ ನಶ್ಯಂತಿ ಪನ್ನಗಾಃ ।
ತದ್ವತ್ಪಾಪಾನಿ ನಶ್ಯಂತಿ ಭಸ್ಮನಾಽಭ್ಯುಕ್ಷಿತಾನಿ ಹ ॥ ೨೭ ॥
ನರ್ಮದಾತೋಯಪೂತೇನ ಭಸ್ಮನೋದ್ಧೂಲಯಂತಿ ಯೇ ।
ಸದ್ಯಸ್ತೇ ಪಾಪಸಂಘಾಚ್ಚ ಮುಚ್ಯಂತೇ ನಾಽತ್ರ ಸಂಶಯಃ ॥ ೨೮ ॥
ವ್ರತಂ ಪಾಶುಪತಂ ಭಕ್ತ್ಯಾ ಯಥೋಕ್ತಂ ಪಾಲಯಂತಿ ಯೇ ।
ಶೂದ್ರಾನ್ನೇನ ವಿಹೀನಾಸ್ತು ತೇ ಯಾಂತಿ ಪರಮಾಂ ಗತಿಂ ॥ ೨೯ ॥

---

ಗಳಲ್ಲಿಯೂ ಲಿಂಗವನ್ನರ್ಚಿಸುತ್ತಿರುವನೊ, ಅವನು ಸಕಲರೋಗಗಳಿಂದ ಮುಕ್ತನಾಗಿ ಉತ್ತಮಗತಿಗೆ ಹೋಗುವನು.

೨೪. ಅವನು ಪಾಪಿಯೇ ಆಗಿದ್ದರೂ ಆರು ತಿಂಗಳಲ್ಲಿಯೇ ಸಿದ್ಧಿಯನ್ನು ಹೊಂದುವನು. ಶುದ್ಧಮಾನಸರಾದವರಂತೂ ಮೂರು ತಿಂಗಳುಗಳಲ್ಲಿಯೇ ಮುಕ್ತರಾಗುವರು.

೨೫. ಸೂರ್ಯನ ಕಿರಣಗಳು ತಗುಲಿದ ಕೂಡಲೆ ಪರ್ವತದಮೇಲಿರುವ ಮಂಜು ಹೇಗೆ ಮಾಯವಾಗುವುದೊ, ಹಾಗೆಯೇ ಭಸ್ಮಕಣಗಳಿಂದ ದೇಹಗತವಾದ ಪಾಪಗಳೆಲ್ಲವೂ ನಾಶವಾಗುವುವು.

೨೬. "ಸದ್ಯೋಜಾತಂ ಪ್ರಪದ್ಯಾಮಿ" ಮುಂತಾದ ಮಂತ್ರಗಳಿಂದ ಯಾರು ತಮ್ಮ ದೇಹವನ್ನು ಭಸ್ಮಲೇಪಿತವನ್ನಾಗಿ ಮಾಡಿಕೊಳ್ಳುವರೊ, ಆ ಬ್ರಾಹ್ಮಣರು ಮಾಹೇಶ್ವರರೆನಿಸಿ ಸೂರ್ಯನಂತೆ ತೇಜಸ್ಸಂಪನ್ನರಾಗಿರುವರು.

೨೭. ಗರುಡನನ್ನು ಕಂಡು ಸರ್ಪಗಳು ದಿಕ್ಕುಪಾಲಾಗಿ ಚೆದರಿಹೋಗುವಂತೆ ಭಸ್ಮಸಂಪರ್ಕವಾದ ದೇಹದಿಂದ ಪಾಪಗಳು ನಾಶವಾಗಿಹೋಗುವುವು.

೨೮. ನರ್ಮದೆಯ ಜಲದಲ್ಲಿ ಸ್ನಾನವನ್ನು ಮಾಡಿ ಪರಿಶುದ್ಧರಾಗಿ ಯಾರು ಭಸ್ಮವನ್ನು ಧರಿಸುವರೊ, ಅವರು ತಕ್ಷಣದಲ್ಲಿಯೇ ತಮ್ಮ ಪಾತಕಸಮೂಹಗಳಿಂದ ಮುಕ್ತರಾಗುವರು. ಇದರಲ್ಲಿ ಸಂದೇಹವಿಲ್ಲ.

೨೯. ಶೂದ್ರರಿಂದ ಅನ್ನವನ್ನು ಪರಿಗ್ರಹಿಸದೆ ಯಾರು ಭಕ್ತಿಯುಕ್ತರಾಗಿ ಶಾಸ್ತ್ರವಿಹಿತರೀತಿಯಿಂದ ಮಾಹೇಶ್ವರವ್ರತವನ್ನು ಅನುಷ್ಠಾನಮಾಡುವರೊ, ಅವರು ಸದ್ಗತಿಯನ್ನು ಪಡೆಯುವರು.

ಅಮೃತಂ ಬ್ರಾಹ್ಮಣಸ್ಯಾನ್ನಂ ಕ್ಷತ್ರಿಯಾನ್ನಂ ಪಯಃ ಸ್ಮೃತಂ ।
ವೈಶ್ಯಾನ್ನಮನ್ನಮೇವ ಸ್ಯಾಚ್ಛೂದ್ರಾನ್ನಂ ರುಧಿರಂ ಸ್ಮೃತಂ ॥ ೩೦ ॥
ಶೂದ್ರಾನ್ನರಸಸಂಪುಷ್ಟಾ ಯೇ ಮ್ರಿಯಂತೇ ದ್ವಿಜೋತ್ತಮಾಃ ।
ತೇ ತಪೋಜ್ಞಾನಹೀನಾಸ್ತು ಕಾಕಾ ಗೃಧ್ರಾ ಭವಂತಿ ತೇ ॥ ೩೧ ॥
ದುಷ್ಕೃತಂ ಹಿ ಮನುಷ್ಯಾಣಾಮನ್ನಮಾಶ್ರಿತ್ಯ ತಿಷ್ಠತಿ ।
ಯೋ ಯಸ್ಯಾಽನ್ನಂ ಸಮಶ್ನಾತಿ ಸ ತಸ್ಯಾಽಶ್ನಾತಿ ಕಿಲ್ಬಿಷಂ ॥ ೩೨ ॥
ವಿಶೇಷಾದ್ಯತಿಧರ್ಮೇಣ ತಪೋಲೌಲ್ಯಂ ಸಮಾಶ್ರಿತಾಃ ।
ನರಕಂ ಯಾಂತ್ಯಸಂದಿಗ್ಧಮಿತ್ಯೇವಂ ಶಂಕರೋಽಬ್ರವೀತ್ ॥ ೩೩ ॥
ಈದೃಗ್ರೂಪಾಶ್ಚ ಯೇ ವಿಪ್ರಾಃ ಪಾಶುಪತ್ಯೇ ವ್ಯವಸ್ಥಿತಾಃ ।
ತೇ ಮಹತ್ಪಾಪಸಂಘಾತಂ ದಹಂತ್ಯೇವ ನ ಸಂಶಯಃ ॥ ೩೪ ॥
ವಿಡಂಬೇನ ಚ ಸಂಯುಕ್ತಾ ಲೌಲುಪ್ಯೇನ ಚ ಪೀಡಿತಾಃ ।
ಅಸಂಭಾಷ್ಯಾ ಅಸಂಗ್ರಾಹ್ಯಾ ಇತ್ಯೇವಂ ಶ್ರುತಿನೋದನಾ ॥ ೩೫ ॥

---

೩೦. ಬ್ರಾಹ್ಮಣನ ಮನೆಯ ಅನ್ನವು ಅಮೃತವೆಂದೂ, ಕ್ಷತ್ರಿಯನ ಅನ್ನವು ಕ್ಷೀರವೆಂದೂ, ವೈಶ್ಯಾನ್ನವು ಕೇವಲಾನ್ನವೆಂದೂ, ಶೂದ್ರಾನ್ನವು ರಕ್ತ ಸದೃಶವೆಂದೂ ಶಾಸ್ತ್ರಗಳು ಹೇಳುವುವು.

೩೧. ಯಾವ ಬ್ರಾಹ್ಮಣೋತ್ತಮರು ಶೂದ್ರಾನ್ನದ ಸಾರದಿಂದ ದೇಹ ಪುಷ್ಟಿಯನ್ನು ಮಾಡಿಕೊಳ್ಳುವರೋ, ಅವರ ತಪೋಜ್ಞಾನಗಳೆಲ್ಲವೂ ನಾಶವಾಗಿ ಪುನಃ ಅವರು ಕಾಗೆಗಳಾಗಿಯೊ, ಹದ್ದುಗಳಾಗಿಯೊ ಹುಟ್ಟುವರು.

೩೨. ಮನುಷ್ಯರ ಪಾಪಗಳೆಲ್ಲವೂ ಅವನ ಅನ್ನವನ್ನಾಶ್ರಯಿಸಿರುವುವು. ಆದುದರಿಂದ ಯಾವನು ಯಾರ ಅನ್ನವನ್ನು ಸೇವಿಸುವನೊ, ಅವನು ಅವರ ಪಾಪವನ್ನೇ ಸ್ವೀಕರಿಸುತ್ತಾನೆ.

೩೩. ವಿಶೇಷವಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಭಿಕ್ಷಾಟನೆಗಾಗಿಯೇ ತಪಸ್ಸಿನ ವಿಡಂಬನೆಯನ್ನು ಮಾಡುವ ಜನರು ಖಂಡಿತವಾಗಿಯೂ ನರಕಕ್ಕೆ ಹೋಗುವರೆಂದು ಶಂಕರನು ಹೇಳಿರುವನು.

೩೪. ಈ ವಿಧವಾದ ಮಹಾಪಾಶುಪತವ್ರತವನ್ನು ಯಾವ ವಿಪ್ರೋತ್ತಮರು ನಡೆಸುತ್ತಿರುವರೊ, ಅವರು ತಮ್ಮ ಮಹಾಪಾತಕರಾಶಿಯನ್ನು ಸುಡುವುದು ನಿಸ್ಸಂಶಯವು.

೩೫. ವಿಡಂಬನೆಯಿಂದ ಕೂಡಿ, ಇಂದ್ರಿಯಚಾಪಲ್ಯಗಳಿಗೆ ಅಧೀನರಾದವರನ್ನು ಮಾತನಾಡಿಸಬಾರದು. ಅವರ ಸಹವಾಸವನ್ನೂ ಮಾಡಬಾರದೆಂದು ಶ್ರುತಿಯು ಸೂಚಿಸುತ್ತಿರುವುದು.

ಮಾತಾಪಿತೃಕೃತೈರ್ದೋಷೈರನ್ಯೇ ಕೇಚಿತ್ಸ್ವಕರ್ಮಜೈಃ ।
ನಷ್ಟಾ ಜ್ಞಾನಾಽವಲೇಪೇನ ಅಹಂಕಾರೇಣ ಚಾಽಪರೇ ॥ ೩೬ ॥
ಶಾಂಕರೇ ಪ್ರಸ್ಥಿತಾ ಧರ್ಮೇ ಯೇ ಸ್ಮೃತ್ಯರ್ಥಬಹಿಷ್ಕೃತಾಃ ।
ಕ್ಲಿಶ್ಯಮಾನಾಸ್ತು ಕಾಲೇನ ತೇ ಯಾಂತಿ ಪರಮಾಂ ಗತಿಂ ॥ ೩೭ ॥
ಅಶ್ರದ್ದಧಾನಾಃ ಪುರುಷಾ ಮೂರ್ಖಾ ದಂಭವಿವರ್ಧಿತಾಃ ।
ನ ಸಿಧ್ಯಂತಿ ದುರಾತ್ಮಾನಃ ಕುದುಷ್ಟಾಂತಾರ್ಥಕೀರ್ತನಾಃ ॥ ೩೮ ॥
ಮಹಾಭಾಗ್ಯೇಽಪಿ ತೀರ್ಥಸ್ಯ ಶಾಂಕರಂ ವ್ರತಮಾಸ್ಥಿತಾಃ ।
ಯೋನಿಂ ಯಾಂತ್ಯಸಂದಿಗ್ಧಂ ಲೌಲುಪ್ಯೇನ ಸಮನ್ವಿತಾಃ ॥ ೩೯ ॥
ನ ತೀರ್ಥೈರ್ನ ಚ ದಾನೈಶ್ಚ ದುಷ್ಕೃತಂ ಹಿ ವಿಲುಪ್ಯತೇ ।
ಅಜ್ಞಾನಾಚ್ಚ ಪ್ರಮಾದಾಚ್ಚ ಕೃತಂ ಪಾಪಂ ವಿನಶ್ಯತಿ ॥ ೪೦ ॥
ಏವಂ ಜ್ಞಾತ್ವಾ ತು ವಿಧಿನಾ ವರ್ತಿತವ್ಯಂ ದ್ವಿಜಾತಿಭಿಃ ।
ಪರಂ ಬ್ರಹ್ಮ ಜಪದ್ಭಿಶ್ಚ ವರ್ತಿತವ್ಯಂ ಮುಹುರ್ಮುಹುಃ ॥ ೪೧ ॥

---

೩೬. ಕೆಲವರು ತಾಯಿತಂದೆಗಳ ದೋಷಗಳಿಂದಲೂ, ಕೆಲವರು ತಮ್ಮ ಕರ್ಮಫಲಗಳಿಂದಲೂ, ಇತರರು ಅಹಂಕಾರದಿಂದಲೂ ಜ್ಞಾನಲೇಶವೂ ಇಲ್ಲದೆ ನಷ್ಟರಾಗಿರುವರು.

೩೭. ಯಾರು ಸ್ಮೃತ್ಯರ್ಥಗಳನ್ನು ತಿಳಿಯದಿದ್ದರೂ ಮಹೇಶ್ವರನಲ್ಲಿ ಭಕ್ತಿರೂಪವಾದ ಧರ್ಮವನ್ನಾಶ್ರಯಿಸಿ, ಬಂದ ಕಷ್ಟಗಳನ್ನೆಲ್ಲ ಸಹಿಸುವರೊ, ಅವರು ಕಾಲಾನಂತರದಲ್ಲಿ ಪರಮಪದವನ್ನು ಪಡೆಯುವರು.

೩೮. ಶ್ರದ್ಧೆಯಿಲ್ಲದವರೂ, ಮೂರ್ಖರೂ, ದಂಭಸಹಿತರೂ, ದುರಾತ್ಮರೂ, ಅಸಂಬದ್ಧದೃಷ್ಟಾಂತಗಳನ್ನೂ, ವಿಷಯಗಳನ್ನೂ ಆಶ್ರಯಿಸುವವರೂ ಆದ ಮನುಜರು ಸಿದ್ಧಿಯನ್ನು ಪಡೆಯುವುದಿಲ್ಲ.

೩೯. ಮಹಾಭಾಗ್ಯಪ್ರಾಪಕವಾದ ಈ ತೀರ್ಥದಲ್ಲಿ ಮಾಹೇಶ್ವರವ್ರತವನ್ನು ಅನುಷ್ಠಾನಮಾಡುವವರಾದರೂ ಚಾಪಲ್ಯದಿಂದ ಕೂಡಿದವರಾದರೆ ನೀಚಯೋನಿಗಳಲ್ಲಿ ಜನಿಸುವುದು ನಿಜವು.

೪೦. ತೀರ್ಥಸೇವನೆಯಿಂದಲೂ, ದಾನಗಳಿಂದಲೂ ಪಾಪಗಳು ನಾಶವಾಗುವುದಿಲ್ಲ. ಆದರೆ ಅಜ್ಞಾನದಿಂದಲೂ, ಪ್ರಮಾದದಿಂದಲೂ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವುಂಟು.

೪೧. ಇದನ್ನು ತಿಳಿದು ಬ್ರಾಹ್ಮಣರು ವಿಧಿವಿಹಿತರೀತಿಯಿಂದಲೇ ನಡೆಯಬೇಕು. ಪರಬ್ರಹ್ಮಚಿಂತನೆಯಲ್ಲಿಯೇ ಪುನಃಪುನಃ ಮನಸ್ಸನ್ನುಪಯೋಗಿಸುತ್ತಿರಬೇಕು.

ಊರ್ಧ್ವರೂಪಂ ವಿರೂಪಾಕ್ಷಂ ಯೋಽಧೀತೇ ರುದ್ರಮೇವ ಚ ।
ಈಶಾನಂ ಪಶ್ಯತೇ ಸಾಕ್ಷಾತ್ ಷಣ್ಮಾಸಾತ್ಸಂಗವರ್ಜಿತಃ ॥ ೪೨ ॥
ಸಂಹಿತಾಯಾ ದಶಾವೃತ್ತೀರ್ಯಃ ಕರೋತಿ ಸುಸಂಯುತಃ ।
ನರ್ಮದಾತಟಮಾಶ್ರಿತ್ಯ ಸ ಮುಚ್ಯೇತ್ಸರ್ವಪಾತಕೈಃ ॥ ೪೩ ॥
ಪುರಾಣಸಂಹಿತಾಂ ವಾಽಪಿ ಶೈವೀಂ ವಾ ವೈಷ್ಣವೀಮಪಿ ।
ಯಃ ಪಠೇನ್ನರ್ಮದಾತೀರೇ ಶಿವಾಗ್ರೇ ಸ ಶಿವಾತ್ಮಕಃ ॥ ೪೪ ॥
ಆಭೂತಸಂಪ್ಲವಂ ಯಾವತ್ಸ್ವರ್ಗೇ ಲೋಕೇ ಮಹೀಯತೇ ।
ಸಂಸಾರವ್ಯಸನಂ ಹಾತುಂ ಪುರಾ ಪ್ರೋಕ್ತಂ ತು ನಂದಿನಾ ॥ ೪೫ ॥
ದೇವರ್ಷಿಸಿದ್ಧಗಂಧರ್ವಸಮವಾಯೇ ಶಿವಾಲಯೇ ।
ನಂದಿಗೀತಾಮಿಮಾಂ ರಾಜಂಛೃಣುಷ್ವೈಕಮನಾಃ ಶುಭಾಂ ॥ ೪೬ ॥
ಸ್ವರ್ಗಮೋಕ್ಷಪ್ರದಾಂ ಪುಣ್ಯಾಂ ಸಂಸಾರಭಯನಾಶಿನೀಂ ॥ ೪೭ ॥

---

೪೨. ಮಹಾಮಹಿಮನೂ, ತ್ರಿಲೋಚನನೂ, ಲೋಕೇಶ್ವರನೂ ಆದ ಪರಮಶಿವಾತ್ಮಕವಾದ ರುದ್ರಸೂಕ್ತವನ್ನು ಯಾವನು ಜಪಿಸುವನೊ, ಅವನು ಏಕಾಕಿಯಾಗಿರಲು ಆರು ತಿಂಗಳೊಳಗಾಗಿಯೇ ಈಶ್ವರನನ್ನು ಸಾಕ್ಷಾತ್ತಾಗಿ ನೋಡುವನು.

೪೩. ನರ್ಮದಾತೀರವನ್ನು ಸೇರಿ ಯಾವನು ನಿಯತೇಂದ್ರಿಯನಾಗಿ ರುದ್ರಸಂಹಿತೆಯನ್ನು ಹತ್ತುಸಲ ಪಠನಮಾಡುವನೊ, ಅವನು ಸಕಲಪಾತಕಗಳಿಂದಲೂ ಮುಕ್ತನಾಗುವನು.

೪೪. ಪುರಾಣಸಂಹಿತೆಯನ್ನೊ, ಶೈವ ವೈಷ್ಣವ ಪುರಾಣಗಳನ್ನೊ ಯಾವನು ನರ್ಮದಾತಟದಲ್ಲಿ ಪಠಿಸುವನೊ, ಅವನು ಶಿವಾತ್ಮಕನಾಗಿ ಶಿವನ ಸನ್ನಿಧಿಯನ್ನು ಸೇರುವನು.

೪೫. ಭೂತನಾಶವಾಗುವ ಮಹಾಪ್ರಳಯದವರೆಗೂ ಅಂಥವನು ಸ್ವರ್ಗಲೋಕದಲ್ಲಿ ಉಚ್ಚಪದವಿಯಲ್ಲಿರುವನು. ಸಂಸಾರದುಃಖವನ್ನು ಕಳೆಯುವ ಈ ಉಪಾಯವನ್ನು ಹಿಂದೆ ನಂದಿಯು ಉಪದೇಶಿಸಿರುವನು.

೪೬. ಶಿವಲೋಕದಲ್ಲಿ ದೇವತೆಗಳೂ, ಮಹರ್ಷಿಗಳೂ, ಸಿದ್ಧರೂ, ಗಂಧರ್ವರೂ ಸಭೆಯಲ್ಲಿ ಸೇರಿರಲು ನಂದಿಯು ಸಾರಿದ ಈ ಶುಭಸಮಾಚಾರವನ್ನು ಏಕಾಗ್ರಚಿತ್ತದಿಂದ ಕೇಳು.

೪೭. ಈ ಸಂದೇಶವು ಸ್ವರ್ಗಮೋಕ್ಷಗಳನ್ನು ಕೊಡುವಂತಹುದೂ, ಪುಣ್ಯಸಹಿತವೂ, ಸಂಸಾರಭಯವನ್ನು ಕಳೆಯುವುದೂ ಆಗಿರುವುದು.

ಸಂಸಾರಗಹ್ವರಗುಹಾಂ ಪ್ರವಿಹಾತುಮೇತಾಂ
ಚೇದಿಚ್ಛಥ ಪ್ರತಿಪದಂ ಭವತಾಪಖಿನ್ನಾಃ ।
ನಾನಾವಿಧೈರ್ನಿಜಕೃತೈರ್ಬಹುಕರ್ಮಪಾಶೈ
ಬದ್ಧಾಃ ಸುಖಾಯ ಶೃಣುತೈಕಹಿತಂ ಮಯೋಕ್ತಂ ॥ ೪೮ ॥
ಶಕ್ರ ವಕ್ರಗತಿಂ ಮಾ ಗಾ ಮಾ ಕೃಥಾ ಯಮಯಾತನಾಂ ।
ಚೇತಃ ಪ್ರಚೇತಃ ಶಮಯ ಲೌಲುಪ್ಯಂ ತ್ಯಜ ವಿತ್ತಪ ॥ ೪೯ ॥
ದೀನಾಽನಾಥವಿಶಿಷ್ಟೇಭ್ಯೋ ಧನಂ ಸರ್ವಂ ಪರಿತ್ಯಜ ।
ಯದಿ ಸಂಸಾರಜಲಧೇರ್ವೀಚೀಪ್ರೇಂಖೋಲ್ಲನಾತುರಃ ॥ ೫೦ ॥
ಜನ್ಮೋದ್ವಿಗ್ನಂ ಮೃತೇಸ್ತ್ರಸ್ತಂ ಗ್ರಸ್ತಂ ಕಾಮಾದಿಭಿರ್ನರಂ ।
ಸ್ರಸ್ತಂ ಯೋ ನ ಯಮಾದಿಭ್ಯಃ ಪಿನಾಕೀ ಪಾತಿ ಪಾವನಃ ॥ ೫೧ ॥
ಮಾ ಧೇಹಿ ಗರ್ವಂ ಕೀನಾಶ ಹಾಸ್ಯಂ ಯಾಸ್ಯಸಿ ಪೀಡಯನ್ ।
ಪ್ರಾಣಿನಂ ಸರ್ವಶರಣಂ ತದ್ಭಾವಿ ಶರಣಂ ತವ ॥ ೫೨ ॥
ಕಾಲಃ ಕರಾಲಕೋ ಬಾಲಃ ಕೋ ಮೃತ್ಯುಃ ಕೋ ಯಮಾಧಮಃ ।
ಶಿವವಿಷ್ಣುಪರಾಣಾಂ ಹಿ ನರಾಣಾಂ ಕಿಂ ಭಯಂ ಭವೇತ್ ॥ ೫೩ ॥

---

೪೮. "ಸಂಸಾರದ ತಾಪಗಳಿಂದ ಬೆಂದು ಘೋರವಾದ ಈ ಗುಹೆಯಿಂದ ಶೀಘ್ರವಾಗಿ ಬಿಡುಗಡೆಯನ್ನು ಹೊಂದಲೆಳಸುವಿರಾದರೆ, ಹಿಂದೆಮಾಡಿದ ಅನೇಕ ವಿಧಗಳಾದ ಕರ್ಮಫಲಗಳೆಂಬ ಪಾಶಗಳಿಂದ ಬದ್ಧರಾಗಿ ಸುಖವನ್ನು ಬಯಸುವಿರಾದರೆ ನಾನು ಹೇಳುವ ಹಿತಕರವಾದ ಒಂದೇ ಉಪಾಯವನ್ನು ಕೇಳಿರಿ.

೪೯. ಅಯ್ಯಾ ಇಂದ್ರನೆ! ವಕ್ರಮಾರ್ಗವನ್ನನುಸರಿಸಬೇಡ. ಯಮನೆ! ಜೀವಹಿಂಸೆಯನ್ನು ಮಾಡಬೇಡ. ವರುಣನೆ! ಮನಸ್ಸನ್ನು ನಿಗ್ರಹಿಸು. ಕುಬೇರನೆ! ಚಾಪಲ್ಯವನ್ನು ಬಿಟ್ಟುಬಿಡು.

೫೦. ದೀನರು, ಅನಾಥರು ಮುಂತಾದವರಿಗೆ ನಿನ್ನ ಧನವೆಲ್ಲವನ್ನೂ ದಾನಮಾಡು. ಸಂಸಾರಸಮುದ್ರದ ಅಲೆಗಳನ್ನು ದಾಟಲು ಆತುರವುಳ್ಳವನಾಗಿರುವೆಯಾ?

೫೧. ಜನನದಿಂದ ಬೇಸರಗೊಂಡವನೂ, ಮರಣಕ್ಕೆ ಭಯಪಡುವವನೂ, ಕಾಮಾದಿ ಷಡ್ವರ್ಗಗಳಿಗೆ ಸಿಕ್ಕಿದವನೂ ಆದ ದೀನಮಾನವನನ್ನು ಯಮಾದಿಗಳ ಬಾಧೆಯಿಂದ ಪಿನಾಕಪಾಣಿಯು ಸಂರಕ್ಷಿಸುವನು.

೫೨. ಯಮನೆ! ಗರ್ವಕ್ಕೆಡೆಗೊಡಬೇಡ. ಮಹೇಶ್ವರನನ್ನು ಶರಣುಹೊಕ್ಕಿರುವವನಿಗೆ ಪೀಡೆಯನ್ನುಂಟುಮಾಡಲು ಅಪಹಾಸ್ಯಕ್ಕೀಡಾಗುವೆ. ನೀನೇ ಅವನನ್ನು ಶರಣುಹೊಗಬೇಕು.

೫೩. ಕಾಲನೆಂಬುವನು ಭಯಗೊಳಿಸುವ ಬಾಲಕನು. ಮೃತ್ಯುವು

ಭವಭಾರಾರ್ತಜಂತೂನಾಂ ರೇವಾತೀರನಿವಾಸಿನಾಂ ।
ಭರ್ಗಶ್ಚ ಭಗವಾಂಶ್ಚೈವ ಭವಭೀತಿವಿಭೇದನೌ ॥ ೫೪ ॥
ಶಿವಂ ಭಜ ಶಿವಂ ಧ್ಯಾಯ ಶಿವಂ ಸ್ತುಹಿ ಶಿವಂ ಯಜ ।
ಶಿವಂ ನಮ ವರಾಕ ತ್ವಂ ಜ್ಞಾನಂ ಮೋಕ್ಷಂ ಯದೀಚ್ಛಸಿ ॥ ೫೫ ॥
ಪಠ ಪಂಚಾನನಂ ಶಾಸ್ತ್ರಂ ಮಂತ್ರಂ ಪಂಚಾಕ್ಷರಂ ಜಪ ।
ಧೇಹಿ ಪಂಚಾತ್ಮಕಂ ತತ್ತ್ವಂ ಯಜ ಪಂಚಾನನಂ ಪರಂ ॥ ೫೬ ॥
ಕಿಂ ತೈಃ ಕರ್ಮಗಣೈಃ ಶೌಚೈರ್ನಾನಾಭಾವವಿಶೇಷಿತೈಃ ।
ಯದಿ ಪಂಚಾನನಃ ಶ್ರೀಮಾನ್ ಸೇವ್ಯತೇ ಸರ್ವಥಾ ಶಿವಃ ॥ ೫೭ ॥
ಕಿಂ ಸಂಸಾರಗಜೋನ್ಮತ್ತಬೃಂಹಿತೈರ್ನಿರ್ಭೃತೈರಪಿ ।
ಯದಿ ಪಂಚಾನನೋ ದೇವೋ ಭಾವಗಂಧೋಪಸೇವಿತಃ ॥ ೫೮ ॥
ರೇ ಮೂಢ ಕಿಂ ವಿಷಾದೇನ ಪ್ರಾಪ್ಯ ಕರ್ಮಕದರ್ಥನಾಂ ।
ಭವಾನೀವಲ್ಲಭಂ ಭೀಮಂ ಜಪ ತ್ವಂ ಭಯನಾಶನಂ ॥ ೫೯ ॥

---

ಯಾರು? ನೀಚನಾದ ಆ ಯಮನು ತಾನೆ ಯಾರು? ಶಿವಕೇಶವರನ್ನು ನಂಬಿದವರಿಗೆ ಯಾವ ಭಯವು ಸಂಭವಿಸಬಹುದು?

೫೪–೫೫. ಸಂಸಾರಭಾರದಿಂದ ಶ್ರಾಂತರಾದ ಜಂತುಗಳು ನರ್ಮದಾತೀರವನ್ನಾಶ್ರಯಿಸಲು ಪರಮೇಶ್ವರನೂ, ಮಹಾವಿಷ್ಣುವೂ ಅವರ ಸಂಸಾರಭಯವನ್ನು ನಾಶಮಾಡುವರು. ನೀಚನೆ! ಮೋಕ್ಷವನ್ನು ಅಪೇಕ್ಷಿಸುವೆಯಾದರೆ ಶಿವನನ್ನೇ ಭಜಿಸು. ಆತನನ್ನೇ ಧ್ಯಾನಿಸಿ ಸ್ತೋತ್ರಮಾಡು. ಆತನ ಪೂಜೆಯನ್ನೂ ನಮಸ್ಕಾರವನ್ನೂ ಮಾಡಲು ನಿನಗೆ ಜ್ಞಾನವು ಲಭಿಸುವುದು.

೫೬. ಶೈವಶಾಸ್ತ್ರಗಳನ್ನು ಪಠಿಸು. ಪಂಚಾಕ್ಷರೀಮಂತ್ರವನ್ನು ಜಪಿಸುತ್ತಿರು. ಪಂಚಾತ್ಮಕವಾದ ತತ್ತ್ವದ ಜ್ಞಾನವನ್ನು ತಾಳಿ ಸರ್ವಶ್ರೇಷ್ಠನಾದ ಪಂಚಮುಖನನ್ನೇ ಪೂಜಿಸು.

೫೭. ಸರ್ವಭಾವದಿಂದಲೂ ಸರ್ವೇಶ್ವರನಾದ ಪರಮಶಿವನ ಸೇವೆಯನ್ನು ಮಾಡಿದ ಮೇಲೆ ಅನೇಕವಿಧಗಳಿಂದ ವಿವರಿಸಲ್ಪಟ್ಟಿರುವ ಶೌಚಾದಿ ಅಸಂಖ್ಯಾತಕರ್ಮಗಳ ಆಚರಣೆಯಿಂದಾಗಬೇಕಾದುದೇನು?

೫೮. ಭಕ್ತಿಯೆಂಬ ಸುಗಂಧದಿಂದ ಪಂಚಮುಖನೆಂಬ (ಸಿಂಹವೆಂಬ) ಮಹಾದೇವನನ್ನು ಸೇವಿಸಿದವನಿಗೆ ಸಂಸಾರವೆಂಬ ಮಹಾಗಜದ ಘೀಂಕಾರವು ಎಷ್ಟೇ ದೊಡ್ಡದಾದರೂ ಏನುಮಾಡಲಾದೀತು?

೫೯. ಮೂಢಮಾನವನೆ! ಕರ್ಮದ ಕೋಟಲೆಯಲ್ಲಿ ಸಿಕ್ಕಿಹಾಕಿಕೊಂಡು ವಿಷಾದಪಡುವೆಯೇಕೆ? ಮಹಾಭಯಂಕರನೂ, ಸಂಸಾರಭಯನಾಶಕನೂ, ಪಾರ್ವತೀರಮಣನೂ ಆದ ಪರಮೇಶ್ವರನನ್ನು ಭಜಿಸು.

ನರ್ಮದಾತೀರನಿಲಯಂ ದುಃಖೌಘವಿಲಯಂಕರಂ ।
ಸ್ವರ್ಗಮೋಕ್ಷಪ್ರದಂ ಭರ್ಗಂ ಭಜ ಮೂಢ ಸುರೇಶ್ವರಂ ॥ ೬೦ ॥

ವಿಹಾಯ ರೇವಾಂ ಸುರಸಿಂಧುಸೇವ್ಯಾಂ
ತತ್ತೀರಸಂಸ್ಥಂ ಚ ಹರಂ ಹರಿಂ ಚ ।
ಉನ್ಮತ್ತವದ್ಭಾವವಿವರ್ಜಿತಸ್ತ್ವಂ
ಕ್ವ ಯಾಸಿ ರೇ ಮೂಢ ದಿಗಂತರಾಣಿ ॥ ೬೧ ॥

ಭಜ ರೇವಾಜಲಂ ಪುಣ್ಯಂ ಯಜ ರುದ್ರಂ ಸನಾತನಂ ।
ಜಪ ಪಂಚಾಕ್ಷರೀಂ ವಿದ್ಯಾಂ ವ್ರಜ ಸ್ಥಾನಂ ಚ ವಾಂಛಿತಂ ॥ ೬೨ ॥
ಕ್ಲೇಶಯಿತ್ವಾ ನಿಜಂ ಕಾಯಮುಪಾಯೈರ್ಬಹುಭಿಸ್ತು ಕಿಂ ।
ಭಜ ರೇವಾಂ ಶಿವಂ ಪ್ರಾಪ್ಯ ಸುಖಸಾಧ್ಯಂ ಪರಂ ಪದಂ ॥ ೬೩ ॥
ಏವಂ ಕೈಲಾಸಮಾಸಾದ್ಯ ನಂದೀ ಸ ಶಿವಸನ್ನಿಧೌ ।
ಜಗೌ ಯಲ್ಲೋಕಪಾಲಾನಾಂ ತನ್ಮಯೋಕ್ತಂ ತವಾಽಧುನಾ ॥ ೬೪ ॥

ಮಾರ್ಕಂಡೇಯ ಉವಾಚ :—

ಸ್ನಾನದಾನಪರೋ ಯಸ್ತು ನಿತ್ಯಂ ಧರ್ಮಮನುವ್ರತಃ ।
ನರ್ಮದಾತೀರಮಾಶ್ರಿತ್ಯ ಮುಚ್ಯತೇ ಸರ್ವಪಾತಕೈಃ ॥ ೬೫ ॥

---

೬೦. ನರ್ಮದಾತೀರವಾಸಿಯೂ, ದುಃಖರಾಶಿಯನ್ನು ನಾಶಮಾಡುವವನೂ, ಸ್ವರ್ಗಾಪವರ್ಗಗಳನ್ನು ಕೊಡುವವನೂ, ದೇವೋತ್ತಮನೂ ಆದ ಪರಮಶಿವನನ್ನು ಭಜಿಸು.

೬೧. ಮೂರ್ಖನೆ! ದೇವತಾಕೋಟಿಗಳಿಂದ ಸೇವಿತವಾದ ನರ್ಮದೆಯನ್ನೂ, ಅದರ ತೀರಗಳಲ್ಲಿ ನೆಲಸಿರುವ ಹರಿಹರರನ್ನೂ ತ್ಯಜಿಸಿ, ಭಕ್ತಿರಹಿತನಾಗಿ ಹುಚ್ಚನಂತೇಕೆ ದಿಕ್ಕುದಿಕ್ಕುಗಳಿಗೂ ತಿರುಗುತ್ತಿರುವೆ ?

೬೨. ಪುಣ್ಯಪ್ರದವಾದ ರೇವಾಜಲವನ್ನು ಸೇವಿಸು, ಅನಾದಿನಿಧನನಾದ ರುದ್ರನನ್ನು ಭಜಿಸು, ಪಂಚಾಕ್ಷರೀ ಮಹಾಮಂತ್ರವನ್ನು ಜಪಿಸಿ ಈಪ್ಸಿತಪದವಿಯನ್ನು ಹೊಂದು.

೬೩. ಬಹುವಿಧ ಸಾಧನೆಗಳಿಂದ ನಿನ್ನ ಶರೀರಕ್ಕೆ ಕಷ್ಟವನ್ನು ಕೊಡುವುದರಿಂದೇನು ? ರೇವಾತೀರವನ್ನೂ, ಅಲ್ಲಿರುವ ಶಿವನನ್ನೂ ಹೊಂದಿ ಸುಲಭಸಾಧ್ಯವಾದ ಪರಮಪದವನ್ನು ಪಡೆ.''

೬೪. ಇಂತು ಕೈಲಾಸಕ್ಕೆ ಹೋಗಿ ನಂದಿಯು ಶಿವನ ಸನ್ನಿಧಿಯಲ್ಲಿ ಇಂದ್ರಾದಿ ಲೋಕಪಾಲಕರಿಗೆ ಹೇಳಿದುದನ್ನೇ ನಾನು ನಿನಗೆ ಪುನಃ ಹೇಳುತ್ತಿರುವೆನು.

೬೫. ಮಾರ್ಕಂಡೇಯನು ಹೇಳುತ್ತಾನೆ :—ನರ್ಮದೆಯ ತೀರವನ್ನಾ

ವಿಧಿಹೀನೋ ಜಪೇನ್ನಿತ್ಯಂ ವೇದಾನ್ ಸರ್ವಾಂಛತಂ ಸಮಾಃ ।
ಮೃತ್ಯುಲಾಂಗಲಜಾಪ್ಯೇನ ಸಮೋ ಯೋಽಪ್ಯಧಿಕೋ ಗುಣೈಃ ॥ ೬೬ ॥
ಬೀಜಯೋನ್ಯವಿಶುದ್ಧಸ್ತು ಯಥಾ ರುದ್ರಂ ನ ವಿಂದತಿ ।
ತಥಾ ಲಾಂಗಲಮಂತ್ರೋಽಪಿ ನ ತಿಷ್ಠತಿ ಗತಾಯುಷಿ ॥ ೬೭ ॥
ಗಾಯತ್ರೀಜಪಸಂಯುಕ್ತಃ ಸಂಯಮಾ ಹ್ಯಧಿಕೋ ಗುಣೈಃ ।
ಅಗ್ನಿಮೀಳೇ ಇಷೇತ್ವೋ ವಾ ಅಗ್ನ ಆಯಾಹಿ ನಿತ್ಯದಾ ॥ ೬೮ ॥
ಶನ್ನೋ ದೇವೀತಿ ಕೂಲಸ್ಥೋ ಜಪೇನ್ಮುಚ್ಯೇತ ಕಿಲ್ಬಿಷೈಃ ॥ ೬೯ ॥
ಸಾಂಗೋಪಾಂಗಾಂಸ್ತಥಾ ವೇದಾಂಜಪನ್ನಿತ್ಯಂ ಸಮಾಹಿತಃ ।
ನ ತತ್ಫಲಮವಾಪ್ನೋತಿ ಗಾಯತ್ರ್ಯಾ ಸಂಯಮೋ ಯಥಾ ॥ ೭೦ ॥
ರುದ್ರಾಧ್ಯಾಯಂ ಸಕೃಜ್ಜಪ್ತ್ವಾ ವಿಪ್ರೋ ವೇದಸಮನ್ವಿತಃ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೭೧ ॥

---

ಶ್ರಯಿಸಿ ಸ್ನಾನದಾನಗಳನ್ನು ಮಾಡುತ್ತ ಸರ್ವಕಾಲದಲ್ಲಿಯೂ ಧರ್ಮನಿರತನಾಗಿರುವವನು ಸಮಸ್ತಪಾತಕಗಳನ್ನೂ ಕಳೆದುಕೊಳ್ಳುವನು.

೬೬. ಇತರ ವಿಧಿಗಳನ್ನನುಸರಿಸದಿದ್ದರೂ, ನಿತ್ಯವೂ ನೂರು ವರ್ಷಗಳ ವರೆಗೂ (ಯಾವಜ್ಜೀವವೂ) ಸಕಲ ವೇದಗಳನ್ನೂ ಪಠಿಸುತ್ತಿರಬೇಕು. ಅಥವಾ ಅದಕ್ಕೆ ಸಮಾನವಾದ ಮೃತ್ಯುಲಾಂಗಲಮಂತ್ರವನ್ನಾದರೂ ಜಪಿಸುತ್ತಿರಲು ಅಧಿಕಗುಣವಂತನಾಗುವನು.

೬೭. ತಾಯಿತಂದೆಗಳ ಅಶುದ್ಧತೆಯಲ್ಲಿ ಹುಟ್ಟಿದವನು ಹೇಗೆ ಮಹಾದೇವನನ್ನು ತಿಳಿಯಲಾರನೊ, ಹಾಗೆಯೇ ಮರಣಾವಸ್ಥೆಯನ್ನು ಸಮಿಾಪಿಸಿದವನೂ ಲಾಂಗಲಮಂತ್ರವನ್ನು ಜಪಿಸಲಾರನು.

೬೮–೬೯. ಆದುದರಿಂದ ಗುಣವಂತನಾದವನು ಗಾಯತ್ರೀಜಪನಿರತನಾಗಿರಬೇಕು. ನರ್ಮದಾತೀರದಲ್ಲಿ "ಅಗ್ನಿಮಿಾಳೇ" ಮೊದಲಾದ ಋಗ್ವೇದವನ್ನೊ, "ಇಷೇತ್ವಾ" ಮೊದಲಾದ ಯಜುರ್ವೇದವನ್ನೊ, "ಅಗ್ನಆಯಾಹಿ" ಮುಂತಾದ ಸಾಮವೇದವನ್ನೊ, "ಶನ್ನೋ ದೇವೀರಭೀಷ್ಟಯೇ" ಮುಂತಾದ ಅಥರ್ವಣವೇದವನ್ನೋ ಪಠಿಸುತ್ತ ಜೀವನವನ್ನು ಕಳೆಯಲು ತನ್ನ ಪಾಪಗಳನ್ನು ನೀಗುವನು.

೭೦. ಅಂಗೋಪಾಂಗಗಳ ಸಹಿತವಾಗಿ ಸಮಸ್ತವೇದಗಳನ್ನೂ ಏಕಾಗ್ರಚಿತ್ತದಿಂದ ಪಠಿಸಿದವನು ಸಹ ಗಾಯತ್ರೀಮಂತ್ರವನ್ನು ಜಪಿಸುವ ಜಿತೇಂದ್ರಿಯನು ಪಡೆಯುವ ಫಲವನ್ನು ಹೊಂದಲಾರನು.

೭೧. ವೇದಜ್ಞನಾದ ಬ್ರಾಹ್ಮಣನು ಒಮ್ಮೆ ರುದ್ರಾಧ್ಯಾಯವನ್ನು ಜಪಿಸುವುದರಿಂದಲೇ ಸರ್ವಪಾಪಗಳಿಂದಲೂ ಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು.

ಅನ್ಯದ್ವೈ ಜಪ್ಯ ಸಂಸ್ಥಾನಂ ಸೂಕ್ತಮಾರಣ್ಯಕಂ ತಥಾ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೭೨ ॥
ಯತ್ಕಿಂಚಿತ್ಕ್ರಿಯತೇ ಜಾಪ್ಯಂ ಯಚ್ಚ ದಾನಂ ಪ್ರದೀಯತೇ ।
ನರ್ಮದಾಜಲಮಾಶ್ರಿತ್ಯ ತತ್ಸರ್ವಂ ಚಾಽಕ್ಷಯಂ ಭವೇತ್ ॥ ೭೩ ॥
ಏವಂ ವಿಧೈರ್ವ್ರತೈರ್ನಿತ್ಯಂ ನರ್ಮದಾಂ ಯೇ ಸಮಾಶ್ರಿತಾಃ ।
ತೇ ಮೃತಾ ವೈಷ್ಣವಂ ಯಾಂತಿ ಪದಂ ವಾ ಶೈವಮವ್ಯಯಂ ॥ ೭೪ ॥
ಸತ್ಯಲೋಕಂ ನರಾಃ ಕೇಚಿತ್ಸೂರ್ಯಲೋಕಂ ತಥಾಽಪರೇ ।
ಅಪ್ಸರೋಗಣಸಂವೀತಾ ಯಾವದಾಭೂತಸಂಪ್ಲವಂ ॥ ೭೫ ॥
ಏವಂ ವೈ ವರ್ತಮಾನೇಽಸ್ಮಿಂಲ್ಲೋಕೇ ತು ನೃಪಪುಂಗವ ।
ಋಷೀಣಾಂ ದಶಕೋಟ್ಯಸ್ತು ಕುರುಕ್ಷೇತ್ರನಿವಾಸಿನಾಂ ॥ ೭೬ ॥
ಮಯಾ ಸಹ ಮಹಾಭಾಗ ನರ್ಮದಾತಟಮಾಶ್ರಿತಾಃ ।
ಫಲಮೂಲಕೃತಾಹಾರಾ ಅರ್ಚಯಂತಃ ಸ್ಥಿತಾಃ ಶಿವಂ ॥ ೭೭ ॥
ತಚ್ಚ ವರ್ಷಶತಂ ದಿವ್ಯಂ ಕಾಲಸಂಖ್ಯಾನುಮಾನತಃ ।
ಷಡ್ತ್ರಿಂಶತಿಸಹಸ್ರಾಣಿ ತಾನಿ ಮಾನುಷಸಂಖ್ಯಯಾ ॥ ೭೮ ॥

---

೭೨. ಬೇರೆ ಯಾವ ವೇದಭಾಗವನ್ನಾಗಲಿ, ಸೂಕ್ತವನ್ನಾಗಲಿ, ಆರಣ್ಯಕವನ್ನಾಗಲಿ ಅಧ್ಯಯನಮಾಡಿದರೂ ಪಾಪಲೇಪವಿಲ್ಲದವನಾಗಿ ವೈಕುಂಠವನ್ನು ಹೊಂದುವನು.

೭೩. ಈ ನರ್ಮದೆಯ ಜಲವನ್ನಾಶ್ರಯಿಸಿ ಎಷ್ಟೇ ಸ್ವಲ್ಪವಾದ ಜಪವನ್ನು ಮಾಡಿದರೂ, ದಾನವನ್ನಿತ್ತರೂ, ಅದು ಅಕ್ಷಯಫಲದಾಯಕವಾಗುವುದು.

೭೪. ನರ್ಮದೆಯ ಬಳಿಯಲ್ಲಿ ಈ ವಿಧಗಳಾದ ವ್ರತಗಳನ್ನು ಮಾಡುತ್ತ ದಿನಗಳನ್ನು ಕಳೆಯುವ ಮನುಷ್ಯರು ಮೃತರಾಗಲು, ವೈಕುಂಠವನ್ನೋ ಕೈಲಾಸವನ್ನೋ ಸೇರುವರು.

೭೫. ಕೆಲವು ಮಾನವರು ಸತ್ಯಲೋಕವನ್ನೂ, ಹಲವರು ಸೂರ್ಯಲೋಕವನ್ನೂ ಸೇರಿ ಮಹಾಪ್ರಳಯದವರೆಗೂ ಅಪ್ಸರೋಗಣಗಳಿಂದ ಪರಿವಾರಿತರಾಗಿರುವರು.

೭೬. ಮಹಾರಾಜನೆ! ಇಂತು ಲೋಕಯಾತ್ರೆಯು ನಡೆಯುತ್ತಿರಲು, ಹತ್ತುಕೋಟಿ ಮಹರ್ಷಿಗಳು ಕುರುಕ್ಷೇತ್ರದಲ್ಲಿ ವಾಸಿಸುತ್ತಿದ್ದರು.

೭೭. ಅವರೆಲ್ಲರೂ ನನ್ನೊಡನೆ ನರ್ಮದಾತೀರವನ್ನು ಸೇರಿ ಹಣ್ಣುಗಳನ್ನೂ, ಗಡ್ಡೆಗೆಣಸುಗಳನ್ನೂ ತಿನ್ನುತ್ತ ಶಿವಾರಾಧನೆಯಲ್ಲಿ ತತ್ಪರರಾಗಿ ನಿಂತರು.

೭೮. ಆ ಕಾಲವನ್ನು ಕಾಲಸಂಖ್ಯಾನಿಪುಣರು ನೂರು ದಿವ್ಯವರ್ಷಗಳೆನ್ನುವರು. ಮನುಷ್ಯದೃಷ್ಟಿಯಿಂದ ಅದು ಮುವ್ವತ್ತಾರುಸಾವಿರ ವರ್ಷವಾಗುವುದು.

ತತಸ್ತಸ್ಯಾಮತೀತಾಯಾಂ ಸಂಧ್ಯಾಯಾಂ ನೃಪಸತ್ತಮ ।
ಶೇಷಂ ಮಾನುಷ್ಯಮೇಕಂ ತು ಕಾಲೇ ವರ್ಷಶತಂ ಸ್ಥಿತಂ ॥ ೭೯ ॥
ತತೋಽಭವದನಾವೃಷ್ಟಿರ್ಲೋಕಕ್ಷಯಕರೀ ತದಾ ।
ಯಯಾ ಜಾತಂ ಜಗತ್ಸರ್ವಂ ಕ್ಷಯಂ ಭೂಯೋ ಹಿ ದಾರುಣಂ ॥ ೮೦ ॥
ಯೇ ಪೂರ್ವಮಿಹ ಸಂಸಿದ್ಧಾ ಋಷಯೋ ವೇದಪಾರಗಾಃ ।
ತೇಷಾಂ ಪ್ರಭಾವಾದ್ಭಗವಾನ್ವವರ್ಷ ಬಲವೃತ್ರಹಾ ॥ ೮೧ ॥
ಮಹತೀ ಭೂರಿಸಲಿಲಾ ಸಮಂತಾದ್ವೃಷ್ಟಿರಾಹಿತಾ ।
ತತೋ ವೃಷ್ಟ್ಯಾಂತು ತೇಷಾಂ ವೈ ವರ್ತನಂ ಸಮಜಾಯತ ॥ ೮೨ ॥
ಶ್ಯಾಮಾಕೇಂಗುದಬಿಲ್ವಾದ್ಯೈರ್ನರ್ಮದಾತೀರಮಾಶ್ರಿತೈಃ ।
ನೀಯತೇ ಸ ಮಹಾನ್ಕಾಲೋ ಮಹಾಸಿದ್ಧಿಮಭೀಪ್ಸುಭಿಃ ॥ ೮೩ ॥
ಪುನರ್ಯುಗಾಂತೇ ಸಂಪ್ರಾಪ್ತೇ ಕಿಂಚಿಚ್ಛೇಷೇ ಕಲೌಯುಗೇ ।
ನಿಃಶೇಷಮಭವತ್ಸರ್ವಂ ಶುಷ್ಕಂ ಸ್ಥಾವರಜಂಗಮಂ ॥ ೮೪ ॥
ನಿರ್ವೃಕ್ಷೌಷಧಗುಲ್ಮಂ ಚ ತೃಣವೀರುದ್ವಿವರ್ಜಿತಂ ।
ಅನಾವೃಷ್ಟಿಹತಂ ಸರ್ವಂ ಭೂಮಂಡಲಮಭೂದ್ಭೃಶಂ ॥ ೮೫ ॥

---

೭೯. ಯುಧಿಷ್ಠಿರರಾಜೇಂದ್ರನೆ! ಇಂತು ಯುಗಸಂಧಿಕಾಲವೆಲ್ಲ ಕಳೆದು ಮನುಷ್ಯವರ್ಷಗಳ ಒಂದುನೂರರಷ್ಟು ಕಾಲವುಮಾತ್ರ ಉಳಿಯಿತು.

೮೦. ಆಗ ಮತ್ತೆ ಲೋಕನಾಶಕರವಾದ ಅನಾವೃಷ್ಟಿಯು ಕಾಣಿಸಿಕೊಂಡು ಸಕಲ ಜಗತ್ತೂ ಭಯಂಕರವಾದ ನಾಶಕ್ಕೆ ತುತ್ತಾಯಿತು.

೮೧. ಪೂರ್ವದಲ್ಲಿ ಭೂಲೋಕದಲ್ಲಿದ್ದ ವೇದವೇದಾಂಗಪಾರಗರಾದ ಮಹಾತ್ಮರ ಪ್ರಭಾವದಿಂದ ಮಹೇಂದ್ರನು ಕೆಲವೆಡೆಗಳಲ್ಲಿ ಮಳೆಗರೆದನು.

೮೨. ದೊಡ್ಡದೂ, ಬಹಳ ನೀರನ್ನೆರೆಯುವುದೂ ಆದ ಮಳೆಯು ಬೀಳಲು ಆ ಸ್ಥಳಗಳಲ್ಲೆಲ್ಲ ಜನರಿಗೆ ಜೀವನೋಪಾಯವು ದೊರಕಿತು.

೮೩. ಈ ಕಾಲವನ್ನೆಲ್ಲ ನರ್ಮದಾತೀರವಾಸಿಗಳಾದ ಮಹಾಮುನಿಗಳು ಮಹಾಸಿದ್ಧಿಗಳನ್ನು ಬಯಸಿ ಸಾವೆ, ಇಂಗುದಿ, ಬಿಲ್ವ ಮುಂತಾದುವುಗಳಿಂದ ಕಾಲಕಳೆಯುತ್ತಿದ್ದರು.

೮೪. ಪುನಃ ಯುಗಾಂತವು ಪ್ರಾಪ್ತವಾಗಿ ಕಲಿಯುಗದಲ್ಲಿ ಸ್ವಲ್ಪವೇ ಉಳಿಯಲು ಸ್ಥಾವರಜಂಗಮಗಳೆಲ್ಲವೂ ನಾಶವನ್ನು ಹೊಂದಿ ಅಲ್ಪಾವಶೇಷಗಳಾದುವು.

೮೫. ವೃಕ್ಷಗಳೂ, ಓಷಧಿಗಳೂ, ಬಳ್ಳಿಗಳೂ, ಹುಲ್ಲುಗಳೂ, ನಿಶ್ಶೇಷಗಳಾದುವು. ಭೂಮಂಡಲವೆಲ್ಲವೂ ಅನಾವೃಷ್ಟಿಯಿಂದ ಬಹುವಾಗಿ ಸಂಕಟಗೊಂಡಿತು.

ತತಸ್తే ಋಷಯಃ ಸರ್ವೇ ಕ್ಷುತ್ತೃಷಾರ್ತಾಃ ಸಹಸ್ರಶಃ ।
ಯುಗಸ್ವಭಾವಮಾವಿಷ್ಟಾ ಹೀನಸತ್ತ್ವಾಽಭವನ್ನೃಪ ॥ ೮೬ ॥
ನಷ್ಟಹೋಮಸ್ವಧಾಕಾರೇ ಯುಗಾಂತೇ ಸಮುಪಸ್ಥಿತೇ ।
ಕಿಂ ಕಾರ್ಯಂ ಕ್ವನು ಯಾಸ್ಯಾಮಃ ಕೋಽಸ್ಮಾಕಂ ಶರಣಂ ಭವೇತ್ ॥
ತಾನಹಂ ಪ್ರತ್ಯುವಾಚೇದಂ ಮಾಭೈಷ್ಟೇತಿ ಪುನಃ ಪುನಃ ।
ಈದೃಗ್ವಿಧಾ ಮಯಾ ದೃಷ್ಟಾ ಬಹವಃ ಕಾಲಪರ್ಯಯಾಃ ॥ ೮೮ ॥
ನರ್ಮದಾತೀರಮಾಶ್ರಿತ್ಯ ತೇ ಸರ್ವೇ ಗಮಿತಾ ಮಯಾ ।
ಏಷಾ ಹಿ ಶರಣಂ ದೇವೀ ಸಂಪ್ರಾಪ್ತೇ ಹಿ ಯುಗಕ್ಷಯೇ ॥ ೮೯ ॥
ನಾಽನ್ಯಾ ಗತಿರಿಹಾಽಸ್ಮಾಕಂ ವಿದ್ಯತೇ ದ್ವಿಜಸತ್ತಮಾಃ ।
ಜನಯಿತ್ರೀ ಸರ್ವಭೂತಾನಾಂ ವಿಶೇಷೇಣ ದ್ವಿಜೋತ್ತಮಾಃ ॥ ೯೦ ॥
ಪಿತಾಮಹಾ ಯೇ ಪಿತರೋ ಯೇ ಚಾಽನ್ಯೇ ಪ್ರಪಿತಾಮಹಾಃ ।
ತೇ ಸಮಸ್ತಾ ಗತಾಃ ಸ್ವರ್ಗಂ ಸಮಾಶ್ರಿತ್ಯ ಮಹಾನದೀಂ ॥ ೯೧ ॥
ಭೃಗ್ವಾದ್ಯಾಃ ಸಪ್ತ ಯೇ ತ್ವಾಸನ್ಮಮ ಪೂರ್ವಪಿತಾಮಹಾಃ ।
ಧೌಮ್ಯಾಣೀ ಚ ಮಹಾಭಾಗಾ ಮಮ ಭಾರ್ಯಾ ಶುಚಿಸ್ಮಿತಾ ।
ಮನಸ್ವಿನೀ ಚ ಯಾ ಮಾತಾ ಭಾರ್ಗವೋಽಂಗಿರಸಸ್ತಥಾ ॥ ೯೨ ॥

---

೮೬. ಯುಧಿಷ್ಠಿರನೆ! ಆಗ ಸಾವಿರಗಟ್ಟಲೆಯಾಗಿ ಸಕಲ ಮಹರ್ಷಿಗಳೂ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಯುಗಧರ್ಮವನ್ನನುಸರಿಸಿ ಸತ್ತ್ವಹೀನರಾದರು.

೮೭. ಹೋಮಗಳೂ, ಪಿತೃಕರ್ಮಗಳೂ ನಷ್ಟವಾಗುವ ಯುಗಾಂತವು ಸನ್ನಿಹಿತವಾಗಲು ಎಲ್ಲರೂ, "ನಾವೇನು ಮಾಡೋಣ? ಎಲ್ಲಿಗೆ ಹೋಗೋಣ? ನಮ್ಮನ್ನು ಯಾರು ಕಾಯುವರು?" ಎಂದು ಚಿಂತಿಸುತ್ತಿದ್ದರು.

೮೮. ಆಗ ಅವರಿಗೆ ನಾನು ಮತ್ತೆ ಮತ್ತೆ ಇಂತು ಧೈರ್ಯವನ್ನು ಹೇಳಿದೆನು. "ನೀವು ಭಯಗೊಳ್ಳಬೇಡಿರಿ. ಇಂತಹ ಅನೇಕ ಕಾಲವೈಪರೀತ್ಯಗಳನ್ನು ನಾನು ನೋಡಿರುವೆನು."

೮೯. ತರುವಾಯ ಅವರೆಲ್ಲರೂ ನನ್ನೊಡನೆ ಹೊರಟು ನರ್ಮದಾತೀರವನ್ನಾಶ್ರಯಿಸಿದರು. ಯುಗದ ಅಂತ್ಯದಲ್ಲಿ ಈ ನದಿಯೊಂದೇ ಶರಣಸ್ಥಾನವಾಗಿರುವುದಷ್ಟೆ.

೯೦. ಎಲೈ ಬ್ರಾಹ್ಮಣೋತ್ತಮರಿರಾ! ಈ ನರ್ಮದೆಯಲ್ಲದೆ ನಮಗೆ ಬೇರೆ ಗತಿಯಿಲ್ಲ. ವಿಶೇಷವಾಗಿ ಈಕೆಯೇ ಸಕಲ ಜಂತುಗಳ ತಾಯಿಯು.

೯೧. ಈ ಮಹಾನದಿಯನ್ನು ಆಶ್ರಯಿಸಿದವನ ಪಿತೃಗಳೂ, ಪಿತಾಮಹರೂ, ಪ್ರಪಿತಾಮಹರೂ ಎಲ್ಲರೂ ಸ್ವರ್ಗಲೋಕಕ್ಕೆ ಸಂದರು.

೯೨–೯೩. ನನ್ನ ಪೂರ್ವಪಿತಾಮಹರಾದ ಭೃಗುವೇ ಮುಂತಾದ ಸಪ್ತ

ಪುಲಸ್ತ್ಯಃ ಪುಲಹಶ್ಚೈವ ವಸಿಷ್ಠಾತ್ರೇಯಕಾಶ್ಯಪಾಃ ।
ತಥಾಽನ್ಯೇ ಚ ಮಹಾಭಾಗಾ ನಿಯಮವ್ರತಚಾರಿಣಃ ।
ಅನ್ಯೇ ಚ ಶತಸಾಹಸ್ರಾ ಅತ್ರ ಸಿದ್ಧಿಂ ಸಮಾಗತಾಃ ॥ ೯೩ ॥
ತಸ್ಮಾದಿಯಂ ಮಹಾಭಾಗಾ ನ ಮೋಕ್ತವ್ಯಾ ಕದಾಚನ ।
ನಾಽನ್ಯಾ ಕಾಚಿನ್ನದೀ ಶಕ್ತಾ ಲೋಕತ್ರಯಫಲಪ್ರದಾ ॥ ೯೪ ॥
ದ್ವಂದ್ವೈರನೇಕೈರ್ಬಹುಭಿಃ ಕ್ಷುತ್ತೃಷಾದ್ಯೈರ್ಮಹಾಭಯೈಃ ।
ಮುಚ್ಯಂತೇ ತೇ ನರಾಃ ಸದ್ಯೋ ನರ್ಮದಾತೀರವಾಸಿನಃ ॥ ೯೫ ॥
ತಸ್ಮಾತ್ಸರ್ವಪ್ರಯತ್ನೇನ ಸೇವಿತವ್ಯಾ ಸರಿದ್ವರಾ ।
ವಾಂಛದ್ಭಿಃ ಪರಮಂ ಶ್ರೇಯ ಇಹಲೋಕೇ ಪರತ್ರಚ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ನರ್ಮದಾಮಾಹಾತ್ಮ್ಯವರ್ಣನಂ" ನಾಮೈಕಾದಶೋಽಧ್ಯಾಯಃ

---

ಮಹರ್ಷಿಗಳೂ, ನನ್ನ ಹೆಂಡತಿಯೂ, ಮಂಗಳಮುಖಿಯೂ ಆದ ಧೌಮ್ಯಣಿಯೂ, ನನ್ನ ತಾಯಿಯಾದ ಮನಸ್ವಿನಿಯೂ, ಭೃಗುಪುತ್ರನಾದ ಅಂಗಿರಸನೂ, ಪುಲಸ್ತ್ಯನೂ, ಪುಲಹನೂ, ವಸಿಷ್ಠನೂ, ಆತ್ರೇಯನೂ, ಕಶ್ಯಪನೂ, ವ್ರತನಿಯಮ ನಿರತರಾದ ಇತರ ಭಾಗ್ಯಶಾಲಿಗಳೂ ಮೊದಲಾಗಿ ಅನೇಕಲಕ್ಷ ಮಹಾತ್ಮರು ಇಲ್ಲಿ ಸಿದ್ಧಿಯನ್ನು ಪಡೆದಿರುವರು.

೯೪. ಆದುದರಿಂದ ಪರಮಪುಣ್ಯಪ್ರದವಾದ ಈ ನದಿಯನ್ನು ಎಂದಿಗೂ ಬಿಡಬೇಡಿರಿ. ಮೂರು ಲೋಕಗಳಿಗೂ ಇಷ್ಟಾರ್ಥಗಳನ್ನು ಕೊಡುವ ಶಕ್ತಿಯುಳ್ಳ ಬೇರೊಂದು ನದಿಯಿಲ್ಲ.

೯೫. ಸುಖದುಃಖಾದಿ ಅನೇಕ ವಿಧಗಳಾದ ದ್ವಂದ್ವಗಳಿಂದಲೂ, ಹಸಿವು ಬಾಯಾರಿಕೆಗಳ ಮಹಾಭಯಗಳಿಂದಲೂ ನರ್ಮದಾತೀರವಾಸಿಗಳು ಮುಕ್ತರಾಗಿರುವರು.

೯೬. ಆದುದರಿಂದ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಪರಮ ಶ್ರೇಯಸ್ಸನ್ನಪೇಕ್ಷಿಸುವವರು ಸರ್ವಪ್ರಯತ್ನದಿಂದಲೂ ಈ ಮಹಾನದಿಯನ್ನು ಸೇವಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ನರ್ಮದಾಮಾಹಾತ್ಮ್ಯವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

## ಅಥ ದ್ವಾದಶೋಽಧ್ಯಾಯಃ

### ನರ್ಮದಾಸ್ತೋತ್ರಕಥನಂ

**ಶ್ರೀ ಮಾರ್ಕಂಡೇಯ ಉವಾಚ:—**

**ಏತಚ್ಛ್ರುತ್ವಾ ವಚೋ ರಾಜನ್ ಸಂಹೃಷ್ಟಾ ಋಷಯೋಽಭವನ್ ।**
**ನರ್ಮದಾಂ ಸ್ತೋತುಮಾರಬ್ಧಾಃ ಕೃತಾಂಜಲಿಪುಟಾ ದ್ವಿಜಾಃ ॥ ೧ ॥**
**ನಮೋಽಸ್ತು ತೇ ಪುಣ್ಯಜಲೇ ನಮೋ ಮಕರಗಾಮಿನಿ ।**
**ನಮಸ್ತೇ ಪಾಪಮೋಚಿನ್ಯೈ ನಮೋ ದೇವಿ ವರಾನನೇ ॥ ೨ ॥**

**ನಮೋಽಸ್ತು ತೇ ಪುಣ್ಯಜಲಾಶ್ರಯೇ ಶುಭೇ**
**ವಿಶುದ್ಧಸತ್ವೇ ಸುರಸಿದ್ಧಸೇವಿತೇ ।**
**ನಮೋಽಸ್ತು ತೇ ತೀರ್ಥಗಣೈರ್ನಿಷೇವಿತೇ**
**ನಮೋಽಸ್ತು ರುದ್ರಾಂಗಸಮುದ್ಭವೇ ವರೇ ॥ ೩ ॥**
**ನಮೋಽಸ್ತು ತೇ ದೇವಿ ಸಮುದ್ರಗಾಮಿನಿ**
**ನಮೋಽಸ್ತು ತೇ ದೇವಿ ವರಪ್ರದೇ ಶಿವೇ ।**
**ನಮೋಽಸ್ತು ಲೋಕದ್ವಯಸೌಖ್ಯದಾಯಿನಿ**
**ಹ್ಯನೇಕಭೂತೌಘಸಮಾಶ್ರಿತೇಽನಘೇ ॥ ೪ ॥**

---

### ಕನ್ನಡದ ಅನುವಾದ

#### ನರ್ಮದಾಸ್ತೋತ್ರಕಥನ

೧. ಮಾರ್ಕಂಡೇಯನು ಹೇಳುತ್ತಾನೆ:—ಧರ್ಮರಾಜನೆ! ಇಂತೆಂದ ನನ್ನ ಮಾತುಗಳನ್ನು ಕೇಳಿ ಮಹರ್ಷಿಗಳಾದ ಆ ದ್ವಿಜೋತ್ತಮರು ಸಂತೋಷದಿಂದ ಕೈಗಳನ್ನು ಮುಗಿದು ನರ್ಮದೆಯನ್ನು ಸ್ತೋತ್ರಮಾಡತೊಡಗಿದರು.

೨. "ಪುಣ್ಯಜಲಪೂರ್ಣವೂ, ಸಮುದ್ರಗಾಮಿನಿಯೂ, ಪಾಪಗಳನ್ನು ಕಳೆಯುವುದೂ, ಮಂಗಳಪ್ರದೆಯೂ ಆದ ಓ ನರ್ಮದೆಯೆ! ನಿನಗೆ ನಮಸ್ಕಾರವು.

೩. ಪುಣ್ಯಜಲಕ್ಕೆ ಆಶ್ರಯವೂ, ಪುಣ್ಯಪ್ರದವೂ, ಶುದ್ಧಸತ್ವಗುಣಪ್ರಚುರವೂ, ದೇವತೆಗಳಿಗೂ, ಸಿದ್ಧರಿಗೂ ಸೇವಾರ್ಹವೂ, ಸಮಸ್ತತೀರ್ಥಗಳಿಂದ ಸೇವಿತವೂ, ಮಹೇಶ್ವರನ ದೇಹದಿಂದ ಹುಟ್ಟಿದ ಉತ್ತಮನದಿಯೂ ಆದ ನಿನ್ನನ್ನು ನಮಸ್ಕರಿಸುವೆವು.

೪. ಸಮುದ್ರವನ್ನು ಸೇರುವುದೂ, ವರಪ್ರದವೂ, ಮಂಗಳಕರವೂ, ಇಹಪರಲೋಕಗಳಲ್ಲಿ ಸೌಖ್ಯವನ್ನು ಕೊಡುವುದೂ, ಅನೇಕ ಪ್ರಾಣಿಗಳಿಗೆ ಆಶ್ರಯವಾದುದೂ, ಪಾಪಲೇಪವಿಲ್ಲದುದೂ ಆದ ಎಲೌ ಪುಣ್ಯನದಿಯೆ! ನಿನಗೆ ನಮಸ್ಕಾರವು.

ಸರಿದ್ವರೇ ಪಾಪಹರೇ ವಿಚಿತ್ರಿತೇ
ಗಂಧರ್ವಯಕ್ಷೋರಗಸೇವಿತಾಂಗೇ ।
ಸನಾತನಿ ಪ್ರಾಣಿಗಣಾನುಕಂಪಿನಿ
ಮೋಕ್ಷಪ್ರದೇ ದೇವಿ ವಿಧೇಹಿ ಶಂ ನಃ ॥ ೫ ॥
ಮಹಾಗಜೌಘೌರ್ಮಹಿಷೈರ್ವರಾಹೈಃ
ಸಂಸೇವಿತೇ ದೇವಿ ಮಹೋರ್ಮಿಮಾಲೇ ।
ನತಾಃ ಸ್ಮ ಸರ್ವೇ ವರದೇ ಸುಖಪ್ರದೇ
ವಿಮೋಚಯಾಸ್ಮಾನ್ಪಶುಪಾಶಬಂಧಾತ್ ॥ ೬ ॥
ಪಾಪೈರನೇಕೈರಶುಭೈರ್ವಿಬದ್ಧಾ
ಭ್ರಮಂತಿ ತಾವನ್ನರಕೇಷು ಮರ್ತ್ಯಾಃ ।
ಮಹಾನಿಲೋದ್ಧೂತತರಂಗಭೂತಂ
ಯಾವತ್ತ್ವಾಂಭೋ ಹಿ ನ ಸಂಸ್ಪೃಶಂತಿ ॥ ೭ ॥
ಅನೇಕ ದುಃಖೌಘಭಯಾರ್ದಿತಾನಾಂ
ಪಾಪೈರನೇಕೈರಭಿವೇಷ್ಟಿತಾನಾಂ ।
ಗತಿಸ್ತ್ವಮಂಭೋಜಸಮಾನವಕ್ತ್ರೇ
ದ್ವಂದ್ವೈರನೇಕೈರಪಿ ಸಂವೃತಾನಾಂ ॥ ೮ ॥

---

೫. ನದಿಗಳಲ್ಲಿ ಉತ್ತಮವೂ, ಪಾಪಹರವೂ, ವಿಚಿತ್ರವೂ, ಗಂಧರ್ವ, ಯಕ್ಷ, ನಾಗರಿಂದ ಸೇವಿತವಾದ ಜಲವುಳ್ಳದುದೂ, ನಾಶವಿಲ್ಲದುದೂ, ಪ್ರಾಣಿಸಮೂಹ ಗಳಲ್ಲಿ ದಯೆಯುಳ್ಳದುದೂ, ಮೋಕ್ಷಪ್ರದೆಯೂ ಆದ ಎಲೌ ನರ್ಮದೆಯೆ! ನಮಗೆ ಸೌಖ್ಯವನ್ನುಂಟುಮಾಡು.

೬. ಮಹಾಗಜಗಳಿಂದಲೂ, ಕಾಡೆಮ್ಮೆಗಳಿಂದಲೂ, ಹಂದಿಗಳಿಂದಲೂ ಸೇವಿತವಾಗಿ, ದೊಡ್ಡ ಅಲೆಗಳಿಂದ ಕೂಡಿ, ವರಪ್ರದವಾಗಿ, ಸುಖವನ್ನು ಕೊಡುವ ನೀನು ನಮ್ಮನ್ನು ಪಶುಪಾಶಗಳಾದ ಕಾಮಾದಿಗಳ ಬಂಧಗಳಿಂದ ಬಿಡಿಸು.

೭. ಅನೇಕ ಪಾತಕಗಳ ಫಲಗಳಿಂದ ಬದ್ಧರಾಗಿರುವ ಮಾನವರೂ ಬಿರುಗಾಳಿ ಯಿಂದೆಬ್ಬಿಸಲ್ಪಟ್ಟ ಅಲೆಗಳುಳ್ಳ ನಿನ್ನ ನೀರನ್ನು ಎಲ್ಲಿಯವರೆಗೆ ಮುಟ್ಟುವುದಿಲ್ಲವೊ, ಅಲ್ಲಿಯವರೆಗೆಮಾತ್ರ ನರಕಗಳಲ್ಲಿ ತೊಳಲುವರು.

೮. ಕಮಲಾನನೆಯಾದ ಎಲೌ ನರ್ಮದಾದೇವಿಯೆ! ಅಸಂಖ್ಯಾತಗಳಾದ ದುಃಖಪುಂಜಗಳಿಂದ ಭಯಗೊಂಡವರೂ, ಅನೇಕ ಪಾಪಗಳಿಂದ ಕೂಡಿರುವವರೂ, ರಾಗದ್ವೇಷಾದಿ ಬಹು ದ್ವಂದ್ವಗಳಿಗೆ ವಶರಾದವರೂ ಆದ ಮಾನವರು ನಿನ್ನನ್ನೇ ಗತಿಯೆಂದೆನ್ನಬೇಕು.

ನದ್ಯಶ್ಚ ಪೂತಾ ವಿಮಲಾ ಭವಂತಿ
ತ್ವಾಂ ದೇವಿ ಸಂಪ್ರಾಪ್ಯ ನ ಸಂಶಯೋಽತ್ರ ।
ದುಃಖಾತುರಾಣಾಮಭಯಂ ದದಾಸಿ
ಶಿಷ್ಟೈರನೇಕೈರಭಿಪೂಜಿತಾಽಸಿ ॥ ೯ ॥
ಸ್ಪೃಷ್ಟಂ ಕರೈಶ್ಚಂದ್ರಮಸೋ ರವೇಶ್ಚ
ತದೈವ ದದ್ಯಾತ್ಪರಮಂ ಪದಂ ತು ।
ಯತ್ರೋಪಲಾಃ ಪುಣ್ಯಜಲಾಪ್ಲುತಾಸ್ತೇ
ಶಿವತ್ವಮಾಯಾಂತಿ ಕಿಮತ್ರ ಚಿತ್ರಂ ॥ ೧೦ ॥
ಭ್ರಮಂತಿ ತಾವನ್ನರಕೇಷು ಮರ್ತ್ಯಾ
ದುಃಖಾತುರಾಃ ಪಾಪಪರೀತದೇಹಾಃ ।
ಮಹಾನಿಲೋದ್ಭೂತತರಂಗಭಂಗಂ
ಯಾವತ್ತವಾಂಭೋ ನಹಿ ಸಂಶ್ರಯಂತಿ ॥ ೧೧ ॥
ಮ್ಲೇಚ್ಛಾಃ ಪುಲಿಂದಾಸ್ತ್ವಥ ಯಾತುಧಾನಾಃ
ಪಿಬಂತಿ ಯೇಽಂಭಸ್ತವ ದೇವಿ ಪುಣ್ಯಂ ।
ಮುಕ್ತಾ ಭವಂತೀಹ ಭಯಾತ್ತು ಘೋರಾ
ನ್ನಿಃಸಂಶಯಂ ತೇಽಪಿ ಕಿಮತ್ರ ಚಿತ್ರಂ ॥ ೧೨ ॥

---

೯. ದೇವಿಯೆ! ನಿನ್ನನ್ನು ಸೇರುವುದರಿಂದಲೇ ಇತರ ನದಿಗಳೂ ಪವಿತ್ರಗಳೂ, ನಿರ್ಮಲಗಳೂ ಆಗುವುವೆಂಬುದರಲ್ಲಿ ಸಂಶಯವಿಲ್ಲ. ನೀನು ದುಃಖಗಳಿಂದ ಆತುರರಾದವರಿಗೆ ಅಭಯವನ್ನೀಯುವೆ. ಅನೇಕ ಮಹಾತ್ಮರು ನಿನ್ನನ್ನು ಪೂಜಿಸುತ್ತಿರುವರು.

೧೦. ಚಂದ್ರಸೂರ್ಯರ ಕಿರಣಗಳಿಂದ ಸ್ಪೃಷ್ಟವಾದ ನಿನ್ನ ಜಲವೇ ಪರಮಪದವನ್ನೊದಗಿಸುವುದು. ಯಾವ ನದಿಯ ಪುಣ್ಯಜಲದಲ್ಲಿ ಮುಳುಗಿರುವ ಕಲ್ಲುಗಳೂ ಶಿವಲಿಂಗಗಳಂತೆ ಮಾಹಾತ್ಮ್ಯವುಳ್ಳವಾಗಿರುವುವೊ, ಅದರಲ್ಲಿ ಇದೇನು ವಿಚಿತ್ರವು?

೧೧. ಎಲ್ಲಿಯವರೆಗೆ ಮಹಾವಾಯುವಿನಿಂದೆದ್ದ ಅಲೆಗಳಿಂದ ಕೂಡಿದ ನಿನ್ನ ಜಲವನ್ನಾಶ್ರಯಿಸುವುದಿಲ್ಲವೊ, ಅಲ್ಲಿಯವರೆಗೆಮಾತ್ರ ದುಃಖಾತುರರೂ, ಪಾಪಲೇಪಿತಶರೀರರೂ ಆದ ಮಾನವರು ನರಕಗಳಲ್ಲಿ ತೊಳಲುವರು.

೧೨. ದೇವಿಯೆ! ಮ್ಲೇಚ್ಛರಲ್ಲಿಯೂ, ಪುಳಿಂದರಲ್ಲಿಯೂ, ರಾಕ್ಷಸರಲ್ಲಿಯೂ ಯಾರು ನಿನ್ನ ಪುಣ್ಯಜಲವನ್ನು ಪಾನಮಾಡುತ್ತಾರೆಯೊ, ಅವರೂ ಘೋರವಾದ ಸಂಸಾರಭಯದಿಂದ ಮುಕ್ತರಾಗುವುದರಲ್ಲಿ ಆಶ್ಚರ್ಯವೇನು ?

ಸರಾಂಸಿ ನದ್ಯಃ ಕ್ಷಯಮಭ್ಯುಪೇತಾ
ಘೋರೇ ಯುಗೇಽಸ್ಮಿನ್ಹಿ ಕಲೌ ಪ್ರದೂಷಿತೇ ।
ತ್ವಂ ಭ್ರಾಜಸೇ ದೇವಿ ಜಲೌಘಪೂರ್ಣಾ
ದಿವೀವ ನಕ್ಷತ್ರಪಥೇ ಚ ಗಂಗಾ ॥ ೧೩ ॥
ತವ ಪ್ರಸಾದಾದ್ವರದೇ ವರಿಷ್ಠೇ
ಕಾಲಂ ಯಥೇಮಂ ಪರಿಪಾಲಯಿತ್ವಾ ।
ಯಾಮೋಽಥ ರುದ್ರಂ ತವ ಸುಪ್ರಸಾದಾ
ದ್ವಯಂ ತಥಾ ತ್ವಂ ಕುರು ವೈ ಪ್ರಸಾದಂ ॥ ೧೪ ॥
ಗತಿಸ್ತ್ವಮಂಬೇವ ಪಿತೇವ ಪುತ್ರಾಂ
ಸ್ತ್ವಂ ಪಾಹಿ ನೋ ಯಾಪದಿಮಂ ಯುಗಾಂತಂ ।
ಕಾಲೇ ತ್ವನಾವೃಷ್ಟಿಹತಂ ಸುಘೋರಂ
ಯಾವತ್ತರಾಮಸ್ತವ ಸುಪ್ರಸಾದಾತ್ ॥ ೧೫ ॥
ಪಠಂತಿ ಯೇ ಸ್ತೋತ್ರಮಿದಂ ದ್ವಿಜೇಂದ್ರಾಃ
ಶೃಣ್ವಂತಿ ಯೇ ಚಾಽಪಿ ನರಾಃ ಪ್ರಶಾಂತಾಃ ।
ತೇ ಯಾಂತಿ ರುದ್ರಂ ವೃಷಸಂಯುತೇನ
ಯಾನೇನ ದಿವ್ಯಾಂಬರಭೂಷಿತಾಶ್ಚ ॥ ೧೬ ॥

---

೧೩. ಸರ್ವದೋಷಮಯವಾದ ಈ ಕಲಿಯುಗದಲ್ಲಿ ಸರೋವರಗಳೂ, ನದಿಗಳೂ ಎಲ್ಲವೂ ಒಣಗಿಹೋದರೂ, ನೀನು ಮಾತ್ರ ತುಂಬಿದ ಪ್ರವಾಹದಿಂದ ಆಕಾಶದಲ್ಲಿರುವ ಗಂಗೆಯಂತೆ ನಿತ್ಯವೂ ಕಂಗೊಳಿಸುತ್ತಿರುವೆ.

೧೪. ವರಪ್ರದೆಯಾದ ಎಲೌ ಸರ್ವೋತ್ತಮಳೆ! ನಿನ್ನ ಅನುಗ್ರಹದಿಂದ ಭಯಂಕರವಾದ ಈ ಕಾಲವನ್ನು ಕಳೆದು ಮಹಾದೇವನ ಲೋಕಕ್ಕೆ ಹೊಗಲೆಳಸುವೆವು. ಹಾಗಾಗುವಂತೆ ನೀನು ಪ್ರಸನ್ನಳಾಗು.

೧೫. ನೀನೇ ನಮಗೆ ಗತಿಯು. ತಾಯಿತಂದೆಯರು ಪುತ್ರರನ್ನು ಪಾಲಿಸುವಂತೆ ನಮ್ಮನ್ನು ಈ ಯುಗಾಂತ್ಯದವರೆಗೂ ಕಾಪಾಡು. ಅನಾವೃಷ್ಟಿಯಿಂದ ಪೀಡಿತವಾದ ಈ ಘೋರಕಾಲವನ್ನು ನಿನ್ನ ಅನುಗ್ರಹದಿಂದ ಸುಖವಾಗಿ ಕಳೆಯುವೆವು.''

೧೬. ಯಾವ ಬ್ರಾಹ್ಮಣರು ಈ ಸ್ತೋತ್ರವನ್ನು ಪಠಿಸುವರೊ, ಯಾವ ಮಾನವರು ಶಾಂತಮನಸ್ಕರಾಗಿ ಇದನ್ನು ಕೇಳುವರೊ, ಅವರು ದಿವ್ಯವಸ್ತ್ರಭೂಷಣಗಳಿಂದಲಂಕೃತರಾಗಿ ವೃಷಭಸಹಿತವಾದ ವಿಮಾನದಲ್ಲಿ ರುದ್ರಲೋಕಕ್ಕೆ ಹೋಗುವರು.

ಯೇ ಸ್ತೋತ್ರಮೇತತ್ಸತತಂ ಪಠಂತಿ
ಸ್ನಾತ್ವಾ ತು ತೋಯೇ ಖಲು ನರ್ಮದಾಯಾಃ ।
ಅಂತೇ ಹಿ ತೇಷಾಂ ಸರಿದುತ್ತಮೇಯಂ
ಗತಿಂ ವಿಶುದ್ಧಾಮಚಿರಾದ್ದದಾತಿ ॥ ೧೭ ॥
ಪ್ರಾತಃ ಸಮುತ್ಥಾಯ ತಥಾ ಶಯಾನೋ
ಯಃ ಕೀರ್ತಯೇತಾಽನುದಿನಂ ಸ್ತವಂ ಚ ।
ಸ ಮುಕ್ತಪಾಪಃ ಸುವಿಶುದ್ಧದೇಹಃ
ಸಮಾಶ್ರಯಂ ಯಾತಿ ಮಹೇಶ್ವರಸ್ಯ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ನರ್ಮದಾಸ್ತೋತ್ರಕಥನಂ" ನಾಮ ದ್ವಾದಶೋಽಧ್ಯಾಯಃ

---

೧೭. ಯಾರು ನರ್ಮದಾನದಿಯ ನೀರಿನಲ್ಲಿ ಮಿಂದು ನಿತ್ಯವೂ ಈ ಸ್ತೋತ್ರವನ್ನು ಜಪಿಸುತ್ತಿರುವರೊ, ಅವರಿಗೆ ಈ ನರ್ಮದೆಯೇ ದೇಹಾವಸಾನಕಾಲದಲ್ಲಿ ಶಾಶ್ವತವೂ, ಶುದ್ಧವೂ ಆದ ಗತಿಯನ್ನು ಕೊಡುವುದು.

೧೮. ಯಾವನು ನಿದ್ರೆಯಿಂದ ಪ್ರಾತಃಕಾಲದಲ್ಲೆದ್ದು ಈ ಸ್ತವವನ್ನು ಪ್ರತಿನಿತ್ಯವೂ ಪಠಿಸುತ್ತಿರುವನೊ, ಅವನು ತನ್ನ ಪಾತಕಗಳನ್ನು ಕಳೆದುಕೊಂಡು ಪರಿಶುದ್ಧಶರೀರನಾಗಿ ಮಹಾದೇವನ ನಿವಾಸವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನರ್ಮದಾಸ್ತೋತ್ರಕಥನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಏಕವಿಂಶತಿಕಲ್ಪಕಥಾವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ಏವಂ ಭಗವತೀ ಪುಣ್ಯಾ ಸ್ತುತಾ ಸಾ ಮುನಿಪುಂಗವೈಃ ।**
**ಚಿಂತಯಾಮಾಸ ಸರ್ವೇಷಾಂ ದಾಸ್ಯಾಮಿ ವರಮುತ್ತಮಂ ॥ ೧ ॥**
**ತತಃ ಪ್ರಸುಪ್ತಾಂಸ್ತಾನ್ ಜ್ಞಾತ್ವಾ ರಾತ್ರೌ ದೇವೀ ಜಗಾಮಹ ।**
**ಏಕೈಕಸ್ಯ ಋಷೇಃ ಸ್ವಪ್ನೇ ದರ್ಶನಂ ಚಾರುಹಾಸಿನೀ ॥ ೨ ॥**
**ತತೋಽರ್ಧರಾತ್ರೇ ಸಂಪ್ರಾಪ್ತ ಉತ್ಥಿತಾ ಜಲಮಧ್ಯತಃ ।**
**ವಿಮಲಾಂಬರಸಂವೀತಾ ದಿವ್ಯಮಾಲಾವಿಭೂಷಿತಾ ॥ ೩ ॥**
**ಧೃತಾತಪತ್ರಾ ಸುಶ್ರೋಣೀ ಪದ್ಮರಾಗವಿಭೂಷಿತಾ ।**
**ಜಗಾದ ಮಾಭೈರಿತಿ ತಾನೇಕೈಕಂ ತು ಪೃಥಕ್ ಪೃಥಕ್ ॥ ೪ ॥**
**ವಸಧ್ವಂ ಮಮ ಪಾರ್ಶ್ವೇ ತು ಭಯಂ ತ್ಯಕ್ತ್ವಾ ಕ್ಷುಧಾದಿಜಂ ॥ ೫ ॥**
**ಏವಮುಕ್ತ್ವಾ ತದಾ ದೇವೀ ಸ್ವಪ್ನಾಂತೇ ತಾನ್ಮಹಾಮುನೀನ್ ।**
**ಜಗಾಮಾಽದರ್ಶನಂ ಪಶ್ಚಾತ್ಪ್ರವಿಶ್ಯ ಜಲಮಾತ್ಮಕಂ ॥ ೬ ॥**

---

## ಕನ್ನಡದ ಅನುವಾದ

### ಏಕವಿಂಶತಿಕಲ್ಪಕಥಾವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಇಂತು ಮುನಿವರ್ಯರಿಂದ ಸಂಸ್ತುತಳಾದ ಆ ನರ್ಮದಾದೇವಿಯು ತನ್ನಲ್ಲಿಯೇ "ಇವರಿಗೆಲ್ಲ ಉತ್ತಮ ವರವನ್ನು ಕೊಡುವೆನು" ಎಂದು ಆಲೋಚಿಸಿದಳು.

೨. ಬಳಿಕ ರಾತ್ರಿಯಲ್ಲಿ ಎಲ್ಲರೂ ನಿದ್ರೆಮಾಡುತ್ತಿರಲು, ಆಕೆಯು ಮಂದಹಾಸಯುಕ್ತಳಾಗಿ ಒಬ್ಬೊಬ್ಬ ಮಹರ್ಷಿಗೂ ಸ್ವಪ್ನದಲ್ಲಿ ಕಾಣಿಸಿಕೊಂಡಳು.

೩. ಸ್ವಪ್ನದಲ್ಲಿ ಅರ್ಧರಾತ್ರಿಯಲ್ಲಿ ಶುಭ್ರವಸ್ತ್ರವನ್ನುಟ್ಟು ದಿವ್ಯಪುಷ್ಪಮಾಲೆಗಳಿಂದಲಂಕೃತಳಾಗಿ ನದೀಜಲದ ಮಧ್ಯದಿಂದ ಮೇಲಕ್ಕೆ ಬಂದಳು.

೪. ಬೆಳ್ಗೊಡೆಯನ್ನು ಹಿಡಿಸಿಕೊಂಡು ಪದ್ಮರಾಗದ ಆಭರಣಗಳನ್ನು ಧರಿಸಿದ ಆಕೆಯು ಒಬ್ಬೊಬ್ಬರಿಗೂ ಬೇರೆಯಾಗಿ ಇಂತೆಂದಳು. "ವಿಪ್ರರಿರಾ! ಭಯಪಡಬೇಡಿರಿ.

೫. ಹಸಿವೇ ಮೊದಲಾದ ಎಲ್ಲ ಭಯಗಳನ್ನೂ ದೂರಮಾಡಿ ನನ್ನ ತೀರದಲ್ಲಿ ವಾಸಮಾಡುತ್ತಿರಿ."

೬. ಇಂತು ಆ ನದೀದೇವಿಯು ಸ್ವಪ್ನದಲ್ಲಿ ಆ ಮಹಾಮುನಿಗಳಿಗೆ ಅಭಯವನ್ನಿತ್ತು ತನ್ನ ಜಲವನ್ನೇ ಹೊಕ್ಕು ಕಣ್ಣಿಗೆ ಕಾಣಿಸದಾದಳು.

ತತಃ ಪ್ರಭಾತೇ ಮುನಯೋ ಮಿಥ ಊಚುರ್ಮುದಾನ್ವಿತಾಃ ।
ತಥಾ ದೃಷ್ಟಾ ಮಯಾ ದೃಷ್ಟಾ ಸ್ವಪ್ನೇ ದೇವೀ ಸುದರ್ಶನಾ ॥ ೭ ॥
ಅಭಯಂ ದತ್ತಮಸ್ಮಾಕಂ ಸಿದ್ಧಿಶ್ಚಾಽಪ್ಯಚಿರೇಣ ತು ।
ಪ್ರಶಸ್ತಂ ದರ್ಶನಂ ತಸ್ಯಾ ನರ್ಮದಾಯಾ ನ ಸಂಶಯಃ ॥ ೮ ॥
ಅಥಾಽನ್ಯದಿವಸೇ ರಾಜನ್ಮತ್ಸ್ಯಾನಾಂ ರೂಪಮುತ್ತಮಂ ।
ಪಶ್ಯಂತಿ ಸಪರೀವಾರಾಃ ಸ್ವಕೀಯಾಶ್ರಮಸನ್ನಿಧೌ ॥ ೯ ॥
ತಾನ್ ದೃಷ್ಟ್ವಾ ವಿಸ್ಮಯಾವಿಷ್ಟಾ ಮತ್ಸ್ಯಾಂಸ್ತತ್ರ ಮಹರ್ಷಯಃ ।
ಪೂಜಯಾಮಾಸುರವ್ಯಗ್ರಾ ಹವ್ಯಕವ್ಯೇನ ದೇವತಾಃ ॥ ೧೦ ॥
ತಾನ್ ಮತ್ಸ್ಯಸಂಘಾನ್ ಸಂಪ್ರಾಪ್ಯ ಮಹಾದೇವ್ಯಾಃ ಪ್ರಸಾದತಃ ।
ಸಪುತ್ರದಾರಭೃತ್ಯಾಸ್ತೇ ವರ್ತಯಂತಿ ಪೃಥಕ್ ಪೃಥಕ್ ॥ ೧೧ ॥
ದಿನೇ ದಿನೇ ತಥಾಪ್ಯೇವಮಾಶ್ರಮೇಷು ದ್ವಿಜಾತಯಃ ।
ಮತ್ಸ್ಯಾನಾಂ ಸಂಚಯಂ ದೃಷ್ಟ್ವಾ ವಿಸ್ಮಿತಾಶ್ಚಾಽಭವಂಸ್ತದಾ ॥ ೧೨ ॥
ಮೃತಾಂಸ್ತಾಂಸ್ತು ಸುಪುಷ್ಟಾಂಗಾನ್ಪಾಠೀನಾಂಶ್ಚ ವಿಶೇಷತಃ ।
ದ್ವಾರೇ ದ್ವಾರೇಚಾಶ್ರಮಾಣಾಂ ತಾಪಸಾನಾಂ ಯುಧಿಷ್ಠಿರ ॥ ೧೩ ॥

---

೭. ಪ್ರಾತಃಕಾಲವಾಗಲು ಮುನಿಗಳು ತಮ್ಮತಮ್ಮಲ್ಲಿಯೇ ಮಾತನಾಡಿ ಕೊಂಡರು. "ಸ್ವಪ್ನದಲ್ಲಿ ಸುಂದರಿಯಾದ ನರ್ಮದಾದೇವಿಯನ್ನು ನಾನು ಕಂಡೆನು, ನಾನು ಕಂಡೆನು.

೮. ಆಕೆಯು ನಮಗೆ ಅಭಯವನ್ನೂ, ಶೀಘ್ರವಾಗಿಯೇ ಕಾರ್ಯಸಿದ್ಧಿ ಯನ್ನೂ ದಯೆಗೈದಿರುವಳು. ಆ ನರ್ಮದೆಯ ದರ್ಶನವು ಬಹಳ ಪ್ರಶಸ್ತವಾದು ದೆಂಬುದರಲ್ಲಿ ಸಂದೇಹವಿಲ್ಲ."

೯. ಬೇರೊಂದು ದಿವಸ ಪರಿವಾರಸಹಿತರಾದ ಆ ಮಹರ್ಷಿಗಳು ತಮ್ಮ ಆಶ್ರಮಗಳ ದ್ವಾರಗಳಲ್ಲಿ ಉತ್ತಮಾಹಾರಗಳಾದ ಮತ್ಸ್ಯಗಳನ್ನು ಕಂಡರು.

೧೦. ಆ ಮುನಿಗಳು ಮೀನುಗಳನ್ನು ಕಂಡು ಆಶ್ಚರ್ಯಗೊಂಡವರಾಗಿ ಏಕಾಂತಭಕ್ತಿಯಿಂದ ದೇವತೆಗಳಿಗೆ ಹವ್ಯಕವ್ಯಗಳನ್ನಿತ್ತು ಸತ್ಕರಿಸಿದರು.

೧೧. ನರ್ಮದಾದೇವಿಯ ಅನುಗ್ರಹದಿಂದ ಮತ್ಸ್ಯಗಳನ್ನು ಪಡೆದ ಅವರು ಬೇರೆ ಬೇರೆಯಾಗಿ ತಮ್ಮ ಹೆಂಡಿರು, ಮಕ್ಕಳು, ಸೇವಕರೊಡನೆ ಸುಖವಾಗಿದ್ದರು.

೧೨. ದಿನ ದಿನದಲ್ಲಿಯೂ ತಮ್ಮ ಆಶ್ರಮಗಳ ಬಾಗಿಲುಗಳಲ್ಲಿ ಬಿದ್ದಿದ್ದ ಮತ್ಸ್ಯಗಳ ರಾಶಿಗಳನ್ನು ಕಂಡು ಆ ಬ್ರಾಹ್ಮಣರು ವಿಸ್ಮಿತರಾಗಿದ್ದರು.

೧೩. ವಿಶೇಷವಾಗಿ ಕೊಬ್ಬಿದ ಮೈಗಳ ಮೀನುಗಳು ಸತ್ತುಬಿದ್ದಿದ್ದುದನ್ನು ಆಶ್ರಮಗಳ ಒಂದೊಂದು ಬಾಗಿಲಲ್ಲಿಯೂ ನೋಡಬಹುದಾಗಿದ್ದಿತು.

ಹೃಷ್ಟಪುಷ್ಟಾಸ್ತದಾ ಸರ್ವೇ ನರ್ಮದಾತೀರವಾಸಿನಃ ।
ಋಷಯಸ್ತೇ ಭಯಂ ಸರ್ವೇ ತತ್ಯಜುಃ ಕ್ಷುತ್ತೃಷೋದ್ಭವಂ ॥ ೧೪ ॥
ತೇ ಜಪಂತಸ್ತಪಂತಶ್ಚ ತಿಷ್ಠಂತಿ ಭರತರ್ಷಭ ।
ಅರ್ಚಯಂತಿ ಪಿತೄನ್ದೇವಾನ್ನರ್ಮದಾತಟಮಾಶ್ರಿತಾಃ ॥ ೧೫ ॥
ತೈರ್ಜಪದ್ಭಿಸ್ತಪದ್ಭಿಶ್ಚ ಸತತಂ ದ್ವಿಜಸತ್ತಮೈಃ ।
ಭ್ರಾಜತೇ ಸಾ ಸರಿಚ್ಛ್ರೇಷ್ಠಾ ತಾರಾಭಿರ್ದ್ಯೌರ್ಗ್ರಹೈರಿವ ॥ ೧೬ ॥
ತತ್ರ ತೈರ್ಬಹುಲೈಃ ಶುಭ್ರೈರ್ಬ್ರಾಹ್ಮಣೈರ್ವೇದಪಾರಗೈಃ ।
ನರ್ಮದಾ ಧರ್ಮದಾ ಪೂರ್ವಂ ಸಂವಿಭಕ್ತಾ ಯಥಾಕ್ರಮಂ ॥ ೧೭ ॥
ಋಷಿಭಿರ್ದಶಕೋಟೀಭಿರ್ನರ್ಮದಾತೀರವಾಸಿಭಿಃ ।
ವಿಭಕ್ತೇಯಂ ವಿಭಕ್ತಾಂಗೀ ನರ್ಮದಾ ಶರ್ಮದಾ ನೃಣಾಂ ॥ ೧೮ ॥
ಯಜ್ಞೋಪವೀತೈಶ್ಚ ಶುಭ್ರೈರಕ್ಷಸೂತ್ರೈಶ್ಚ ಭಾರತ ।
ಕೂಲದ್ವಯೇ ಮಹಾಪುಣ್ಯಾ ನರ್ಮದೋದಧಿಗಾಮಿನೀ ॥ ೧೯ ॥
ಪೃಥಗಾಯತನೈಃ ಶುಭ್ರೈರ್ಲಿಂಗೈರ್ವಾಲುಕಮೃಣ್ಮಯೈಃ ।
ಭ್ರಾಜತೇ ಯಾ ಸರಿಚ್ಛ್ರೇಷ್ಠಾ ನಕ್ಷತ್ರೈರಿವ ಶರ್ವರೀ ॥ ೨೦ ॥

---

೧೪. ಅವುಗಳ ಸೇವನೆಯಿಂದ ನರ್ಮದಾತೀರವಾಸಿಗಳಾದ ಋಷಿಗಳೆಲ್ಲರೂ ಆನಂದಭರಿತರೂ, ದೃಢಕಾಯರೂ ಆಗಿ ಹಸಿವು ಬಾಯಾರಿಕೆಗಳ ಭಯವನ್ನು ಕಳೆದಿದ್ದರು.

೧೫. ಯುಧಿಷ್ಠಿರನೆ! ಅವರು ತಮ್ಮ ಜಪಗಳನ್ನೂ, ತಪಸ್ಸುಗಳನ್ನೂ ಮಾಡುತ್ತ, ಪಿತೃಗಳಿಗೂ ದೇವತೆಗಳಿಗೂ ಕಾಲೋಚಿತಗಳಾದ ಹವ್ಯಕವ್ಯಗಳನ್ನು ಕೊಡುತ್ತ ನರ್ಮದಾತೀರಗಳಲ್ಲಿ ವಾಸಿಸುತ್ತಿದ್ದರು.

೧೬. ಇಂತು ಜಪತಪಗಳಲ್ಲಿ ನಿರತರಾದ ಆ ಬ್ರಾಹ್ಮಣೋತ್ತಮರಿಂದ ಸರ್ವಕಾಲದಲ್ಲಿಯೂ ವಿಶಾಲವಾದ ಆ ನದಿಯು ನಕ್ಷತ್ರಗಳಿಂದಲೂ, ಗ್ರಹಗಳಿಂದಲೂ ಕೂಡಿದ ಆಕಾಶದಂತೆ ಶೋಭಿಸುತ್ತಿದ್ದಿತು.

೧೭–೧೮. ಅಸಂಖ್ಯಾತರೂ, ಪರಿಶುದ್ಧರೂ, ವೇದಪಾರಗರೂ ಆದ ಬ್ರಾಹ್ಮಣಶ್ರೇಷ್ಠರಿಂದ ಧರ್ಮವರ್ಧಿನಿಯಾದ ಆ ನರ್ಮದೆಯು ಯಥಾಕ್ರಮವಾಗಿ ಸೇವಿತವಾಗಿದ್ದಿತು. ಸಕಲ ಮಾನವರಿಗೂ ಸೌಖ್ಯಪ್ರದೆಯಾದ ನರ್ಮದೆಯನ್ನು ಅವರ ತೀರದಲ್ಲಿ ವಾಸಿಸುತ್ತಿದ್ದ ಹತ್ತುಕೋಟಿ ಮಹರ್ಷಿಗಳು ಆಶ್ರಯಿಸಿದ್ದರು.

೧೯. ಧರ್ಮನಂದನನೆ! ಸಮುದ್ರಗಾಮಿನಿಯಾದ ಆ ನದಿಯು ಎರಡು ತೀರಗಳೂ ಶುಭ್ರಗಳಾದ ಯಜ್ಞೋಪವೀತಗಳಿಂದಲೂ, ರುದ್ರಾಕ್ಷಿಗಳ ಜಪಮಾಲೆಗಳಿಂದಲೂ ಅಲಂಕೃತಗಳಾದಂತಿದ್ದುವು.

೨೦. ಬೇರೆ ಬೇರೆಯಾದ ಸ್ವಚ್ಛವಾದ ಮುನ್ಯಾಶ್ರಮಗಳಿಂದಲೂ ಮರಳು,

ಏವಂ ತ ಋಷಯಃ ಸರ್ವೇ ತರ್ಪಯಂತಃ ಸುರಾನ್ಪಿತೄನ್ ।
ನ್ಯವಸನ್ನರ್ಮದಾತೀರೇ ಯಾವದಾಭೂತಸಂಪ್ಲವಂ ॥ ೨೧ ॥
ಕಿಂಚಿದ್ಗತೇ ತತಸ್ತಸ್ಮಿನ್ಘೋರೇ ವರ್ಷಶತಾಧಿಕೇ ।
ಅರ್ಧರಾತ್ರೇ ತದಾ ಕನ್ಯಾ ಜಲಾದುತ್ತೀರ್ಯ ಭಾರತ ॥ ೨೨ ॥
ವಿದ್ಯುತ್ಪುಂಜಸಮಾಭಾಸಾ ವ್ಯಾಲಯಜ್ಞೋಪವೀತಿನೀ ।
ತ್ರಿಶೂಲಾಗ್ರಕರಾ ಸೌಮ್ಯಾ ತಾನುವಾಚ ಋಷೀಂಸ್ತದಾ ॥ ೨೩ ॥
ಆಗಚ್ಛಧ್ವಂ ಮುನಿಗಣಾ ವಿಶಧ್ವಂ ಮಾಮಯೋನಿಜಾಂ ।
ಸಮೇತಾಃ ಪುತ್ರದಾರೈಶ್ಚ ತತಃ ಸಿದ್ಧಿಮವಾಪ್ಸ್ಯಥ ॥ ೨೪ ॥
ಯಸ್ಯ ಯಸ್ಯ ಹಿ ಯಾ ವಾಂಛಾ ತಸ್ಯ ತಾಂ ತಾಂ ದದಾಮ್ಯಹಂ ॥ ೨೫ ॥
ವಿಷ್ಣುಂ ಬ್ರಹ್ಮಾಣಮೀಶಾನಮನ್ಯಂ ವಾ ಸುರಮುತ್ತಮಂ ।
ತತ್ರ ಸರ್ವಾನ್ನಯಿಷ್ಯಾಮಿ ಪ್ರಸನ್ನಾ ವರದಾ ಹ್ಯಹಂ ॥ ೨೬ ॥

---

ಮಣ್ಣುಗಳಲ್ಲಿ ಮಾಡಿದ ಲಿಂಗಗಳಿಂದಲೂ ಆ ಉತ್ತಮನದಿಯು ನಕ್ಷತ್ರಗಳ ಸಹಿತವಾದ ರಾತ್ರಿಯಂತೆ ಕಾಣುತ್ತಿದ್ದಿತು.

೨೧. ಇಂತು ಆ ಮಹರ್ಷಿಗಳೆಲ್ಲರೂ ದೇವತೆಗಳಿಗೂ, ಪಿತೃಗಳಿಗೂ ಸಂತೋಷವನ್ನುಂಟುಮಾಡುತ್ತ ಮಹಾಪ್ರಳಯವಾಗುವವರೆಗೂ ನರ್ಮದಾ ತೀರಗಳಲ್ಲಿ ವಾಸಿಸುತ್ತಿದ್ದರು.

೨೨. ನೂರು ವರ್ಷಗಳ ಘೋರವಾದ ಕಾಲದಲ್ಲಿ ಸ್ವಲ್ಪವೇ ಉಳಿದಿರಲು ಒಂದು ಅರ್ಧರಾತ್ರಿಯ ಸಮಯದಲ್ಲಿ ನರ್ಮದೆಯು ಜಲದಿಂದ ಮೇಲಕ್ಕೆ ಬಂದಳು.

೨೩. ಮಿಂಚುಗಳ ರಾಶಿಯನ್ನು ಹೋಲುತ್ತ, ಸರ್ಪಗಳ ಯಜ್ಞೋಪವೀತದಿಂದ ಭೂಷಿತಳಾಗಿ ತ್ರಿಶೂಲವನ್ನು ಕೈಯಲ್ಲಿ ಹಿಡಿದು ಆ ಋಷಿಗಳಿಗೆ ಇಂತೆಂದಳು.

೨೪. "ಮಹಾಭಾಗ್ಯಶಾಲಿಗಳಿರಾ! ಬನ್ನಿರಿ. ನಿಮ್ಮ ಹೆಂಡಿರು ಮಕ್ಕಳೊಡನೆ ಅಯೋನಿಜಾತೆಯಾದ ನನ್ನೊಳಗೆ ಸೇರಿದರೆ ನಿಮಗೆ ಸಿದ್ಧಿಯು ಲಭಿಸುವುದು.

೨೫. ಯಾವ ಯಾವನಿಗೆ ಯಾವ ಅಭಿಲಾಷೆಯಿರುವುದೊ, ಅದನ್ನು ನಾನು ಪೂರ್ಣಮಾಡುವೆನು.

೨೬. ನಿಮ್ಮಲ್ಲಿ ಪ್ರಸನ್ನಳಾಗಿ ವರವನ್ನು ಕೊಡಲು ಬಂದಿರುವ ನಾನು ವಿಷ್ಣು, ಬ್ರಹ್ಮ, ಮಹೇಶ್ವರರ ಲೋಕಗಳಿಗೂ, ಇತರ ದೇವತೆಗಳ ಲೋಕಗಳಿಗೂ ಎಲ್ಲರನ್ನೂ ಕರೆದುಕೊಂಡುಹೋಗುವೆನು.

ಪ್ರಾಣಾಯಾಮಪರಾ ಭೂತ್ವಾ ಮಾಂ ವಿಶಧ್ವಂ ಸಮಾಹಿತಾಃ ।
ಸಹಪುತ್ರೈಶ್ಚ ದಾರೈಶ್ಚ ತ್ಯಕ್ತ್ವಾಽಶ್ರಮಪದಾನಿ ಚ ॥ ೨೭ ॥
ಕಾಲಕ್ಷೇಪೋ ನ ಕರ್ತವ್ಯಃ ಪ್ರಲಯೋಽಯಮುಪಸ್ಥಿತಃ ।
ಸಂಹಾರಃ ಸರ್ವಭೂತಾನಾಂ ಕಲ್ಪದಾಹಃ ಸುದಾರುಣಃ ॥ ೨೮ ॥
ಏಕಾಽಹಮಭವಂ ಪೂರ್ವಂ ಮಹಾಘೋರೇ ಜನಕ್ಷಯೇ ।
ಶೇಷಾ ನದ್ಯಃ ಸಮುದ್ರಾಶ್ಚ ಸರ್ವ ಏವ ಕ್ಷಯಂಗತಾಃ ॥ ೨೯ ॥
ವರದಾನಾನ್ಮಹೇಶಸ್ಯ ತೇನಾಽಹಂ ನ ಕ್ಷಯಂ ಗತಾ ।
ಅಮೃತಃ ಶಾಶ್ವತೋ ದೇವಃ ಸ್ಥಾಣುರೀಶಃ ಸನಾತನಃ ।
ಸ ಪೂಜಿತಃ ಪ್ರಾರ್ಥಿತೋ ವಾ ಕಿಂ ನ ದದ್ಯಾದ್ದ್ವಿಜೋತ್ತಮಾಃ ॥ ೩೦ ॥
ಏವಮುಕ್ತ್ವಾ ಋಷೀನ್ರೇವಾ ಪ್ರವಿವೇಶ ಜಲಂ ತತಃ ।
ಕರಾತ್ತಶೂಲಾ ಸಾ ದೇವೀ ವ್ಯಾಲಯಜ್ಞೋಪವೀತಿನೀ ॥ ೩೧ ॥
ತತಸ್ತೇ ತದ್ವಚಃ ಶ್ರುತ್ವಾ ವಿಸ್ಮಯಾಪನ್ನಮಾನಸಾಃ ।
ಅಭಿವಂದ್ಯ ಚ ಮಾಂ ಸರ್ವೇ ಕ್ಷಾಮಯಂತಃ ಪುನಃ ಪುನಃ ॥ ೩೨ ॥
ಕ್ಷಮ್ಯತಾಂ ನೋ ಯದುಕ್ತಂ ಹಿ ವಸತಾಂ ತವ ಸಂಶ್ರಯೇ ।
ಗೃಹಾಂಸ್ತ್ಯಕ್ತ್ವಾ ಮಹಾಭಾಗಾಃ ಸಶಿಷ್ಯಾಃ ಸಹ ಬಾಂಧವಾಃ ॥ ೩೩ ॥

---

೨೭. ನಿಮ್ಮ ಸ್ತ್ರೀಪುತ್ರರೊಡನೆ ಆಶ್ರಮಗಳನ್ನು ತ್ಯಜಿಸಿ ನೀವೆಲ್ಲರೂ ಪ್ರಾಣಾಯಾಮಕ್ರಮದಿಂದ ಸಮಾಹಿತಮಾನಸರಾಗಿ ನನ್ನನ್ನು ಸೇರಿರಿ.

೨೮. ಕಾಲವನ್ನು ಕಳೆಯಬೇಡಿರಿ. ಪ್ರಳಯವು ಸಮೀಪಿಸಿ ಬಂದಿರುವುದು. ಕಲ್ಪಾಂತ್ಯದ ಭಯಂಕರವಾದ ಅಗ್ನಿಯು ಸಕಲಪ್ರಾಣಿಗಳ ಸಂಹಾರಕ್ಕೂ ಕಾರಣವಾಗುವುದು.

೨೯. ಹಿಂದೆ ಇಂತಹ ಮಹಾಘೋರಸಮಯದಲ್ಲಿ ನಾನೊಬ್ಬಳೇ ಉಳಿದೆನು. ಉಳಿದ ನದಿಗಳೂ, ಸಮುದ್ರಗಳೂ ಎಲ್ಲವೂ ನಾಶವನ್ನು ಹೊಂದಿದುವು.

೩೦. ಮಹೇಶ್ವರನಿಂದ ನಾನು ವರವನ್ನು ಪಡೆದಿದ್ದೆನಾದುದರಿಂದ ನಾನು ನಷ್ಟಳಾಗಲಿಲ್ಲ. ಆತನು ನಾಶರಹಿತನೂ, ಶಾಶ್ವತನೂ, ಶಶ್ವದೇಕಪ್ರಕಾರನೂ, ಸನಾತನನೂ ಆಗಿರುವನು. ಆತನನ್ನು ಪೂಜಿಸಿ ಪ್ರಾರ್ಥಿಸಲು ಏನನ್ನುತಾನೆ ಕೊಡಲಾರನು?''

೩೧. ಇಂತೆಂದು ಮಹರ್ಷಿಗಳಿಗೆ ಹೇಳಿ ತ್ರಿಶೂಲಧಾರಿಣಿಯೂ, ಸರ್ಪಯಜ್ಞೋಪವೀತಾನ್ವಿತೆಯೂ ಆದ ಆ ರೇವಾದೇವಿಯು ಜಲದಲ್ಲಿ ಪ್ರವೇಶಿಸಿದಳು.

೩೨. ಆಕೆಯ ಮಾತುಗಳನ್ನು ಕೇಳಿ ಆ ಋಷಿಗಳು ವಿಸ್ಮಯಾವಿಷ್ಟಚಿತ್ತರಾಗಿ ಎಲ್ಲರೂ ನನ್ನನ್ನು ನಮಸ್ಕರಿಸಿ ಮತ್ತೆ ಮತ್ತೆ ಕ್ಷಮೆಯನ್ನು ಬೇಡಿಕೊಂಡರು.

೩೩. ''ನಿನ್ನ ಆಶ್ರಯದಲ್ಲಿ ವಾಸಿಸುವಾಗ ನಾವಾಡಿದ ದುರುಕ್ತಿಗಳೆಲ್ಲ

ಜಪ್ತ್ವಾ ಚೈಕಾಕ್ಷರಂ ಬ್ರಹ್ಮ ಹೃದಿ ಧ್ಯಾತ್ವಾ ಮಹೇಶ್ವರಂ ।
ಸ್ನಾತ್ವಾ ಚ ಮಂತ್ರಪೂತಾಭಿರಥ ಚಾಽದ್ಭಿರ್ಜಿತವ್ರತಾಃ ॥ ೩೪ ॥
ವಿವಿಶುರ್ನರ್ಮದಾತೋಯಂ ಸಪಕ್ಷಾ ಇವ ಪರ್ವತಾಃ ।
ದ್ಯೋತಯಂತೋ ದಿಶಃ ಸರ್ವಾಃ ಕುಶಹಸ್ತಾಃ ಸಹಾಽಗ್ನಯಃ ॥ ೩೫ ॥
ಗತೇಷು ತೇಷು ರಾಜೇಂದ್ರ ಅಹಮೇಕಃ ಸ್ಥಿತಸ್ತದಾ ।
ಅಮರೇಶಂ ಸಮಾಸಾದ್ಯ ಪೂಜಯನ್ನರ್ಮದಾಂ ನದೀಂ ॥ ೩೬ ॥
ಅನುಭೂತಾಃ ಸಪ್ತಕಲ್ಪಾ ಮಾಯೂರಾದ್ಯಾ ಮಯಾ ನೃಪ ।
ಪ್ರಸಾದಾದ್ವೇಧಸಃ ಸರ್ವೇ ರೇವಯಾಸಹ ಭಾರತ ॥ ೩೭ ॥
ಜನ್ಮದ್ಯೋತದಿನಂ ಯಾವನ್ನ ಜಾನೇಽಸ್ಯಾಃ ಪುರಾಸ್ಥಿತಿಂ ॥ ೩೮ ॥
ಇಯಂ ಹಿ ಶಾಂಕರೀ ಶಕ್ತಿಃ ಕಲಾ ಶಂಭೋರಿಲಾಹ್ವಯಾ ।
ನರ್ಮದಾ ದುರಿತಧ್ವಂಸಕಾರಿಣೀ ಭವತಾರಿಣೀ ॥ ೩೯ ॥

---

ವನ್ನೂ ಕ್ಷಮಿಸು” ಎಂದು ಕೇಳಿಕೊಂಡು ಆ ಮಹಾಭಾಗ್ಯಶಾಲಿಗಳು ತಮ್ಮ ಶಿಷ್ಯಬಾಂಧವರೊಡನೆ ಆಶ್ರಮಗಳನ್ನು ಬಿಟ್ಟು ಹೊರಟರು.

೩೪. ಏಕಾಕ್ಷರವಾದ ಪ್ರಣವವನ್ನು ಜಪಿಸುತ್ತ, ಹೃದಯದಲ್ಲಿ ಪರಮ ಶಿವನನ್ನು ಧ್ಯಾನಿಸಿ ಮಂತ್ರಶುದ್ಧಗಳಾದ ತೀರ್ಥಗಳಲ್ಲಿ ಮಿಂದು ವ್ರತೋಪವಾಸ ಗಳನ್ನು ಮಾಡಿದರು.

೩೫. ಬಳಿಕ ಎಲ್ಲರೂ ಕುಶಗಳನ್ನೂ, ಗಾರ್ಹಪತ್ಯಾಗ್ನಿಗಳನ್ನೂ ಕೈಗಳಲ್ಲಿ ತೆಗೆದುಕೊಂಡು ರೆಕ್ಕೆಗಳುಳ್ಳ ಪರ್ವತಗಳಂತೆ ಕಾಣುತ್ತ ತಮ್ಮ ತೇಜಸ್ಸಿನಿಂದ ಹತ್ತು ದಿಕ್ಕುಗಳನ್ನೂ ಬೆಳಗುತ್ತ ನರ್ಮದಾನದಿಯ ಜಲದೊಳಕ್ಕೆ ಪ್ರವೇಶಿ ಸಿದರು.

೩೬. ರಾಜೇಂದ್ರನೆ! ಅವರೆಲ್ಲರೂ ಹೊರಟುಹೋಗಲು ನಾನೊಬ್ಬನೇ ಅಮರೇಶ್ವರನ ಬಳಿಗೈದಿ ನರ್ಮದೆಯನ್ನು ಪೂಜಿಸುತ್ತ ಇದ್ದೆನು.

೩೭. ಯುಧಿಷ್ಠಿರನೆ! ಬ್ರಹ್ಮದೇವನ ಅನುಗ್ರಹದಿಂದ ನಾನೂ ನರ್ಮದೆ ಯೊಡನೆಯೇ ಇದ್ದು ಮಯೂರವೇ ಮೊದಲಾದ ಏಳು ಕಲ್ಪಗಳ ಕಾಲವನ್ನು ನೋಡಿರುವೆನು.

೩೮. ನಾನು ಹುಟ್ಟಿದಂದಿನಿಂದ ಇಂದಿನವರೆಗೂ ಈಕೆಯ ಹಿಂದಿನ ನಿಜ ವಾದ ಸ್ಥಿತಿಯನ್ನು ತಿಳಿಯಲಾರದಿದ್ದೇನೆ.

೩೯. ಸಮಸ್ತ ಪಾತಕಗಳನ್ನು ನಾಶಮಾಡುವವಳೂ, ಸಂಸಾರಸಾಗರ ದಿಂದ ಕಡೆಹಾಯಿಸುವವಳೂ ಆದ ಈ ನರ್ಮದೆಯು ಪರಮೇಶ್ವರನ ಶಕ್ತಿಯೂ ಇಳಾನಾಮಕಳಾದ ಆತನ ಕಳೆಯೂ ಆಗಿರುವಳು.

ಯದ್ದಾಹಮಪಿ ನಾಭೂವಂ ಪುರಾಕಲ್ಪೇಷು ಪಾಂಡವ ।
ಚತುರ್ದಶಸು ಕಲ್ಪೇಷು ತೇಷ್ವಿಯಂ ಸುಖಸಂಸ್ಥಿತಾಃ ॥ ೪೦ ॥
ಚತುರ್ದಶ ಪುರಾಕಲ್ಪಾ ನ ಮೃತಾ ಯೇಷು ನರ್ಮದಾ ।
ತಾನಹಂ ಸಂಪ್ರವಕ್ಷ್ಯಾಮಿ ದೇವೀ ಪ್ರಾಹ ಯಥಾ ಮಮ ॥ ೪೧ ॥
ಕಾಪಿಲಂ ಪ್ರಥಮಂ ವಿದ್ಧಿ ಪ್ರಾಜಾಪತ್ಯಂ ದ್ವಿತೀಯಕಂ ।
ಬ್ರಾಹ್ಮಂ ಸೌಮ್ಯಂ ಚ ಸಾವಿತ್ರಂ ಬಾರ್ಹಸ್ಪತ್ಯಂ ಪ್ರಭಾಸಕಂ ॥ ೪೨ ॥
ಮಹೇಂದ್ರಮಗ್ನಿಕಲ್ಪಂ ಚ ಜಯಂತಂ ಮಾರುತಂ ತಥಾ ।
ವೈಷ್ಣವಂ ಬಹುರೂಪಂ ಚ ಜ್ಯೋತಿಷಂ ಚ ಚತುರ್ದಶಂ ॥ ೪೩ ॥
ಏತೇ ಕಲ್ಪಾ ಮಯಾ ಖ್ಯಾತಾ ನ ಮೃತಾ ಯೇಷು ನರ್ಮದಾ ।
ಮಾಯೂರಂ ಪಂಚದಶಮಂ ಕೌರ್ಮಂ ಚೈವಾತ್ರ ಷೋಡಶಂ ॥ ೪೪ ॥
ಬಕಂ ಮಾತ್ಸ್ಯಂ ಚ ಪಾದ್ಮಂ ಚ ವಟಕಲ್ಪಂ ಚ ಭಾರತ ।
ಏಕವಿಂಶತಿತಮಂ ಚೈತಂ ವಾರಾಹಂ ಸಾಂಪ್ರತೀನಕಂ ॥ ೪೫ ॥
ಇಮೇ ಸಪ್ತ ಮಯಾ ಸಾಕಂ ರೇವಯಾ ಪರಿಶೀಲಿತಾಃ ।
ಏಕವಿಂಶತಿಕಲ್ಪಾಸ್ತು ನರ್ಮದಾಯಾಃ ಶಿವಾಂಗತಃ ॥ ೪೬ ॥

---

೪೦. ಪಾಂಡವಶ್ರೇಷ್ಠನೆ! ಹಿಂದೆ ನಾನೂ ಹುಟ್ಟುವುದಕ್ಕೆ ಪೂರ್ವದ ಹದಿನಾಲ್ಕುಕಲ್ಪಗಳಲ್ಲಿಯೂ ನರ್ಮದೆಯು ಸುಖವಾಗಿದ್ದಳೆಂದು ಕೇಳಿರುವೆನು.

೪೧. ಈ ದೇವಿಯು ನಾಶವನ್ನು ಹೊಂದದೆ ಹಿಂದಿನ ಹದಿನಾಲ್ಕು ಕಲ್ಪಗಳಲ್ಲಿ ಏಕಪ್ರಕಾರಳಾಗಿದ್ದಳೆಂಬುದನ್ನು ಆಕೆಯಿಂದ ಕೇಳಿರುವಂತೆಯೇ ನಿನಗೆ ಹೇಳುವೆನು.

೪೨–೪೩. ಮೊದಲನೆಯ ಕಲ್ಪವು ಕಾಪಿಲವು. ಎರಡನೆಯದೇ ಪ್ರಾಜಾಪತ್ಯವೆಂದು ತಿಳಿ. ಬಳಿಕ, ಬ್ರಾಹ್ಮ, ಸೌಮ್ಯ, ಸಾವಿತ್ರ, ಬಾರ್ಹಸ್ಪತ್ಯ, ಪ್ರಭಾಸಕ, ಮಾಹೇಂದ್ರ, ಆಗ್ನೇಯ, ಜಯಂತ, ಮಾರುತ, ಬಹುವಿಧ, ವೈಷ್ಣವ. ಇದಾದಮೇಲೆ ಹದಿನಾಲ್ಕನೆಯ ಕಲ್ಪವೇ ಜ್ಯೋತಿಷವೆಂಬುದು.

೪೪–೪೫. ಇಂತು ನಾನು ನೋಡುವುದಕ್ಕೆ ಪೂರ್ವದಲ್ಲಿ ನರ್ಮದೆಯು ಶಾಶ್ವತಳಾಗಿದ್ದ ಕಲ್ಪಗಳನ್ನು ಹೇಳಿದೆನು. ಬಳಿಕ ಮಾಯೂರ, ಕೌರ್ಮ, ಬಕ, ಮಾತ್ಸ್ಯ, ಪಾದ್ಮ, ವಟಕಲ್ಪಗಳು ಕಳೆದು ಈಗ ನಡೆಯುತ್ತಿರುವುದೇ ಇಪ್ಪತ್ತೊಂದನೆಯದಾದ ವಾರಾಹ ಕಲ್ಪವು.

೪೬–೪೭. ಈ ಏಳು ಕಲ್ಪಗಳನ್ನೂ ನಾನೂ ನರ್ಮದೆಯೊಡನೆಯೇ ನೋಡಿದೆನು. ರಾಜೇಂದ್ರನೆ! ಶಿವಾಂಗಸಂಭವೆಯಾದ ನರ್ಮದಾದೇವಿಯ

**ಸಂಜಾತಾಯಾ ನೃಪಶ್ರೇಷ್ಠ ಮಯಾ ದೃಷ್ಟಾ ಹ್ಯನೇಕಶಃ ।**
**ಕಥಿತಾ ನೃಪತಿಶ್ರೇಷ್ಠ ಭೂಯಃ ಕಿಂ ಕಥಯಾಮಿ ತೇ ॥ ೪೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಏಕವಿಂಶತಿಕಲ್ಪಕಥಾನಕವರ್ಣನಂ" ನಾಮ ತ್ರಯೋದಶೋಽಧ್ಯಾಯಃ**

---

ಇಪ್ಪತ್ತೊಂದು ಕಲ್ಪಗಳ ಚರಿತ್ರೆಯಲ್ಲಿ ನಾನು ನೋಡಿರುವ ಅನೇಕ ವಿಷಯಗಳನ್ನೂ ಹೇಳಿರುವೆನು. ಮತ್ತೇನನ್ನು ನಿನಗೆ ಹೇಳಲಿ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಏಕವಿಂಶತಿಕಲ್ಪಕಥಾವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಕಾಲರಾತ್ರಿಕೃತಜಗತ್ಸಂಹರಣವರ್ಣನಂ

**ಯುಧಿಷ್ಠಿರ ಉವಾಚ :—**

**ತತಸ್ತ್ವೃಷಯಃ ಸರ್ವೇ ಮಹಾಭಾಗಾಸ್ತಪೋಧನಾಃ ।**
**ಗತಾಸ್ತು ಪರಮಂ ಲೋಕಂ ತತಃ ಕಿಂ ಜಾತಮದ್ಭುತಂ ॥ ೧ ॥**

**ಶ್ರೀ ಮಾರ್ಕಂಡೇಯ ಉವಾಚ :—**

**ತತಸ್ತೇಷು ಪ್ರಯಾತೇಷು ನರ್ಮದಾತೀರವಾಸಿಷು ।**
**ಬಭೂವ ರೌದ್ರಸಂಹಾರಃ ಸರ್ವಭೂತಕ್ಷಯಂಕರಃ ॥ ೨ ॥**
**ಕೈಲಾಸಶಿಖರಸ್ಥಂ ತು ಮಹಾದೇವಂ ಸನಾತನಂ ।**
**ಬ್ರಹ್ಮಾದ್ಯಾಃ ಪ್ರಾಸ್ತುವನ್ದೇವಮೃಗ್ಯಜುಃಸಾಮಭಿಃ ಶಿವಂ ॥ ೩ ॥**
**ಸಂಹರ ತ್ವಂ ಜಗದ್ದೇವ ಸದೇವಾಸುರಮಾನುಷಂ ।**
**ಪ್ರಾಪ್ತೋ ಯುಗಸಹಸ್ರಾಂತಃ ಕಾಲಃ ಸಂಹರಣಕ್ಷಮಃ ॥ ೪ ॥**
**ಮದ್ರೂಪಂ ತು ಸಮಾಸ್ಥಾಯ ತ್ವಯಾ ಚೈತದ್ವಿನಿರ್ಮಿತಂ ।**
**ವೈಷ್ಣವೀಂ ಮೂರ್ತಿಮಾಸ್ಥಾಯ ತ್ವಯೈತತ್ಪರಿಪಾಲಿತಂ ॥ ೫ ॥**

---

### ಕನ್ನಡದ ಅನುವಾದ

#### ಕಾಲರಾತ್ರಿಕೃತಜಗತ್ಸಂಹಾರವರ್ಣನ

೧. ಯುಧಿಷ್ಠಿರನು ಕೇಳುತ್ತಾನೆ:— ಇಂತು ಮಹಾಭಾಗ್ಯಶಾಲಿಗಳೂ, ತಪೋಧನರೂ ಆದ ಮಹರ್ಷಿಗಳೆಲ್ಲರೂ ಉತ್ತಮಲೋಕಗಳನ್ನು ಸೇರಲು ಬಳಿಕ ಯಾವ ಅದ್ಭುತವು ನಡೆಯಿತು ?

೨. ಮಾರ್ಕಂಡೇಯನು ಹೇಳುತ್ತಾನೆ:— ನರ್ಮದಾತೀರವಾಸಿಗಳಾದ ಋಷಿಗಳೆಲ್ಲರೂ ಹೊರಟುಹೋದಮೇಲೆ ಸರ್ವಪ್ರಾಣಿನಾಶಕವೂ, ಭಯಂಕರವೂ ಆದ ಲಯಕಾರ್ಯವು ನಡೆಯಿತು.

೩. ಕೈಲಾಸಶಿಖರವಾಸಿಯೂ, ಸನಾತನನೂ ಆದ ಪರಮೇಶ್ವರನಿಗೆ ಬ್ರಹ್ಮಾದಿ ದೇವತೆಗಳು ಮೂರು ವೇದಗಳ ಸ್ತೋತ್ರಗಳನ್ನು ಹೇಳಿ ಬಿನ್ನವಿಸಿ ಕೊಂಡರು.

೪. "ಲೋಕೇಶ್ವರನೆ! ಬ್ರಹ್ಮನ ದಿನದ ಸಾವಿರಯುಗಗಳ ಕಾಲವು ಕಳೆದು ಸಂಹಾರದ ಕಾಲವು ಪ್ರಾಪ್ತವಾಗಿರುವುದರಿಂದ ದೇವದಾನವ ಮಾನವರೊಡ ಗೂಡಿದ ಬ್ರಹ್ಮಾಂಡವನ್ನು ನಿನ್ನಲ್ಲಿ ಲಯಗೊಳಿಸು.

೫. ನನ್ನ ರೂಪದಿಂದ ನೀನೇ ಈ ಜಗತ್ತನ್ನು ನಿರ್ಮಿಸಿ ಮಹಾವಿಷ್ಣುವಿನ ರೂಪವನ್ನು ತಾಳಿ ನೀನೇ ರಕ್ಷಿಸುತ್ತಿದ್ದೆಯಲ್ಲವೆ.

**ಏಕಾ ಮೂರ್ತಿಸ್ತ್ರಿಧಾ ಜಾತಾ ಬ್ರಾಹ್ಮೀ ಶೈವೀ ಚ ವೈಷ್ಣವೀ ।**
**ಸೃಷ್ಟಿಸಂಹಾರರಕ್ಷಾರ್ಥಂ ಭವೇದೇವಂ ಮಹೇಶ್ವರ ॥ ೬ ॥**
**ಏತಚ್ಛ್ರುತ್ವಾ ವಚಸ್ತಥ್ಯಂ ವಿಷ್ಣೋಶ್ಚ ಪರಮೇಷ್ಠಿನಃ ।**
**ಸಗಣಃ ಸಪರಿವಾರಃ ಸಹ ತಾಭ್ಯಾಂ ಸಹೋಮಯಾ ॥ ೭ ॥**
**ಸಪ್ತಲೋಕಾನ್ವಿಭಿದ್ಯೇಮಾನ್ ಭಗವಾನ್ನೀಲಲೋಹಿತಃ ।**
**ಭೂರಾದ್ಯಾಬ್ರಹ್ಮಲೋಕಾಂತಂ ಭಿತ್ವಾಂಡಂ ಪರತಃ ಪರಂ ॥ ೮ ॥**
**ಶೈವಂ ಪದಮಜಂ ದಿವ್ಯಮಾವಿಶತ್ಸಹ ತೈರ್ವಿಭುಃ ।**
**ನ ತತ್ರ ವಾಯುರ್ನಾಕಾಶಂ ನಾಗ್ನಿಸ್ತತ್ರ ನ ಭೂತಲಂ ॥ ೯ ॥**
**ಯತ್ರ ಸಂತಿಷ್ಠತೇ ದೇವ ಉಮಯಾ ಸಹ ಶಂಕರಃ ॥ ೧೦ ॥**
**ನ ಸೂರ್ಯೋ ನ ಗ್ರಹಾಸ್ತತ್ರ ನ ಋಕ್ಷಾಣಿ ದಿಶಸ್ತಥಾ ।**
**ನ ಲೋಕಪಾಲಾ ನ ಸುಖಂ ನ ಚ ದುಃಖಂ ನೃಪೋತ್ತಮ ॥ ೧೧ ॥**
**ಬ್ರಾಹ್ಮಂ ಪದಂ ಯತ್ಕವಯೋ ವದಂತಿ**
**ಶೈವಂ ಪದಂ ಯತ್ಕವಯೋ ವದಂತಿ ।**
**ಕ್ಷೇತ್ರಜ್ಞಮೀಶಂ ಪ್ರವದಂತಿ ಚಾಽನ್ಯೇ**
**ಸಾಂಖ್ಯಾಶ್ಚ ಗಾಯಂತಿ ಕಿಲಾದಿಮೋಕ್ಷಂ ॥ ೧೨ ॥**

---

೬. ಮಹೇಶ್ವರನೆ! ನಿನ್ನ ಒಂದು ಮೂರ್ತಿಯೇ ಲೋಕಸೃಷ್ಟಿಸಂಹಾರ ಪಾಲನ ಕಾರ್ಯಗಳಿಗಾಗಿ ಮೂರು ರೂಪಗಳನ್ನು ತಾಳಿರುವುದು ನಿಶ್ಚಯವು.''

೭–೯. ಬ್ರಹ್ಮವಿಷ್ಣುಗಳ ಯಥಾರ್ಥವಾದ ಈ ಮಾತುಗಳನ್ನು ಕೇಳಿ ಮಹಾದೇವನು ಅವರನ್ನೂ, ತನ್ನ ಪರಿವಾರವನ್ನೂ, ಪಾರ್ವತಿಯನ್ನೂ ಕರೆದುಕೊಂಡು ಭೂಲೋಕದಾದಿಯಾಗಿ ಬ್ರಹ್ಮಲೋಕದವರೆಗೂ ಹರಡಿರುವ ಬ್ರಹ್ಮಾಂಡವನ್ನು ಚೂರ್ಣಿಸಿ ತನ್ನಲ್ಲಿ ಲಯಗೊಳಿಸಿಕೊಂಡ ಏಳು ಲೋಕಗಳೊಂದಿಗೆ ತನ್ನ ಮೊದಲನೆಯ ದಿವ್ಯರೂಪವನ್ನು ತಾಳಿದನು.

೧೦. ದೇವದೇವನಾದ ಶಂಕರನು ಉಮೆಯೊಡನಿರುವ ಆ ಸ್ಥಾನದಲ್ಲಿ ವಾಯುವಾಗಲಿ, ಆಕಾಶವಾಗಲಿ, ಅಗ್ನಿಯಾಗಲಿ, ಭೂಮಿಯಾಗಲಿ ಇರಲಿಲ್ಲವು.

೧೧. ಎಲೈ ನೃಪಶ್ರೇಷ್ಠನೆ! ಹಾಗೆಯೇ ಅಲ್ಲಿ ಸೂರ್ಯನೂ, ಗ್ರಹಗಳೂ, ನಕ್ಷತ್ರಗಳೂ, ದಿಕ್ಕುಗಳೂ, ಲೋಕಪಾಲಕರೂ, ಸುಖದುಃಖಾದಿದ್ವಂದ್ವಗಳೂ ಇರಲಿಲ್ಲ.

೧೨. ಅದನ್ನೇ ಬ್ರಹ್ಮಪದವೆಂದು ತಿಳಿದವರು ಹೇಳುವರು. ಅದೇ ಕೈವಲ್ಯವೆಂಬ ಶಿವಪದವೆಂದೂ ಹೇಳುವರು. ಇತರರು ಕ್ಷೇತ್ರಜ್ಞನೆಂದೂ, ಈಶ್ವರನೆಂದೂ ಕರೆಯುವರು. ಸಾಂಖ್ಯರು ಅದನ್ನೇ ಆದಿಮೋಕ್ಷವೆನ್ನುವರು.

ಯದ್ಬ್ರಹ್ಮ ಆದ್ಯಂ ಪ್ರವದಂತಿ ಕೇಚಿ
ದ್ಯಂ ಸರ್ವಮೀಶಾನಮಜಂ ಪುರಾಣಂ ।
ತಮೇಕರೂಪಂ ತಮನೇಕರೂಪ
ಮರೂಪಮಾದ್ಯಂ ಪರಮವ್ಯಯಾಖ್ಯಂ ॥ ೧೩ ॥
ಅವರ್ಣಮಪ್ಯರ್ಥಮನಾಮಗೋತ್ರಂ
ತುರ್ಯಂ ಪದಂ ಯತ್ಕವಯೋ ವದಂತಿ ।
ಧ್ಯಾನಾರ್ಥವಿಜ್ಞಾನಮಯಂ ಸುಸೂಕ್ಷ್ಮ
ಮಾತ್ಮಸ್ಥಮೀಶಾನವರಂ ವರೇಣ್ಯಂ ॥ ೧೪ ॥
ತತಸ್ತ್ರಯಸ್ತೇ ಭಗವಂತಮೀಶಂ
ಸಂಪ್ರಾಪ್ಯ ಸಂಶ್ಲಿಷ್ಯ ಭವಂತ್ಯಥೈಕಂ ।
ಪೃಥಕ್ ಸ್ವರೂಪೈಸ್ತು ಪುನಸ್ತ ಏವ
ಜಗತ್ಸಮಸ್ತಂ ಪರಿಪಾಲಯಂತಿ ॥ ೧೫ ॥
ಸಂಹಾರಂ ಸರ್ವಭೂತಾನಾಂ ರುದ್ರತ್ವೇ ಕುರುತೇ ಪ್ರಭುಃ ।
ವಿಷ್ಣುತ್ವೇ ಪಾಲಯೇಲ್ಲೋಕಾನ್ಬ್ರಹ್ಮತ್ವೇ ಸೃಷ್ಟಿಕಾರಕಃ ॥ ೧೬ ॥
ಪ್ರಕೃತ್ಯಾಸಹ ಸಂಯುಕ್ತಃ ಕಾಲೋ ಭೂತ್ವಾ ಮಹೇಶ್ವರಃ ।
ವಿಶ್ವರೂಪಾ ಮಹಾಭಾಗಾ ತಸ್ಯ ಪಾರ್ಶ್ವೇ ವ್ಯವಸ್ಥಿತಾ ॥ ೧೭ ॥

---

೧೩. ಅದನ್ನೇ ಕೆಲವರು ಆದಿಬ್ರಹ್ಮವೆಂದು ಕರೆಯುವರು. ಆ ಪರಮೇಶ್ವರನೇ ಸರ್ವಸ್ವರೂಪಿಯೂ, ನಿಯಾಮಕನೂ, ಅಜನೂ, ಪುರಾತನನೂ, ಏಕರೂಪನೂ, ಬಹುರೂಪಧಾರಿಯೂ, ರೂಪರಹಿತನೂ, ಪ್ರಕೃತಿಗೆ ಪರನೂ, ನಾಶರಹಿತನೂ ಆಗಿರುವನು.

೧೪. ಅವರ್ಣನಾದರೂ, ಶಬ್ದಗಳ ಅರ್ಥಸ್ವರೂಪನು. ನಾಮಗೋತ್ರಗಳಿಲ್ಲದವನು. ಆ ಸ್ಥಿತಿಯನ್ನೇ ತುರೀಯಪದವೆಂದು ಅಭಿಜ್ಞರು ಕರೆಯುವರು. ಆತನೇ ಧ್ಯಾನಗೋಚರನಾಗಲು ವಿಜ್ಞಾನಮಯವಾದ ದೇಹವನ್ನು ತಾಳುವನು; ಸೂಕ್ಷ್ಮನೂ, ಸರ್ವರ ಹೃದಯಗಳ ಅಂತರ್ವಾಸಿಯೂ, ಲೋಕೇಶ್ವರನೂ, ಸರ್ವೋತ್ತಮನೂ ಆಗಿರುವನು.

೧೫. ಪ್ರಳಯದಲ್ಲಿ ತ್ರಿಮೂರ್ತಿಗಳೂ ಭಗವಂತನಾದ ಆ ಸದಾಶಿವನನ್ನೇ ಹೊಂದಿ ಆತನಲ್ಲಿಯೆ ಲಯಿಸಿ ಏಕದೇಹವಾಗುವರು. ಪುನಃ ಬೇರೆ ಬೇರೆ ರೂಪಗಳನ್ನು ತಾಳಿ ಅವರೇ ಸಕಲ ಜಗತ್ತನ್ನೂ ಪರಿಪಾಲಿಸುವರು.

೧೬. ಆ ಸರ್ವೇಶ್ವರನೇ ರುದ್ರನಾಗಿ ಸಕಲ ಪ್ರಾಣಿಗಳ ಸಂಹಾರವನ್ನು ಮಾಡುವನು. ವಿಷ್ಣುವಾಗಿ ಲೋಕಗಳನ್ನು ಪಾಲಿಸುವನು. ಬ್ರಹ್ಮನಾಗಿ ಸೃಷ್ಟಿಯನ್ನೂ ಮಾಡುವನು.

೧೭. ಮಹೇಶ್ವರನಾದರೋ ಪ್ರಕೃತಿರೂಪಳಾದ ಪಾರ್ವತಿಯೊಡಗೂಡಿ

ಯಾಮಾಹುಃ ಪ್ರಕೃತಿಂ ತಜ್ಜ್ಞಾಃ ಪದಾರ್ಥಾನಾಂ ವಿಚಕ್ಷಣಾಃ ।
ಪುರುಷತ್ವೇ ಪ್ರಕೃತಿತ್ವೇ ಚ ಕಾರಣಂ ಪರಮೇಶ್ವರಃ ॥ ೧೮ ॥
ತಸ್ಮಾದೇತಜ್ಜಗತ್ಸರ್ವಂ ಸಮುದ್ಭೂತಂ ಚರಾಚರಂ ।
ತಸ್ಮಿನ್ನೇವ ಲಯಂ ಯಾತಿ ಯುಗಾಂತೇ ಸಮುಪಸ್ಥಿತೇ ॥ ೧೯ ॥
ಭಗಲಿಂಗಾಂಕಿತಂ ಸರ್ವಂ ವ್ಯಾಪ್ತಂ ವೈ ಪರಮೇಷ್ಠಿನಾ ।
ಭಗರೂಪೋ ಭವೇದ್ವಿಷ್ಣುರ್ಲಿಂಗರೂಪೋ ಮಹೇಶ್ವರಃ ॥ ೨೦ ॥
ಭಾತಿ ಸರ್ವೇಷು ಲೋಕೇಷು ಗೀಯತೇ ಭೂರ್ಭುವಾದಿಷು ।
ಪ್ರವಿಷ್ಟಃ ಸರ್ವಭೂತೇಷು ತೇನ ವಿಷ್ಣುರ್ಭಗಃ ಸ್ಮೃತಃ ॥ ೨೧ ॥
ವಿಶನಾದ್ವಿಷ್ಣುರಿತ್ಯುಕ್ತಃ ಸರ್ವದೇವಮಯೋ ಮಹಾನ್ ।
ಭಾಸನಾದ್ಗಮನಾಚ್ಚೈವ ಭಗಸಂಜ್ಞಾ ಪ್ರಕೀರ್ತಿತಾ ॥ ೨೨ ॥
ಬ್ರಹ್ಮಾದಿಸ್ತಂಬಪರ್ಯಂತಂ ಯಸ್ಮಿನ್ನೇತಿ ಲಯಂ ಜಗತ್ ।
ಏಕಭಾವಂ ಸಮಾಪನ್ನಂ ಲಿಂಗಂ ತಸ್ಮಾದ್ವಿದುರ್ಬುಧಾಃ ॥ ೨೩ ॥

---

ಮಹಾಕಾಲನೆನಿಸುವನು. ಮಹಾತ್ಮಳಾದ ಆಕೆಯು ಆತನ ಪಾರ್ಶ್ವದಲ್ಲಿಯೇ ಇರುವಳು.

೧೮. ಈಕೆಯನ್ನೇ ಪದಾರ್ಥವಿವೇಚನಾಪರರಾದವರು ಪ್ರಕೃತಿಯೆಂದು ಕರೆಯುವರು. ಈ ಪುರುಷಪ್ರಕೃತಿಭಾವಗಳಿಗೂ ಪರಮೇಶ್ವರನೇ ಕಾರಣನಾಗಿರುವನು.

೧೯. ಆತನಿಂದಲೇ ಚರಾಚರಗಳನ್ನೊಳಗೊಂಡ ಈ ಸಕಲ ಜಗತ್ತೂ ಹುಟ್ಟಿ ಬಂದು ಪ್ರಳಯಕಾಲವು ಪ್ರಾಪ್ತವಾಗಲು ಆತನಲ್ಲಿಯೇ ಲಯವನ್ನು ಹೊಂದುವುದು.

೨೦. ಸಮಸ್ತವೂ ಭಗ ಮತ್ತು ಲಿಂಗಗಳ ಚಿಹ್ನೆಯನ್ನು ತಾಳಿ ಪರಮೇಶ್ವರನಿಂದ ವ್ಯಾಪ್ತವಾಗಿರುವುದು. ಮಹಾವಿಷ್ಣುವು ಭಗರೂಪಿಯೂ, ಮಹೇಶ್ವರನು ಲಿಂಗರೂಪನೂ ಆಗಿರುವನು.

೨೧. ಸಕಲ ಲೋಕಗಳಲ್ಲಿಯೂ ಭಾಸಿಸುವನಾದುದರಿಂದಲೂ, ಭೂರ್ಭುವಾದಿಗಳಲ್ಲಿ ಸ್ತುತ್ಯನಾದುದರಿಂದಲೂ, ಸಕಲ ಭೂತಗಳ ಅಂತಃಪ್ರವಿಷ್ಟನಾದುದರಿಂದಲೂ ನಾರಾಯಣನೇ ಭಗನೆಂದು ಕರೆಯಲ್ಪಟ್ಟಿರುವನು.

೨೨. ಸರ್ವದೇವತಾಮಯನೂ, ಮಹತ್ಪರಿಮಾಣನೂ ಆದ ಈತನೇ ಎಲ್ಲದರಲ್ಲಿಯೂ ಪ್ರವೇಶಿಸುವುದರಿಂದ ವಿಷ್ಣುವೆನ್ನಲ್ಪಡುವನು. ಭಾಸಕನಾದುದರಿಂದಲೂ, ಸ್ವೇಚ್ಛಾವಿಹಾರಿಯಾದುದರಿಂದಲೂ ಈತನಿಗೆ ಭಗನೆಂಬ ಹೆಸರು ಬಂದಿರುವುದು.

೨೩. ಬ್ರಹ್ಮನಾದಿಯಾಗಿ ಹುಲ್ಲುಕಡ್ಡಿಯನ್ನೂ ಸೇರಿಸಿ ಸಕಲವೂ ಯಾರಲ್ಲಿ

ಮಹಾದೇವಸ್ತತೋ ದೇವೀಮಾಹ ಪಾರ್ಶ್ವೇ ಸ್ಥಿತಾಂ ತದಾ ।
ಸಂಹರಸ್ವ ಜಗತ್ಸರ್ವಂ ಮಾವಿಲಂಬಸ್ವ ಶೋಭನೇ ॥ ೨೪ ॥
ತ್ಯಜ ಸೌಮ್ಯಮಿದಂ ರೂಪಂ ಸಿತಚಂದ್ರಾಂಶುನಿರ್ಮಲಂ ।
ರೌದ್ರಂ ರೂಪಂ ಸಮಾಸ್ಥಾಯ ಸಂಹರಸ್ವ ಚರಾಚರಂ ॥ ೨೫ ॥
ರೌದ್ರೈರ್ಭೂತಗಣೈರ್ಘೋರೈರ್ದೇವಿ ತ್ವಂ ಪರಿವಾರಿತಾ ।
ಜೀವಲೋಕಮಿಮಂ ಸರ್ವಂ ಭಕ್ಷಯಸ್ವಾಂಬುಜೇಕ್ಷಣೇ ॥ ೨೬ ॥
ತತೋಽಹಂ ಮರ್ದಯಿಷ್ಯಾಮಿ ಪ್ಲಾವಯಿಷ್ಯೇ ತಥಾ ಜಗತ್ ।
ಕೃತ್ವಾ ಚೈಕಾರ್ಣವಂ ಭೂಯಃ ಸುಖಂ ಸ್ವಪ್ಸ್ಯೇ ತ್ವಯಾ ಸಹ ॥ ೨೭ ॥

ಶ್ರೀದೇವ್ಯುವಾಚ :—

ನಾಽಹಂ ದೇವ ಜಗಚ್ಚೈತತ್ಸಂಹರಾಮಿ ಮಹಾದ್ಯುತೇ ।
ಅಂಬಾ ಭೂತ್ವಾ ವಿಚೇಷ್ಟಂ ನ ಭಕ್ಷಯಾಮಿ ಭೃಶಾತುರಂ ॥ ೨೮ ॥
ಸ್ತ್ರೀಸ್ವಭಾವೇನ ಕಾರುಣ್ಯಂ ಕರೋತಿ ಹೃದಯಂ ಮಮ ।
ಕಥಂ ವೈ ನಿರ್ದಹಿಷ್ಯಾಮಿ ಜಗದೇತಜ್ಜಗತ್ಪತೇ ॥ ೨೯ ॥

---

ಲಯಿಸಿ ಏಕಾಕಾರವಾಗಿ ನಿಲ್ಲುವುದೊ, ಅವನನ್ನೇ ಜ್ಞಾನಿಗಳು ಲಿಂಗವೆಂದು ಕರೆಯುವರು.

೨೪. ಆ ಸಮಯದಲ್ಲಿ ಮಹಾದೇವನು ತನ್ನ ಪಾರ್ಶ್ವದಲ್ಲಿದ್ದ ದೇವಿಗೆ ಹೇಳಿದನು. "ಎಲೌ ಮಂಗಳೆಯೆ! ಸಕಲ ಬ್ರಹ್ಮಾಂಡವನ್ನೂ ಸಂಹಾರಮಾಡು; ತಡಮಾಡಬೇಡ.

೨೫. ಶುಭ್ರಚಂದ್ರಕಾಂತಿಯಂತೆ ನಿರ್ಮಲವಾದ ಈ ಸೌಮ್ಯರೂಪವನ್ನು ತ್ಯಜಿಸಿ ನಿನ್ನ ಉಗ್ರರೂಪವನ್ನು ತಾಳಿ ಚರಾಚರಗಳನ್ನೆಲ್ಲ ಲಯಗೊಳಿಸು.

೨೬. ಕಮಲನೇತ್ರೆಯೆ! ಭಯಂಕರರಾದ ನಿನ್ನ ಭೂತಸಂಘಾತಗಳಿಂದ ಪರಿವಾರಿತಳಾಗಿ ಸಕಲ ಪ್ರಾಣಿಸಮೂಹವನ್ನೂ ನುಂಗುವವಳಾಗು.

೨೭. ಬಳಿಕ ನಾನು ಇದನ್ನೆಲ್ಲ ಚೂರ್ಣಿಸಿ ನೀರಿನಿಂದ ಮುಳುಗಿಸಿದಮೇಲೆ ಎಲ್ಲೆಲ್ಲಿಯೂ ಒಂದೇ ಸಮುದ್ರವಾಗಲು ನಿನ್ನೊಡನೆ ಸುಖವಾಗಿ ನಿದ್ರಿಸುವೆನು.

೨೮. ದೇವಿಯು ಹೇಳುತ್ತಾಳೆ:—ಮಹಾತೇಜಸ್ವಿಯೆ! ನಾನು ಈ ಜಗತ್ತನ್ನುಪಸಂಹರಿಸಲು ಇಷ್ಟವುಳ್ಳವಳಾಗಿಲ್ಲ. ಲೋಕಮಾತೆಯಾದ ನಾನು ನಿಶ್ಚೇಷ್ಟವಾಗಿ ಬಿದ್ದು ಬಹಳವಾಗಿ ದುಃಖಪೀಡಿತವಾಗಿರುವ ಈ ಪ್ರಾಣಿಸಂಘವನ್ನು ನುಂಗಲಾರೆನು.

೨೯. ನನ್ನ ಹೃದಯವು ಸ್ತ್ರೀಯರಿಗೆ ಸಹಜವಾದ ಕಾರುಣ್ಯದಿಂದ ಕೂಡಿರುವುದು. ಲೋಕನಾಥನೆ! ಈ ಜಗತ್ತನ್ನು ಹೇಗೆತಾನೆ ಸುಡಲುದ್ಯುಕ್ತಳಾಗಲಿ?

ತಸ್ಮಾತ್ತ್ವಂ ಸ್ವಯಮೇವೇದಂ ಜಗತ್ಸಂಹರ ಶಂಕರ ।
ಅಥೈವಮುಕ್ತಸ್ತಾಂ ದೇವೀ ಧೂರ್ಜಟಿರ್ನೀಲಲೋಹಿತಃ ॥ ೩೦ ॥
ಕ್ರುದ್ಧೋಽನಿರ್ಭರ್ತ್ಸಯಾಮಾಸ ಹುಂಕಾರೇಣ ಮಹೇಶ್ವರೀಂ ।
ಓಂ ಹುಂಫಟ್ ತ್ವಂ ಸ ಇತ್ಯಾಹ ಕೋಪಾವಿಷ್ಟೈರಥೇಕ್ಷಣೈಃ ॥ ೩೧ ॥
ಹುಂಕಾರಿತಾ ವಿಶಾಲಾಕ್ಷೀ ಪೀನೋರುಜಘನಸ್ಥಲಾ ।
ತತ್ಕ್ಷಣಾಚ್ಚಾಽಭವದ್ರೌದ್ರಾ ಕಾಲರಾತ್ರೀವ ಭಾರತ ॥ ೩೨ ॥
ಹುಂಕುರ್ವತೀ ಮಹಾನಾದೈರ್ನಾದಯಂತೀ ದಿಶೋ ದಶ ।
ವ್ಯವರ್ಧತ ಮಹಾರೌದ್ರಾ ವಿದ್ಯುತ್ಸೌದಾಮಿನೀ ಯಥಾ ॥ ೩೩ ॥
ವಿದ್ಯುತ್ಸಂಪಾತದುಷ್ಪ್ರೇಕ್ಷ್ಯಾ ವಿದ್ಯುತ್ಸಂಘಾತಚಂಚಲಾ ।
ವಿದ್ಯುಜ್ಜ್ವಾಲಾಕುಲಾ ರೌದ್ರಾ ವಿದ್ಯುದಗ್ನಿನಿಭೇಕ್ಷಣಾ ॥ ೩೪ ॥
ಮುಕ್ತಕೇಶೀ ವಿಶಾಲಾಕ್ಷೀ ಕೃಶಗ್ರೀವಾ ಕೃಶೋದರೀ ।
ವ್ಯಾಘ್ರಚರ್ಮಾಂಬರಧರಾ ವ್ಯಾಲಯಜ್ಞೋಪವೀತಿನೀ ॥ ೩೫ ॥

---

೩೦. ಶಂಕರ! ಆದುದರಿಂದ ನೀನೇ ಈ ಬ್ರಹ್ಮಾಂಡವನ್ನು ನಾಶಗೊಳಿಸು.” ಇಂತೆಂದು ದೇವಿಯು ಜಟಾಭರಣನೂ, ನೀಲಲೋಹಿತನೂ ಆದ ಪತಿಗೆ ಬಿನ್ನವಿಸಿದಳು.

೩೧. ಪರಮೇಶ್ವರನಾದರೊ ಹುಂಕಾರದಿಂದ ಮಹೇಶ್ವರಿಯನ್ನು ಕೋಪದಿಂದ ಗದರಿಸಿದನು. ಕೋಪಗೊಂಡ ನೇತ್ರಗಳಿಂದ ನೋಡುತ್ತ, “ಓಂ, ಹುಂ, ಫಟ್ ತ್ವಂ, ಸ,” ಎಂಬ ಬೀಜಾಕ್ಷರಗಳೊಡನೆ “ನೀನೇ ನಾನು” ಎಂದು ಹೇಳಿದನು.

೩೨. ವಿಶಾಲನೇತ್ರೆಯೂ, ಪೀನಜಘನದವಳೂ ಆದ ಪಾರ್ವತಿಯು ಹುಂಕಾರದ ಫಲವಾಗಿ ಕಾಳರಾತ್ರಿಯಂತೆ ಮಹಾ ಭಯಂಕರವಾದ ರೂಪವನ್ನು ತಾಳಿದಳು.

೩೩. ಉಚ್ಚವಾದ ಹುಂಕಾರದ ಧ್ವನಿಯಿಂದ ಹತ್ತು ದಿಕ್ಕುಗಳನ್ನೂ ಪ್ರತಿಧ್ವನಿಗೊಳಿಸುತ್ತ ಮಿಂಚಿನ ಬಳ್ಳಿಯಂತೆ ಘೋರವಾಗಿ ಬೆಳೆಯತೊಡಗಿದಳು.

೩೪. ಸಿಡಿಲಿನ ಹೊಡೆತದಂತೆ ನೋಡಲಸಾಧ್ಯಳಾಗಿ, ಮಿಂಚಿನ ಬಳ್ಳಿಯಂತೆಯೇ ಚಂಚಲಳಾಗಿ, ವಿದ್ಯುನ್ಮಾಲೆಗಳ ಜ್ವಾಲೆಗಳಿಂದಾವೃತಳೂ, ಆ ಬೆಂಕಿಯನ್ನು ಹೋಲುವ ಕೆಂಪುಗಣ್ಣಿನವಳೂ ಆಗಿ ಭಯಂಕರಳಾಗಿದ್ದಳು.

೩೫. ಆಕೆಯ ತಲೆಕೂದಲು ಬಿರಿದಿದ್ದಿತು. ನೇತ್ರಗಳು ವಿಶಾಲಗಳೂ, ಕಂಠವೂ ಹೊಟ್ಟೆಯೂ ಕೃಶಗಳೂ ಆಗಿದ್ದುವು. ಆಕೆಯು ವ್ಯಾಘ್ರದ ಚರ್ಮವನ್ನೂ, ಸರ್ಪಯಜ್ಞೋಪವೀತವನ್ನೂ ಧರಿಸಿದ್ದಳು.

ವೃಶ್ಚಿಕೈರಗ್ನಿಪುಂಜಾಭೈರ್ಗೋನಸೈಶ್ಚ ವಿಭೂಷಿತಾ ।
ತ್ರೈಲೋಕ್ಯಂ ಪೂರಯಾಮಾಸ ವಿಸ್ತಾರೇಣೋಚ್ಛ್ರಯೇಣ ಚ ॥ ೩೬ ॥
ಭಾಸುರಾಂಗಾ ತು ಸಂವೃತ್ತಾ ಕೃಷ್ಣಸರ್ಪೈಕಕುಂಡಲಾ ।
ಚಿತ್ರದಂಡೋದ್ಯತಕರಾ ವ್ಯಾಘ್ರಚರ್ಮೋಪಸೇವಿತಾ ॥ ೩೭ ॥
ವ್ಯವರ್ಧತ ಮಹಾರೌದ್ರಾ ಜಗತ್ಸಂಹಾರಕಾರಿಣೀ ।
ಸೃಕ್ಕಿಣೀ ಲೇಲಿಹಾನಾ ಚ ಕ್ರೂರಫೂತ್ಕಾರಕಾರಿಣೀ ॥ ೩೮ ॥
ವ್ಯಾತ್ತಾಸ್ಯಾ ಘುರ್ಘುರಾರಾವಾ ಜಗತ್ಸಂಕ್ಷೋಭಕಾರಿಣೀ ।
ಖೇಲದ್ಭೂತಾನುಗಾ ಕ್ರೂರಾ ನಿಃಶ್ವಾಸೋಚ್ಛ್ವಾಸಕಾರಿಣೀ ॥ ೩೯ ॥
ಜಾತಾಟ್ಟಹಾಸಾ ದುರ್ನಾಸಾ ವಹ್ನಿಕುಂಡಸಮೇಕ್ಷಣಾ ।
ಪ್ರೋದ್ಯತ್ಕಿಲಕಿಲಾರಾವಾ ದದಾಹ ಸಕಲಂ ಜಗತ್ ॥ ೪೦ ॥
ದಹ್ಯಮಾನಾಃ ಸುರಾಸ್ತತ್ರ ಪತಂತಿ ಧರಣೀತಲೇ ।
ಪತಂತಿ ಯಕ್ಷಗಂಧರ್ವಾಃ ಸಕಿನ್ನರಮಹೋರಗಾಃ ॥ ೪೧ ॥

---

೩೬. ಬೆಂಕಿಯ ರಾಶಿಗಳನ್ನು ಹೋಲುವ ಚೇಳುಗಳಿಂದಲೂ, ಹಾವುಗಳಿಂದಲೂ ಅಲಂಕೃತಳಾಗಿ ತನ್ನ ಅಗಲದಿಂದಲೂ ಎತ್ತರದಿಂದಲೂ ಮೂರು ಲೋಕಗಳನ್ನೂ ತುಂಬಿದಳು.

೩೭. ದುಂಡಾದ ಮುದ್ದಿನ ಮೈಕಟ್ಟುಳ್ಳವಳೂ, ಕರಿಯ ಹಾವಿನ ಕುಂಡಲವನ್ನು ಧರಿಸಿದಳೂ, ಚಿತ್ರವಾದ ದಂಡವನ್ನು ಕೈಯಲ್ಲಿ ಹಿಡಿದು ವ್ಯಾಘ್ರಚರ್ಮವನ್ನುಟ್ಟವಳೂ ಆಗಿದ್ದಳು.

೩೮. ಮಹಾ ಭಯಂಕರಳೂ, ಲೋಕಸಂಹಾರನಿರತಳೂ ಆಗಿ, ಕಟವಾಯಿಗಳನ್ನು ನೆಕ್ಕುತ್ತ ಭಯಂಕರವಾಗಿ ಫೂತ್ಕಾರಗಳನ್ನು ಮಾಡುತ್ತ ಬೆಳೆಯುತ್ತಿದ್ದಳು.

೩೯. ತೆರೆದ ಬಾಯಿಯಿಂದ ಮಹಾ ನಾದವನ್ನು ಮಾಡುತ್ತ, ಜಗತ್ತನ್ನು ನಾಶಮಾಡಲುದ್ಯುಕ್ತಳಾಗಿ, ಕುಣಿದಾಡುತ್ತಿರುವ ಭೂತಗಣಗಳಿಂದ ಪರಿವಾರಿತಳಾಗಿ, ಕ್ರೂರವಾದ ಉಚ್ಛ್ವಾಸನಿಶ್ವಾಸಗಳನ್ನು ಮಾಡುತ್ತಿದ್ದಳು.

೪೦. ಅಟ್ಟಹಾಸಯುಕ್ತಳೂ, ದೀರ್ಘನಾಸಿಕವುಳ್ಳವಳೂ, ಅಗ್ನಿಕುಂಡಗಳನ್ನು ಹೋಲುವ ಕಣ್ಣುಗಳುಳ್ಳವಳೂ, ದೊಡ್ಡದಾಗಿ ಕಿಲಕಿಲಧ್ವನಿಯನ್ನು ಮಾಡುತ್ತಿರುವವಳೂ ಆಗಿ ಸಕಲ ಬ್ರಹ್ಮಾಂಡವನ್ನೂ ಸುಡಲನುವಾದಳು.

೪೧. ಆಗ ಸುಡಲ್ಪಟ್ಟ ದೇವತೆಗಳೂ, ಯಕ್ಷರೂ, ಗಂಧರ್ವರೂ, ಕಿನ್ನರರೂ, ಮಹಾನಾಗರೂ ತಮ್ಮ ಸ್ಥಾನಗಳಿಂದ ಭೂಮಿಯಲ್ಲಿ ಬೀಳತೊಡಗಿದರು.

ಪತಂತಿ ಭೂತಸಂಘಾಶ್ಚ ಹಾಹಾ ಹೈಹೈ ವಿರಾವಿಣಃ ।
ಬುಂಬಾಪಾತೈಃ ಸ ನಿರ್ಘಾತೈರುದಿತಾರ್ತಸ್ವರೈರಪಿ ॥ ೪೨ ॥
ವ್ಯಾಪ್ತಮಾಸೀತ್ತದಾ ವಿಶ್ವಂ ತ್ರೈಲೋಕ್ಯಂ ಸ ಚರಾಚರಂ ।
ಸಂಪತದ್ಭಿಃ ಪತದ್ಭಿಶ್ಚ ಜ್ವಲದ್ಭೂತಗಣೈರ್ಮಹೀ ॥ ೪೩ ॥
ಜಾತೈಶ್ಚಟಚಟಾ ಶಬ್ದೈಃ ಪತದ್ಭಿರ್ಗಿರಿಸಾನುಭಿಃ ।
ತತ್ರ ರೌದ್ರೋತ್ಸವೇ ಜಾತಾ ರುದ್ರಾನಂದ ವಿವರ್ಧಿನೀ ॥ ೪೪ ॥
ವಿಹಿಂಸಮಾನಾ ಭೂತಾನಿ ಚರ್ವಮಾಣಾ ಚರಾನಪಿ ।
ತತ್ತದ್ಗಂಧಮುಪಾದಾಯ ಶಿವಾರಾವವಿರಾವಿಣೀ ॥ ೪೫ ॥
ಗಲಚ್ಛೋಣಿತಧಾರಾಭಿಮುಖಾ ದಿಗ್ಧಕಲೇವರಾ ।
ಚಂಡಶೀಲಾಽಭವಚ್ಚಂಡೀ ಜಗತ್ಸಂಹಾರಕರ್ಮಣಿ ॥ ೪೬ ॥
ಯೇಽಪಿ ಪ್ರಾಪ್ತಾ ಮಹರ್ಲೋಕಂ ಭೃಗ್ವಾದ್ಯಾಶ್ಚ ಮಹರ್ಷಯಃ ।
ತೇಽಪಿ ನಶ್ಯಂತಿ ಶತಶೋ ಬ್ರಹ್ಮಕ್ಷತ್ರವಿಶಾದಯಃ ॥ ೪೭ ॥

---

೪೨. ಪ್ರಾಣಿಸಮೂಹಗಳೆಲ್ಲವೂ ಹಾಹಾಕಾರಗಳನ್ನು ಮಾಡುತ್ತ ಸಿಡಿಲಿ ಸೊಡಗೂಡಿದ ಮಹಾವರ್ಷಗಳಿಂದ ಪೀಡಿತರಾಗಿ ಆರ್ತಸ್ವರಗಳನ್ನು ಮಾಡುತ್ತಿದ್ದರು.

೪೩. ಸ್ಥಾವರಜಂಗಮಾತ್ಮಕವಾದ ಬ್ರಹ್ಮಾಂಡವು ಇಂತು ವ್ಯಾಕುಲಿತವಾಗಲು ಭೂಮಂಡಲವು ಸುಡಲ್ಪಟ್ಟು ಹಾರಿಬೀಳುತ್ತಿರುವ ಜಂತುಗಳಿಂದ ತುಂಬಿದ್ದಿತು.

೪೪. ಪರ್ವತಗಳ ತಪ್ಪಲುಗಳೂ ಬಿರಿದು ಛಟಛಟಾ ಶಬ್ದಗಳನ್ನು ಮಾಡುತ್ತಿರಲು ಮಹಾರೌದ್ರೋತ್ಸವವನ್ನು ಮಾಡಿ ಆ ಕಾಳರಾತ್ರಿಯು ಮಹೇಶ್ವರನಿಗೆ ಆನಂದವನ್ನುಂಟುಮಾಡಿದಳು.

೪೫. ಭೂತಗಳನ್ನು ಹಿಂಸಿಸುತ್ತ, ಸ್ಥಾವರಗಳನ್ನೂ ಅಗಿದು ತಿನ್ನುತ್ತ, ಆಯಾ ಪ್ರಾಣಿಗಳ ವಾಸನೆಗಳನ್ನು ತೆಗೆದುಕೊಂಡು ಮಹಾಧ್ವನಿಯನ್ನು ಮಾಡುತ್ತಿದ್ದಳು.

೪೬. ಮುಖದಿಂದ ಹರಿಯುತ್ತಿರುವ ರಕ್ತದ ಕಾಲುವೆಗಳಿಂದ ದೇಹವೆಲ್ಲವೂ ತೊಯ್ದಿದ್ದಿತು. ಇಂತು ಲೋಕಸಂಹಾರಕಾರ್ಯದಲ್ಲಿ ನಿರತಳಾದ ಚಂಡಿಯು ಪ್ರಚಂಡಳಾಗಿದ್ದಳು.

೪೭. ಮಹರ್ಲೋಕವನ್ನು ಸೇರಿದ್ದ ಭೃಗುವೇ ಮೊದಲಾದ ಮಹರ್ಷಿಗಳೂ, ಇತರ ನೂರಾರು ಬ್ರಾಹ್ಮಣ, ಕ್ಷತ್ರಿಯ, ವೈಶಾದಿಗಳೂ ಸಹ ನಾಶವಾದರು.

ದೇವಾಃಸುರಾ ಭಯತ್ರಸ್ತಾಃ ಸಯಕ್ಷೋರಗರಾಕ್ಷಸಾಃ ।
ವಿಶಂತಿ ಕೇಽಪಿ ಪಾತಾಲಂ ಲೀಯಂತೇ ಚ ಗುಹಾದಿಷು ॥ ೪೮ ॥
ಸಾ ಚ ದೇವೀ ದಿಶಃ ಸರ್ವಾ ವ್ಯಾಪ್ಯ ಮೃತ್ಯುರಿವಸ್ಥಿತಾ ।
ಯುಗಕ್ಷಯಕರೇ ಕಾಲೇ ದೇವೇನ ವಿನಿಯೋಜಿತಾ ॥ ೪೯ ॥
ಏಕಾಽಪಿ ನವಧಾ ಜಾತಾ ದಶಧಾ ದಶಧಾ ತಥಾ ।
ಚತುಃಷಷ್ಟಿಸ್ವರೂಪಾ ಚ ಶತರೂಪಾಟ್ಟಹಾಸಿನೀ ॥ ೫೦ ॥
ಜಜ್ಞೇ ಸಹಸ್ರರೂಪಾ ಚ ಲಕ್ಷಕೋಟಿತನುಃ ಶಿವಾ ।
ನಾನಾರೂಪಾಯುಧಾಕಾರಾ ನಾನಾವಾದನಚಾರಿಣೀ ॥ ೫೧ ॥
ಏವಂ ರೂಪಾಽಭವದ್ದೇವೀ ಶಿವಸ್ಯಾಽನುಜ್ಞಯಾ ನೃಪ ।
ದಿಕ್ಷು ಸರ್ವಾಸು ಗಗನೇ ವಿಕಟಾಯುಧಶೀಲಿನಃ ॥ ೫೨ ॥
ರುಂಧಂತೋ ನಶ್ಯಮಾನಾಂಸ್ತಾನ್ಗಣಾ ಮಾಹೇಶ್ವರಾಃ ಸ್ಥಿತಾಃ ।
ವಿಚರಂತಿ ತಯಾ ಸಾರ್ಧಂ ಶೂಲಪಟ್ಟಿಶಪಾಣಯಃ ॥ ೫೩ ॥
ತತೋ ಮಾತೃಗಣಾಃ ಕೇಚಿದ್ವಿನಾಯಕಗಣೈಃ ಸಹ ।
ವ್ಯವರ್ಧಂತ ಮಹಾರೌದ್ರಾ ಜಗತ್ಸಂಹಾರಕಾರಿಣಃ ॥ ೫೪ ॥

---

೪೮. ಕೆಲವರು ದೇವತೆಗಳೂ, ದಾನವರೂ, ಯಕ್ಷರೂ, ನಾಗರೂ, ರಾಕ್ಷಸರೂ ಭಯದಿಂದ ನಡುಗುತ್ತ ಪಾತಾಳವನ್ನು ಪ್ರವೇಶಿಸಿದರು. ಕೆಲವರು ಪರ್ವತಗುಹೆಗಳಲ್ಲಿ ಅವಿತುಕೊಂಡರು.

೪೯. ಯುಗಕ್ಷಯದ ಕಾಲದಲ್ಲಿ ಮಹಾದೇವನಿಂದ ಆಜ್ಞಪ್ತಳಾದ ದೇವಿಯು ಸಮಸ್ತ ದಿಕ್ಕುಗಳನ್ನೂ ವ್ಯಾಪಿಸಿ ಮೃತ್ಯುದೇವತೆಯಂತಿದ್ದಳು.

೫೦–೫೧. ಒಬ್ಬಳೆ ಒಂಬತ್ತು ರೂಪಗಳಿಂದಲೂ, ಹತ್ತು ಹತ್ತು ರೂಪ ಗಳಿಂದಲೂ, ಅರುವತ್ತುನಾಲ್ಕು ರೂಪಗಳಿಂದಲೂ, ನೂರು ರೂಪಗಳಿಂದಲೂ ಅಟ್ಟಹಾಸವನ್ನು ಮಾಡುತ್ತಿದ್ದಳು. ಹಾಗೆಯೇ ಲಕ್ಷ, ಕೋಟಿ ದೇಹಗಳನ್ನು ತಾಳಿ ಆ ಚಾಮುಂಡಿಯು ಅಸಂಖ್ಯಾತಗಳಾದ ಆಯುಧಗಳನ್ನು ತಳೆದು ಅನೇಕ ಶಬ್ದಗಳನ್ನೂ ಮಾಡುತ್ತಿದ್ದಳು.

೫೨–೫೩. ಯುಧಿಷ್ಠಿರನೆ! ಪರಮಶಿವನ ಅನುಜ್ಞೆಯಂತೆ ದೇವಿಯು ಇಂತಹ ರೂಪಗಳನ್ನು ತಾಳಿದಳು. ಆಕೆಯೊಡನಿದ್ದ ಮಾಹೇಶ್ವರಗಣಗಳೂ ವಿವಿಧಾಯುಧಗಳನ್ನು ಹಿಡಿದು ಸಕಲ ದಿಕ್ಕುಗಳಲ್ಲಿಯೂ, ಆಕಾಶದಲ್ಲಿಯೂ ಓಡಿಹೋಗುತ್ತಿರುವವರನ್ನೆಲ್ಲ ತಡೆದುಹಾಕುತ್ತ ತ್ರಿಶೂಲಪಟ್ಟಿಶಾದಿಗಳಿಂದ ಕೂಡಿ ದವರಾಗಿ ಆಕೆಯೊಡನೆ ಸಂಚರಿಸುತ್ತಿದ್ದರು.

೫೪. ಬಳಿಕ ಕೆಲವು ಮಾತೃಗಣಗಳು ವಿನಾಯಕಗಣಗಳೊಡಗೂಡಿ ಲೋಕ ಸಂಹಾರಕಾರ್ಯದಲ್ಲಿ ನಿರತರಾಗಿ ಮಹಾ ಭೀಕರ ರೂಪಗಳನ್ನು ತಾಳಿದರು.

ತತಸ್ತಸ್ಯಾ ವ್ಯವರ್ಧಂತ ದಂಷ್ಟ್ರಾಃ ಕುಂದೇಂದುಸನ್ನಿಭಾಃ ।
ಯೋಜನಾನಾಂ ಸಹಸ್ರಾಣಿ ಅಯುತಾನ್ಯರ್ಬುದಾನಿ ಚ ॥ ೫೫ ॥
ದಂಷ್ಟ್ರಾವಲಿಃ ಕರರುಹಾಃ ಕ್ರೂರಾಸ್ತೀಕ್ಷ್ಣಾಶ್ಚ ಕರ್ಕಶಾಃ ।
ವಿಯದ್ದಿಶೋ ಲಿಖಂತ್ಯೇವ ಸಪ್ತದ್ವೀಪಾಂ ವಸುಂಧರಾಂ ॥ ೫೬ ॥
ತಸ್ಯಾ ದಂಷ್ಟ್ರಾಭಿಪಾತೈಶ್ಚೂರ್ಣಿತಾ ವನಪರ್ವತಾಃ ।
ಶಿಲಾಸಂಚಯಸಂಘಾತಾ ವಿಶೀರ್ಯಂತೇ ಸಹಸ್ರಶಃ ॥ ೫೭ ॥
ಹಿಮವಾನ್ ಹೇಮಕೂಟಶ್ಚ ನಿಷಧೋ ಗಂಧಮಾದನಃ ।
ಮಾಲ್ಯವಾಂಶ್ಚೈವ ನೀಲಶ್ಚ ಶ್ವೇತಶ್ಚೈವ ಮಹಾಗಿರಿಃ ॥ ೫೮ ॥
ಮೇರುಮಧ್ಯಮಿಲಾಪೀಠಂ ಸಪ್ತದ್ವೀಪಂ ಚ ಸಾರ್ಣವಂ ।
ಲೋಕಾಲೋಕೇನ ಸಹಿತಂ ಪ್ರಾಕಂಪತ ನೃಪೋತ್ತಮ ॥ ೫೯ ॥
ದಂಷ್ಟ್ರಾಶನಿವಿಸ್ಪೃಷ್ಟಾಶ್ಚ ವಿಶೀರ್ಯಂತೇ ಮಹಾದ್ರುಮಾಃ ।
ಉತ್ಪಾತೈಶ್ಚ ದಿಶೋ ವ್ಯಾಪ್ತಾ ಘೋರರೂಪೈಃ ಸಮಂತತಃ ॥ ೬೦ ॥
ತಾರಾ ಗ್ರಹಗಣಾಃ ಸರ್ವೇ ಯೇ ಚ ವೈಮಾನಿಕಾ ಗಣಾಃ ।
ಶಿವಾಸಹಸ್ರೈರಾಕೀರ್ಣಾ ಮಹಾಮಾತೃಗಣೈಸ್ತಥಾ ॥ ೬೧ ॥

---

೫೫–೫೬. ಆಗಲಾ ಕಾಳರಾತ್ರಿಯ ಪೂರ್ಣಿಮಾಚಂದ್ರಸದೃಶಗಳಾದ ಕೋರೆದಾಡೆಗಳು ಸಾವಿರ, ಹತ್ತುಸಾವಿರ, ಅರ್ಬುದ ಯೋಜನಗಳ ಪ್ರಮಾಣಕ್ಕೆ ಬೆಳೆಯತೊಡಗಿದುವು. ಆ ದಂತಪಙ್ಕ್ತಿಯು, ಕ್ರೂರಗಳೂ, ತೀಕ್ಷ್ಣಗಳೂ, ಕಠಿನಗಳೂ ಆದ ಉಗುರುಗಳೂ ಆಕಾಶವನ್ನೂ, ದಿಕ್ಕುಗಳನ್ನೂ, ಸಪ್ತದ್ವೀಪಮಯವಾದ ಭೂಮಂಡಲವನ್ನೂ ಒಮ್ಮೆಯೇ ಬಗೆದು ಸೆಳೆಯುವಂತಿದ್ದುವು.

೫೭. ಆಕೆಯ ಹಲ್ಲುಗಳ ಮಧ್ಯದಲ್ಲಿ ಅರಣ್ಯಗಳೂ, ಪರ್ವತಗಳೂ ಪುಡಿಪುಡಿಯಾದವು. ಕಲ್ಲುಬಂಡೆಗಳ ರಾಶಿಗಳೂ ಸಾವಿರಗಟ್ಟಲೆಯಾಗಿ ಒಡೆದುಹೋದುವು.

೫೮–೫೯. ರಾಜೇಂದ್ರನೆ! ಹಿಮವಂತ, ಹೇಮಕೂಟ, ನಿಷಧ, ಗಂಧಮಾದನ, ಮಾಲ್ಯವಂತ, ನೀಲ, ಶ್ವೇತಮಹಾಪರ್ವತ, ಮೇರು, ಇಲಾಪೀಠ, ಲೋಕಾಲೋಕಗಳೇ ಮುಂತಾದ ಪರ್ವತಗಳನ್ನೂ, ಸಪ್ತದ್ವೀಪಗಳನ್ನೂ, ಸಮುದ್ರಗಳನ್ನೂ ಒಳಗೊಂಡ ಭೂಮಂಡಲವೇ ಕಂಪಿಸತೊಡಗಿತು.

೬೦. ಕೋರೆದಾಡೆಗಳೆಂಬ ಆ ಸಿಡಿಲುಗಳು ತಗಲಿದ ಮಾತ್ರದಿಂದಲೇ ಮಹಾವೃಕ್ಷಗಳೂ ಸೀಳಿಬೀಳುತ್ತಿದ್ದುವು. ಹತ್ತು ದಿಕ್ಕುಗಳಲ್ಲಿಯೂ ನಿರಂತರವಾಗಿ ಭಯಂಕರಗಳಾದ ಉತ್ಪಾತಗಳೇ ಕಾಣಿಸುತ್ತಿದ್ದುವು.

೬೧. ನಕ್ಷತ್ರಗಳೂ, ಗ್ರಹಸಮೂಹಗಳೂ, ಇತರ ವಿಮಾನಸಂಚಾರಿಗಳೂ ಸಾವಿರಾರು ಮಹೇಶ್ವರಗಣಗಳಿಗೂ ಮಹಾಮಾತೃಗಣಗಳಿಗೂ ಸಿಕ್ಕಿಬಿದ್ದರು.

ಸ ಚಚಾರ ಜಗತ್ಕೃತ್ಸ್ನಂ ಯುಗಾಂತೇ ಸಮುಪಸ್ಥಿತೇ ।
ಭ್ರಮದ್ಭಿಶ್ಚ ಬ್ರುವದ್ಭಿಶ್ಚ ಕ್ರೋಶದ್ಭಿಶ್ಚ ಸಮಂತತಃ ॥ ೬೨ ॥
ಪ್ರಮಥದ್ಭಿರ್ಜ್ವಲದ್ಭಿಶ್ಚ ರೌದ್ರೈರ್ವ್ಯಾಪ್ತಾ ದಿಶೋ ದಶ ।
ವಿಸ್ತೀರ್ಣಂ ಶೈಲಸಂಘಾತಂ ವಿಘೂರ್ಣಿತಗಿರಿದ್ರುಮಂ ॥ ೬೩ ॥
ಪ್ರಭಿನ್ನಗೋಪುರದ್ವಾರಂ ಕೇಶಶುಷ್ಕಾಽಸ್ಥಿಸಂಕುಲಂ ।
ಪ್ರದಗ್ಧಗ್ರಾಮನಗರಂ ಭಸ್ಮಪುಂಜಾಭಿಸಂವೃತಂ ॥ ೬೪ ॥
ಚಿತಾಧೂಮಾಕುಲಂ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಹಾಹಾಕಾರಾಕುಲಂ ಸರ್ವಮುಹಪಸ್ವನನಿಸ್ವನಂ ॥ ೬೫ ॥
ಜಗದೇತದಭೂತ್ಸರ್ವಮಶರಣ್ಯಂ ನಿರಾಶ್ರಯಂ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಾಲರಾತ್ರಿಕೃತಜಗತ್ಸಂಹರಣವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

೬೨. ಆ ಕಾಳರಾತ್ರಿಯು ಯುಗಾಂತ್ಯದ ವೇಳೆಯಲ್ಲಿ ಓಡಾಡುತ್ತಲೂ, ಮಾತನಾಡುತ್ತಲೂ, ಹಾಹಾಕಾರಗಳನ್ನು ಮಾಡುತ್ತಲೂ ಇರುವ ಗಣಗಳಿಂದ ಪರಿವೃತಳಾಗಿ ಸಕಲ ಬ್ರಹ್ಮಾಂಡದಲ್ಲಿಯೂ ಸಂಚರಿಸುತ್ತಿದ್ದಳು.

೬೩. ಜಗತ್ತನ್ನೆಲ್ಲ ನಾಶಗೊಳಿಸುತ್ತಲೂ, ಜ್ವಲಿಸುತ್ತಲೂ ಇರುವ ರುದ್ರ ಗಣಗಳು ಹತ್ತು ದಿಕ್ಕುಗಳನ್ನೂ ವ್ಯಾಪಿಸಿದರು. ಪರ್ವತಗಳೂ, ವೃಕ್ಷಗಳೂ ನಾಶವಾಗಿ ಎಲ್ಲೆಲ್ಲಿಯೂ ಕಲ್ಲುಬಂಡೆಗಳು ಹರಡಿಕೊಂಡು ಬಿದ್ದಿದ್ದುವು.

೬೪. ಭೂಲೋಕದಲ್ಲಿ ಗೋಪುರಗಳೂ, ಮಹಾದ್ವಾರಗಳೂ ಮುರಿದು ಬಿದ್ದುವು. ಎಲ್ಲೆಲ್ಲಿಯೂ ಕೂದಲು ಮತ್ತು ಒಣಮೂಳೆಗಳೂ ರಾಶಿಗಳಾಗಿ ಬಿದ್ದಿದ್ದುವು. ಗ್ರಾಮಗಳೂ, ಪಟ್ಟಣಗಳೂ ಸುಟ್ಟುಹೋಗಿ ಬೂದಿಯ ರಾಶಿಗಳಿಂದ ಭೂಮಂಡಲವು ತುಂಬಿದ್ದಿತು.

೬೫. ಚರಾಚರಗಳನ್ನೊಳಗೊಂಡಿದ್ದ ಮೂರು ಲೋಕಗಳೂ ಚಿತೆಗಳ ಹೊಗೆಗಳಿಂದ ತುಂಬಿದ್ದುವು. ಎಲ್ಲೆಲ್ಲಿಯೂ ಹಾಹಾಕಾರಗಳಿಂದ "ಅಹಹ!!" ಎಂಬ ಆಕ್ರಂದನಗಳೇ ಕೇಳಿಬರುತ್ತಿದ್ದುವು.

೬೬. ಇಂತು ಸಮಸ್ತ ಬ್ರಹ್ಮಾಂಡವೂ ಗತಿವಿರಹಿತವೂ, ನಿರಾಶ್ರಯವೂ ಆಗಿದ್ದಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಕಾಳರಾತ್ರಿಕೃತಜಗತ್ಸಂಹಾರವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ಸೃಷ್ಟಿಸಂಹರಣಸಂರಂಭವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಮಾತೃಸಹಸ್ರೈಶ್ಚ ರೌದ್ರೈಶ್ಚ ಪರಿವಾರಿತಾ ।
ಕಾಲರಾತ್ರಿರ್ಜಗತ್ಸರ್ವಂ ಹರತೇ ದೀಪ್ತಲೋಚನಾ ॥ ೧ ॥
ತತಸ್ತಾ ಮಾತರೋ ಘೋರಾ ಬ್ರಹ್ಮವಿಷ್ಣುಶಿವಾತ್ಮಿಕಾಃ ।
ವಾಯ್ವಿಂದ್ರಾಽನಲಕೌಬೇರಾ ಯಮತೋಯೇಶಶಕ್ತಯಃ ॥ ೨ ॥
ಸ್ಕಂದಕ್ರೋಡನೃಸಿಂಹಾನಾಂ ವಿಚರಂತ್ಯೋ ಭಯಾನಕಾಃ ।
ಚಕ್ರಶೂಲಗದಾಖಡ್ಗವಜ್ರ ಶಕ್ತ್ಯೃಷ್ಟಿಪಟ್ಟಿಶೈಃ ॥ ೩ ॥
ಖಟ್ವಾಂಗೈರುಲ್ಮುಕೈರ್ದೀಪ್ತೈರ್ವ್ಯಚರನ್ಮಾತರಃ ಕ್ಷಯೇ ।
ಉಮಾಸನ್ನೋದಿತಾಃ ಸರ್ವಾಃ ಪ್ರಧಾವಂತ್ಯೋ ದಿಶೋ ದಶ ॥ ೪ ॥
ತಾಸಾಂ ಚರಣವಿಕ್ಷೇಪೈರ್ಹುಂಕಾರೋದ್ಗಾರನಿಸ್ವನೈಃ ।
ತ್ರೈಲೋಕ್ಯಮೇತತ್ಸಕಲಂ ವಿಪ್ರದಗ್ಧಂ ಸಮಂತತಃ ॥ ೫ ॥

---

## ಕನ್ನಡದ ಅನುವಾದ

### ಸೃಷ್ಟಿಸಂಹಾರಸಂರಂಭವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:— ಬಳಿಕ ಭಯಂಕರರಾದ ಸಾವಿರಾರು ಮಾತೃಗಣಗಳಿಂದ ಪರಿವಾರಿತಳಾದ ಆ ಕಾಳರಾತ್ರಿಯು ಕೆಂಪೇರಿದ ಕಣ್ಣುಗಳುಳ್ಳವಳಾಗಿ ಸಕಲ ಜಗತ್ತನ್ನೂ ಸಂಹರಿಸಿದಳು.

೨–೩. ಆಗ ಆ ಘೋರಮಾತೆಯರು ಬ್ರಹ್ಮ, ವಿಷ್ಣು, ಪರಮಶಿವ, ವಾಯು, ಮಹೇಂದ್ರ, ಅಗ್ನಿ, ಕುಬೇರ, ಯಮ, ವರುಣ, ಷಣ್ಮುಖ, ವರಾಹ, ನೃಸಿಂಹರೇ ಮುಂತಾದ ದೇವತೆಗಳ ಅಂಶಗಳಿಂದ ಕೂಡಿ ಚಕ್ರ, ತ್ರಿಶೂಲ, ಗದೆ, ಖಡ್ಗ, ಶಕ್ತಿ, ಋಷ್ಟಿ, ಪಟ್ಟಿಶಗಳೇ ಮೊದಲಾದ ಆಯುಧಗಳನ್ನು ಹಿಡಿದು ತಿರುಗುತ್ತ ಪ್ರಾಣಿಗಳಿಗೆ ಭಯವನ್ನುಂಟುಮಾಡುತ್ತಿದ್ದರು.

೪. ಲೋಕಸಂಹಾರಕಾಲದಲ್ಲಿ ಇವರು ಖಟ್ವಾಂಗಗಳಿಂದಲೂ, ಉರಿಯುತ್ತಿರುವ ಕೊಳ್ಳಿಗಳಿಂದಲೂ ಸಂಚರಿಸುತ್ತಿದ್ದರು. ಅಲ್ಲದೆ ಎಲ್ಲರೂ ಪಾರ್ವತಿಯಿಂದ ಪ್ರೇರಿತರಾಗಿ ಹತ್ತುದಿಕ್ಕುಗಳಿಗೂ ಓಡುತ್ತಿದ್ದರು.

೫. ಅವರ ಪಾದಾಘಾತಗಳಿಂದಲೂ, ಹುಂಕಾರಗಳ ಮಹಾನಾದಗಳಿಂದಲೂ ಸಮಸ್ತ ಬ್ರಹ್ಮಾಂಡವೂ ಸುಟ್ಟುಹೋಯಿತು.

ಹಾಹಾರವಾಕ್ರಂದಿತನಿಸ್ವನೈಶ್ಚ
ಪ್ರಭಿನ್ನರಥ್ಯಾಗೃಹಗೋಪುರೈಶ್ಚ ।
ಬಭೂವ ಘೋರಾ ಧರಣೀ ಸಮಂತಾ
ತ್ಕಪಾಲಕೇಶಾಕುಲಕರ್ಬುರಾಂಗೀ ॥ ೬ ॥
ಯದೇತಚ್ಛತಸಾಹಸ್ರಂ ಜಂಬೂದ್ವೀಪಂ ನಿಗದ್ಯತೇ ।
ಸರ್ವಮೇವ ತದುಚ್ಛಿನ್ನಂ ಸಮಾಧೃಷ್ಯ ನೃಪೋತ್ತಮ ॥ ೭ ॥
ಜಂಬುಶಾಕಂ ಕುಶಂ ಕ್ರೌಂಚಂ ಗೋಮೇದಂ ಶಾಲ್ಮಲಿಸ್ತಥಾ ।
ಪುಷ್ಕರದ್ವೀಪಸಹಿತಾ ಯೇ ಚ ಪರ್ವತವಾಸಿನಃ ॥ ೮ ॥
ತೇ ಗ್ರಸ್ತಾ ಮೃತ್ಯುನಾ ಸರ್ವೇ ಭೂತೈರ್ಮಾತೃಗಣೈಸ್ತಥಾ ।
ಮಹಾಸುರಕಪಾಲೈಶ್ಚ ಮಾಂಸಮೇದೋವಸೋತ್ಕಟೈಃ ।
ಮಹಾನಾದಪರೈರ್ಘೋರೈರ್ವಾರುಣೀಗಂಧಮೋಹಿತೈಃ ॥ ೯ ॥
ಜ್ವಾಲಾಸಹಸ್ರಸಂವೀತಾ ವಿದ್ಯುಜ್ಜ್ವಲಿತಕುಂಡಲಾ ।
ರುಧಿರೋದ್ಗಾರಶೋಣಾಂಗೀ ಮಹಾಮಾಯಾ ಸುಭೀಷಣಾ ॥ ೧೦ ॥
ಪಿಬಂತೀ ರುಧಿರಂ ತತ್ರ ಮಹಾಮಾಂಸವಸಾಪ್ರಿಯಾ ।
ಕಪಾಲಹಸ್ತಾ ವಿಕಟಾ ಭಕ್ಷಯಂತೀ ಸುರಾಸುರಾನ್ ॥ ೧೧ ॥

---

೬. ಹಾಹಾರವಗಳಿಂದಲೂ, ಸಾಯುವವರ ಆಕ್ರಂದನ ಧ್ವನಿಗಳಿಂದಲೂ, ಒಡೆದು ಪುಡಿಯಾಗುವ ಬೀದಿ, ಮನೆ, ಗೋಪುರಗಳ ಶಬ್ದಗಳಿಂದಲೂ ಪ್ರತಿಧ್ವನಿಸುತ್ತ ಭೂಮಂಡಲವೆಲ್ಲವೂ ಕಪಾಲಕೇಶಾದಿಗಳ ಕೆಸರಿನಿಂದಾವರಿಸಲ್ಪಟ್ಟಿದ್ದಿತು.

೭. ಎಲೈ ಮಹಾರಾಜನೆ! ಶಾಸ್ತ್ರದಲ್ಲಿ ನೂರುಸಾವಿರ ಯೋಜನಗಳ ವಿಸ್ತಾರವುಳ್ಳದ್ದೆಂದು ಯಾವ ಜಂಬೂದ್ವೀಪವನ್ನು ವರ್ಣಿಸಿರುವರೊ, ಅದೆಲ್ಲವೂ ನಿಮಿಷಮಾತ್ರದಲ್ಲಿ ಧ್ವಂಸವಾಯಿತು.

೮. ಜಂಬು, ಶಾಕ, ಕುಶ, ಕ್ರೌಂಚ, ಗೋಮೇದ, ಶಾಲ್ಮಲಿ, ಪುಷ್ಕರ ಮೊದಲಾದ ದ್ವೀಪನಿವಾಸಿಗಳೂ, ಇತರ ಪರ್ವತಪ್ರದೇಶಗಳ ಜನರೂ ಎಲ್ಲರೂ ಮಾತೃಗಣಗಳ ಮತ್ತು ಶಿವಗಣಗಳ ಕೈಗಳಿಗೆ ಸಿಕ್ಕಿ ಮೃತ್ಯುವಿನ ಪಾಲಾದರು.

೯. ಆ ಗಣಗಳು ಮಹಾದಾನವರ ಕಪಾಲಗಳಿಂದ ಭೂಷಿತರೂ, ಮಾಂಸ ಮೇದೋವಸಾದಿ ಭಕ್ಷಕರೂ, ಮಹಾ ಸಿಂಹನಾದಗಳನ್ನು ಮಾಡುತ್ತಿರುವವರೂ, ಮದ್ಯದ ಗಂಧದಿಂದ ವ್ಯಾಮುರೆತನರೂ ಆಗಿದ್ದರು.

೧೦. ಕಾಳರಾತ್ರಿಯಾದರೊ ಸಾವಿರಾರು ಜ್ವಾಲೆಗಳಿಂದಾವೃತಳೂ, ಮಿಂಚಿನಂತೆ ಹೊಳೆಯುವ ಕುಂಡಲಗಳುಳ್ಳವಳೂ, ರಕ್ತದ ಪ್ರವಾಹಗಳಿಂದ ಕೆಂಪು ದೇಹದವಳೂ, ಮಹಾಮಾಯಾಮಯಿಯೂ, ಭಯಂಕರಳೂ ಆಗಿದ್ದಳು.

೧೧–೧೨. ರಕ್ತವನ್ನು ಪಾನಮಾಡುತ್ತ ಮಾಂಸವಸಾದಿಗಳನ್ನು ಆನಂದದಿಂದ ತಿನ್ನುತ್ತ, ಆ ದೇವಿಯು ಕಪಾಲವನ್ನು ಕೈಯಲ್ಲಿ ಹಿಡಿದು ವಿಕಾರರೂಪದಿಂದ

ನೃತ್ಯಂತೀ ಚ ಹಸಂತೀ ಚ ವಿಪರೀತಾ ಮಹಾರವಾ ।
ತ್ರೈಲೋಕ್ಯಸಂತ್ರಾಸಕರೀ ವಿದ್ಯುತ್ಸ್ಫೋಟಹಾಸಿನೀ ॥ ೧೨ ॥
ಸಪ್ತದ್ವೀಪಸಮುದ್ರಾಂತಾಂ ಭಕ್ಷಯಿತ್ವಾ ಚ ಮೇದಿನೀಂ ।
ತತಃ ಸ್ವಸ್ಥಾನಮಗಮದ್ಯತ್ರ ದೇವೋ ಮಹೇಶ್ವರಃ ॥ ೧೩ ॥
ನರ್ಮದಾತೀರಮಾಶ್ರಿತ್ಯಾಽವಸನ್ಮಾತೃಗಣೈಃ ಸಹ ।
ಅಮರಾಣಾಂ ಕಟೇ ತುಂಗೇ ನೃತ್ಯಂತೀ ಹಸಿತಾನನಾ ॥ ೧೪ ॥
ಅಮರಾ ದೇವತಾಃ ಪ್ರೋಕ್ತಾಃ ಶರೀರಂ ಕಟಮುಚ್ಯತೇ ।
ತೈಃ ಕಟೈರಾವೃತೋ ಯಸ್ಮಾತ್ಪರ್ವತೋಽಯಂ ನೃಪೋತ್ತಮ ॥ ೧೫ ॥
ಭಿನ್ನಭಿನ್ನಾಸ್ಥಿನಿಕರೈರ್ವಸಾಮೇದೋಸ್ರವಿಪ್ಲುತೈಃ ।
ಅಮರಂಕಟ ಇತ್ಯೇವಂ ತೇನ ಪ್ರೋಕ್ತೋ ಮನೀಷಿಭಿಃ ॥ ೧೬ ॥
ಮಹಾಪವಿತ್ರೋ ಲೋಕೇಷು ಶಂಭುನಾ ಸ ವಿನಿರ್ಮಿತಃ ।
ನಿತ್ಯಂ ಸನ್ನಿಹಿತಸ್ತತ್ರ ಶಂಕರೋಹ್ಯುಮಯಾ ಸಹ ॥ ೧೭ ॥
ತತೋಽಹಂ ನಿಯತಸ್ತತ್ರ ತಸ್ಯ ಪಾದಾಗ್ರಸಂಸ್ಥಿತಃ ।
ಪ್ರಹ್ವಃ ಪ್ರಣತಭಾವೇನ ಸ್ತೌಮಿ ತಂ ನೀಲಲೋಹಿತಂ ॥ ೧೮ ॥

---

ದೇವದಾನವರನ್ನು ನುಂಗುತ್ತಿದ್ದಳು. ಕುಣಿಯುತ್ತಲೂ, ನಗುತ್ತಲೂ, ಮಹಾನಾದಗಳನ್ನು ಮಾಡುತ್ತಲೂ ಆಕೆಯು ಮೂರು ಲೋಕಗಳಿಗೂ ಭಯವನ್ನುಂಟು ಮಾಡುತ್ತ, ಸಿಡಿಲಿನ ಹೊಡೆತದಂತಹ ಅಟ್ಟಹಾಸವುಳ್ಳವಳಾಗಿದ್ದಳು.

೧೩–೧೪. ಇಂತು ಸಪ್ತದ್ವೀಪಗಳನ್ನೊಳಗೊಂಡು ಸಮುದ್ರಪರ್ಯಂತವಾದ ಭೂಮಂಡಲವನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡು ಆ ದೇವಿಯು ಪುನಃ ಮಹಾದೇವನ ಬಳಿ ತನ್ನ ನಿಜವಾದ ಸ್ಥಾನವನ್ನು ಬಂದು ಸೇರಿದಳು. ಬಳಿಕ ತನ್ನ ಮಾತೃಗಣಗಳೊಡಗೂಡಿ ನರ್ಮದಾತೀರಪ್ರದೇಶಕ್ಕೆ ಬಂದು ಆನಂದದಿಂದ ನೃತ್ಯಾಟ್ಟಹಾಸಗಳನ್ನು ಮಾಡುತ್ತ ಅಮರಕಟವೆಂಬ ಎತ್ತರವಾದ ಸ್ಥಳದಲ್ಲಿ ನೆಲಸಿದಳು.

೧೫. ಅಮರರೆಂದರೆ ದೇವತೆಗಳು. ಕಟವೆಂದು ಶರೀರಕ್ಕೆ ಹೆಸರಿರುವುದು. ಈ ಪರ್ವತವು ದೇವತೆಗಳ ಶರೀರಗಳಿಂದಲೇ ನಿರ್ಮಿತವಾದುದು.

೧೬. ಭಿನ್ನಭಿನ್ನಗಳಾದ ಮೂಳೆಗಳ ರಾಶಿಗಳಿಂದಲೂ, ವಸಾ, ಮೇದಸ್ಸು, ರಕ್ತಾದಿಗಳಿಂದಲೂ ಕೂಡಿರುವುದರಿಂದ ಜ್ಞಾನಿಗಳು ಇದನ್ನು ಅಮರಂಕಟವೆಂದು ಕರೆಯುವರು.

೧೭. ಈ ಪ್ರದೇಶವನ್ನು ಪರಮೇಶ್ವರನು ಅತಿ ಪವಿತ್ರವನ್ನಾಗಿ ಮಾಡಿದನು. ಅಲ್ಲಿ ಆತನು ಪಾರ್ವತಿಯೊಡನೆ ಯಾವಾಗಲೂ ಸನ್ನಿಹಿತನಾಗಿರುವನು.

೧೮. ಆಗ ನಾನು ನಿಯಮದಿಂದ ಆತನ ಪಾದಪ್ರದೇಶದಲ್ಲಿ ನಿಂತು ವಿನೀತನಾಗಿ ಕೈಮುಗಿದುಕೊಂಡು ಆ ಪರಮೇಶ್ವರನನ್ನು ಸ್ತೋತ್ರಮಾಡಿದೆನು.

ತತಸ್ತಾಲಕಸಂಪಾತೈರ್ಗಣೈರ್ಮಾತೃಗಣೈಃ ಸಹ ।
ಸಂಪ್ರನೃತ್ಯತಿ ಸಂಹೃಷ್ಟೋ ಮೃತ್ಯುನಾ ಸಹ ಶಂಕರಃ ॥ ೧೯ ॥
ಖಟ್ವಾಂಗೈರುಲ್ಮುಕೈಶ್ಚೈವ ಪಟ್ಟಿಶೈಃ ಪರಿಘೈಸ್ತಥಾ ।
ಮಾಂಸಮೇದೋವಸಾಹಸ್ತಾ ಹೃಷ್ಟಾ ನೃತ್ಯಂತಿ ಸಂಘಶಃ ॥ ೨೦ ॥
ವಾಮನಾ ಜಟಿಲಾ ಮುಂಡಾ ಲಂಬಗ್ರೀವೋಷ್ಠಮೂರ್ಧಜಾಃ ।
ಮಹಾಶಿಶ್ನೋದರಭುಜಾ ನೃತ್ಯಂತಿ ಚ ಹಸಂತಿ ಚ ॥ ೨೧ ॥
ವಿಕೃತೈರಾನನೈರ್ಘೋರೈರ್ಭುಜೋಲ್ಬಣಮುಖಾದಿಭಿಃ ।
ಅಮರಂ ಕಂಟಕಂ ಚಕ್ರುಃ ಪ್ರಾಪ್ತೇ ಕಾಲವಿಪರ್ಯಯೇ ॥ ೨೨ ॥
ತೇಷಾಂ ಮಧ್ಯೇ ಮಹಾಘೋರಂ ಜಗತ್ಸಂತ್ರಾಸಕಾರಣಂ ।
ಮೃತ್ಯುಂ ಪಶ್ಯಾಮಿ ನೃತ್ಯಂತಂ ತಡಿತ್ಪಿಂಗಲಮೂರ್ಧಜಂ ॥ ೨೩ ॥
ತಸ್ಯ ಪಾರ್ಶ್ವೇ ಸ್ಥಿತಾಂ ದೇವೀಂ ವಿಮಲಾಂಬರಭೂಷಿತಾಂ ।
ಕುಂಡಲೋದ್ಘೃಷ್ಟಗಂಡಾಂ ತಾಂ ನಾಗಯಜ್ಞೋಪವೀತಿನೀಂ ॥ ೨೪ ॥

---

೧೯. ಆಗ ರುದ್ರಗಣಗಳೂ, ಮಾತೃಗಣಗಳೂ ತಾಳಗಳನ್ನು ಬಾಜಿಸುತ್ತಿರಲು ಮಹೇಶ್ವರನು ಆನಂದದಿಂದ ಮೃತ್ಯುದೇವತೆಯೊಡನೆ ಪ್ರಳಯತಾಂಡವದಲ್ಲಿ ನಿರತನಾದನು.

೨೦. ಅವರೆಲ್ಲರೂ ಖಟ್ವಾಂಗ, ಉಲ್ಮುಕ, ಪರಿಘ, ಪಟ್ಟಿಶಗಳೇ ಮೊದಲಾದ ಆಯುಧಗಳನ್ನೂ, ಪ್ರಾಣಿಗಳ ಮಾಂಸವಸಾದಿಗಳನ್ನೂ ಕೈಗಳಲ್ಲಿ ಹಿಡಿದು ಹೃಷ್ಟರಾಗಿ ನರ್ತಿಸುತ್ತಿದ್ದರು.

೨೧. ಅವರಲ್ಲಿ ಕೆಲವರು ಕುಳ್ಳರು. ಕೆಲವರ ತಲೆಗೂದಲು ಜಡೆಹಣೆದುಗೊಂಡಿದ್ದಿತು. ಕೆಲವರು ಬೋಳರಾಗಿದ್ದರು. ಕೆಲವರಿಗೆ ಜೋಲಾಡುವ ಕತ್ತುಗಳೂ, ತುಟಿಗಳೂ, ಕೂದಲುಗಳೂ ಇದ್ದುವು. ಕೆಲವರು ಅತಿ ಪ್ರಮಾಣದ ಶಿಶ್ನಗಳನ್ನೂ, ಹೊಟ್ಟೆಗಳನ್ನೂ, ಕೈಗಳನ್ನೂ ತಳೆದಿದ್ದರು. ಎಲ್ಲರೂ ನರ್ತಿಸುತ್ತಲೂ, ನಗುತ್ತಲೂ ಇದ್ದರು.

೨೨. ವಿಕಾರಸಹಿತಗಳೂ, ಘೋರಗಳೂ ಆದ ಮುಖಗಳಿಂದಲೂ, ಭುಜಗಳಿಂದಲೂ ಅವರು ಪ್ರಳಯಕಾಲವೊದಗಲು ಅಮರಪ್ರದೇಶವನ್ನು ಕಂಟಕಿತವನ್ನಾಗಿ ಮಾಡಿದರು.

೨೩. ಅವರ ಮಧ್ಯದಲ್ಲಿ ಮಹಾ ಭಯಂಕರನೂ, ಮೂರು ಲೋಕಗಳನ್ನೂ ಭಯಗೊಳಿಸುವವನೂ, ಮಿಂಚಿನಂತೆ ಹಳದಿಯ ಬಣ್ಣದ ಕೂದಲಿನವನೂ ಆದ ಮೃತ್ಯುವು ಕುಣಿಯುತ್ತಿದ್ದುದನ್ನೂ ಕಂಡೆನು.

೨೪. ಆತನ ಪಕ್ಕದಲ್ಲಿಯೇ ಒಬ್ಬ ದೇವತೆಯು ಶುಭ್ರವಸ್ತ್ರವನ್ನು ಟ

ವಿಚಿತ್ರೈರುಪಹಾರೈಶ್ಚ ಪೂಜಯಂತೀಂ ಮಹೇಶ್ವರಂ ।
ಅಪಶ್ಯಂ ನರ್ಮದಾಂ ತತ್ರ ಮಾತರಂ ವಿಶ್ವವಂದಿತಾಂ ॥ ೨೫ ॥
ನಾನಾತರಂಗಾಂ ಸಾವರ್ತಾಂ ಸುವೇಲಾರ್ಣವಸನ್ನಿಭಾಂ ।
ಮಹಾಸರಃಸರಿತ್ಪಾತೈರದೃಶ್ಯಾಂ ದೃಶ್ಯರೂಪಿಣೀಂ ॥ ೨೬ ॥
ವಂದ್ಯಮಾನಾಂ ಸುರೈಃ ಸಿದ್ಧೈರ್ಮುನಿಸಂಘೈಶ್ಚ ಭಾರತ।
ಏತಸ್ಮಿನ್ನಂತರೇ ಘೋರಾಂ ಸಪ್ತಸಪ್ತಕಸಂಜ್ಞಿತಾಂ ॥ ೨೭ ॥
ಮಹಾವೀಚ್ಯೌಘಫೇನಾಢ್ಯಾಂ ಕುರ್ವಂತೀಂ ಸಜಲಂ ಜಗತ್ ।
ದೃಷ್ಟವಾನ್ನರ್ಮದಾಂ ದೇವೀಂ ಮೃಗಕೃಷ್ಣಾಂಬರಾಂ ಪುನಃ ॥ ೨೮ ॥
ಸಧೂಮಾಶನಿನಿರ್ಹ್ರಾದೈರ್ವಹಂತೀಂ ಸಪ್ತಧಾ ತದಾ ॥ ೨೯ ॥
ಇತಿ ಸಂಹಾರಮತುಲಂ ದೃಷ್ಟವಾನ್ರಾಜಸತ್ತಮ ।
ನಷ್ಟಚಂದ್ರಾರ್ಕಕಿರಣಮಭೂದೇತಚ್ಚರಾಚರಂ ॥ ೩೦ ॥

---

ಕುಂಡಲಗಳಿಂದಲಂಕೃತಗಳಾದ ಕಪೋಲಗಳುಳ್ಳವಳಾಗಿ. ಸರ್ಪಯಜ್ಞೋಪವೀತವನ್ನು ಧರಿಸಿದ್ದಳು.

೨೫. ಲೋಕವಂದಿತೆಯೂ, ವಿಶ್ವಮಾತೆಯೂ ಆದ ಆ ನರ್ಮದೆಯು ಅನೇಕ ವಿಧಗಳಾದ ಉಪಹಾರಗಳಿಂದ ಮಹಾದೇವನ ಪೂಜೆಯನ್ನು ಮಾಡುತ್ತಿದ್ದುದನ್ನು ಕಂಡೆನು.

೨೬. ಆಕೆಯು ಅನೇಕ ತರಂಗಗಳಿಂದಲೂ, ಸುಳಿಗಳಿಂದಲೂ, ಸರೋವರ ಜಲಪಾತಗಳಿಂದಲೂ ಕೂಡಿ ವಿಶಾಲವಾದ ಸಮುದ್ರವನ್ನು ಹೋಲುತ್ತ ಕಂಡೂ ಕಾಣದಂತಿದ್ದಳು.

೨೭. ಎಲೈ ಧರ್ಮರಾಜನೆ! ಆಕೆಯನ್ನು ದೇವತೆಗಳೂ, ಸಿದ್ಧರೂ, ಮಹರ್ಷಿಗಣಗಳೂ ಪೂಜಿಸುತ್ತಿರಲು, ನಿಮಿಷಮಾತ್ರದಲ್ಲಿ ಆಕೆಯು ಸಪ್ತಸಪ್ತಿಕೆಯೆಂಬ ಮಹಾ ಘೋರರೂಪವನ್ನು ತಾಳಿದಳು.

೨೮. ದೊಡ್ಡ ದೊಡ್ಡ ತರಂಗಗಳ ಹೊಡೆತದ ನೊರೆಗಳಿಂದ ಸಕಲ ಜಗತ್ತನ್ನೂ ಜಲಮಯವಾಗಿಮಾಡುವಳೊ ಎಂಬಂತೆ ಕರಿಯ ಸಾರಂಗದ ಚರ್ಮವನ್ನುಟ್ಟುಬಂದ ನರ್ಮದಾದೇವಿಯನ್ನು ಕಂಡೆನು.

೨೯. ಧೂಮದಿಂದಲೂ, ಸಿಡಿಲಿನ ಶಬ್ದಗಳಿಂದಲೂ ಕೂಡಿ ಆ ನದಿಯು ಏಳು ಭಾಗಗಳಾಗಿ ಹರಿಯಿತು.

೩೦. ರಾಜೇಂದ್ರನೆ! ಇಂತಹ ಅಪ್ರತಿಮವಾದ ಲೋಕಸಂಹಾರವನ್ನು ನಾನು ನೋಡಿದೆನು. ಆಗ ಸಮಸ್ತ ಬ್ರಹ್ಮಾಂಡವೂ ಚಂದ್ರಸೂರ್ಯರ ಬೆಳಕೇ ಕಾಣದಂತಿದ್ದಿತು.

ಮಹೋತ್ಪಾತಸಮುದ್ಭೂತಂ ನಷ್ಟನಕ್ಷತ್ರಮಂಡಲಂ ।
ಅಲಾತಚಕ್ರವತ್ತೂರ್ಣಮಶೇಷಂ ಭ್ರಾಮಯಂಸ್ತತಃ ॥ ೩೧ ॥
ವಿಮಾನಕೋಟಿಸಂಕೀರ್ಣಃ ಸಕಿನ್ನರಮಹೋರಗಃ ।
ಮಹಾವಾತಃ ಸ ನಿರ್ಘಾತೋ ಯೇನಾಽಕಂಪಚ್ಚರಾಚರಂ ॥ ೩೨ ॥
ರುದ್ರವಕ್ತ್ರಾತ್ಸಮುದ್ಭೂತಃ ಸಂವರ್ತೋ ನಾಮ ವಿಶ್ರುತಃ ।
ವಾಯುಃ ಸಂಶೋಷಯಾಮಾಸ ವಿತತಾನ್ಸಪ್ತಸಾಗರಾನ್ ॥ ೩೩ ॥

ಉದ್ಧೂಲಿತಾಂಗಃ ಕಪಿಲಾಕ್ಷಮೂರ್ಧಜೋ
ಜಟಾಕಲಾಪೈರವಬದ್ಧಮೂರ್ಧಜಃ ।
ಮಹಾರವೋ ದೀಪ್ತವಿಶಾಲಶೂಲಧೃಕ್
ಸಪಾತು ಯುಷ್ಮಾಂಶ್ಚ ದಿನೇ ದಿನೇ ಹರಃ ॥ ೩೪ ॥
ಶೂಲೀ ಧನುಷ್ಮಾನ್ಕವಚೀ ಕಿರೀಟೀ
ಸ್ಮಶಾನಭಸ್ಮೋಕ್ಷಿತಸರ್ವಗಾತ್ರಃ ।
ಕಪಾಲಮಾಲಾಕುಲಕಂಠನಾಲೋ
ಮಹಾಽಹಿಸೂತ್ರೈರವಬದ್ಧಮೌಲಿಃ ॥ ೩೫ ॥

---

೩೧. ಎಲ್ಲೆಲ್ಲಿಯೂ ಮಹೋತ್ಪಾತಗಳು ಕಾಣಿಸುತ್ತಿರಲು, ನಕ್ಷತ್ರ ಮಂಡಲವು ಕಾಣಿಸದಾಯಿತು. ಸಕಲವೂ ಗುಂಡಾಗಿ ಬೀಸುತ್ತಿರುವ ಕೊಳ್ಳಿಯಂತೆ ತಿತ್ತಿರುಗುತ್ತಿದ್ದಿತು.

೩೨. ಅಸಂಖ್ಯಾತಗಳಾದ ವಿಮಾನಗಳನ್ನೂ, ಕಿನ್ನರರನ್ನೂ, ಮಹಾನಾಗರನ್ನೂ ಕಲಕಿ ಸಿಡಿಲಿನೊಡನೆ ಬೀಸತೊಡಗಿದ ಬಿರುಗಾಳಿಗೆ ಸಮಸ್ತ ಪ್ರಪಂಚವೂ ಕಂಪಿಸತೊಡಗಿತು.

೩೩. ಸಂವರ್ತವೆಂಬ ಹೆಸರಿನಿಂದ ಪ್ರಖ್ಯಾತವಾಗಿ ಮಹೇಶ್ವರನ ಮುಖದಿಂದ ಹೊರಟ ಈ ವಾಯುವು ವಿಶಾಲಗಳಾದ ಏಳು ಸಾಗರಗಳನ್ನೂ ಒಣಗಿಸಿತು.

೩೪. ಧೂಳಿಧೂಸರಿತವಾದ ದೇಹವುಳ್ಳವನೂ, ಕಪಿಲವರ್ಣದ ತಲೆಗೂದಲಿನವನೂ, ಆ ಕೂದಲನ್ನು ಹಲವು ಜಡೆಗಳನ್ನಾಗಿಸಿ ಕಟ್ಟಿರುವವನೂ, ಮಹಾಧ್ವನಿಯುಳ್ಳವನೂ, ಪ್ರಜ್ವಲಿಸುತ್ತಿರುವ ದೊಡ್ಡ ತ್ರಿಶೂಲವನ್ನು ಹಿಡಿದವನೂ ಆದ ಮಹಾದೇವನು ನಿಮ್ಮನ್ನು ಸರ್ವಕಾಲದಲ್ಲಿಯೂ ಕಾಪಾಡುತ್ತಿರಲಿ.

೩೫. ಶೂಲ, ಧನುಸ್ಸು, ಕವಚ, ಕಿರೀಟಗಳನ್ನು ಧರಿಸಿ, ಸ್ಮಶಾನದ ಚಿತೆಗಳ ಬೂದಿಯನ್ನು ಮೈಗೆಲ್ಲ ಬಳಿದುಕೊಂಡು, ಕಂಠದಲ್ಲಿ ಕಪಾಲಗಳ ಹಾರವನ್ನು ಧರಿಸಿ, ಮಹಾನಾಗರರೆಂಬ ಹಗ್ಗಗಳಿಂದ ಆತನು ಜಡೆಗಳನ್ನು ಬಿಗಿದಿರುವನು.

ಸ ಗೋನಸೌಘೈಃ ಪರಿವೇಷ್ಟಿತಾಂಗೋ
ವಿಷಾಗ್ನಿಚಂದ್ರಾಮರಸಿಂಧುಮೌಲಿಃ ।
ಪಿನಾಕಖಟ್ವಾಂಗಕರಾಲಪಾಣಿಃ
ಸ ಕೃತ್ತಿವಾಸಾ ಡಮರುಪ್ರಣಾದಃ ॥ ೩೬ ॥
ಸ ಸಪ್ತಲೋಕಾಂತರನಿಃಸೃತಾತ್ಮಾ
ಮಹಾಭುಜಾವೇಷ್ಟಿತಸರ್ವಗಾತ್ರಃ ।
ನೇತ್ರೇಣ ಸೂರ್ಯೋದಯಸನ್ನಿಭೇನ
ಪ್ರವಾಲಕಾಂಕೂರನಿಭೋದರೇಣ ॥ ೩೭ ॥
ಸಂಧ್ಯಾಽಭ್ರರಕ್ತೋತ್ಪಲಪದ್ಮರಾಗ
ಸಿಂದೂರ ವಿದ್ಯುತ್ಪ್ರಕರಾರುಣೇನ ।
ತಪ್ತೇನ ಲಿಂಗೇನ ಚ ಲೋಚನೇನ
ಚಿಕ್ರೀಡಮಾನಃ ಸ ಯುಗಾಂತಕಾಲೇ ॥ ೩೮ ॥
ಹಿರಣ್ಮಯೇನೈವ ಸಮುತ್ಸೃಜನ್ ಸ
ದಂಡೇನ ಯದ್ವದ್ಭಗವಾನ್ಸಮೇರುಃ ।
ಪಾದಾಗ್ರವಿಕ್ಷೇಪವಿಶೀರ್ಣಶೈಲಃ
ಕುರ್ವನ್ ಜಗತ್ಸೋಽಪಿ ಜಗಾಮ ತತ್ರ ॥ ೩೯ ॥

---

೩೬. ಸರ್ಪಸಮೂಹಗಳಿಂದ ಸುತ್ತುವರೆಯಲ್ಪಟ್ಟ ಅಂಗಗಳುಳ್ಳವನೂ, ವಿಷವನ್ನು ಕಂಠದಲ್ಲಿಯೂ, ಅಗ್ನಿಯನ್ನು ನೇತ್ರದಲ್ಲಿಯೂ, ಚಂದ್ರಗಂಗೆಯರನ್ನು ಕೆಂಜಡೆಗಳಲ್ಲಿಯೂ ಧರಿಸಿ, ಪಿನಾಕಖಟ್ವಾಂಗಗಳೆಂಬ ಆಯುಧಗಳನ್ನು ಕೈಗಳಲ್ಲಿ ಹಿಡಿದು, ಆನೆಯ ಚರ್ಮವನ್ನು ಹೊದೆದು ಆತನು ಡಮರುವಾದ್ಯದಿಂದ ಮಹಾನಾದವನ್ನು ಮಾಡುತ್ತಿರುವನು.

೩೭. ಏಳು ಲೋಕಗಳಲ್ಲಿಯೂ ವ್ಯಾಪಿಸಿದ ಆತ್ಮನಾಗಿ ದೀರ್ಘಬಾಹುಗಳಿಂದ ಎಲ್ಲವನ್ನೂ ಆವೇಷ್ಟಿಸಿರುವನು. ಆತನ ಕಣ್ಣುಗಳು ಬಾಲಸೂರ್ಯನಂತೆಯೂ, ಉದರವು ಹವಳದ ಕುಡಿಗಳಂತೆಯೂ ಹೊಳೆಯುತ್ತಿರುವುವು.

೩೮. ಸಾಯಂಕಾಲದ ಮೇಘವನ್ನೂ, ಕೆಂದಾವರೆಯನ್ನೂ, ಪದ್ಮರಾಗವನ್ನೂ, ಸಿಂಧೂರವನ್ನೂ, ಮಿಂಚಿನ ಬಳ್ಳಿಯನ್ನೂ ಹೋಲುತ್ತಿರುವ ಲಿಂಗದಿಂದಲೂ, ನೇತ್ರದಿಂದಲೂ ಆತನು ಪ್ರಳಯಕಾಲದಲ್ಲಿ ಮಹಾನಾಟ್ಯವನ್ನು ಮಾಡುತ್ತಿರುವನು.

೩೯. ಮೇರುಪರ್ವತದಂತೆ ಚಿನ್ನದಿಂದ ಮಾಡಿದ ದೊಡ್ಡದಾದ ದಂಡವನ್ನು ಬೀಸುತ್ತ ಪಾದಾಘಾತಗಳಿಂದ ಮಹಾಪರ್ವತಗಳನ್ನೂ ಪುಡಿಮಾಡುತ್ತ ಭಗವಂತನು ನಾಟ್ಯವನ್ನು ಮಾಡಿಕೊಂಡು ಸಂಚರಿಸುತ್ತಿರುವನು.

ಸಂಹರ್ತುಕಾಮಸ್ತ್ರಿದಿವಂತ್ವಶೇಷಂ
ಪ್ರಮುಂಚಮಾನೋ ವಿಕೃತಾಟ್ಟಹಾಸಂ ।
ಜಹಾರ ಸರ್ವಂ ತ್ರಿದಿವಂ ಮಹಾತ್ಮಾ
ಸಂಕ್ಷೋಭಯನ್ವೈ ಜಗದೀಶ ಏಕಃ ॥ ೪೦ ॥

ತಂ ದೇವಮೀಶಾನಮಜಂ ವರೇಣ್ಯಂ
ದೃಷ್ಟ್ವಾ ಜಗತ್ಸಂಹರಣಂ ಮಹೇಶಂ ।
ಸಾ ಕಾಲರಾತ್ರಿಃ ಸಹ ಮಾತೃಭಿಶ್ಚ
ಗಣಾಶ್ಚ ಸರ್ವೇ ಶಿವಮರ್ಚಯಂತಿ ॥ ೪೧ ॥

ನಂದೀ ಚ ಭೃಂಗೀ ಚ ಗಣಾದಯಶ್ಚ
ತಂ ಸರ್ವಭೂತಂ ಪ್ರಣಮಂತಿ ದೇವಂ ।
ಜಗದ್ವರಂ ಸರ್ವಜನಸ್ಯ ಕಾರಣಂ
ಹರಂ ಸ್ಮರಾರಾತಿಮಹರ್ನಿಶಂ ತೇ ॥ ೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಸೃಷ್ಟಿಸಂಹರಣಸಂರಂಭವರ್ಣನಂ" ನಾಮ ಪಂಚದಶೋಽಧ್ಯಾಯಃ

---

೪೦. ಇಂತು ಮಹಾಮಹಿಮನೂ, ಜಗದೀಶ್ವರನೂ, ಅದ್ವಿತೀಯನೂ ಆದ ಪರಮೇಶ್ವರನು ಸ್ವರ್ಗಲೋಕವನ್ನೂ ನಾಶಗೊಳಿಸುವ ಮನಸ್ಸುಳ್ಳವನಾಗಿ ವಿಕಾರವಾದ ಅಟ್ಟಹಾಸವನ್ನು ಮಾಡುತ್ತ ಅದನ್ನೂ ಕ್ಷೋಭೆಗೊಳಿಸಿ ತನ್ನಲ್ಲಿ ಅಡಗಿಸಿಕೊಂಡನು.

೪೧. ಲೋಕೇಶ್ವರನೂ, ಅನಾದಿಪುರುಷನೂ, ಸರ್ವೋತ್ತಮನೂ, ಲೋಕಸಂಹಾರಕಾರ್ಯದಲ್ಲಿ ಪ್ರವೃತ್ತನಾದವನೂ ಆದ ಮಹೇಶ್ವರನನ್ನು ಕಂಡು ಕಾಳರಾತ್ರಿಯೂ, ಮಾತೃಗಣಗಳೂ, ವಿನಾಯಕರೂ ಪೂಜಿಸುತ್ತಿದ್ದರು.

೪೨. ಸರ್ವಾಕಾರಗಳನ್ನು ತಾಳುವವನೂ, ಲೋಕೋತ್ತಮನೂ, ಸಕಲ ಭೂತಗಳ ಸೃಷ್ಟಿಗೆ ಕಾರಣನೂ, ಸಂಹಾರಕನೂ, ಮನ್ಮಥವೈರಿಯೂ ಆದ ಆತನನ್ನು ಅಹೋರಾತ್ರಿಗಳಲ್ಲಿಯೂ, ನಂದಿಯೂ, ಭೃಂಗಿಯೂ, ಇತರ ಮಾಹೇಶ್ವರಗಣಗಳೂ ನಮಸ್ಕರಿಸುತ್ತಿದ್ದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಸೃಷ್ಟಿಸಂಹಾರಸಂರಂಭವರ್ಣನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಬ್ರಹ್ಮಕೃತಶಿವಸ್ತುತಿರ್ನಾಮ

ಶ್ರೀ ಮಾರ್ಕಂಡೇಯ ಉವಾಚ:—

ಸ ಮಾತೃಭಿರ್ಭೂತಗಣೈಶ್ಚ ಘೋರೈ
ರ್ವೃತಃ ಸಮಂತಾತ್ಸ ನನರ್ತ ಶೂಲೀ ।
ಗಜೇಂದ್ರ ಚರ್ಮಾವರಣೋ ವಸಾನಃ
ಸಂಹರ್ತುಕಾಮಶ್ಚ ಜಗತ್ಸಮಸ್ತಂ ॥ ೧ ॥

ಮಹೇಶ್ವರಃ ಸರ್ವಸುರೇಶ್ವರಾಣಾಂ
ಮಂತ್ರೈರನೇಕೈರವಬದ್ಧಮಾಲೀ ।
ಮೇದೋವಸಾರಕ್ತ ವಿಚರ್ಚಿತಾಂಗ
ಸ್ತ್ರೈಲೋಕ್ಯದಾಹೇ ಪ್ರಣನರ್ತ ಶಂಭುಃ ॥ ೨ ॥

ಸ ಕಾಲರಾತ್ರ್ಯಾ ಸಹಿತೋ ಮಹಾತ್ಮಾ
ಕಾಲೇ ತ್ರಿಲೋಕೀಂ ಸಕಲಾಂ ಜಹಾರ ।
ಸಂವರ್ತಕಾಖ್ಯಃ ಸಮಹಾಸುಭಾವಃ
ಶಂಭುರ್ಮಹಾತ್ಮಾ ಜಗತೋ ವರಿಷ್ಠಃ ॥ ೩ ॥

---

### ಕನ್ನಡದ ಅನುವಾದ

#### ಬ್ರಹ್ಮಕೃತಶಿವಸ್ತುತಿವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಸಮಸ್ತ ಜಗತ್ತನ್ನೂ ನಾಶಗೊಳಿಸುವ ಇಚ್ಛೆಯುಳ್ಳ, ಆ ತ್ರಿಶೂಲಿಯು ಗಜಚರ್ಮವನ್ನುಟ್ಟು ಸುತ್ತಲೂ ನೆರದ ಮಾತೃಗಣಗಳೊಡನೆಯೂ ಭೂತಗಣಗಳೊಡನೆಯೂ ತಾಂಡವನಾಟ್ಯವನ್ನು ಮಾಡಿದನು.

೨. ಸಮಸ್ತ ದೇವತಾಶ್ರೇಷ್ಠರ ಅಸಂಖ್ಯಾತ ಮಂತ್ರಗಳ ಮಾಲೆಗಳಿಂದ ಅಲಂಕೃತನಾಗಿ ಅವರ ಮೇದಸ್ಸು, ವಸಾ, ರಕ್ತಗಳಿಂದ ಲೇಪಿತವಾದ ದೇಹವುಳ್ಳ ಪರಮೇಶ್ವರನು ಪ್ರಳಯಕಾಲದಲ್ಲಿ ನರ್ತಿಸಿದನು.

೩. ಮಹಾತ್ಮನೂ, ಸ್ವಯಂಭುವೂ, ಲೋಕಕ್ಕಿಂತಲೂ ಅತೀತನೂ ಆಗಿ ಸಂವರ್ತಕನೆಂಬ ಹೆಸರಿನಿಂದ ಕಾಳರಾತ್ರಿಯೊಡನೆ ಕೂಡಿಕೊಂಡು ಪ್ರಳಯಕಾಲದೊದಗಲು ಸಕಲ ಬ್ರಹ್ಮಾಂಡವನ್ನೂ ಉಪಸಂಹರಿಸಿದನು.

ಸವಿಸ್ಫುಲಿಂಗೋತ್ಕರಧೂಮಮಿಶ್ರಂ
ಮಹೋಲ್ಕವಜ್ರಾಶನಿವಾತತುಲ್ಯಂ ।
ತತೋಽಟ್ಟಹಾಸಂ ಪ್ರಮುಮೋಚ ಘೋರಂ
ವಿವೃತ್ಯ ವಕ್ತ್ರಂ ವಡವಾಮುಖಾಭಂ ॥ ೪ ॥
ಸಹಸ್ರವಜ್ರಾಶನಿಸನ್ನಿಭೇನ
ತೇನಾಽಟ್ಟಹಾಸೇನ ಹರೋದ್ಗತೇನ ।
ಆಪೂರಿತಾಸ್ತತ್ರ ದಿಶೋ ದಶೈವ
ಸಂಕ್ಷೋಭಿತಾಃ ಸರ್ವಮಹಾರ್ಣವಾಶ್ಚ ॥ ೫ ॥
ಸ ಬ್ರಹ್ಮಲೋಕಂ ಪ್ರಜಗಾಮ ಶಬ್ದೋ
ಬ್ರಹ್ಮಾಂಡಭಾಂಡಂ ಪ್ರಚಚಾಲ ಸರ್ವಂ ।
ಕಿಮೇತದಿತ್ಯಾಕುಲಚೇತಸಾಸ್ತೇ
ವಿತ್ರಸ್ತರೂಪಾ ಋಷಯೋ ಬಭೂವುಃ ॥ ೬ ॥
ಪ್ರಣಮ್ಯ ಸರ್ವೇ ಸಹಸೈವ ಭೀತಾ
ಬ್ರಹ್ಮಾಣಮೂಚುಃ ಪರಮೇಶ್ವರೇಶಂ ।
ಭೀತಾಶ್ಚ ಸರ್ವೇ ಋಷಯಸ್ತತಸ್ತೇ
ಸುರಾಸುರೈಶ್ಚೈವ ಮಹೋರಗೈಶ್ಚ ॥ ೭ ॥
ವಿದ್ಯುತ್ಪ್ರಭಾಭಾಸುರಭೀಷಣಾಂಗಃ
ಕ ಏಷ ಚಿಕ್ರೀಡತಿ ಭೂತಲಸ್ಥಃ ।
ಕಾಲಾನಲಂ ಗಾತ್ರಮಿದಂ ದಧಾನೋ
ಯಸ್ಯಾಟ್ಟಹಾಸೇನ ಜಗದ್ವಿಮೂಢಂ ॥ ೮ ॥

---

೪. ಬಡಬಾಮುಖವನ್ನು ಹೋಲುವ ಬಾಯನ್ನು ತೆರೆದು ಕಿಡಿಹೊಗೆಗಳಿಂದ ಕೂಡಿದುದೂ, ದೊಡ್ಡ ಧೂಮಕೇತುವನ್ನೂ, ಸಿಡಿಲನ್ನೂ ಹೋಲುವುದೂ, ಬಿರುಗಾಳಿಗೆ ಸಮಾನವೂ ಆದ ಅಟ್ಟಹಾಸವನ್ನು ಮಾಡಿದನು.

೫. ಮಹಾದೇವನು ಮಾಡಿದ ಸಾವಿರ ಸಿಡಿಲಿನಹೊಡೆತಕ್ಕೆ ಸರಿಯಾದ ಆ ಅಟ್ಟಹಾಸದಿಂದ ಹತ್ತು ದಿಕ್ಕುಗಳೂ ತುಂಬಿ ಏಳು ಮಹಾಸಮುದ್ರಗಳೂ ಕ್ಷೋಭಗೊಂಡುವು.

೬. ಆ ಮಹಾಧ್ವನಿಯು ಬ್ರಹ್ಮಲೋಕವನ್ನೂ ಹೊಕ್ಕು ಬ್ರಹ್ಮಾಂಡದ ಕಪಾಲವನ್ನೂ ನಡುಗಿಸಲು ಇದೇನೆಂದು ಮಹರ್ಷಿಗಳು ವ್ಯಾಕುಲಿತಮಾನಸರಾಗಿ ಭಯದಿಂದ ನಡುಗುತ್ತಿದ್ದರು.

೭. ಎಲ್ಲರೂ ದೇವದಾನವ ಮಹಾನಾಗರಿಂದೊಡಗೂಡಿ ಭಯಗೊಂಡವರಾಗಿ ಲೋಕೇಶ್ವರನೆನಿಸಿದ ಬ್ರಹ್ಮದೇವನಿಗೆ ಹೇಳಿಕೊಂಡರು.

೮. ಮಿಂಚಿನ ಪ್ರಭೆಯಂತೆಯೂ, ಪ್ರಳಯಾಗ್ನಿಯಂತೆಯೂ ಜ್ವಲಿಸು

ವಿತ್ರಸ್ತರೂಪಂ ಪ್ರಬಭೌ ಕ್ಷಣೇನ
ಸಂಹರ್ತುಮಿಚ್ಛೇತ್ಕಿಮಯಂ ತ್ರಿಲೋಕೀಂ ।
ಸಾರ್ಧಂ ತ್ವಯಾ ಸಪ್ತಭಿರರ್ಣವೈಶ್ಚ
ಜನಸ್ತಪಃ ಸತ್ಯಮಭಿಪ್ರಯಾತಿ ॥ ೯ ॥
ಸಂಹರ್ತುಕಾಮೋಹಿ ಕ ಏಷ ದೇವ
ಏತತ್ಸಮಸ್ತಂ ಕಥಯಾಽಪ್ರಮೇಯ ।
ನ ದೃಷ್ಟಮೇತದ್ವಿಷಮಂ ಕದಾಽಪಿ
ಜಾನಾಸಿ ತತ್ತ್ವಂ ಪರಮೋ ಮತೋ ನಃ ॥ ೧೦ ॥
ನಿಶಮ್ಯ ತದ್ವಾಕ್ಯಮಥಾಬಭಾಷೇ ।
ಬ್ರಹ್ಮಾ ಸಮಾಶ್ವಾಸ್ಯ ಸುರಾದಿಸಂಘಾನ್ ॥ ೧೧ ॥

ಬ್ರಹ್ಮೋವಾಚ :—

ಸ ಏಷ ಕಾಲಸ್ತ್ರಿದಿವಂ ತ್ವಶೇಷಂ
ಸಂಹರ್ತುಕಾಮೋ ಜಗದಕ್ಷಯಾತ್ಮಾ ।
ಪೂರ್ಣೇ ಚ ಶೇತೇ ಪರಿವತ್ಸರಾಣಾಂ
ಭವಿಷ್ಯತೀಶಾನವಿಭುರ್ನ ಚಿತ್ರಂ ॥ ೧೨ ॥

---

ತ್ತಿರುವ ದೇಹವನ್ನು ತಾಳಿ ತನ್ನ ಅಟ್ಟಹಾಸದಿಂದ ಬ್ರಹ್ಮಾಂಡವೆಲ್ಲವನ್ನೂ ನಿಶ್ಚೇಷ್ಟ ಗೊಳಿಸುತ್ತ ಭೂಮಿಯಲ್ಲಿ ತಾಂಡವವನ್ನು ಮಾಡುತ್ತಿರುವ ಈತನು ಯಾರು?

೯. ಕ್ಷಣಮಾತ್ರದಲ್ಲಿ ಸಕಲವೂ ಭಯಸಂಭ್ರಾಂತವಾಯಿತು. ಈತನು ಮೂರು ಲೋಕಗಳನ್ನೂ ಸಂಹಾರಮಾಡಲೆಳಸುವನೇ? ನಿನ್ನನ್ನೂ ಸಪ್ತಸಮುದ್ರ ಗಳನ್ನೂ ಕೊನೆಗಾಣಿಸಲೆಳಸಿ ಈತನು ಜನಲೋಕ, ತಪೋಲೋಕ, ಸತ್ಯಲೋಕ ಗಳಿಗೂ ಹೋಗುತ್ತಿರುವನು.

೧೦. ಅಪ್ರಮೇಯನಾದ ಓ ಬ್ರಹ್ಮದೇವನೆ! ಲೋಕಸಂಹಾರಕಾರಣನಾದ ಈತನು ಯಾರು? ಇದೆಲ್ಲವನ್ನೂ ನಮಗೆ ಹೇಳು. ಇಂತಹ ವಿಷಮವನ್ನು ನಾವೆಂದೂ ಕಂಡುದಿಲ್ಲ. ಸರ್ವೋತ್ತಮನಾದ ನೀನೇ ಇದರ ಸರ್ವಸ್ವವನ್ನೂ ತಿಳಿದಿರುವೆಯೆಂದು ನಮ್ಮ ನಂಬುಗೆಯಾಗಿರುವುದು.''

೧೧. ದೇವಾದಿಸಮೂಹಗಳ ಈ ಮಾತುಗಳನ್ನು ಕೇಳಿ ಚತುರ್ಮುಖನು ಅವರನ್ನು ಸಮಾಧಾನಗೊಳಿಸಿ ಇಂತೆಂದು ನುಡಿದನು.

೧೨. ಬ್ರಹ್ಮನು ಹೇಳುತ್ತಾನೆ:—'' ಈತನೇ ಜಗತ್ತಿನ ಅಂತರಾತ್ಮನೂ, ಅವಿನಾಶಿಯೂ ಆದ ಕಾಲನು. ಈಗ ಬ್ರಹ್ಮಾಂಡವನ್ನು ಸಂಹರಿಸಲಪೇಕ್ಷಿ ಸಿರುವನು. ತನ್ನ ಕಾರ್ಯವು ಮುಗಿಯಲು ಅನೇಕ ವರ್ಷಗಳು ನಿದ್ರಿಸುವನು. ಲೋಕೇಶ್ವರನೂ, ಸರ್ವವ್ಯಾಪಿಯೂ ಆದ ಈತನಿಗೆ ಇದು ವಿಚಿತ್ರವಲ್ಲ.

ಸಂವತ್ಸರೋಽಯಂ ಪರಿವತ್ಸರಶ್ಚ
ಉದ್ವತ್ಸರೋ ವತ್ಸರ ಏಷ ದೇವಃ ।
ದೃಷ್ಟೋಽಪ್ಯದೃಷ್ಟಃ ಪ್ರಹುತಃ ಪ್ರಕಾಶೀ
ಸ್ಥೂಲಶ್ಚ ಸೂಕ್ಷ್ಮಃ ಪರಮಾಣುರೇಷಃ ॥ ೧೩ ॥
ನಾಽತಃ ಪರಂ ಕಿಂಚಿದಿಹಾಽಸ್ತಿ ಲೋಕೇ
ಪರಾಪರೋಽಯಂ ಪ್ರಭುರಾತ್ಮವಾದೀ ।
ತುಷ್ಯೇತ ಮೇ ಕಾಲಸಮಾನರೂಪ
ಇತ್ಯೇವಮುಕ್ತ್ವಾ ಭಗವಾನ್ ಸುರೇಶಃ ॥ ೧೪ ॥
ಸನತ್ಕುಮಾರಪ್ರಮುಖೈಃ ಸಮೇತಃ ।
ಸಂತೋಷಯಾಮಾಸ ತತೋ ಯತಾತ್ಮಾ ॥ ೧೫ ॥

ಬ್ರಹ್ಮೋವಾಚ :—

ನಮೋಽಸ್ತು ಸರ್ವಾಯ ಸುಶಾಂತಮೂರ್ತಯೇ
ಹ್ಯಘೋರರೂಪಾಯ ನಮೋ ನಮಸ್ತೇ ।
ಸರ್ವಾತ್ಮನೇ ಸರ್ವ ನಮೋ ನಮಸ್ತೇ
ಮಹಾತ್ಮನೇ ಭೂತಪತೇ ನಮಸ್ತೇ ॥ ೧೬ ॥
ಓಂಕಾರ ಹುಂಕಾರ ಪರಿಷ್ಕೃತಾಯ
ಸ್ವಧಾವಷಟ್ಕಾರ ನಮೋ ನಮಸ್ತೇ ।
ಗುಣತ್ರಯೇಶಾಯ ಮಹೇಶ್ವರಾಯ ತೇ
ತ್ರಯೀಮಯಾಯ ತ್ರಿಗುಣಾತ್ಮನೇ ನಮಃ ॥ ೧೭ ॥

---

೧೩. ಈ ಮಹಾದೇವನೇ ಸಂವತ್ಸರವು, ಪರಿವತ್ಸರವು, ಉದ್ವತ್ಸರವು, ವತ್ಸರವು; ದೃಶ್ಯನೂ, ಅದೃಶ್ಯನೂ ಈತನೇ ಆಗಿರುವನು. ಹೋಮಗಳ ಆರಾಧ್ಯ ದೈವವೂ, ತೇಜೋಮಯನೂ, ಸ್ಥೂಲರೂಪನೂ, ಸೂಕ್ಷ್ಮವಾದ ಪರಮಾಣುವೂ ಈತನೇ.

೧೪–೧೫. ಈತನಿಗಿಂತ ಹೆಚ್ಚಿನ ವಸ್ತುವು ಲೋಕದಲ್ಲಿ ಯಾವುದೂ ಇಲ್ಲ. ಈತನೇ ಪರನೂ, ಅಪರನೂ, ಸರ್ವಸ್ವಾಮಿಯೂ, ಆತ್ಮಶಬ್ದವಾಚ್ಯನೂ ಆಗಿರುವನು. ಕಾಲದಂತೆ ಅನಾದಿರೂಪನಾದ ಮಹಾದೇವನು ನನ್ನಲ್ಲಿ ಸಂತುಷ್ಟನಾಗಲಿ.'' ಇಂತೆಂದು ಹೇಳಿ ದೇವೋತ್ತಮನಾದ ಬ್ರಹ್ಮನು ನಿಯತೇಂದ್ರಿಯನಾಗಿ ಸನತ್ಕುಮಾರನೇ ಮೊದಲಾದ ಮಹರ್ಷಿಗಳೊಡಗೂಡಿ ಆತನನ್ನು ಸಂತೋಷಗೊಳಿಸಲುಪಕ್ರಮಿಸಿದನು.

೧೬. ಬ್ರಹ್ಮನು ಹೇಳುತ್ತಾನೆ:—ಎಲೈ ಮಹೇಶ್ವರನೆ! ಸರ್ವಸ್ವರೂಪನೂ, ಪ್ರಶಾಂತಮೂರ್ತಿಯೂ, ಮಹಾಘೋರನೂ, ಸರ್ವಾತ್ಮಕನೂ, ಮಹಾಮಹಿಮನೂ, ಭೂತಗಣಗಳಿಗೊಡೆಯನೂ ಆದ ನಿನಗೆ ನಮಸ್ಕಾರವು.

೧೭. ಓಂಕಾರ ಹುಂಕಾರಗಳಿಗೆ ವಾಚ್ಯನೂ, ಸ್ವಾಹಾಸ್ವಧಾಕಾರಗಳಿಗೆ

ತ್ವಂ ಶಂಕರಸ್ತ್ವಂ ಹಿ ಮಹೇಶ್ವರೋಽಸಿ
ಪ್ರಧಾನಮಗ್ರ್ಯಂ ತ್ವಮಸಿ ಪ್ರವಿಷ್ಟಃ ।
ತ್ವಂ ವಿಷ್ಣುರೀಶಃ ಪ್ರಪಿತಾಮಹಶ್ಚ
ತ್ವಂ ಸಪ್ತಜಿಹ್ವಸ್ತ್ವಮನಂತಜಿಹ್ವಃ ॥ ೧೮ ॥
ಸ್ರಷ್ಟಾಽಸಿ ಸೃಷ್ಟಿಶ್ಚ ವಿಭೋ ತ್ವಮೇವ
ವಿಶ್ವಸ್ಯ ವೇದ್ಯಂ ಚ ಪರಂ ನಿಧಾನಂ ।
ಆಹುರ್ದ್ವಿಜಾ ವೇದವಿದೋ ವರೇಣ್ಯಂ
ಪರಾತ್ಪರಸ್ತ್ವಂ ಪರತಃ ಪರೋಽಸಿ ॥ ೧೯ ॥
ಸೂಕ್ಷ್ಮಾತಿಸೂಕ್ಷ್ಮಂ ಪ್ರವದಂತಿ ಯಚ್ಚ ।
ವಾಚೋ ನಿವರ್ತಂತಿ ಮನೋ ಯತಶ್ಚ ॥ ೨೦ ॥

ಶ್ರೀ ಮಹಾದೇವ ಉವಾಚ :—

ತ್ವಯಾ ಸ್ತುತೋಽಹಂ ವಿವಿಧೈಶ್ಚ ಮಂತ್ರೈಃ
ಪ್ರಷ್ಣಾಮಿ ಶಾಂತಿಂ ತವ ಪದ್ಮಯೋನೇ ।
ಈಕ್ಷಸ್ವ ಮಾಂ ಲೋಕಮಿಮಂ ಜ್ವಲಂತಂ
ವಕ್ತ್ರೈರನೇಕೈಃ ಪ್ರಸಭಂ ಹರಂತಂ ॥ ೨೧ ॥

---

ಮೂಲನೂ, ತ್ರಿಗುಣಗಳ ನಿಯಾಮಕನೂ, ಮಹೇಶ್ವರನೂ, ವೇದಮಯನೂ, ತ್ರಿಗುಣಾತ್ಮಕನೂ ಆದ ನಿನಗೆ ನಮಸ್ಕಾರವು.

೧೮. ನೀನೇ ಸಕಲರಿಗೂ ಸುಖಪ್ರದಾತನು. ಸಕಲಸ್ವಾಮಿಯು. ಪರವೆನಿಸಿದ ಪ್ರಧಾನವನ್ನೂ ನೀನೇ ಚೇತನಗೊಳಿಸುವೆ. ನೀನೇ ಮಹಾವಿಷ್ಣುವು, ಸರ್ವೇಶ್ವರನು, ಲೋಕಪಿತಾಮಹನು, ಅಗ್ನಿಯೂ, ಅನಂತರಸಾಸ್ವಾದಕನೂ ನೀನೇ ಆಗಿರುವೆ.

೧೯. ಸರ್ವವ್ಯಾಪಿಯೆ! ನೀನೇ ಲೋಕವನ್ನು ಸೃಜಿಸುವವನು. ಸೃಷ್ಟವಾದ ಪ್ರಪಂಚವೂ ನೀನೇ. ಸಕಲರಿಗೂ ಜ್ಞೇಯನಾದವನೂ, ಪರಮಾಶ್ರಯನೂ ಆಗಿರುವೆ. ವೇದವಾದಿಗಳಾದ ಬ್ರಾಹ್ಮಣರು ನಿನ್ನನ್ನೇ ಸರ್ವೋತ್ತಮನೆಂದು ಕರೆಯುವರು. ಪರವೆಂಬ ಪ್ರಕೃತಿಗೂ ನೀನೇ ಪರನಾಗಿರುವೆ.

೨೦. ನಿನ್ನನ್ನೇ ಸೂಕ್ಷ್ಮಪದಾರ್ಥಗಳಿಗಿಂತಲೂ ಸೂಕ್ಷ್ಮನೆಂದೂ ಹೇಳುವರು. ವಾಕ್ಕೂ ಮನಸ್ಸೂ ನಿನ್ನನ್ನು ಹೊಂದಲಾರವೆ ಹಿಂದಿರುಗುತ್ತಿರುವುವು.

೨೧. ಮಹಾದೇವನು ಹೇಳುತ್ತಾನೆ:—ಪದ್ಮಸಂಭವನೆ! ನೀನು ನನ್ನನ್ನು ಅನೇಕ ಮಂತ್ರಗಳಿಂದ ಸ್ತುತಿಸಿರುವೆ. ನಿನಗೆ ಶಾಂತಿಯನ್ನುಂಟುಮಾಡುವೆನು. ಈಗ ಈ ಬ್ರಹ್ಮಾಂಡವೆಲ್ಲವನ್ನೂ ಸುಟ್ಟು ಅನೇಕ ಮುಖಗಳಿಂದ ಇದನ್ನು ಜಾಗ್ರತೆಯಾಗಿ ಉಪಸಂಹರಿಸುತ್ತಿರುವ ನನ್ನನ್ನು ನೋಡು.

ಏವಮುಕ್ತ್ವಾ ಸ ದೇವೇಶೋ ದೇವ್ಯಾ ಸಹ ಜಗತ್ಪತಿಃ ।
ಪಿತಾಮಹಂ ಸಮಾಶ್ವಾಸ್ಯ ತತ್ರೈವಾಂತರಧೀಯತ ॥ ೨೨ ॥
ಇದಂ ಮಹತ್ಪುಣ್ಯತಮಂ ವರಿಷ್ಠಂ
ಸ್ತೋತ್ರಂ ನಿಶಮ್ಯೇಹ ಗತಿಂ ಲಭಂತೇ ।
ಪಾಪೈರನೇಕೈಃ ಪರಿವೇಷ್ಟಿತಾ ಯೇ
ಪ್ರಯಾಂತಿ ರುದ್ರಂ ವಿಮಲೈರ್ವಿಮಾನೈಃ ॥ ೨೩ ॥
ಭಯಂ ಚ ತೇಷಾಂ ನಭವೇತ್ಕದಾಚಿ
ತ್ಪಠಂತಿ ಯೇ ತಾತ ಇದಂ ದ್ವಿಜಾಗ್ರ್ಯಾಃ ।
ಸಂಗ್ರಾಮಚೌರಾಗ್ನಿವನೇ ತಥಾಽಬ್ಧೌ
ತೇಷಾಂ ಶಿವಸ್ತ್ರಾತಿ ನ ಸಂಶಯೋಽತ್ರ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಬ್ರಹ್ಮಕೃತ ಶಿವಸ್ತುತಿವರ್ಣನಂ"ನಾಮ ಷೋಡಶೋಽಧ್ಯಾಯಃ

---

೨೨. ಇಂತೆಂದು ಲೋಕೇಶ್ವರನಾದ ಮಹಾದೇವನು ಉಮೆಯೊಡಗೂಡಿ ಬ್ರಹ್ಮದೇವನಿಗೆ ಸಮಾಧಾನವನ್ನು ಹೇಳಿ ಅಲ್ಲಿಯೇ ಅಂತರ್ಹಿತನಾದನು.

೨೩. ಮಹತ್ತರವೂ, ಪುಣ್ಯತಮವೂ, ಸರ್ವೋತ್ತಮವೂ ಆದ ಈ ಸ್ತೋತ್ರವನ್ನು ಕೇಳಿದವರು ಸದ್ಗತಿಯನ್ನು ಪಡೆಯುವರು. ಅಸಂಖ್ಯಾತ ಪಾತಕಗಳಿಂದ ಕೂಡಿದವರೂ ದೇದೀಪ್ಯಮಾನಗಳಾದ ವಿಮಾನಗಳಲ್ಲಿ ಕುಳಿತು ರುದ್ರಲೋಕವನ್ನು ಸೇರುವರು.

೨೪. ಧರ್ಮರಾಜನೆ! ಯಾವ ಬ್ರಾಹ್ಮಣೋತ್ತಮರು ಈ ಮಹಾಸ್ತೋತ್ರವನ್ನು ಪಠಿಸುವರೊ, ಅವರಿಗೆಂದಿಗೂ ಭಯವು ಸಂಭವಿಸುವುದಿಲ್ಲ. ಯುದ್ಧಭೂಮಿಯಲ್ಲಾಗಲಿ, ಚೋರರ ಮಧ್ಯದಲ್ಲಿಯಾಗಲಿ, ಅಗ್ನಿಯಲ್ಲಾಗಲಿ, ಅರಣ್ಯದಲ್ಲಾಗಲಿ, ಸಮುದ್ರದಲ್ಲಾಗಲಿ ಪರಮಶಿವನು ಅವರನ್ನು ಕಾಪಾಡುವನೆಂಬುದರಲ್ಲಿ ಸಂದೇಹವೇ ಇಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಬ್ರಹ್ಮಕೃತಶಿವಸ್ತುತಿವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಜಗತ್ಸಂಹರಣವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಏವಂ ಸಂಸ್ತೂಯಮಾನಸ್ತು ಬ್ರಹ್ಮಾದ್ಯೈರ್ಮುನಿಪುಂಗವೈಃ ।
ಬ್ರಹ್ಮಲೋಕಗತೈಸ್ತತ್ರ ಸಂಜಹಾರ ಜಗತ್ಪ್ರಭುಃ ॥ ೧ ॥
ಸ ತದ್ಭೀಷಣಂ ಮಹಾರೌದ್ರಂ ದಕ್ಷಿಣಂ ವಕ್ತ್ರಮವ್ಯಯಂ ।
ಮಹಾದಂಷ್ಟ್ರೋತ್ಕಟಾರಾವಂ ಪಾತಾಲತಲಸನ್ನಿಭಂ ॥ ೨ ॥
ವಿದ್ಯುಜ್ಜ್ವಲನಪಿಂಗಾಕ್ಷಂ ಭೈರವಂ ಲೋಮಹರ್ಷಣಂ ।
ಮಹಾಜಿಹ್ವಂ ಮಹಾದಂಷ್ಟ್ರಂ ಮಹಾಸರ್ಪಶಿರೋಧರಂ ॥ ೩ ॥
ಮಹಾಸುರಶಿರೋಮಾಲಂ ಮಹಾಪ್ರಲಯಕಾರಣಂ ।
ಗ್ರಸತ್ಸಮುದ್ರನಿಹಿತವಾತವಾರಿಮಯಂ ಹವಿಃ ॥ ೪ ॥
ವಡವಾಮುಖಸಂಕಾಶಂ ಮಹಾದೇವಸ್ಯ ತನ್ಮುಖಂ ।
ಜಿಹ್ವಾಗ್ರೇಣ ಜಗತ್ಸರ್ವಂ ಲೇಲಿಹಾನಮಪಶ್ಯತ ॥ ೫ ॥

---

### ಕನ್ನಡದ ಅನುವಾದ

#### ಜಗತ್ಸಂಹಾರವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:— ಬ್ರಹ್ಮಲೋಕಸ್ಥಿತರಾಗಿದ್ದ ಚತುರ್ಮುಖಾದಿಗಳು ಇಂತು ಸ್ತೋತ್ರಮಾಡುತ್ತಿರಲು ಆ ಲೋಕನಾಥನು ಜಗತ್ತನ್ನುಪಸಂಹರಿಸಿದನು.

೨. ಆಗ ಆತನ ಅವ್ಯಯವಾದ ದಕ್ಷಿಣಮುಖವು ಭಯಂಕರವೂ, ಕ್ರೂರವೂ, ದೊಡ್ಡ ಕೋರೆದಾಡೆಗಳಿಂದ ಕೂಡಿದುದೂ, ಮಹಾನಾದವನ್ನು ಮಾಡುತ್ತಿರುವುದೂ, ಪಾತಾಲತಲದಂತೆ ದುರ್ಗ್ರಾಹ್ಯವೂ ಆಗಿದ್ದಿತು.

೩. ಮಿಂಚು, ಬೆಂಕಿಗಳಂತೆ ಹಳದಿಯ ಕಣ್ಣುಗಳುಳ್ಳದ್ದಾಗಿ, ಭಯಾನಕವೂ, ರೋಮಾಂಚನವನ್ನುಂಟುಮಾಡುವುದೂ, ದೊಡ್ಡನಾಲಿಗೆ, ಕೋರೆಹಲ್ಲುಗಳಿಂದ ಕೂಡಿದುದಾಗಿ ಮಹಾನಾಗನನ್ನೊಳಗೊಂಡ ಕಂಠವುಳ್ಳುದೂ ಆಗಿ ಕಾಣುತ್ತಿದ್ದಿತು.

೪. ಮಹಾದೈತ್ಯರ ಕಪಾಲಗಳ ಮಾಲೆಯನ್ನು ಧರಿಸಿ, ಸಪ್ತಸಮುದ್ರಗಳಲ್ಲಿರುವ ಮಹಾವಾತಜಲಗಳೆಂಬ ಹವಿರ್ದ್ರವ್ಯವನ್ನೇ ನುಂಗುತ್ತ ಮಹಾಪ್ರಳಯಕ್ಕೆ ಕಾರಣವಾಗಿದ್ದಿತು.

೫. ಮಹಾದೇವನ ಆ ಮುಖವು ಬಡಬಾಗ್ನಿಯ ಮುಖದಂತೆ ಉರಿಯುತ್ತ

ಯೋಜನಾನಾಂ ಸಹಸ್ರಾಣಿ ಸಹಸ್ರಾಣಾಂ ಶತಾನಿ ಚ ।
ದಿಶೋ ದಶ ಮಹಾಘೋರಾ ಮಾಂಸಮೇದೋವಸೋತ್ಕಟಾಃ ॥ ೬ ॥
ತಸ್ಯ ದಂಷ್ಟ್ರಾ ವ್ಯವರ್ಧಂತ ಶತಶೋಽಥ ಸಹಸ್ರಶಃ ।
ಸಾಸುರಾನ್ಸುರಗಂಧರ್ವಾನ್ ಸ ಯಕ್ಷೋರಗರಾಕ್ಷಸಾನ್ ॥ ೭ ॥
ತಸ್ಯ ದಂಷ್ಟ್ರಾಗ್ರಸಂಲಗ್ನಾನ್ ಸ ದದರ್ಶ ಪಿತಾಮಹಃ ।
ದಂತ ಯಂತ್ರಾಂತಸಂವಿಷ್ಟಂ ವಿಚೂರ್ಣಿತಶಿರೋಧರಂ ॥ ೮ ॥
ಜಗತ್ಪಶ್ಯಾಮಿ ರಾಜೇಂದ್ರ ವಿಶಂತಂ ವ್ಯಾದಿತೇ ಮುಖೇ ।
ನಾನಾತರಂಗಭಂಗಾಂಗಾ ಮಹಾಫೇನೌಘಸಂಕುಲಾಃ ।
ಯಥಾ ನದ್ಯೋ ಲಯಂ ಯಾಂತಿ ಸಮುದ್ರಂ ಪ್ರಾಪ್ಯ ಸಸ್ವನಾಃ ॥ ೯ ॥
ತಥಾ ತತಂ ವಿಶ್ವಮಿದಂ ಸಮಸ್ತ
ಮನೇಕಜೀವಾರ್ಣವದುರ್ವಿಗಾಹ್ಯಂ ।
ವಿವೇಶ ರುದ್ರಸ್ಯ ಮುಖಂ ವಿಶಾಲಂ
ಜ್ವಲತ್ತದುಗ್ರಂ ಘನನಾದಘೋರಂ ॥ ೧೦ ॥

---

ನಾಲಿಗೆಯ ಕೊನೆಯಿಂದ ಸಕಲಜಗತ್ತನ್ನೂ ನೆಕ್ಕಿ ನುಂಗುತ್ತಿರುವುದು ಕಂಡು ಬಂದಿತು.

೬. ಹತ್ತು ದಿಕ್ಕುಗಳಿಗೂ ಸಾವಿರ, ನೂರಾರುಸಾವಿರ ಯೋಜನಗಳ ದೂರಕ್ಕೂ ಮಹಾ ಭಯಂಕರಗಳಾದ ಮಾಂಸ, ಮೇದಸ್ಸು, ವಸಾದಿಗಳ ರಾಶಿಗಳೇ ಕಾಣುತ್ತಿದ್ದುವು.

೭. ಆತನ ದಂಷ್ಟ್ರಗಳು ನೂರು, ಸಾವಿರಗಟ್ಟಲೆಯಾಗಿ ಗುಣಿಸಿ ಬೆಳೆದುವು. ಅವುಗಳ ಮಧ್ಯದಲ್ಲಿ ರಾಕ್ಷಸರೂ, ದೇವತೆಗಳೂ, ಗಂಧರ್ವರೂ, ಯಕ್ಷರೂ, ನಾಗರೂ, ದಾನವರೂ ಸಿಕ್ಕಿಕೊಂಡಿರುವುದನ್ನು ಬ್ರಹ್ಮದೇವನು ಕಂಡನು.

೮. ರಾಜೇಂದ್ರನೆ! ಸಮಸ್ತಪ್ರಾಣಿರಾಶಿಯೂ ಆ ದಂತಪಙ್ಕ್ತಿಯನ್ನು ಹೊಗಲು ಆ ಯಂತ್ರವು ಕತ್ತುಗಳನ್ನು ಪುಡಿಮಾಡುತ್ತಿರುವುದನ್ನು ನಾನೂ ಕಂಡೆನು.

೯. ಅನೇಕ ತರಂಗಗಳಿಂದ ಕೂಡಿದವುಗಳೂ, ನೊರೆಗಳ ಸಾಲುಗಳ ದೊಡ್ಡ ರಾಶಿಗಳಿಂದಲೂ ಕೂಡಿ ಮಹಾನದಿಗಳು ಭೋರ್ಗರೆಯುತ್ತ ಸಮುದ್ರ ದಲ್ಲಿ ಲಯವನ್ನು ಹೊಂದುವಂತೆ ಸಕಲವೂ ಲಯಹೊಂದುತ್ತಿರುವುವು.

೧೦. ಅನೇಕ ಜೀವರನ್ನೊಳಗೊಂಡು ತಿಳಿಯಲಸಾಧ್ಯವಾದ ಈ ಸಕಲ ಬ್ರಹ್ಮಾಂಡವೂ ಹಾಗೆಯೇ ವಿಶಾಲವೂ, ಜ್ವಲಿಸುತ್ತಿರುವುದೂ, ಮಹಾನಾದದಿಂದ ಭಯಂಕರವೂ ಆದ ಮಹಾದೇವನ ಆ ಮುಖವನ್ನು ಪ್ರವೇಶಿಸಿತು.

ಜ್ವಾಲಾಸ್ತತಸ್ತಸ್ಯ ಮುಖಾತ್ಸುಘೋರಾಃ
ಸವಿಸ್ಫುಲಿಂಗಾ ಬಹುಲಾಃ ಸಧೂಮಾಃ ।
ಅನೇಕರೂಪಾ ಜ್ವಲನಪ್ರಕಾಶಾಃ
ಪ್ರದೀಪಯಂತೀವ ದಿಶೋಽಖಿಲಾಶ್ಚ ॥ ೧೧ ॥
ತತೋ ರವಿಜ್ವಾಲಸಹಸ್ರಮಾಲಿ
ಬಭೂವ ವಕ್ತ್ರಂ ಚಲಜಿಹ್ವದಂಷ್ಟ್ರಂ ।
ಮಹೇಶ್ವರಸ್ಯಾದ್ಭುತರೂಪಿಣಸ್ತದಾ
ಸ ದ್ವಾದಶಾತ್ಮಾ ಪ್ರಬಭೂವ ಏಕಃ ॥ ೧೨ ॥
ತತಸ್ತೇ ದ್ವಾದಶಾದಿತ್ಯಾ ರುದ್ರವಕ್ತ್ರಾದ್ವಿನಿರ್ಗತಾಃ ।
ಆಶ್ರಿತ್ಯ ದಕ್ಷಿಣಾಮಾಶಾಂ ನಿರ್ದಹಂತೋ ವಸುಂಧರಾಂ ॥ ೧೩ ॥
ಭೌಮಂ ಯಜ್ಜೀವನಂ ಕಿಂಚಿನ್ನಾನಾವೃಕ್ಷತೃಣಾಲಯಂ ।
ಶುಷ್ಕಂ ಪೂರ್ವಮನಾವೃಷ್ಟ್ಯಾ ಸಕಲಾಕುಲಭೂತಲಂ ॥ ೧೪ ॥
ತದ್ದೀಪ್ಯಮಾನಂ ಸಹಸಾ ಸೂರ್ಯೈಸ್ತೈ ರುದ್ರಸಂಭವೈಃ ।
ಧೂಮಾಕುಲಮಭೂತ್ಸರ್ವಂ ಪ್ರಣಷ್ಟಗ್ರಹತಾರಕಂ ॥ ೧೫ ॥
ಜಜ್ವಾಲ ಸಹಸಾ ದೀಪ್ತಂ ಭೂಮಂಡಲಮಶೇಷತಃ ।
ಜ್ವಾಲಾಮಾಲಾಕುಲಂ ಸರ್ವಮಭೂದೇತಚ್ಚರಾಚರಂ ॥ ೧೬ ॥

---

೧೧. ಆತನ ಮುಖದಿಂದ ಘೋರಗಳೂ, ಕಿಡಿಗಳನ್ನುಗುಳುವುವುಗಳೂ, ಹೊಗೆಯಿಂದ ಕೂಡಿದವುಗಳೂ, ಅನೇಕ ರೂಪಗಳೂ, ತೇಜೋರಾಶಿಗಳೂ ಆದ ಜ್ವಾಲೆಗಳು ಹೊರಬಿದ್ದು ಸಕಲ ದಿಕ್ಕುಗಳನ್ನೂ ಬೆಳಗಿಸುತ್ತಿದ್ದುವು.

೧೨–೧೩. ಅದ್ಭುತರೂಪಿಯಾದ ಆ ಮಹಾದೇವನ ಮುಖವು ಎಲ್ಲವನ್ನೂ ನುಂಗುವ ನಾಲಿಗೆಯೂ, ಹಲ್ಲುಗಳೂ ಉಳ್ಳದ್ದಾಗಿ ಸಾವಿರಸೂರ್ಯರ ಕಾಂತಿಯ ಜ್ವಾಲೆಗಳನ್ನು ಹೊರಗೆಡವಿತು. ಆತನೊಬ್ಬನೇ ಹನ್ನೆರಡು ರೂಪಗಳನ್ನು ತಾಳಿದಂತಿದ್ದನು. ಇಂತು ಆ ಪ್ರಳಯ ರುದ್ರನ ಮುಖದಿಂದ ಹೊರಬಿದ್ದ ಹನ್ನೆರಡು ಮಂದಿ ಆದಿತ್ಯರೂ ದಕ್ಷಿಣದಿಕ್ಕಿಗೆ ಪ್ರಯಾಣವಾಡಿ ಭೂಮಿಯನ್ನು ಸುಡಲುಪಕ್ರಮಿಸಿದರು.

೧೪. ಭೂಮಿಯಲ್ಲಿ ಜೀವಿಸುತ್ತಿದ್ದ ಪ್ರತಿಯೊಂದು ಪ್ರಾಣಿಯೂ, ಹಿಂದಿನ ಅನಾವೃಷ್ಟಿಯಿಂದ ಒಣಗಿಹೋಗಿದ್ದ ಬಹುವಿಧಗಳಾದ ವೃಕ್ಷತೃಣಾದಿಗಳೂ ವ್ಯಾಕುಲಿತಗಳಾದುವು.

೧೫–೧೬. ಮಹಾದೇವಸಂಭೂತರಾದ ಸೂರ್ಯರಿಂದ ಬ್ರಹ್ಮಾಂಡವೆಲ್ಲವೂ ಸುಡುತ್ತ ಗ್ರಹನಕ್ಷತ್ರಗಳೂ ಕಾಣದಂತೆ ಎಲ್ಲೆಲ್ಲಿಯೂ ಹೊಗೆಯು ತುಂಬಿಕೊಂಡಿತು. ಭೂಮಂಡಲವೆಲ್ಲವೂ ನಿಶ್ಶೇಷವಾಗಿ ಉರಿದು ಬೆಳಗುತ್ತಿದ್ದಿತು.

ಸಪ್ತದ್ವೀಪಸಮುದ್ರೇಷು ಸರಿತ್ಸು ಚ ಸರಸ್ಸು ಚ ।
ಅಗ್ನಿರತ್ತಿ ಜಗತ್ಸರ್ವಮಾಜ್ಯಾಹುತಿಮಿವಾಽಧ್ವರೇ ॥ ೧೭ ॥
ವಿಶಾಲತೇಜಸಾ ದೀಪ್ತಾ ಮಹಾಜ್ವಾಲಾಸಮಾಕುಲಾಃ ।
ದದಹುರ್ವೈ ಜಗತ್ಸರ್ವಮಾದಿತ್ಯಾ ರುದ್ರಸಂಭವಾಃ ॥ ೧೮ ॥
ಆದಿತ್ಯಾನಾಂ ರಶ್ಮಯಶ್ಚ ಸಂಸ್ಪೃಷ್ಟ್ವಾ ವೈ ಪರಸ್ಪರಂ ।
ಏವಂ ದದಾಹ ಭಗವಾಂಸ್ತ್ರೈಲೋಕ್ಯಂ ಸ ಚರಾಚರಂ ॥ ೧೯ ॥
ಸಪ್ತದ್ವೀಪಪ್ರಮಾಣಸ್ತು ಸೋಽಗ್ನಿರ್ಭೂತ್ವಾ ಮಹೇಶ್ವರಃ ।
ಸಪ್ತದ್ವೀಪಸಮುದ್ರಾಂತಾಂ ನಿರ್ದದಾಹ ವಸುಂಧರಾಂ ॥ ೨೦ ॥
ಸುಮೇರುಮಂದರಾಂತಾಂ ಚ ನಿರ್ದಹುರ್ವಸುಧಾಂ ತದಾ ।
ಭಿತ್ವಾ ತು ಸಪ್ತಪಾತಾಲಂ ನಾಗಲೋಕಂ ತತೋಽದಹತ್ ॥ ೨೧ ॥
ಭೂಮ್ಯಧಃ ಸಪ್ತಪಾತಾಲಾನ್ನಿರ್ದಹಂಸ್ತಾರಕೈಃ ಸಹ ।
ಚಚಾರಾಗ್ನಿಃ ಸಮಂತಾತ್ತು ನಿರ್ದಹನ್ವೈ ಯುಧಿಷ್ಠಿರ ॥ ೨೨ ॥

---

ಸಕಲ ಚರಾಚರಪ್ರಾಣಿಗಳೂ ಜ್ವಾಲೆಗಳ ಪಙ್ಕ್ತಿಗಳಿಂದಾವೃತರಾಗಿ ಸಂಕಟ ಗೊಂಡರು.

೧೭. ಯಜ್ಞದಲ್ಲಿ ಆಜ್ಯಹೋಮವನ್ನು ಜೀರ್ಣಿಸಿಕೊಳ್ಳುವಂತೆ ಆ ಮಹಾಗ್ನಿಯು ಏಳುದ್ವೀಪಗಳ ಸಮುದ್ರಗಳಲ್ಲಿಯೂ, ನದಿಗಳಲ್ಲಿಯೂ, ಸರೋವರಗಳಲ್ಲಿಯೂ ನೀರನ್ನು ಶೋಷಿಸಿತು.

೧೮. ರುದ್ರಾಂಗಸಂಭೂತರೂ, ಕಾಂತಿಯುಕ್ತರೂ, ಮಹಾಜ್ವಾಲೆಗಳಿಂದ ಕೂಡಿದವರೂ ಆದ ಆದಿತ್ಯರು ತಮ್ಮ ಅಪಾರವಾದ ತೇಜಸ್ಸಿನಿಂದ ಸಕಲ ಜಗತ್ತನ್ನೂ ಸುಡುತ್ತಿದ್ದರು.

೧೯. ಆ ದ್ವಾದಶಾದಿತ್ಯರ ಕಿರಣಗಳೂ ಪರಸ್ಪರ ಸಂಘರ್ಷಣವನ್ನು ಹೊಂದಿರಲು ಪರಮೇಶ್ವರನು ಚರಾಚರಾತ್ಮಕವಾದ ತ್ರಿಲೋಕಗಳನ್ನೂ ಸುಟ್ಟು ಹಾಕಿದನು.

೨೦. ಸಪ್ತದ್ವೀಪಗಳ ಪ್ರಮಾಣದ ಬೆಂಕಿಯ ರಾಶಿಯಾಗಿ ಮಹೇಶ್ವರನು ಸಪ್ತದ್ವೀಪಗಳಿಂದ ಕೂಡಿದ ಸಮುದ್ರಪರ್ಯಂತವಾದ ಭೂಮಂಡಲವನ್ನು ಸುಟ್ಟುಹಾಕಿದನು.

೨೧. ಸೂರ್ಯರು ಮೇರುಮಂದರಪರ್ವತಗಳವರೆಗಿನ ಭೂಮಂಡಲವನ್ನು ಸುಟ್ಟುದಲ್ಲದೆ ಸಪ್ತಪಾತಾಳಗಳನ್ನೂ ಭೇದಿಸಿಕೊಂಡುಹೋಗಿ ನಾಗಲೋಕವನ್ನೂ ಭಸ್ಮಗೊಳಿಸಿದರು.

೨೨. ಅಯ್ಯಾ ಯುಧಿಷ್ಠಿರನೆ! ಭೂಮಿಯ ಕೆಳಗಿನ ಏಳು ಪಾತಾಳಗಳನ್ನೂ ನಕ್ಷತ್ರಮಂಡಲವನ್ನೂ ಸುಡುತ್ತ ಮಹಾಗ್ನಿಯು ಎಲ್ಲೆಲ್ಲಿಯೂ ಪ್ರಸರಿಸುತ್ತಿದ್ದಿತು.

ಧಮ್ಯಮಾನ ಇವಾಂಗಾರೈರ್ಲೋಲರಾತ್ರಿರಿವ ಜ್ವಲನ್ ।
ತಥಾ ತತ್ರಾಜ್ಜ್ವಲತ್ಸರ್ವಂ ಸಂವರ್ತಾಗ್ನಿಪ್ರದೀಪಿತಂ ॥ ೨೩ ॥
ನಿರ್ವೃಕ್ಷಾ ನಿಸ್ತೃಣಾ ಭೂಮಿರ್ನಿರ್ನಿರ್ಝರಸರಃ ಸರಿತ್ ।
ವಿಶೀರ್ಣಶೈಲಶೃಂಗೌಘಾ ಕೂರ್ಮಪೃಷ್ಠೋಪಮಾಭವತ್ ॥ ೨೪ ॥
ಜ್ವಾಲಾಮಾಲಾಕುಲಂ ಕೃತ್ವಾ ಜಗತ್ಸರ್ವಂ ಚಿದಾತ್ಮಕಂ ।
ಮಹಾರೂಪಧರೋ ರುದ್ರೋ ವ್ಯತಿಷ್ಠತ ಮಹೇಶ್ವರಃ ॥ ೨೫ ॥
ಸಮಾತೃಗಣಭೂಯಿಷ್ಠಾ ಸಯಕ್ಷೋರಗರಾಕ್ಷಸಾ ।
ತತೋ ದೇವೀ ಮಹಾದೇವಂ ವಿವೇಶ ಹರಿಲೋಚನಾ ॥ ೨೬ ॥
ನಿರ್ವಾಣಂ ಪರಮಾಪನ್ನಾ ಶಾಂತೇವ ಶಿಖಿನಃ ಶಿಖಾ ।
ಜಗತ್ಸರ್ವಂ ಹಿ ನಿರ್ದಗ್ಧಂ ತ್ರಿಭಿರ್ಲೋಕೈಃ ಸಹಾನಘ ॥ ೨೭ ॥
ರುದ್ರಪ್ರಸಾದಾನ್ಮುಕ್ತಾ್ವ ಮಾಂ ನರ್ಮದಾಂ ಚಾಪ್ಯಯೋನಿಜಾಂ ।
ಯುಗಾನಾಮಯುತಂ ದೇವೋ ಮಯಾಚಾದ್ಯ ಬುಭುಕ್ಷಣಾತ್॥ ೨೮ ॥
ಪುರಾಹ್ಯಾರಾಧಿತಃ ಶೂಲೀ ತೇನಾಹಮಜರಾಮರಃ ।
ಅಘಮರ್ಷಣಘೋರಂ ಚ ವಾಮದೇವಂ ಚ ತ್ರ್ಯಂಬಕಂ ॥ ೨೯ ॥

---

೨೩. ಕೆಂಡಗಳ ರಾಶಿಯಲ್ಲಿಟ್ಟು ತಿದಿಯೊತ್ತಿ ಕಾಸಿದ ಕಬ್ಬಿಣದ ಮುದೆಯಂತೆ ಉರಿಯುತ್ತ ಸಮಸ್ತ ಬ್ರಹ್ಮಾಂಡವೂ ಪ್ರಳಯಾಗ್ನಿಯಿಂದ ಪ್ರದೀಪಿತವಾಗಿದ್ದಿತು.

೨೪. ಭೂಮಿಯಲ್ಲಿ ವೃಕ್ಷಗಳಾಗಲಿ, ಹುಲ್ಲುಗಳಾಗಲಿ, ನದಿಗಳಾಗಲಿ, ಸರೋವರಗಳಾಗಲಿ ಕಾಣುತ್ತಿರಲಿಲ್ಲ. ಪರ್ವತಶೃಂಗಗಳೆಲ್ಲವೂ ಒಡೆದುಹೋಗಲು ಭೂಮಿಯು ಆಮೆಯ ಬೆನ್ನನ್ನು ಹೋಲುತ್ತಿದ್ದಿತು.

೨೫. ಭಯಂಕರನಾದ ಆ ಮಹೇಶ್ವರನು ಮಹಾರೂಪವನ್ನು ತಾಳಿ ಚಿದಾತ್ಮಕವಾದ ಜಗತ್ತನ್ನೆಲ್ಲ ಬೆಂಕಿಯ ಉರಿಗೀಡುಮಾಡಿ ನಿಂತನು.

೨೬. ಪಿಂಗಾಕ್ಷಿಯಾದ ಕಾಲರಾತ್ರಿಯು ಮಾತೃಗಣಗಳನ್ನೂ, ಯಕ್ಷರನ್ನೂ, ನಾಗರನ್ನೂ, ರಾಕ್ಷಸರನ್ನೂ ಕೂಡಿಕೊಂಡು ಮಹಾದೇವನಲ್ಲಿ ಅಂತರ್ಹಿತಳಾದಳು.

೨೭. ಪ್ರಶಾಂತವಾದ ಅಗ್ನಿಯ ಜ್ವಾಲೆಯಂತೆ ಆಕೆಯು ಅತ್ಯಂತ ಸೌಮ್ಯಳಾದಳು. ಇಂತು ಮೂರು ಲೋಕಗಳೊಡನೆ ಸಕಲ ಬ್ರಹ್ಮಾಂಡವೂ ಬೆಂದುಹೋಯಿತು.

೨೮–೨೯. ಮಹಾದೇವನ ಅನುಗ್ರಹದಿಂದ ನಾನೂ, ಅಯೋನಿಜಾತೆಯಾದ ನರ್ಮದೆಯೂ ಮಾತ್ರ ಉಳಿದುಕೊಂಡೆವು. ಹಿಂದೆ ನಾನು ಹತ್ತುಸಾವಿರ ವರ್ಷಗಳ ಕಾಲ ಈ ನೀರನ್ನೇ ಸೇವಿಸುತ್ತ ತ್ರಿಶೂಲಿಯನ್ನು ಸೇವಿಸಿದುದರಿಂದ

ಋಷಭಂ ತ್ರಿಸುಪರ್ಣಂ ಚ ದುರ್ಗಾಂ ಸಾವಿತ್ರಮೇವ ಚ ।
ಬೃಹದಾರಣ್ಯಕಂ ಚೈವ ಬೃಹತ್ಸಾಮ ತಥೋತ್ತರಂ ॥ ೩೦ ॥
ರೌದ್ರೀಂ ಪರಮಗಾಯತ್ರೀಂ ಶಿವೋಪನಿಷದಂ ತಥಾ ।
ಯಥಾ ಪ್ರತಿರಥಂ ಸೂಕ್ತಂ ಜಪ್ತ್ವಾ ಮೃತ್ಯುಂಜಯಂ ತಥಾ ॥ ೩೧ ॥
ಸರಿತ್ಸಾಗರಪರ್ಯಂತಾ ವಸುಧಾ ಭಸ್ಮಸಾತ್ಕೃತಾ ।
ವರ್ಜಯಿತ್ವಾ ಮಹಾಭಾಗಾಂ ನರ್ಮದಾಮಮೃತೋಽಪಮಾಂ ॥ ೩೨ ॥
ಮಹೇಂದ್ರೋ ಮಲಯಃ ಸಹ್ಯೋ ಹೇಮಕೂಟೋಽಥ ಮಾಲ್ಯವಾನ್ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ॥ ೩೩ ॥
ದ್ವಾದಶಾದಿತ್ಯನಿರ್ದಗ್ಧಾಃ ಶೈಲಾಃ ಶೀರ್ಣಶಿಲಾಃ ಪೃಥಕ್ ।
ಭಸ್ಮೀಭೂತಾಸ್ತು ದೃಶ್ಯಂತೇ ನ ನಷ್ಟಾ ನರ್ಮದಾ ತದಾ ॥ ೩೪ ॥
ಹಿಮವಾನ್ ಹೇಮಕೂಟಶ್ಚ ನಿಷಧೋ ಗಂಧಮಾದನಃ ।
ಮಾಲ್ಯವಾಂಶ್ಚ ಗಿರಿಶ್ರೇಷ್ಠೋ ನೀಲಃ ಶ್ವೇತೋಽಥ ಶೃಂಗವಾನ್ ॥ ೩೫ ॥
ಏತೇ ಪರ್ವತರಾಜಾನೋ ದೇವಗಂಧರ್ವಸೇವಿತಾಃ ।
ಯುಗಾಂತಾಽಗ್ನಿವಿನಿರ್ದಗ್ಧಾಃ ಸರ್ವೇ ಶೀರ್ಣಮಹಾಶಿಲಾಃ ॥ ೩೬ ॥

---

ನಾನು ಜರಾಮರಣರಹಿತನಾದೆನು. ಆಗ ನಾನು ಅಘಮರ್ಷಣಸೂಕ್ತವನ್ನೂ, ವಾಮದೇವತ್ರ್ಯಂಬಕಸೂಕ್ತಗಳನ್ನೂ ಜಪಿಸಿದೆನು.

೩೦–೩೧. ಹಾಗೆಯೇ ಋಷಭ, ತ್ರಿಸುಪರ್ಣ, ದುರ್ಗಾ, ಸಾವಿತ್ರಿ, ಬೃಹದಾರಣ್ಯಕ, ಬೃಹತ್ಸಾಮ, ಉತ್ತರ, ರೌದ್ರ, ಗಾಯತ್ರಿ, ಶಿವೋಪನಿಷತ್ತುಗಳನ್ನೂ ಅಪ್ರತಿರಥ, ಮೃತ್ಯುಂಜಯಗಳೆಂಬ ಸೂಕ್ತಗಳನ್ನೂ ಜಪಿಸುತ್ತಿದ್ದೆನು.

೩೨. ಅಮೃತಸದೃಶಳಾದ ನರ್ಮದೆಯೊಬ್ಬಳನ್ನುಳಿದು ನದಿ, ಸಮುದ್ರಗಳೊಡನೆ ಸಮಸ್ತ ಭೂಮಂಡಲವೂ ಸುಟ್ಟು ಬೂದಿಯ ರಾಶಿಯಾಯಿತು.

೩೩. ಮಹೇಂದ್ರ, ಮಲಯ, ಸಹ್ಯ, ಹೇಮಕೂಟ, ಮಾಲ್ಯವಂತ, ವಿಂಧ್ಯ, ಪಾರಿಯಾತ್ರಗಳೆಂಬುವುಗಳೇ ಸಪ್ತ ಕುಲಪರ್ವತಗಳೆನಿಸಿರುವುವು.

೩೪. ಈ ಏಳು ಪರ್ವತಗಳೂ ದ್ವಾದಶಸೂರ್ಯರ ತಾಪದಿಂದ ಸುಡಲ್ಪಟ್ಟು ಅವುಗಳ ಶಿಲೆಗಳೆಲ್ಲವೂ ಒಡೆದು ಬೂದಿಯಾದರೂ ನರ್ಮದೆಯು ಮಾತ್ರ ನಷ್ಟವಾಗಲಿಲ್ಲ.

೩೫–೩೬. ಹಿಮಾಲಯ, ಹೇಮಕೂಟ, ನಿಷಧ, ಗಂಧಮಾದನ, ಮಾಲ್ಯವಂತ, ನೀಲ, ಶ್ವೇತ, ಶೃಂಗವಂತ ಮುಂತಾದ ದೇವಗಂಧರ್ವಸೇವಿತಗಳಾದ ಮಹಾ ಪರ್ವತಗಳಲ್ಲಿಯೂ ಬಂಡೆಗಳು ಪುಡಿಪುಡಿಯಾಗಿ ಪ್ರಳಯಕಾಲದ ಅಗ್ನಿಯಿಂದ ಸುಟ್ಟುಹೋದುವು.

**ಏವಂ ಮಯಾ ಪುರಾ ದೃಷ್ಟೋ ಯುಗಾಂತೇ ಸರ್ವಸಂಕ್ಷಯಃ ।**
**ವರ್ಜಯಿತ್ವಾ ಮಹಾಪುಣ್ಯಾಂ ನರ್ಮದಾಂ ನೃಪಸತ್ತಮ ॥ ೩೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಜಗತ್ಸಂಹರಣವರ್ಣನಂ" ನಾಮ ಸಪ್ತದಶೋಽಧ್ಯಾಯಃ**

---

೩೭. ರಾಜೇಂದ್ರನೆ! ಇಂತು ನಾನು ಮಹಾಪುಣ್ಯತಮೆಯಾದ ನರ್ಮದೆಯೊಬ್ಬಳನ್ನುಳಿದು ಪ್ರಳಯದಲ್ಲಿ ಸಕಲವೂ ನಷ್ಟವಾದುದನ್ನು ನೋಡಿದೆನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಜಗತ್ಸಂಹಾರವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

# ಅಥಾಷ್ಟಾದಶೋಽಧ್ಯಾಯಃ

## ನರ್ಮದಾಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನಿರ್ದಗ್ಧೇಽಸ್ಮಿಂಸ್ತತೋ ಲೋಕೇ ಸೂರ್ಯೈರೀಶ್ವರಸಂಭವೈಃ ।
ಸಪ್ತಭಿಶ್ಚಾರ್ಣವೈಃ ಶುಷ್ಕೈರ್ದ್ವೀಪೈಃ ಸಪ್ತಭಿರೇವ ಚ ॥ ೧ ॥

ತತೋ ಮುಖಾತ್ತಸ್ಯ ಘನಾ ಮಹೋಲ್ಬಣಾ
ನಿಶ್ಚೇರುರಿಂದ್ರಾಯುಧತುಲ್ಯರೂಪಾಃ ।
ಘೋರಾಃ ಪಯೋದಾ ಜಗದಂಧಕಾರಂ
ಕುರ್ವಂತ ಈಶಾನವರಪ್ರಯುಕ್ತಾಃ ॥ ೨ ॥

ನೀಲೋತ್ಪಲಾಭಾಃ ಕ್ವಚಿದಂಜನಾಭಾ
ಗೋಕ್ಷೀರ ಕುಂದೇಂದುನಿಭಾಶ್ಚ ಕೇಚಿತ್ ।
ಮಯೂರಚಂದ್ರಾಕೃತಯಸ್ತಥಾಽನ್ಯೇ
ಕೇಚಿದ್ವಿಧೂಮಾಽನಲ ಸಪ್ರಭಾಶ್ಚ ॥ ೩ ॥

ಕೇಚಿನ್ಮಹಾಪರ್ವತಕಲ್ಪರೂಪಾಃ
ಕೇಚಿನ್ಮಹಾಮೀನಕುಲೋಪಮಾಶ್ಚ ।
ಕೇಚಿದ್ಗಜೇಂದ್ರಾಕೃತಯಃ ಸುರೂಪಾಃ
ಕೇಚಿನ್ಮಹಾಕೂಟನಿಭಾಃ ಪಯೋದಾಃ ॥ ೪ ॥

---

### ಕನ್ನಡದ ಅನುವಾದ

#### ನರ್ಮದಾಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಹೀಗೆ, ಈಶ್ವರನಿಂದ ಹುಟ್ಟಿದ ಆದಿತ್ಯರಿಂದ ಸಕಲಲೋಕವೂ ಸುಟ್ಟುಹೋಗಲು, ಏಳು ಸಮುದ್ರಗಳೊಡನೆ ಏಳು ದ್ವೀಪಗಳ ಭೂಮಂಡಲವೂ ಒಣಗಿ ನೀರಸವಾಯಿತು.

೨. ಬಳಿಕ ಮಹಾದೇವನ ಮುಖದಿಂದ ಮಹಾ ಪ್ರಮಾಣದವುಗಳೂ, ಇಂದ್ರನ ವಜ್ರಾಯುಧದಂತೆ ತೋರುವುವುಗಳೂ ಆದ ಮಹಾಮೇಘಗಳು ಘೋರ ವೃಷ್ಟಿಗಳನ್ನು ಕರೆಯುತ್ತ ಮಹೇಶ್ವರನ ಪ್ರಸಾದದಿಂದ ಲೋಕದಲ್ಲಿ ಅಂಧಕಾರ ವನ್ನುಂಟುಮಾಡುತ್ತ ಹೊರಟು ಎಲ್ಲವನ್ನೂ ಆವರಿಸಿದುವು.

೩. ನೀಲೋತ್ಪಲಗಳಂತೆಯೂ, ಅಂಜನದಂತೆಯೂ, ಹಾಲು, ಪೂರ್ಣಿಮಾ ಚಂದ್ರರಂತೆಯೂ, ನವಿಲಿನಂತೆಯೂ, ಹೊಗೆಯಿಲ್ಲದ ಬೆಂಕಿಯಂತೆಯೂ ಆ ಮೇಘಗಳು ನಾನಾ ವಿಧಗಳಾದ ಬಣ್ಣಗಳಿಂದ ಕೂಡಿದ್ದುವು.

೪. ಕೆಲವು ಮೋಡಗಳು ಮಹಾ ಪರ್ವತಗಳನ್ನೂ, ಹಲವು ಮಹಾ ತಿಮಿ

ಚಲತ್ತರಂಗೋರ್ಮಿಸಮಾನರೂಪಾ
ಮಹಾಪುರೋದ್ಯಾನನಿಭಾಶ್ಚ ಕೇಚಿತ್ ।
ಸಗೋಪುರಾಟ್ಟಾಲಕಸನ್ನಿಕಾಶಾಃ
ಸವಿದ್ಯುದುಲ್ಕಾಶನಿಮಂಡಿತಾಂತಾಃ ॥ ೫ ॥

ಸಮಾವೃತಾಂಗಃ ಸ ಬಭೂವ ದೇವಃ
ಸಂವರ್ತಕೋ ನಾಮಗಣಃ ಸ ರೌದ್ರಃ ।
ಪ್ರವರ್ಷಮಾಣೋ ಜಗದಪ್ರಮಾಣ
ಮೇಕಾರ್ಣವಂ ಸರ್ವಮಿದಂ ಚಕಾರ ॥ ೬ ॥

ತತೋ ಮಹಾಮೇಘವಿವರ್ಧಮಾನ
ಮಿಶಾನಮಿಂದ್ರಾಶನಿಭಿರ್ವೃತಾಂಗಂ ।
ದದರ್ಶ ನಾಹಂ ಭಯವಿಹ್ವಲಾಂಗೋ
ಗಂಗಾಜಲೌಘೈಶ್ಚ ಸಮಾವೃತಾಂಗಃ ॥ ೭ ॥

ಗಜಾಃ ಪುನಶ್ಚೈವ ಪುನಃ ಪಿಬಂತೋ
ಜಗತ್ಸಮಂತಾತ್ಪರಿದಹ್ಯಮಾನಂ ।
ಆಪೂರಿತಂ ಚೈವ ಜಗತ್ಸಮಂತಾ
ತ್ಸರ್ವೈಶ್ಚ ತೈರ್ಜಗ್ಮುರದರ್ಶನಂ ಚ ತೇ ॥ ೮ ॥

---

ತಿಮಿಂಗಿಲಗಳನ್ನೂ, ಕೆಲವು ದೊಡ್ಡ ಆನೆಗಳನ್ನೂ, ಕೆಲವು ಪರ್ವತಶಿಖರಗಳನ್ನೂ ಹೋಲುತ್ತಿದ್ದುವು.

೫. ಕೆಲವು ಚಲಿಸುವ ಅಲೆಗಳಿಂದ ಕೂಡಿದ ಸಮುದ್ರವನ್ನು ಹೋಲಿರಲು, ಹಲವು ದೊಡ್ಡ ಪಟ್ಟಣಗಳಂತೆ ಕಾಣುತ್ತಿದ್ದುವು. ಗೋಪುರ, ಉಪ್ಪರಿಗೆಗಳನ್ನೂ ಹೋಲುವ ಕೆಲವು ಮೇಘಗಳು ಮಿಂಚು ಸಿಡಿಲುಗಳೊಡನೆ ಬಂದೆರಗಿದುವು.

೬. ಆಗ ಸಂವರ್ತಕನೆಂಬ ಮೇಘರಾಜನು ಮಹಾರೌದ್ರನಾಗಿ ಎಲ್ಲೆಲ್ಲಿಯೂ ವ್ಯಾಪಿಸಿದ ದೇಹವುಳ್ಳವನಾಗಿ ಮಿತಿಯಿಲ್ಲದಂತೆ ಮಳೆಯನ್ನು ಕರೆಯುತ್ತ ಸಮಸ್ತ ಪ್ರಪಂಚವೂ ಒಂದೇ ಸಮುದ್ರವಾಗಿ ಕಾಣುವಂತೆ ಮಾಡಿದನು.

೭. ಮಹಾಮೇಘದಿಂದಾವೃತನೂ, ಇಂದ್ರನ ವಜ್ರಗಳಿಗೆ ಸಮಗಳಾದ ಸಿಡಿಲುಗಳ ಮಧ್ಯದಲ್ಲಿದ್ದವನೂ ಆದ ಮಹೇಶ್ವರನನ್ನು ಕಾಣಲಾರದೆ ನಾನು ಭಯಸಂಭ್ರಾಂತನೂ, ಗಂಗಾಜಲರಾಶಿಗಳಲ್ಲಿ ಮುಳುಗಿದವನೂ ಆಗಿದ್ದೆನು.

೮. ಆ ನೀರನ್ನು ದಿಗ್ಗಜಗಳು ಮತ್ತೆ ಮತ್ತೆ ಕುಡಿಯುತ್ತಿದ್ದುವು. ಬಿಡುವಿಲ್ಲದೆ ಸುಡಲ್ಪಟ್ಟ ಈ ಭೂಮಂಡಲವೆಲ್ಲವೂ ಅವುಗಳಿಂದಾವೃತವಾಗಿ ಕಾಣಿಸಿ ಪುನಃ ಕ್ಷಣಮಾತ್ರದಲ್ಲಿ ಕಾಣದಂತಾಯಿತು.

ಮಹಾರ್ಣವಾಃ ಸಪ್ತಸರಾಂಸಿ ದ್ವೀಪಾ
ನದ್ಯೋಽಥ ಸರ್ವಾ ಅಥ ಭೂರ್ಭುವಶ್ಚ ।
ಅಪೂರ್ಯಮಾಣಾಃ ಸಲಿಲೌಘಜಾಲೈ
ರೇಕಾರ್ಣವಂ ಸರ್ವಮಿದಂ ಬಭೂವ ॥ ೯ ॥
ನ ದೃಶ್ಯತೇ ಕಿಂಚಿದಹೋ ಚರಾಚರೇ
ನಿರಗ್ನಿ ಚಂದ್ರಾರ್ಕಮಯೋಽಪಿ ಲೋಕೇ ।
ಪ್ರಣಷ್ಟನಕ್ಷತ್ರತಮೋಂಧಕಾರೇ
ಪ್ರಶಾಂತವಾತಾಸ್ತಮಿತೈಕನೀಡೇ ॥ ೧೦ ॥
ಮಹಾಜಲೌಘೇಽಸ್ಯ ವಿಶುದ್ಧಸತ್ವಾ
ಸ್ತುತಿರ್ಮಯಾ ಭೂಪ ಕೃತಾ ತದಾನೀಂ ।
ತತೋಽಹಮಿತ್ಯೇವ ವಿಚಿಂತಯಾನಃ
ಶರಣ್ಯಮೇಕಂ ಕ್ವನು ಯಾಮಿ ಶಾಂತಂ ॥ ೧೧ ॥
ಸ್ಮರಾಮಿ ದೇವಂ ಹೃದಿ ಚಿಂತಯಿತ್ವಾ
ಪ್ರಭುಂ ಶರಣ್ಯಂ ಜಲಸನ್ನಿವಿಷ್ಟಃ ।
ನಮಾಮಿ ದೇವಂ ಶರಣಂ ಪ್ರಪದ್ಯೇ
ಧ್ಯಾನಂ ಚ ತಸ್ಯೇತಿ ಕೃತಂ ಮಯಾ ಚ ॥ ೧೨ ॥

---

೯. ಸಂವರ್ತಕ ಮೇಘದ ಜಲರಾಶಿಗಳಿಂದ ಸಮಸ್ತ ಸಮುದ್ರಗಳೂ, ಸರೋವರಗಳೂ, ದ್ವೀಪಗಳೂ, ನದಿಗಳೂ, ಭೂರ್ಭುವಾದಿ ಲೋಕಗಳೂ ಪೂರಿತಗಳಾಗಿ ಸಕಲವೂ ಒಂದೇ ಸಮುದ್ರವಾಯಿತು.

೧೦. ಚರಾಚರಗಳಲ್ಲಿ ಒಂದು ಪ್ರಾಣಿಯೂ ಕಾಣಲಿಲ್ಲ. ಲೋಕದಲ್ಲಿ ಅಗ್ನಿಯಾಗಲಿ, ಚಂದ್ರನಾಗಲಿ, ಸೂರ್ಯನಾಗಲಿ ಇರಲಿಲ್ಲ. ನಕ್ಷತ್ರಗಣಗಳೂ ನಷ್ಟವಾದ ಆ ಗಾಢಾಂಧಕಾರದಲ್ಲಿ ಗಾಳಿಯೂ ಶಾಂತವಾಗಿರಲು ಎಲ್ಲವೂ ಒಂದೇ ಆಶ್ರಯದಲ್ಲಿ ಲಯಿಸಿದ್ದಿತು.

೧೧. ಭೂಪಾಲಕನೆ! ಇಂತಹ ಮಹಾಜಲಸಮೂಹಮಧ್ಯದಲ್ಲಿ ಸಿಲುಕಿ ನಾನು ಶುದ್ಧಸತ್ವಗುಣವುಳ್ಳವನಾಗಿ ಈಶ್ವರನ ಸ್ತೋತ್ರವನ್ನು ಮಾಡಿದೆನು. ಬಳಿಕ ನಾನು ಮನಸ್ಸಿನಲ್ಲಿಯೇ "ಯಾವ ಪ್ರಶಾಂತವಾದ ಪ್ರದೇಶವನ್ನು ಆಶ್ರಯಿಸಲಿ?" ಎಂದು ಯೋಚಿಸಿದೆನು.

೧೨. ಬಹಳಕಾಲ ಆಲೋಚಿಸಿ ಜಲಮಧ್ಯದಲ್ಲಿ ನಿಂತೇ "ಮಹಾದೇವನೂ, ಲೋಕೇಶ್ವರನೂ, ಶರಣಾಗತವತ್ಸಲನೂ ಆದ ಆ ದೇವನಿಗೇ ನಮಸ್ಕರಿಸಿ ಶರಣಾಗತನಾಗಿ, ಆತನನ್ನೇ ಧ್ಯಾನಿಸುವೆನು" ಎಂದು ಮನಸ್ಸಿನಲ್ಲಿ ನಿರ್ಧರಿಸಿದೆನು.

ಧ್ಯಾತ್ವಾ ತತೋಽಹಂ ಸಲಿಲಂ ತತಾರ
ತಸ್ಯ ಪ್ರಸಾದಾದವಿಮೂಢಚೇತಾಃ ।
ಗ್ಲಾನಿಃ ಶ್ರಮುಶ್ಚೈವ ಮಮ ಪ್ರಣಷ್ಟೌ
ದೇವ್ಯಾಃ ಪ್ರಸಾದೇನ ನರೇಂದ್ರಪುತ್ರ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ನರ್ಮದಾಮಾಹಾತ್ಮ್ಯವರ್ಣನಂ" ನಾಮಾಷ್ಟಾದಶೋಽಧ್ಯಾಯಃ

---

೧೩. ಆತನನ್ನು ಧ್ಯಾನಿಸಿದುದರಿಂದ ಆತನು ಪ್ರಸನ್ನನಾಗಲು ನಾನೂ ಮೌಢ್ಯವನ್ನು ಕಳೆದುಕೊಂಡು ನೀರಿನಲ್ಲಿ ತೇಲುತ್ತಿದ್ದೆನು. ಮಹಾರಾಜನೆ! ಅಲ್ಲಿದ್ದ ನರ್ಮದಾದೇವಿಯ ಅನುಗ್ರಹದಿಂದ ನನ್ನ ಮನಸ್ಸಿನ ಕಿಂಕೃತಿಯೂ, ದೇಹದ ಆಯಾಸವೂ ನಷ್ಟವಾದುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನರ್ಮದಾಮಾಹಾತ್ಮ್ಯವರ್ಣನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕೋನಪಂಚಾಶೋಽಧ್ಯಾಯಃ

### ನಾರಾಹಕಲ್ಪವೃತ್ತಾಂತವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತಸ್ತ್ವೇಕಾರ್ಣವೇ ತಸ್ಮಿನ್ಮಮೂರ್ಷುರಹಮಾತುರಃ ।
ಕಾಕೊಂಛ್ವಾಸಸ್ತರಂಸ್ತೋಯಂ ಬಾಹುಭ್ಯಾಂ ನೃಪಸತ್ತಮ ॥ ೧ ॥
ಶೃಣೋಮ್ಯರ್ಣವಮಧ್ಯಸ್ಥೋ ನಿಃಶಬ್ದಸ್ತಿಮಿತೇ ತದಾ ।
ಅಂಭೋರವಮನೌಪಮ್ಯಂ ದಿಶೋ ದಶ ಪಿನಾದಿನಂ ॥ ೨ ॥
ಹಂಸಕುಂದೇಂದುಸಂಕಾಶಾಂ ಹಾರಗೋಕ್ಷೀರಪಾಂಡುರಾಂ ।
ನಾನಾರತ್ನವಿಚಿತ್ರಾಂಗೀಂ ಸ್ವರ್ಣಶೃಂಗಾಂ ಮನೋರಮಾಂ ॥ ೩ ॥
ಖುರೈಃ ಪ್ರವಾಲಕಮಯೈರ್ಲಾಂಗೂಲಧ್ವಜಶೋಭಿತಾಂ ।
ಪ್ರಲಂಬಘೋಣಾಂ ನರ್ದಂತೀಂ ಖುರೈರರ್ಣವಗಾಹಿನೀಂ ॥ ೪ ॥
ಗಾಂ ದದರ್ಶಾಽಹಮುದ್ವಿಗ್ನೋ ಮಾಮೇವಾಽಭಿಮುಖೀಂ ಸ್ಥಿತಾಂ ।
ಕಿಂಕಿಣೀಜಾಲಮುಕ್ತಾಭಿಃ ಸ್ವರ್ಣಘಂಟಾಸಮಾವೃತಾಂ ॥ ೫ ॥

---

### ಕನ್ನಡದ ಅನುವಾದ

#### ನಾರಾಹಕಲ್ಪವೃತ್ತಾಂತವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಇಂತಹ ಮಹಾ ಸಮುದ್ರದಲ್ಲಿ ಮುಳುಗಿ ಸಾಯುವ ಪ್ರಸಂಗವುಂಟಾಗಲು ನಾನು ಆತುರತೆಯಿಂದ ನಿಟ್ಟುಸಿರುಗಳನ್ನು ಬಿಡುತ್ತ ಬಾಹುಗಳಿಂದಲೆ ಈಜಿಕೊಂಡು ಹೋಗುತ್ತಿದ್ದೆನು.

೨. ಆಗ ಸಮುದ್ರಮಧ್ಯದಲ್ಲಿ ಬೇರೊಂದು ಶಬ್ದವು ಕೇಳಿಸದಂತೆ ಹತ್ತು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಿರುವ ಅಸದೃಶವಾದ ನೀರಿನ ಶಬ್ದವನ್ನು ಕೇಳಿದೆನು.

೩–೫. ಹಂಸ, ಪೂರ್ಣಿಮಾಚಂದ್ರರನ್ನು ಹೋಲುತ್ತ, ಉತ್ತಮವಾದ ಗೋಕ್ಷೀರದಂತೆ ಶುಭ್ರವಾಗಿ, ಬಹುವಿಧಗಳಾದ ರತ್ನಗಳಿಂದಲಂಕೃತವಾಗಿ, ಚಿನ್ನದ ಕೊಂಬು ಕಳಶಗಳಿಂದ ಮನೋಹರವಾಗಿ, ಹವಳಗಳ ಬಣ್ಣದ ಗೊರಸುಗಳಿಂದಲೂ, ಬಾಲವೆಂಬ ಧ್ವಜದಿಂದಲೂ ಶೋಭಿಸುತ್ತ, ಉದ್ದವಾದ ಮುಖದಿಂದ ಗರ್ಜಿಸುತ್ತ, ಗೊರಸುಗಳಿಂದಲೇ ಸಮುದ್ರವನ್ನು ದಾಟುತ್ತ, ಕಿರುಗೆಜ್ಜೆಗಳ ಹಾರಗಳಿಂದಲೂ, ಚಿನ್ನದ ಕಿರುಗಂಟೆಗಳಿಂದಲೂ ಅಲಂಕೃತವಾಗಿ ನನ್ನ ಇದಿರಿನಲ್ಲಿಯೇ ನಿಂತಿದ್ದ ಒಂದು ಗೋವನ್ನು ಕಂಡು ಆಶ್ಚರ್ಯಗೊಂಡೆನು.

ತಸ್ಯಾಶ್ಚರಣವಿಕ್ಷೇಪೈಃ ಸರ್ವಮೇಕಾರ್ಣವಂ ಜಲಂ ।
ವಿಕ್ಷಿಪ್ತಫೇನಪುಂಜೌಘೈರ್ನೃತ್ಯಂತೀವ ಸಮಂತತಃ ॥ ೬ ॥
ರರಾಸ ಸಲಿಲೋತ್ಕ್ಷೇಪೈಃ ಕ್ಷೋಭಯಂತೀ ಮಹಾರ್ಣವಂ ।
ಸಾ ಮಾಮಾಹ ಮಹಾಭಾಗ ಶ್ಲಕ್ಷ್ಣಗಂಭೀರಯಾ ಗಿರಾ ॥ ೭ ॥
ಮಾ ಭೈಷೀರ್ವತ್ಸವತ್ಸೇತಿ ಮೃತ್ಯುಸ್ತವ ನ ವಿದ್ಯತೇ ।
ಮಹಾದೇವಪ್ರಸಾದೇನ ನಮೃತ್ಯುಸ್ತೇ ಮಮಾಽಪಿ ಚ ॥ ೮ ॥
ಮಾಮಾಶ್ರಯಸ್ವ ಲಾಂಗೂಲಂ ತ್ವಾಮುತಸ್ತಾರಯಾಮ್ಯಹಂ ।
ಘೋರಾದಸ್ಮಾದ್ಭಯಾದ್ವಿಪ್ರ ಯಾವತ್ಸಂಪ್ಲವತೇ ಜಗತ್ ॥ ೯ ॥
ಕ್ಷುತ್ತೃಷಾಪ್ರತಿಘಾತಾರ್ಥಂ ಸ್ತನೌ ಮೇ ತ್ವಂ ಪಿಬಸ್ವಹ ।
ಪಯೋಽಮೃತಾಶ್ರಯಂ ದಿವ್ಯಂ ತತ್ಪೀತ್ವಾ ನಿರ್ವೃತೋ ಭವ ॥ ೧೦ ॥
ತಸ್ಯಾಸ್ತದ್ವಚನಂ ಶ್ರುತ್ವಾ ಹರ್ಷಾತ್ಪೀತೋ ಮಯಾ ಸ್ತನಃ ।
ನ ಕ್ಷುತ್ತೃಷಾ ಪೀತಮಾತ್ರೇ ಸ್ತನೇ ಮಹ್ಯಂ ತದಾಽಭವತ್ ॥ ೧೧ ॥
ದಿವ್ಯಂ ಪ್ರಾಣಬಲಂ ಜಜ್ಞೇ ಸಮುದ್ರಪ್ಲವನಕ್ಷಮಂ ।
ತತಸ್ತಾಂ ಪ್ರತ್ಯುವಾಚೇದಂ ಕಾ ತ್ವಮೇಕಾರ್ಣವೀಕೃತೇ ॥ ೧೨ ॥

---

೬. ಅದರ ಗೊರಸುಗಳ ಹೊಡೆತದಿಂದ ಸಮುದ್ರದ ಜಲವೆಲ್ಲವೂ ದಿಕ್ಕು ದಿಕ್ಕಿಗೆ ನೊರೆಗಳ ರಾಶಿಗಳನ್ನು ಚಿಮ್ಮುತ್ತ ಕುಣಿದಾಡುವಂತೆ ಕಾಣುತ್ತಿದ್ದಿತು.

೭. ಎಲೈ ಯುಧಿಷ್ಠಿರನೆ! ನೀರನ್ನು ಹಾರಿಸಿ ಸಮುದ್ರವನ್ನೇ ಅಲ್ಲಕಲ್ಲೋಲ ಗೊಳಿಸುತ್ತ ಆ ಗೋವು ಮಧುರವಾಕ್ಯದಿಂದ ನನ್ನನ್ನು ಕುರಿತು ಹೇಳಿತು.

೮. "ಮಗನೆ! ಭಯಪಡಬೇಡ. ನಿನಗೆ ಮರಣವೆಂಬುದಿಲ್ಲ. ಮಹಾದೇವನ ಅನುಗ್ರಹಕ್ಕೆ ಪಾತ್ರರಾದ ನಿನಗೂ ನನಗೂ ಮೃತ್ಯುಭಯವೆಂಬುದಿಲ್ಲ.

೯. ಅಯ್ಯಾ ಬ್ರಾಹ್ಮಣನೆ! ನನ್ನ ಬಾಲವನ್ನು ಹಿಡಿದುಕೊಂಡಿರು. ಲೋಕವು ಮುಳುಗಿರುವವರೆಗೂ ಈ ಮಹಾಭಯದಿಂದ ನಾನು ನಿನ್ನನ್ನು ಕಾಪಾಡುತ್ತಿರುವೆನು.

೧೦. ಹಸಿವು ಬಾಯಾರಿಕೆಗಳಾದಾಗ ನನ್ನ ಸ್ತನಗಳನ್ನು ಪಾನಮಾಡು. ಅಮೃತಸಮಾನವಾದ ನನ್ನ ದಿವ್ಯಕ್ಷೀರವನ್ನು ಕುಡಿದು ಸುಖಿಯಾಗಿರು."

೧೧. ಆ ಗೋವಿನ ಮಾತನ್ನು ಕೇಳಿ ಆನಂದಭರಿತನಾಗಿ ನಾನು ಸ್ತನ್ಯ ಪಾನವನ್ನು ಮಾಡಲು ಕ್ಷಣದಲ್ಲಿಯೇ ನನಗೆ ಹಸಿವು ತೃಷೆಗಳ ಬಾಧೆಯು ಹಿಂಗಿತು.

೧೨. ಆ ಮಹಾಸಮುದ್ರವನ್ನೂ ದಾಟುವಂತಹ ದಿವ್ಯವಾದ ದೇಹಬಲ ವುಂಟಾಗಲು ನಾನದನ್ನು ಕುರಿತು ಕೇಳಿದೆನು. "ಈ ಏಕಾರ್ಣವದಲ್ಲಿ ಒಂಟಿಯಾಗಿರುವ ನೀನು ಯಾರು?

ಭ್ರಮಸೇ ಬ್ರೂಹಿ ತತ್ತ್ವೇನ ವಿಸ್ಮಯೋಮೇ ಮಹಾನ್ ಹೃದಿ ।
ಭ್ರಮತೋಽತ್ರ ಮಮಾಽಽರ್ತಸ್ಯ ಮುಮೂರ್ಷೋಃ ಪ್ರಹತಸ್ಯಚ ॥೧೩॥
ತ್ವಂ ಹಿ ಮೇ ಶರಣಂ ಜಾತಾ ಭಾಗ್ಯಶೇಷೇಣ ಸುವ್ರತೇ ॥ ೧೪ ॥

ಗೌರುವಾಚ :—

ಕಿಮಹಂ ವಿಸ್ಮೃತಾ ತುಭ್ಯಂ ವಿಶ್ವರೂಪಾ ಮಹೇಶ್ವರೀ ।
ನರ್ಮದಾ ಧರ್ಮದಾ ನೄಣಾಂ ಸ್ವರ್ಗಶರ್ಮಬಲಪ್ರದಾ ॥ ೧೫ ॥
ದೃಷ್ಟ್ವಾ ತ್ವಾಂ ಸೀದಮಾನಂ ತು ರುದ್ರೇಣಾಽಹಂ ವಿಸರ್ಜಿತಾ ।
ತಂ ದ್ವಿಜಂ ತಾರಯಸ್ವಾಯೇ ಮಾಪ್ರಾಣಾಂಸ್ತ್ಯಜತಾಂ ಜಲೇ ॥ ೧೬ ॥
ಗೋರೂಪೇಣ ವಿಭೋರ್ವಾಕ್ಯಾತ್ತ್ವತ್ಸಕಾಶಮಿಹಾಗತಾ ।
ಮಾ ಮೃಷಾವಚನಃ ಶಂಭುರ್ಭವೇದಿತಿ ಚ ಸತ್ವರಾ ॥ ೧೭ ॥
ಏವಮುಕ್ತಸ್ತಯಾಽಹಂ ತು ಇಂದ್ರಾಯುಧನಿಭಂ ಶುಭಂ ।
ಲಾಂಗೂಲಮವ್ಯಯಂ ಜ್ಞಾತ್ವಾ ಭುಜಾಭ್ಯಾಮವಲಂಬಿತಃ ॥ ೧೮ ॥
ತತೋಽತರಂ ತಂ ಜಲಧಿಂ ಲಾಂಗೂಲಧ್ವಜಮಾಶ್ರಿತಃ ।
ಅಸೌ ದೇವೋ ಮಹಾದೇವ ಇತಿ ಮಾಂ ಪ್ರತ್ಯಭಾಷತ ॥ ೧೯ ॥

---

೧೩–೧೪. ನೀನು ಸಂಚರಿಸುವುದರ ತತ್ತ್ವವನ್ನು ತಿಳಿಯಲು ನನ್ನ ಹೃದಯದಲ್ಲಿ ದೊಡ್ಡ ಕುತೂಹಲವುಂಟಾಗಿರುವುದು. ಇಲ್ಲಿ ನಾನು ಸುತ್ತಿ ಸುತ್ತಿ ನಿಶ್ಶಕ್ತನೂ ಆರ್ತನೂ ಆಗಿ ಸಾಯುವ ಅವಸ್ಥೆಯಲ್ಲಿದ್ದೆನು. ಪುಣ್ಯಾತ್ಮಳೆ! ನನ್ನ ಪುಣ್ಯವಶದಿಂದ ನೀನೇ ನನಗೆ ಶರಣಪ್ರದೆಯಾಗಿರುವೆ.''

೧೫. ಗೋವು ಹೇಳುತ್ತದೆ:—''ನಾನಾರೂಪಧರಳೂ, ಮಹೇಶ್ವರಸಂಭೂತಳೂ ಆದ ನನ್ನನ್ನು ಮರೆತೆಯಾ? ಜನರಿಗೆಲ್ಲ ಧರ್ಮವನ್ನೂ, ಸ್ವರ್ಗಸುಖವನ್ನೂ, ಬಲವನ್ನೂ ಕೊಡುವ ನರ್ಮದೆಯೇ ನಾನು.

೧೬. ನೀನು ಸಂಕಟಪಡುತ್ತಿದ್ದುದನ್ನು ಕಂಡು ರುದ್ರನು ನನ್ನನ್ನು ಕುರಿತು 'ನರ್ಮದೆಯೆ! ಆ ಬ್ರಾಹ್ಮಣನನ್ನುದ್ಧರಿಸು; ಆತನು ನೀರಿನಲ್ಲಿ ಪ್ರಾಣಗಳನ್ನು ಬಿಡದಿರಲಿ' ಎಂದು ಆಜ್ಞಾಪಿಸಿ ಕಳಿಸಿದನು.

೧೭. ಆತನ ಮಾತು ಸುಳ್ಳಾಗಬಾರದೆಂದು ನಾನು ಗೋವಿನ ರೂಪವನ್ನು ತಾಳಿ ಜಾಗ್ರತೆಯಾಗಿ ನಿನ್ನ ಬಳಿಗೆ ಬಂದೆನು.''

೧೮. ಇಂತು ಹೇಳಿದ ಆ ಗೋವಿನ ಮಾತನ್ನು ಕೇಳಿ ಅದು ನಾಶರಹಿತವೆಂಬುದನ್ನು ಜ್ಞಾಪಿಸಿಕೊಂಡು ವಜ್ರಾಯುಧವನ್ನು ಹೋಲುವ ಅದರ ಬಾಲವನ್ನು ಕೈಗಳಲ್ಲಿ ಹಿಡಿದುಕೊಂಡೆನು.

೧೯. ಬಳಿಕ ಆ ಬಾಲವನ್ನೇ ಆಶ್ರಯಿಸಿ ನಾನು ಮಹಾಸಮುದ್ರವನ್ನು ದಾಟುತ್ತಿದ್ದೆನು. ಈತನೇ ಮಹಾದೇವನೆಂದು ಗೋವು ನನಗೆ ಹೇಳುತ್ತಿದ್ದಿತು.

ತತೋ ಯುಗಸಹಸ್ರಾಂತಮಹಂ ಕಾಲಂ ತಯಾ ಸಹ ।
ವ್ಯಚರಂ ವೈ ತಮೀಭೂತೇ ಸರ್ವತಃ ಸಲಿಲಾವೃತೇ ॥ ೨೦ ॥
ಮಹಾರ್ಣವೇ ತತಸ್ತಸ್ಮಿನ್ ಭ್ರಮನ್ಗೋಪುಚ್ಛಮಾಶ್ರಿತಃ ।
ನಿರ್ವಾತೇ ಚಾಂಧಕಾರೇ ಚ ನಿರಾಲೋಕೇ ನಿರಾಮಯೇ ॥ ೨೧ ॥
ಅಕಸ್ಮಾತ್ಸಲಿಲೇ ತಸ್ಮಿನ್ನತಸೀಪುಷ್ಪಸನ್ನಿಭಂ ।
ವಿಭಿನ್ನಾಂಜನಸಂಕಾಶಮಾಕಾಶಮಿವ ನಿರ್ಮಲಂ ॥ ೨೨ ॥
ನೀಲೋತ್ಪಲದಲಶ್ಯಾಮಂ ಪೀತವಾಸಸಮವ್ಯಯಂ ।
ಕಿರೀಟೇನಾರ್ಕವರ್ಣೇನ ವಿದ್ಯುದ್ವಿದ್ಯೋತಕಾರಿಣಾ ॥ ೨೩ ॥
ಭ್ರಾಜಮಾನೇನ ಶಿರಸಾ ಖಮಿವಾತ್ಯಂತರೂಪಿಣಂ ।
ಕುಂಡಲೋದ್ಘೃಷ್ಟಗಲ್ಲಂ ತು ಹಾರೋದ್ಯೋತಿತವಕ್ಷಸಂ ॥ ೨೪ ॥
ಜಾಂಬೂನದಮಯೈರ್ದಿವ್ಯೈರ್ಭೂಷಣೈರುಪಶೋಭಿತಂ ।
ನಾಗೋಪಧಾನಶಯನಂ ಸಹಸ್ರಾದಿತ್ಯವರ್ಚಸಂ ॥ ೨೫ ॥

---

೨೦. ಇಂತು ಒಂದು ಸಾಸಿರ ಯುಗಗಳ ಕಾಲವೂ ಆ ಗೋವಿನೊಡನೆ ತೇಲುತ್ತಿರಲು ನನಗೆ ಎಲ್ಲೆಲ್ಲಿಯೂ ಅಂಧಕಾರವೇ ತುಂಬಿ ಜಲವೇ ಅನುಭೂತವಾಗುತ್ತಿದ್ದಿತು.

೨೧. ಹೀಗೆ ನಾನು ಗಾಳಿಯಿಲ್ಲದೆ, ಕತ್ತಲೆಯಲ್ಲಿ ಕಣ್ಣು ಕಾಣದೆ, ಪದಾರ್ಥ ವಿವೇಚನೆಯಿಲ್ಲದೆ ಆ ಮಹಾ ಸಮುದ್ರದಲ್ಲಿ ಆ ಗೋವಿನ ಪುಚ್ಛವನ್ನಾಶ್ರಯಿಸಿ ತಿರುಗುತ್ತಿದ್ದೆನು.

೨೨. ಆಗ ನಾನು ಹಠಾತ್ತಾಗಿ ಅತಸೀಪುಷ್ಪಸಂಕಾಶನೂ, ಭಿನ್ನಾಂಜನದ ವೈಬಣ್ಣದವನೂ, ಆಕಾಶದಂತೆ ಪರಿಶುದ್ಧನೂ ಆದ ದೇವನನ್ನು ನೀರಿನ ಮಧ್ಯದಲ್ಲಿ ಕಂಡೆನು.

೨೩. ಆತನು ಕನ್ನೈದಿಲೆಯ ಎಸಳಿನಂತೆ ಶ್ಯಾಮಳನೂ, ಪೀತಾಂಬರ ಧಾರಿಯೂ, ನಾಶರಹಿತನೂ, ಸೂರ್ಯವರ್ಣದ ಕಿರೀಟದಿಂದ ಮಿಂಚುಗಳ ಸಾಲುಗಳನ್ನು ಬೀರುತ್ತಿರುವವನೂ ಆಗಿದ್ದನು ;

೨೪. ಹೊಳೆಯುತ್ತಿರುವ ತಲೆಯಿಂದ ಆಕಾಶವನ್ನು ಮುಟ್ಟುವ ಮಹಾ ರೂಪದವನೂ, ಕುಂಡಲಾಲಂಕೃತಗಳಾದ ಕಪೋಲಗಳುಳ್ಳವನೂ, ಹಾರರಂಜಿತ ವಕ್ಷಸ್ಥಳನೂ ಆಗಿದ್ದನು.

೨೫. ದಿವ್ಯಗಳಾದ ಚಿನ್ನದ ಆಭರಣಗಳಿಂದ ಭೂಷಿತನಾಗಿ, ಮಹಾನಾಗನನ್ನೇ ಹಾಸಿಗೆ ತಲೆದಿಂಬುಗಳನ್ನಾಗಿ ತಳೆದು ಸಾವಿರ ಸೂರ್ಯರ ಕಾಂತಿಯನ್ನು ಪ್ರಸರಿಸುತ್ತಿದ್ದನು.

ಅನೇಕಬಾಹೂರುಧರಂ ನೈಕವಕ್ತ್ರಂ ಮನೋರಮಂ ।
ಸುಪ್ತಮೇಕಾರ್ಣವೇ ವೀರಂ ಸಹಸ್ರಾಕ್ಷಶಿರೋಧರಂ ॥ ೨೬ ॥
ಜಟಾಜೂಟೇನ ಮಹತಾ ಸ್ಫುರದ್ವಿದ್ಯುತ್ಸಮಾರ್ಚಿಷಾ ।
ಏಕಾರ್ಣವಂ ಜಗತ್ಸರ್ವಂ ವ್ಯಾಪ್ಯ ದೇವಂ ವ್ಯವಸ್ಥಿತಂ ॥ ೨೭ ॥
ಗ್ರಸಿತ್ವಾ ಶಂಕರಃ ಸರ್ವಂ ಸದೇವಾಸುರಮಾನವಂ ।
ಪ್ರಪಶ್ಯಾಮ್ಯಹಮೀಶಾನಂ ಸುಪ್ತಮೇಕಾರ್ಣವೇ ಪ್ರಭುಂ ॥ ೨೮ ॥
ಸರ್ವವ್ಯಾಪಿನಮವ್ಯಕ್ತಮನಂತಂ ವಿಶ್ವತೋಮುಖಂ ।
ತಸ್ಯಪಾದತಲಾಭ್ಯಾಶೇ ಸ್ವರ್ಣಕೇಯೂರಮಂಡಿತಾಂ ॥ ೨೯ ॥
ವಿಶ್ವರೂಪಾಂ ಮಹಾಭಾಗಾಂ ವಿಶ್ವಮಾಯಾವಧಾರಿಣೀಂ ।
ಶ್ರೀಮಯೀಂ ಹ್ರೀಮಯೀಂ ದೇವೀಂ ಧೀಮಯೀಂ ವಾಙ್ಮಯೀಂ ಶಿವಾಂ ॥
ಸಿದ್ಧಿಂ ಕೀರ್ತಿಂ ರತಿಂ ಬ್ರಾಹ್ಮೀಂ ಕಾಲರಾತ್ರಿಮಯೋನಿಜಾಂ ।
ತಾಮೇವಾಹಂ ತದಾತ್ಯಂತಮೀಶ್ವರಾಂತಿಕಮಾಸ್ಥಿತಾಂ ॥ ೩೦ ॥
ಅದ್ರಾಕ್ಷಂ ಚಂದ್ರವದನಾಂ ಧೃತಿಂ ಸರ್ವೇಶ್ವರೀಮುಮಾಂ ॥ ೩೧ ॥

---

೨೬. ಅಸಂಖ್ಯಾತಗಳಾದ ಬಾಹುಗಳೂ, ತೊಡೆಗಳೂ, ಕಟಿಗಳೂ, ನೇತ್ರಗಳೂ, ಕಂಠಗಳೂ ಉಳ್ಳ ಆ ವೀರನು ಮನೋಮೋಹಕನಾಗಿ ಸಮುದ್ರಜಲದಲ್ಲಿ ಮಲಗಿದ್ದನು.

೨೭. ದೊಡ್ಡ ಪ್ರಮಾಣದ ಜಡೆಮುಡಿಯಿಂದ ಹೊರಡುವ ಮಿಂಚುಗಳ ಕಾಂತಿಯಿಂದ ಜಗತ್ತನ್ನಾವರಿಸಿದ ಸಮುದ್ರವನ್ನೆಲ್ಲ ಬೆಳಗುತ್ತಲಿದ್ದನು.

೨೮. ಇಂತು ದೇವಾಸುರ ಮನುಷ್ಯಲೋಕಗಳೆಲ್ಲವನ್ನೂ ನುಂಗಿಕೊಂಡು ಏಕಾರ್ಣವದಲ್ಲಿ ಮಲಗಿದ್ದ ಸುಖಪ್ರದನೂ, ಲೋಕೇಶ್ವರನೂ ಆದ ಆ ಮಹೇಶ್ವರನನ್ನು ಕಂಡೆನು.

೨೯. ಸರ್ವವ್ಯಾಪಿಯೂ, ಅವ್ಯಕ್ತನೂ, ಅವಿನಾಶಿಯೂ, ಅನೇಕ ಮುಖನೂ, ಆದ ಆತನ ಪಾದಪ್ರದೇಶದಲ್ಲಿ ಚಿನ್ನದ ಬಾಹುಬಂದಿಗಳುಳ್ಳ ದೇವಿಯನ್ನು ಕಂಡೆನು.

೩೦. ಮಹಾತ್ಮಳಾದ ಆಕೆಯು ಅನೇಕ ರೂಪಗಳನ್ನು ತಾಳಿ ಪ್ರಪಂಚವೆಂಬ ಮಾಯೆಯನ್ನು ವಿಸ್ತರಿಸುವವಳೂ, ಶ್ರೀದೇವಿಯೂ, ಹ್ರೀದೇವಿಯೂ, ಧೀಮಯಿಯೂ, ವಾಗ್ದೇವತೆಯೂ, ಮಂಗಳೆಯೂ ಆಗಿದ್ದಳು.

೩೧–೩೨. ಸಿದ್ಧಿಯೂ, ಕೀರ್ತಿಯೂ, ರತಿಯೂ, ಬ್ರಾಹ್ಮಿಯೂ, ಅಯೋನಿಜೆಯೂ, ಚಂದ್ರವದನೆಯೂ, ಧೃತಿಯೂ, ಪಾರ್ವತ್ಯಂಶಸಂಭವೆಯೂ, ಲೋಕೇಶ್ವರಿಯೂ, ಮಹಾದೇವನ ಸಮೀಪವರ್ತಿನಿಯೂ ಆದ ಕಾಳರಾತ್ರಿಯನ್ನಾಗಿ ಆಕೆಯನ್ನು ನಾನು ಕಂಡೆನು.

ಶಾಂತಂ ಪ್ರಸುಪ್ತಂ ನವಹೇಮವರ್ಣ
ಮುಮಾಸಹಾಯಂ ಭಗವಂತಮೀಶಂ ।
ತಮೋವೃತಂ ಪುಣ್ಯತಮಂ ವರಿಷ್ಠಂ
ಪ್ರದಕ್ಷಿಣೀಕೃತ್ಯ ನಮಸ್ಕರೋಮಿ ॥ ೩೩ ॥
ತತಃ ಪ್ರಸುಪ್ತಃ ಸಹಸಾ ವಿಬುದ್ಧೋ
ರಾತ್ರಿಕ್ಷಯೇ ದೇವವರಃ ಸ್ವಭಾವಾತ್ ।
ವಿಕ್ಷೋಭಯಂಸ್ಬಾಹುಭಿರರ್ಣವಾಂಭೋ
ಜಗತ್ಪ್ರಣಷ್ಟಂ ಸಲಿಲೇ ವಿಮೃಶ್ಯ ॥ ೩೪ ॥
ಕಿಂ ಕಾರ್ಯಮಿತ್ಯೇವ ವಿಚಿಂತಯಿತ್ವಾ
ವಾರಾಹರೂಪೋಽಭವದದ್ಭುತಾಂಗಃ ।
ಮಹಾಘನಾಂಭೋಧರತುಲ್ಯವರ್ಣಃ
ಪ್ರಲಂಬಮಾಲಾಂಬರನಿಷ್ಕಮಾಲೀ ॥ ೩೫ ॥
ಸಶಂಖಚಕ್ರಾಸಿಧರಃ ಕಿರೀಟೀ
ಸವೇದವೇದಾಂಗಮಯೋ ಮಹಾತ್ಮಾ ।
ತ್ರೈಲೋಕ್ಯನಿರ್ಮಾಣಕರಃ ಪುರಾಣೋ
ದೇವತ್ರಯೀರೂಪಧರಶ್ಚ ಕಾರ್ಯೇ ॥ ೩೬ ॥

---

೩೩. ಪ್ರಶಾಂತನೂ, ನಿದ್ರಿಸುತ್ತಿರುವವನೂ, ಪುಟಕ್ಕಿಟ್ಟ ಚಿನ್ನದ ಬಣ್ಣದ ಮೈಯುಳ್ಳವನೂ, ಉಪಮಾದ್ವಿತೀಯನೂ, ಷಡ್ಗುಣೈಶ್ವರ್ಯಭರಿತನೂ, ಸರ್ವನಿಯಾಮಕನೂ, ತಮಸ್ಸಿನಿಂದಾವೃತನೂ, ಪುಣ್ಯಪುರುಷನೂ, ಸರ್ವೋತ್ತಮನೂ ಆದ ಪ್ರಭುವಿಗೆ ಬಲವಂದು ನಮಸ್ಕರಿಸಿದೆನು.”

೩೪. ರಾತ್ರಿಯು ಕಳೆಯಲು ಆ ದೇವವರೇಣ್ಯನು ಸ್ವಭಾವದಿಂದಲೇ ತಟ್ಟನೆದ್ದು ಕೈಗಳಿಂದ ಸಮುದ್ರೋದಕವನ್ನು ಅಲ್ಲಕಲ್ಲೋಲಗೊಳಿಸುತ್ತ ಪ್ರಪಂಚವು ನೀರಿನಲ್ಲಿ ಮುಳುಗಿರುವುದನ್ನು ಕಂಡನು.

೩೫. ಆಗ ಏನು ಮಾಡಬೇಕೆಂಬುದನ್ನಾಲೋಚಿಸಿ ಅದ್ಭುತ ಶರೀರಿಯಾದ ಆತನು ವರಾಹರೂಪವನ್ನು ತಾಳಿ ಮಹಾ ಮೇಘಗಳನ್ನು ಹೋಲುವ ಮೈಬಣ್ಣದವನೂ, ಉದ್ದವಾಗಿ ಕೊರಳಲ್ಲಿ ತೂಗಾಡುತ್ತಿರುವ ಚಿನ್ನದ ಮಾಲೆಯುಳ್ಳವನೂ ಆದನು.

೩೬. ಆ ಮಹಾತ್ಮನು ಶಂಖ, ಚಕ್ರ, ಕತ್ತಿಗಳನ್ನು ಧರಿಸಿ, ಕಿರೀಟವಿಭೂಷಿತನಾಗಿ, ವೇದವೇದಾಂಗಗಳೇ ಶರೀರವಾಗಿರಲು, ಮೂರು ಲೋಕಗಳನ್ನೂ ಸೃಜಿಸುವ ಅನಾದಿಪುರುಷನಾದುದರಿಂದ ತ್ರಿಮೂರ್ತಿಗಳ ರೂಪಗಳನ್ನು ಪ್ರಪಂಚ ಕಾರ್ಯಕ್ಕಾಗಿ ತಾಳುವನು.

ಸ ಏವ ರುದ್ರಃ ಸ ಜಗಜ್ಜಹಾರ
ಸೃಷ್ಟ್ಯರ್ಥಮಿಶಃ ಪ್ರಪಿತಾಮಹೋಽಭೂತ್ ।
ಸಂರಕ್ಷಣಾರ್ಥಂ ಜಗತಃ ಸ ಏಷ
ಹರಿಃ ಸುಚಕ್ರಾಽಸಿ ಗದಾಽಬ್ಜಪಾಣಿಃ ॥ ೩೭ ॥

ತೇಷಾಂ ವಿಭಾಗೋ ನಹಿ ಕರ್ತುಮರ್ಹೋ
ಮಹಾತ್ಮನಾಮೇಕಶರೀರಭಾಜಾಂ ।
ಮಿಮಾಂಸ ಹೇತ್ವರ್ಥವಿಶೇಷ ತರ್ಕೈ
ರ್ಯಸ್ತೇಷು ಕುರ್ಯಾತ್ತ್ರವಿಭೇದಮಜ್ಞಃ ॥ ೩೮ ॥

ಸ ಯಾತಿ ಘೋರಂ ನರಕಂ ಕ್ರಮೇಣ
ವಿಭಾಗಕೃದ್ದ್ವೇಷಮತಿರ್ದುರಾತ್ಮಾ ।
ಯಾ ಯಸ್ಯ ಭಕ್ತಿಃ ಸ ತಯೈವ ನೂನಂ
ದೇಹಂ ತ್ಯಜನ್ಸ್ವಂ ಹ್ಯಮೃತತ್ವಮೇತಿ ॥ ೩೯ ॥

ಸಂಮೋಹಯನ್ಮೂರ್ತಿಭಿರತ್ರ ಲೋಕಂ
ಸ್ರಷ್ಟಾ ಚ ಗೋಪ್ತಾ ಕ್ಷಯಕೃತ್ಸದೇವಃ ।
ತಸ್ಮಾನ್ನ ಮೋಹಾತ್ಮಕಮಾವಿಶೇತ
ದ್ವೇಷಂ ಸ ಕುರ್ಯಾತ್ತ್ರವಿಭಿನ್ನಮೂರ್ತಿಃ ॥ ೪೦ ॥

---

೩೭. ಆತನೇ ರುದ್ರನಾಗಿ ಲೋಕವನ್ನು ಸಂಹರಿಸಿದನು. ಪಿತಾಮಹನಾಗಿ ಸೃಷ್ಟಿಯನ್ನು ಮಾಡಿದನು. ಲೋಕಸಂರಕ್ಷಣಕ್ಕಾಗಿ ಆತನೇ ಅಸಿಚಕ್ರಗದಾಪದ್ಮಗಳನ್ನು ಧರಿಸಿ ಮಹಾವಿಷ್ಣುವಾಗಿರುವನು.

೩೮. ಮಹಾತ್ಮರೂ ಒಂದೇ ಶರೀರದಿಂದ ಬಂದವರೂ ಆದ ಆ ಮೂವರಲ್ಲಿ ಭೇದಭಾವವನ್ನಿಡುವುದು ಸರಿಯಲ್ಲ. ಮಿಮಾಂಸಾ, ಹೇತುವಾದ, ಅತಿತರ್ಕಗಳಿಂದ ಇವರಲ್ಲಿ ಭೇದವನ್ನೆಣಿಸುವವನೇ ಅಜ್ಞನು.

೩೯. ಇವರಲ್ಲಿ ಭೇದಜ್ಞಾನವನ್ನಿಟ್ಟು ಯಾರೊಬ್ಬರನ್ನು ದ್ವೇಷಿಸಿದರೂ ಆ ದುರಾತ್ಮನು ಕ್ರಮವಾಗಿ ಭಯಂಕರವಾದ ರೌರವನರಕವನ್ನನುಭವಿಸುವನು. ಯಾವನಿಗೆ ಯಾವ ದೇವರಲ್ಲಿ ಭಕ್ತಿಯುಂಟೊ, ಅದರಿಂದಲೇ ಆತನು ತನ್ನ ದೇಹವನ್ನು ಬಿಡಲು ಅಮೃತತ್ವವನ್ನು ಪಡೆಯುವನು.

೪೦. ಒಬ್ಬ ದೇವನೇ ಲೋಕವನ್ನು ಮೋಹಗೊಳಿಸಿ ಮೂರು ರೂಪಗಳಿಂದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಿರುವನು. ಆದುದರಿಂದ ಮನುಜನು ಮೋಹಗೊಂಡು ದ್ವೇಷವನ್ನು ಮಾಡಬಾರದು. ತ್ರಿಮೂರ್ತಿಗಳಲ್ಲಿ ಭೇದಬುದ್ಧಿಯನ್ನೂ ಇಡಬಾರದು.

ವಾರಾಹಮಾಶಾನವರೋಽಪ್ಯತೋಽಸೌ
ರೂಪಂ ಸಮಾಸ್ಥಾಯ ಜಗದ್ವಿಧಾತಾ ।
ನಷ್ಟೇ ತ್ರಿಲೋಕೇಽರ್ಣವತೋಯಮಗ್ನೇ
ವಿಮಾರ್ಗಿ ತೋಯೌಘಮಯೋಽಂತರಾತ್ಮಾ ॥ ೪೧ ॥
ಭಿತ್ವಾರ್ಣವಂ ತೋಯಮಥಾಂತರಸ್ಥಂ
ವಿವೇಶ ಪಾತಾಲತಲಂ ಕ್ಷಣೇನ ।
ಜಲೇ ನಿಮಗ್ನಾಂ ಧರಣೀಂ ಸಮಸ್ತಾಂ
ಸಮಸ್ಪೃಶತ್ಪಂಕಜಪತ್ರನೇತ್ರಾಂ ॥ ೪೨ ॥
ವಿಶೀರ್ಣಶೈಲೋಪಲಶೃಂಗಕೂಟಾಂ
ವಸುಂಧರಾಂ ತಾಂ ಪ್ರಲಯೇ ಪ್ರಲೀನಾಂ ।
ದಂಷ್ಟ್ರೈಕಯಾ ವಿಷ್ಣುರತುಲ್ಯಸಾಹಸಃ
ಸಮುದ್ದಧಾರ ಸ್ವಯಮೇವ ದೇವಃ ॥ ೪೩ ॥
ಸಾ ತಸ್ಯ ದಂಷ್ಟ್ರಾಗ್ರವಿಲಂಬಿತಾಂಗೀ
ಕೈಲಾಸಶೃಂಗಾಗ್ರಗತೇವ ಜ್ಯೋತ್ಸ್ನಾ ।
ವಿಭ್ರಾಜತೇ ಸಾಪ್ಯಸಮಾನಮೂರ್ತಿಃ
ಶಶಾಂಕಶೃಂಗೇಚ ತಡಿದ್ವಿಲಗ್ನಾ ॥ ೪೪ ॥

---

೪೧. ಪ್ರಪಂಚವು ಮಹಾಸಮುದ್ರದ ನೀರಿನಲ್ಲಿ ಮುಳುಗಿ ಕಾಣಿಸದಂತಾಗಲು ಪರಮೇಶ್ವರನು ವರಾಹರೂಪವನ್ನು ಸ್ವೀಕರಿಸಿ ನೀರಿನಲ್ಲಿಯೇ ಹೋಗಿ ಅದಕ್ಕಾಗಿ ಹುಡುಕಾಡಿದನು.

೪೨. ಅಂತರದ ಜಲವನ್ನೆಲ್ಲ ಭೇದಿಸಿಕೊಂಡು ನಿಮಿಷಮಾತ್ರದಲ್ಲಿ ಪಾತಾಳ ಜಲವನ್ನು ಹೊಕ್ಕನು. ಅಲ್ಲಿ ಜಲಮಗ್ನಳೂ ಕಮಲದಳನಯನೆಯೂ ಆದ ಭೂದೇವಿಯನ್ನು ಕಂಡು ಆಕೆಯನ್ನು ತನ್ನ ಕರಕಮಲದಿಂದ ಸ್ಪರ್ಶಿಸಿದನು.

೪೩. ಆ ಭೂಮಿಯು, ಪರ್ವತಶೃಂಗಗಳೂ, ಹಾಸುಬಂಡೆಗಳೂ ಪುಡಿಪುಡಿಯಾಗಿ ಪ್ರಳಯದಲ್ಲಿ ಲೀನವಾಗಿರಲು ಆ ದೇವನು ತಾನೇ ಅಪಾರ ಪರಾಕ್ರಮಿಯಾದ ಮಹಾವಿಷ್ಣುವಾಗಿ ಒಂದು ಕೋರೆದಾಡೆಯಿಂದಲೇ ಅದನ್ನುದ್ಧರಿಸಿದನು.

೪೪. ಅಸಮಾನರೂಪಳಾದ ಭೂದೇವಿಯು ಆತನ ದಂಷ್ಟ್ರದ ಕೊನೆಯಲ್ಲಿ ಕುಳಿತು ಕೈಲಾಸಪರ್ವತಾಗ್ರದಲ್ಲಿ ನೆಲಸಿದ ಚಂದ್ರಬಿಂಬದಂತೆಯೂ, ಚಂದ್ರಮಂಡಲದ ಶೃಂಗಾಗ್ರದಲ್ಲಿ ಅಂಟಿದ ಮಿಂಚಿನ ಬಳ್ಳಿಯಂತೆಯೂ ರಾಜಿಸುತ್ತಿದ್ದಳು.

ತಾಮುಜ್ಜಹಾರಾರ್ಣವತೋಯಮಗ್ನಾಂ
ಕರೀ ನಿಮಗ್ನಾಮಿವ ಹಸ್ತಿನೀಂ ಹಠಾತ್ ।
ನಾವಂ ವಿಶೀರ್ಣಾಮಿವ ತೋಯಮಧ್ಯಾ
ದುದೀರ್ಣಸತ್ತ್ವೋಽನುಪಮಪ್ರಭಾವಃ ॥ ೪೫ ॥
ಸ ತಾಂ ಸಮುತ್ತಾರ್ಯ ಮಹಾಜಲೌಘಾ
ತ್ಸಮುದ್ರಮಾರ್ಗೋ ವ್ಯಭಜತ್ಸಮಸ್ತಂ ।
ಮಹಾರ್ಣವೇಷ್ವೇವ ಮಹಾರ್ಣವಾಂಭೋ
ನಿಕ್ಷೇಪಯಾಮಾಸ ಪುನರ್ನದೀಷು ॥ ೪೬ ॥
ಶೀರ್ಣಾಂಶ್ಚ ಶೈಲಾನ್ ಸ ಚಕಾರ ಭೂಯೋ
ದ್ವೀಪಾನ್ ಸಮಸ್ತಾಂಶ್ಚ ತಥಾಽರ್ಣವಾಂಶ್ಚ ।
ಶೈಲೋಪಲೈರ್ಯೇ ವಿಚಿತಾಃ ಸಮಂತಾ
ಚ್ಛಿಲೋಚ್ಚಯಾಂಸ್ತಾನ್ ಸ ಚಕಾರ ಕಲ್ಪೇ ॥ ೪೭ ॥
ಅನೇಕರೂಪಂ ಪ್ರವಿಭಜ್ಯ ದೇಹಂ
ಚಕಾರ ದೇವೇಂದ್ರಗಣಾನ್ ಸಮಸ್ತಾನ್ ।
ಮುಖಾಚ್ಚ ವಹ್ನಿರ್ಮನಸಶ್ಚ ಚಂದ್ರ
ಶ್ಚಕ್ಷೋಶ್ಚ ಸೂರ್ಯಃ ಸಹಸಾ ಬಭೂವ ॥ ೪೮ ॥

---

೪೫. ಕೆಸರಿನಲ್ಲಿ ಸಿಕ್ಕಿರುವ ಹೆಣ್ಣಾನೆಯನ್ನು ಸಲಗನೆತ್ತುವಂತೆಯೂ, ನೀರಿನ ಮಧ್ಯದಿಂದ ಒಡೆದ ದೋಣಿಯನ್ನು ಬಲಾತ್ಕಾರವಾಗಿ ದಡಕ್ಕೇರಿಸುವಂತೆಯೂ, ಆ ಮಹಾ ಪರಾಕ್ರಮಿಯೂ, ಅಪ್ರತಿಮಪ್ರತಾಪನೂ ಆದ ಮಹಾವಿಷ್ಣುವು ಸಮುದ್ರಮಧ್ಯದಲ್ಲಿ ಮುಳುಗಿದ್ದ ಆ ಭೂಮಿಯನ್ನುದ್ಧರಿಸಿದನು.

೪೬. ಇಂತು ಆ ಪುರಾಣಪುರುಷನು ಮಹಾಸಮುದ್ರದ ಜಲದಿಂದ ಭೂಮಿಯನ್ನೆತ್ತಿ ಏಕಾರ್ಣವವಾಗಿದ್ದುದನ್ನು ಏಳು ಸಮುದ್ರಗಳನ್ನಾಗಿ ವಿಂಗಡಿಸಿ ಆ ನೀರನ್ನೇ ಅವುಗಳಿಗೆ ಹಂಚಿ ಅದನ್ನೇ ನದಿಗಳಲ್ಲಿಯೂ ಹರಿಯುವಂತೆ ಮಾಡಿದನು.

೪೭. ವಿಶೀರ್ಣಗಳಾಗಿದ್ದ ಪರ್ವತಗಳನ್ನೂ, ಸಮಸ್ತ ದ್ವೀಪಗಳನ್ನೂ, ಸಪ್ತ ಸಮುದ್ರಗಳನ್ನೂ, ಹಿಂದೆ ಪರ್ವತ ಶಿಲೆಗಳಿಂದ ರಚಿತಗಳಾಗಿದ್ದ ಮಹಾಶೃಂಗಗಳನ್ನೂ ಪೂರ್ವಕಲ್ಪದಲ್ಲಿದ್ದಂತೆಯೇ ನಿರ್ಮಿಸಿದನು.

೪೮. ಬಳಿಕ ತನ್ನ ದೇಹವನ್ನು ಅನೇಕ ರೂಪಗಳನ್ನಾಗಿ ವಿಭಜಿಸಿಕೊಂಡು ಸಕಲ ದೇವತಾಗಣಗಳನ್ನೂ ಉಂಟುಮಾಡಿದನು. ಆತನ ಮುಖದಿಂದ ಅಗ್ನಿಯೂ, ಮನಸ್ಸಿನಿಂದ ಚಂದ್ರನೂ, ನೇತ್ರದಿಂದ ಸೂರ್ಯನೂ ಜನಿಸಿದರು.

ಜಜ್ಞೇಽಥ ತಸ್ಯೇಶ್ವರಯೋಗಮೂರ್ತೇಃ
ಪ್ರಧ್ಯಾಯಮಾನಸ್ಯ ಸುರೇಂದ್ರಸಂಘಃ ।
ವೇದಶ್ಚ ಯಜ್ಞಾಶ್ಚ ತಥೈವ ವರ್ಣಾ
ಸ್ತಥಾ ಹಿ ಸರ್ವೌಷಧಯೋ ರಸಾಶ್ಚ ॥ ೪೯ ॥
ಜಗತ್ಸಮಸ್ತಂ ಮನಸಾ ಬಭೂವ
ಯತ್ ಸ್ಥಾವರಂ ಕಿಂಚಿದಿಹಾಂಡಜಂ ವಾ ।
ಜರಾಯುಜಂ ಸ್ವೇದಜಮುದ್ಭಿಜಂ ವಾ
ಯತ್ಕಿಂಚಿದಾಕೀಟಪಿಪೀಲಿಕಾದ್ಯಂ ॥ ೫೦ ॥
ತತೋ ವಿಜಜ್ಞೇ ಮನಸಾ ಕ್ಷಣೇನ
ಅನೇಕರೂಪಾಃ ಸಹಸಾ ಮಹೇಶ ।
ಶ್ಚಕಾರ ಯನ್ಮೂರ್ತಿಭಿರವ್ಯಯಾತ್ಮಾ
ಅಷ್ಟಾಭಿರಾವಿಶ್ಯ ಪುನಃ ಸ ತತ್ರ ॥ ೫೧ ॥
ಲೀಲಾಂ ಚಕಾರಾಥ ಸಮೃದ್ಧತೇಜಾ
ಅತೋತ್ರ ಮೇ ಪಶ್ಯತ ಏವ ವಿಪ್ರಾಃ ।
ತೇಷಾಂ ಮಯಾ ದರ್ಶನಮೇವ ಸರ್ವಂ
ಯಾವನ್ಮುಹೂರ್ತಾತ್ಸಮಕಾರಿ ಭೂಪ ॥ ೫೨ ॥

---

೪೯. ಐಶ್ವರ್ಯಸಂಪನ್ನನಾದ ಆ ಯೋಗಮೂರ್ತಿಯು ಧ್ಯಾನಾಸಕ್ತನಾಗಿರಲು ಆತನಿಂದಲೇ ದೇವಸಮೂಹಗಳೂ, ವೇದಗಳೂ, ಯಜ್ಞಗಳೂ, ಚಾತುರ್ವರ್ಣ್ಯಗಳೂ, ಸಮಸ್ತ ಓಷಧಿ ವನಸ್ಪತಿಗಳೂ ಹುಟ್ಟಿದುವು.

೫೦. ಸ್ಥಾವರಗಳನ್ನೂ, ಅಂಡಜ, ಜರಾಯುಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ಬಗೆಯ ಜಂಗಮಪ್ರಾಣಿಗಳನ್ನೂ, ಕೀಟಪಿಪೀಲಿಕಾದಿಯಾದ ಸಮಸ್ತವನ್ನೂ ಒಳಗೊಂಡ ಪ್ರಪಂಚವೆಲ್ಲವೂ ಆತನ ಮನಸ್ಸಂಕಲ್ಪದಿಂದಲೇ ಸೃಷ್ಟವಾಯಿತು.

೫೧. ಆಗ ಮಹಾದೇವನು ಸಂಕಲ್ಪಮಾತ್ರದಿಂದಲೇ ಅನೇಕ ರೂಪಗಳನ್ನು ತಾಳಿ ವಿಕಾರರಹಿತನಾದರೂ ತನ್ನ ಅಷ್ಟಮೂರ್ತಿಗಳಿಂದ ಅಂತಃಪ್ರವಿಷ್ಟನಾಗಿ ಬ್ರಹ್ಮಾಂಡವನ್ನು ವಿಸ್ತರಿಸಿದನು.

೫೨. ವಿಪ್ರೋತ್ತಮರಿರಾ! ಎಲೈ ಯುಧಿಷ್ಠಿರನೆ! ನಾನು ನೋಡುತ್ತಿರುವಂತೆಯೇ ತೇಜೋರಾಶಿಯಾದ ಆತನು ತನ್ನ ಲೀಲೆಯನ್ನು ತೋರಿಸಿದನು. ಒಂದು ಮುಹೂರ್ತದಲ್ಲಿಯೇ ನಾನು ಆತನ ಸಮಸ್ತ ಲೀಲೆಗಳ ದರ್ಶನವನ್ನೂ ಮಾಡಿದೆನು.

ಕೃತ್ವಾತ್ವಶೇಷಂ ಕಿಲ ಲೀಲಯೈವ
ಸ ದೇವದೇವೋ ಜಗತಾಂ ವಿಧಾತಾ ।
ಸರ್ವತ್ರದೃಕ್ ಸರ್ವಗ ಏವ ದೇವೋ
ಜಗಾಮ ಚಾದರ್ಶನಮಾದಿಕರ್ತಾ ॥ ೫೩ ॥

ಯತ್ತನ್ಮುಹೂರ್ತಾದಿಹ ನಾಮರೂಪಂ
ತಾವತ್ಪ್ರಪಶ್ಯಾಮಿ ಜಗತ್ತಥೈವ ।
ದ್ವೀಪೈಃ ಸಮುದ್ರೈರಭಿಸಂವೃತಂ ಹಿ
ನಕ್ಷತ್ರ ತಾರಾದಿ ವಿಮಾನಕೀರ್ಣಂ ॥ ೫೪ ॥

ವಿಯತ್ಪಯೋದಗ್ರಹಚಕ್ರಚಿತ್ರಂ
ನಾನಾವಿಧೈಃ ಪ್ರಾಣಿಗಣೈರ್ವೃತಂ ಚ ।
ತಾಂ ವೈ ನ ಪಶ್ಯಾಮಿ ಮಹಾನುಭಾವಾಂ
ಗೋರೂಪಿಣೀಂ ಸರ್ವಸುರೇಶ್ವರೀಂ ಚ ॥ ೫೫ ॥

ಕ್ವ ಸಾಂಪ್ರತಂ ಸೇತಿ ವಿಚಿಂತ್ಯ ರಾಜನ್
ವಿಭ್ರಾಂತಚಿತ್ತಸ್ತ್ವಭವಂ ತದೈವ ।
ದಿಶೋವಿಭಾಗಾನವಲೋಕಯಾನಿ
ಋತೇ ಪುನಸ್ತಾಂ ಕಥಮಿಶ್ವರಾಂಗೀಂ ॥ ೫೬ ॥

---

೫೩. ಇಂತು ದೇವದೇವನೂ, ಲೋಕನಿಯಾಮಕನೂ, ಸರ್ವದರ್ಶಿಯೂ, ಸರ್ವವ್ಯಾಪಿಯೂ ಆದ ಆದಿಕರ್ತನು ಲೀಲಾಮಾತ್ರದಿಂದಲೇ ಸಮಸ್ತ ಬ್ರಹ್ಮಾಂಡವನ್ನೂ ಸೃಷ್ಟಿಮಾಡಿ ಉತ್ತರಕ್ಷಣದಲ್ಲಿಯೇ ಅದೃಶ್ಯನಾದನು.

೫೪. ಆ ಒಂದು ಮುಹೂರ್ತದಲ್ಲಿಯೇ ದ್ವೀಪಗಳಿಂದಲೂ ಸಮುದ್ರಗಳಿಂದಲೂ ಕೂಡಿ ನಕ್ಷತ್ರತಾರಾದಿ ಆಕಾಶ ಸಂಚಾರಿಗಳಿಂದ ಆಕೀರ್ಣವಾದದೂ, ನಾಮರೂಪಗಳಿಂದ ವ್ಯಾಕೃತವಾದುದೂ ಆದ ಪ್ರಪಂಚವನ್ನೇ ನಾನು ಸತ್ಯವನ್ನಾಗಿ ತಿಳಿಯತೊಡಗಿದೆನು.

೫೫. ಆಕಾಶದಲ್ಲಿ ಮೇಘಗ್ರಹಾದಿಗಳ ಸಂಚಾರದಿಂದ ವಿಚಿತ್ರವೂ, ಅನೇಕ ವಿಧಗಳಾದ ಪ್ರಾಣಿಗಳಿಂದ ನಿಬಿಡವೂ ಆದ ಪ್ರಪಂಚದಲ್ಲಿ ಮಹಾನುಭಾವಳೂ, ಗೋರೂಪಧಾರಿಣಿಯೂ, ಸಕಲ ಸುರಾಧೀಶ್ವರಿಯೂ ಆದ ನರ್ಮದೆಯನ್ನು ಮಾತ್ರ ಎಲ್ಲಿಯೂ ಕಾಣದಾದೆನು.

೫೬. ರಾಜೇಂದ್ರನೆ! ಆಕೆ ಈಗೆಲ್ಲಿರುವಳೆಂದು ಚಿಂತಿಸುತ್ತ ಸಂಭ್ರಾಂತ ಮನಸ್ಕನಾಗಿ ಹತ್ತು ದಿಕ್ಕುಗಳನ್ನೂ ನೋಡಿದರೂ ಈಶ್ವರದೇಹಸಂಭವೆಯಾದ ಆ ನರ್ಮದೆಯನ್ನು ಎಲ್ಲಿಯೂ ಕಾಣಲಿಲ್ಲ.

ಪಶ್ಯಾಮಿ ತಾಮತ್ರ ಪುನಶ್ಚ ಶುಭ್ರಾಂ
ಮಹಾಭ್ರನೀಲಾಂ ಶುಚಿಶುಭ್ರತೋಯಾಂ ।
ವೃಕ್ಷೈರನೇಕೈರುಪಶೋಭಿತಾಂಗೀಂ
ಗಜೈಸ್ತುರಂಗೈರ್ವಿಹಗೈರ್ವೃತಾಂ ಚ ॥ ೫೭ ॥
ಯಥಾ ಪುರಾ ತೀರಮುಪೇತ್ಯ ದೇವ್ಯಾಃ
ಸಮಾಸ್ಥಿತಶ್ಚಾಪ್ಯಮರಕಂಟಕೇ ತು ।
ತಥೈವ ಪಶ್ಯಾಮಿ ಸುಖೋಪವಿಷ್ಟ
ಮಾತ್ಮಾನಮವ್ಯಗ್ರಮವಾಪ್ತಸೌಖ್ಯಂ ॥ ೫೮ ॥
ತಥೈವ ಪುಣ್ಯಾಮುಲತೋಯವಾಹಾಂ
ದೃಷ್ಟ್ವಾ ಪುನಃ ಕಲ್ಪಪರಿಕ್ಷಯೇಽಪಿ ।
ಅಂಬಾಮಿವಾರ್ಯಾಮನುಕಂಪಮಾನಾ
ಮಕ್ಷೀಣತೋಯಾಂ ವಿರುಜಾಂ ವಿಶೋಕಃ ॥ ೫೯ ॥
ಏವಂ ಮಹತ್ಪುಣ್ಯತಮಂ ಚ ಕಲ್ಪಂ
ಪಠಂತಿ ಶೃಣ್ವಂತಿ ಚ ಯೇ ದ್ವಿಜೇಂದ್ರಾಃ ।
ಮಹಾವರಾಹಸ್ಯ ಮಹೇಶ್ವರಸ್ಯ
ದಿನೇ ದಿನೇ ತೇ ವಿಮಲಾ ಭವಂತಿ ॥ ೬೦ ॥

---

೫೭. ಅಷ್ಟರಲ್ಲಿಯೇ ಮತ್ತೆ ನಿರ್ಮಲವೂ, ಮಹಾಮೇಘದಂತೆ ನೀಲವೂ, ನಿರ್ಮಲೋದಕಭರಿತವೂ, ಅನೇಕ ವೃಕ್ಷಗಳಿಂದ ಶೋಭಿಸುವ ತೀರಪ್ರದೇಶವುಳ್ಳದೂ, ಆನೆ, ಕುದುರೆ, ಪಕ್ಷ್ಯಾದಿ ಜಂತುಗಳಿಂದ ಸೇವಿತವೂ ಆದ ಆ ನದಿಯನ್ನು ಕಂಡೆನು.

೫೮. ಹಿಂದೆ ಅಮರಕಂಟಕಕ್ಷೇತ್ರದಲ್ಲಿ ನರ್ಮದೆಯ ತೀರವನ್ನು ಸೇರಿ ಕುಳಿತಿದ್ದಂತೆಯೇ ಈಗಲೂ ಸುಖಾಸೀನನಾಗಿ ನಿರ್ವ್ಯಾಕುಲನೂ, ಸುಖವನ್ನು ಹೊಂದಿದವನೂ ಆದೆನು.

೫೯. ಇಂತು ಕಲ್ಪಾಂತ್ಯದಲ್ಲಿಯೂ ನಿರ್ಮಲವೂ ಪುಣ್ಯಪ್ರದವೂ ಆದ ಜಲದಿಂದ ತುಂಬಿ, ತಾಯಿಯಾದ ಉಮಾದೇವಿಯಂತೆ ದಯಾಮಯವೂ, ಕಡಮೆಯಾಗದ ಜಲವುಳ್ಳದೂ, ಶೋಕನಾಶಕವೂ ಆದ ಆ ನದಿಯನ್ನು ಕಂಡು ನಿಶ್ಚಿಂತನಾದೆನು.

೬೦. ಇಂತಹ ಮಹೇಶ್ವರನ ಮಹಾ ವರಾಹಕಲ್ಪದ ಚರಿತ್ರೆಯನ್ನು ದಿನದಿನದಲ್ಲಿಯೂ ಯಾವ ಬ್ರಾಹ್ಮಣರು ಪಠಿಸುವರೊ, ಕೇಳುವರೊ, ಹೇಳುವರೊ, ಅವರು ಪರಿಶುದ್ಧರಾಗುವರು.

ಅಶುಭಶತಸಹಸ್ರಂ ತೇ ವಿಧೂಯ ಪ್ರಪನ್ನಾ
ಸ್ತ್ರಿದಿವಮಮರಜುಷ್ಟಂ ಸಿದ್ಧಗಂಧರ್ವಯುಕ್ತಂ ।
ವಿಮಲಶಶಿನಿಭಾಭಿಃ ಸರ್ವವಿವಾಃ ಪ್ಸರೋಭಿಃ
ಸಹ ವಿವಿಧವಿಲಾಸ್ಯೈಃ ಸ್ವರ್ಗಸೌಖ್ಯಂ ಲಭಂತೇ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ವಾರಾಹಕಲ್ಪವೃತ್ತಾಂತವರ್ಣನಂ" ನಾಮ್ನೈಕೋನವಿಂಶೋಽಧ್ಯಾಯಃ

---

೬೧. ಪರಮೇಶ್ವರನನ್ನು ಶರಣುಹೊಂದಿದವರು ಲಕ್ಷ ಪಾಪಗಳನ್ನೂ ಕಳೆದುಕೊಂಡು ಶುದ್ಧಚಂದ್ರಸದೃಶರಾದ ಅಪ್ಸರೆಯರೊಡಗೂಡಿ ಅನೇಕ ವಿಧಗಳಾದ ವಿಲಾಸಗಳನ್ನನುಭವಿಸುತ್ತ ದೇವತೆಗಳ ನಿವಾಸವೂ, ಸಿದ್ಧಗಂಧರ್ವಸೇವಿತವೂ ಆದ ಸ್ವರ್ಗಲೋಕದಲ್ಲಿ ಸೌಖ್ಯವನ್ನು ಪಡೆಯುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ವಾರಾಹಕಲ್ಪವೃತ್ತಾಂತವರ್ಣನ"ವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಂಶೋಽಧ್ಯಾಯಃ

## ವಾರಾಹಕಲ್ಪವೃತ್ತಾಂತವರ್ಣನಂ

ಯುಧಿಷ್ಠಿರ ಉವಾಚಃ:—

ಶ್ರುತಾ ಮೇ ವಿವಿಧಾ ಧರ್ಮಾಃ ಸಂಹಾರಾಸ್ತ್ವತ್ಪ್ರಸಾದತಃ ।
ಕೃತಾ ದೇವೇನ ಸರ್ವೇಣ ಯೇ ಚ ದೃಷ್ಟಾಸ್ತ್ವಯಾಽನಘ ॥ ೧ ॥
ಸಾಂಪ್ರತಂ ಶ್ರೋತುಮಿಚ್ಛಾಮಿ ಪ್ರಭಾವಂ ಶಾರ್ಙ್ಗಧನ್ವನಃ ।
ತ್ವಯಾಽನುಭೂತಂ ವಿಪ್ರೇಂದ್ರ ತನ್ಮೇ ತ್ವಂ ವಕ್ತುಮರ್ಹಸಿ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ:—

ಅತಃಪರಂ ಪ್ರವಕ್ಷ್ಯಾಮಿ ಪ್ರಜಾಸಂಹಾರಲಕ್ಷಣಂ ।
ಯಚ್ಚಿಹ್ನಂ ದೃಶ್ಯತೇ ತತ್ರ ಯಥಾ ಕಲ್ಪೋ ವಿಧೀಯತೇ ॥ ೩ ॥
ಉಲ್ಕಾಪಾತಾಃ ಸನಿರ್ಘಾತಾ ಭೂಮಿಕಂಪಸ್ತಥೈವ ಚ ।
ಪತತೇ ಪಾಂಸುವರ್ಷಂಚ ನಿರ್ಘೋಷಶ್ಚೈವ ದಾರುಣಃ ॥ ೪ ॥
ಯಕ್ಷಕಿನ್ನರಗಂಧರ್ವಾಃ ಪಿಶಾಚೋರಗರಾಕ್ಷಸಾಃ ।
ಸರ್ವೇ ತೇ ಪ್ರಲಯಂ ಯಾಂತಿ ಯುಗಾಂತೇ ಸಮುಪಸ್ಥಿತೇ ॥ ೫ ॥

---

## ಕನ್ನಡದ ಅನುವಾದ

### ವಾರಾಹಕಲ್ಪವೃತ್ತಾಂತವರ್ಣನ

೧. ಯುಧಿಷ್ಠಿರನು ಹೇಳುತ್ತಾನೆ:—ನಿಷ್ಕಲ್ಮಷನೆ! ಅನೇಕ ಧರ್ಮಗಳನ್ನೂ, ಜಗತ್ಸಂಹಾರಕ್ರಮವನ್ನೂ ನಿನ್ನ ಅನುಗ್ರಹದಿಂದ ಕೇಳಿದೆನು. ಪರಮಾತ್ಮನು ಮಾಡಿದ ಈ ವ್ಯಾಪಾರಗಳೆಲ್ಲವನ್ನೂ ನೀನು ನೋಡಿರುವೆ.

೨. ಈಗ ನಿನ್ನ ಅನುಭವಕ್ಕೆ ಬಂದಿರುವ ಮಹಾವಿಷ್ಣುವಿನ ಪ್ರಭಾವವನ್ನು ಕೇಳಲಿಚ್ಛಿಸುವೆನು. ಅದನ್ನು ಹೇಳಲು ನೀನೇ ಸಮರ್ಥನಾಗಿರುವೆ.

೩. ಮಾರ್ಕಂಡೇಯನು ಹೇಳುತ್ತಾನೆ:—ಈಗ ಪ್ರಜೆಗಳು ಸಂಹೃತರಾಗುವ ವಿಚಾರವನ್ನು ಹೇಳುತ್ತೇನೆ. ಆಗ ಯಾವ ಚಿಹ್ನೆಗಳು ಕಾಣುವುವೊ, ಕಲ್ಪವು ಹೇಗೆ ನಡೆಯುವುದೊ, ಅದನ್ನೂ ತಿಳಿಸುವೆನು.

೪. ಪ್ರಳಯಸೂಚಕಗಳಾಗಿ ಉಲ್ಕಾಪಾತಗಳೂ, ಸಿಡಿಲುಗಳೂ ಬೀಳುವುವು. ಭೂಮಿಯು ನಡುಗುವುದು. ಧೂಳಿನ ಮಳೆಯು ಕರೆಯುವುದು. ಭಯಂಕರವಾದ ಶಬ್ದವುಂಟಾಗುವುದು.

೫. ಯುಗಾಂತ್ಯವು ಸಂಭವಿಸಲು ಯಕ್ಷರು, ಕಿನ್ನರರು, ಗಂಧರ್ವರು, ಪಿಶಾಚರು, ನಾಗರು, ರಾಕ್ಷಸರು—ಎಲ್ಲರೂ ನಾಶವನ್ನು ಹೊಂದುವರು.

ಪರ್ವತಾಃ ಸಾಗರಾ ನದ್ಯಃ ಸರಾಂಸಿ ವಿವಿಧಾನಿ ಚ ।
ವೃಕ್ಷಾಃ ಶೋಷಂ ಸಮಾಯಾಂತಿ ವಲ್ಲೀಜಾತಂ ತೃಣಾನಿಚ ॥ ೬ ॥
ಏವಂ ಹಿ ವ್ಯಾಕುಲೀಭೂತೇ ಸರ್ವೌಷಧಿಜಲೋಜ್ಝಿತೇ ।
ಕಾಷ್ಠಭೂತೇತು ಸಂಜಾತೇ ತ್ರೈಲೋಕ್ಯೇ ಸಚರಾಚರೇ ॥ ೭ ॥
ಯಾವತ್ಪಶ್ಯಾಮಿ ಮಧ್ಯಾಹ್ನೇ ಸ್ನಾನಕಾಲ ಉಪಸ್ಥಿತೇ ।
ತ್ರೈಲೋಕ್ಯಂ ಜ್ವಲನಾಕಾರಂ ದುರ್ನಿರೀಕ್ಷ್ಯಂ ದುರಾಸದಂ ॥ ೮ ॥
ದ್ವೌ ಸೂರ್ಯೌ ಪೂರ್ವತಸ್ತಾತ ಪಶ್ಚಿಮೋತ್ತರಯೋಸ್ತಥಾ ।
ತಥೈವ ದಕ್ಷಿಣೇ ದ್ವೌಚ ಸೂರ್ಯೌ ದೃಷ್ಟೌ ಪ್ರತಾಪಿನೌ ॥ ೯ ॥
ದ್ವೌ ಸೂರ್ಯೌ ನಾಗಲೋಕಸ್ಥೌ ಮಧ್ಯೇ ದ್ವೌ ಗಗನಸ್ಯಚ ।
ಇತ್ಯೇತೇ ದ್ವಾದಶಾದಿತ್ಯಾಸ್ತಪಂತೇ ಸರ್ವತೋ ದಿಶಂ ॥ ೧೦ ॥
ಪೃಥಿವೀಮದಹನ್ ಸರ್ವಾಂ ಸಶೈಲವನಕಾನನಾಂ ।
ನಾಽದಗ್ಧಂ ದೃಶ್ಯತೇ ಕಿಂಚಿದೃತೇ ರೇವಾಂ ಚ ಮಾಂ ತಥಾ ॥ ೧೧ ॥
ಪೃಥಿವ್ಯಾಂ ದಹ್ಯಮಾನಾಯಾಂ ಹವಿರ್ಗಂಧಶ್ಚ ಜಾಯತೇ ।
ತತೋ ಮೇ ಶುಷ್ಯತೇ ಗಾತ್ರಂ ತೃಷಾಪ್ಯೇವಂ ದುರಾಸದಾ ॥ ೧೨ ॥

---

೬. ಪರ್ವತಗಳು, ಸಮುದ್ರಗಳು, ನದಿಗಳು, ಬಹುವಿಧಗಳಾದ ಸರೋವರಗಳು, ಮರಗಳು, ಬಳ್ಳಿಗಳು, ಹುಲ್ಲುಗಳು—ಎಲ್ಲವೂ ಆಗ ಒಣಗಿಹೋದುವು.

೭. ಇಂತು ಚರಾಚರಗಳಿಂದ ತುಂಬಿದ ಬ್ರಹ್ಮಾಂಡವೆಲ್ಲವೂ ವ್ಯಾಕುಲಗೊಂಡು, ಓಷಧಿ ಜಲರಹಿತವಾಗಿ ಒಣಗಿದ ಕಟ್ಟಿಗೆಯಂತಾಯಿತು.

೮. ಇದನ್ನು ನೋಡುತ್ತಿದ್ದಂತೆಯೇ ಸ್ನಾನಕಾಲವಾದ ಮಧ್ಯಾಹ್ನವು ಬಂದಿತು. ಆಗ ಮೂರು ಲೋಕಗಳೂ ಬೆಂಕಿಯ ರೂಪವನ್ನು ತಾಳಿ ನೋಡುವುದಕ್ಕೂ ಸಹಿಸುವುದಕ್ಕೂ ಅಸಾಧ್ಯವಾಗಿದ್ದಿತು.

೯. ಯುಧಿಷ್ಠಿರನೆ! ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಇಬ್ಬರಿಬ್ಬರು ಸೂರ್ಯರು ಜ್ವಲಿಸುತ್ತಿದ್ದರು. ಹಾಗೆಯೇ ದಕ್ಷಿಣದಲ್ಲಿಯೂ ಸುಡುತ್ತಿರುವ ಇಬ್ಬರು ಸೂರ್ಯರನ್ನು ಕಂಡೆನು.

೧೦. ಇಬ್ಬರು ಪಾತಾಳಲೋಕದಲ್ಲಿಯೂ, ಮತ್ತಿಬ್ಬರು ಆಕಾಶಮಧ್ಯದಲ್ಲಿಯೂ ನೆಲಸಿದ್ದರು. ಇಂತು ಹನ್ನೆರಡು ಮಂದಿ ಆದಿತ್ಯರೂ ಸಕಲ ದಿಕ್ಕುಗಳಿಂದಲೂ ಒಂದೇ ಸಮವಾಗಿ ಸುಡುತ್ತಿದ್ದರು.

೧೧. ಪರ್ವತಗಳು, ವನಗಳು, ಅರಣ್ಯಗಳು ಮುಂತಾದುವುಗಳೊಡನೆ ಭೂಮಂಡಲವೆಲ್ಲವನ್ನೂ ಅವರು ಸುಟ್ಟುಹಾಕಿದರು. ರೇವೆಯೂ ನಾನೂ ಅಲ್ಲದೆ ಬೇರೆ ಯಾವುದೂ ಸುಡಲ್ಪಡದೆ ಇರುವುದು ಕಾಣಲಿಲ್ಲ.

೧೨. ಭೂಮಿಯು ಸುಡುತ್ತಿರಲು ಹವಿಸ್ಸನ್ನು ಸುಡುವಂತೆ ವಾಸನೆ

ನ ಹಿ ವಿಂದಾಮಿ ಪಾನೀಯಂ ಶೋಷಿತಂ ಚ ದಿವಾಕರೈಃ ।
ಯಾವತ್ಕಮಂಡಲುಂ ವೀಕ್ಷೇ ಶುಷ್ಕಂ ತತ್ರಾಽಪಿ ತಜ್ಜಲಂ ॥ ೧೩ ॥
ತತೋಽಹಂ ಶೋಕಸಂತಪ್ತೋ ವಿಶೇಷಾತ್ ಕ್ಷುತ್ತೃಷಾರ್ದಿತಃ ।
ಉತ್ಪಪಾತ ಕ್ಷಿತೇರೂರ್ಧ್ವಂ ಪಶ್ಯಮಾನೋ ದಿವಂಪ್ರತಿ ॥ ೧೪ ॥
ತಾವತ್ಪಶ್ಯಾಮಿ ಗಗನೇ ಗೃಹಂಶೃಂಗಾರಭೂಷಿತಂ ।
ತತಸ್ತದ್ದ್ರಷ್ಟುಕಾಮೋಽಹಂ ಪ್ರಸ್ಥಿತೋ ರಾಜಸತ್ತಮ ॥ ೧೫ ॥
ಪ್ರಾಕಾರೇಣ ವಿಚಿತ್ರೇಣ ಕಪಾಟಾರ್ಗಲಭೂಷಿತಂ ।
ವಿಚಿತ್ರಶಿಖರೋಪೇತಂ ದ್ವಾರದೇಶಮುಪಾಗತಃ ॥ ೧೬ ॥
ಷಡಶೀತಿಸಹಸ್ರಾಣಿ ಯೋಜನಾನಾಂ ಸಮುಚ್ಛ್ರಯೋ ।
ತದರ್ಧಂತು ಪೃಥಕ್ತ್ವೇನ ಕಾಂಚನಂ ರತ್ನಭೂಷಿತಂ ॥ ೧೭ ॥
ತತ್ರ ಮಧ್ಯೇ ಪರಾಂ ಶಯ್ಯಾಂ ಪಶ್ಯಾಮಿ ನೃಪಸತ್ತಮ ।
ಶಯ್ಯೋಪರಿ ಶಯಾನಂತು ಪುರುಷಂ ದಿವ್ಯಮೂರ್ಧಜಂ ॥ ೧೮ ॥

---

ಯಾವರಿಸಿತು. ಆಗ ನನ್ನ ದೇಹವೂ ಒಣಗಿ ನನಗೆ ಸಹಿಸಲಸಾಧ್ಯವಾದ ಬಾಯಾರಿಕೆಯುಂಟಾಯಿತು.

೧೩. ದ್ವಾದಶಾದಿತ್ಯರಿಂದ ಬೆಂದ ಪೃಥ್ವಿಯಲ್ಲೆಲ್ಲಿಯೂ ಕುಡಿಯಲು ನೀರನ್ನು ಕಾಣಲಿಲ್ಲ. ಕಮಂಡಲುವನ್ನು ನೋಡಲು ಅದರಲ್ಲಿನ ಜಲವೂ ಒಣಗಿ ಹೋಗಿದ್ದಿತು.

೧೪. ಆಗ ನಾನು ಬಹಳ ಶೋಕಗೊಂಡು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಆಕಾಶವನ್ನೇ ನೋಡುತ್ತ ಭೂಮಿಯ ಮೇಲೆ ಬಿದ್ದೆನು.

೧೫. ಅಷ್ಟರಲ್ಲಿ ಆಕಾಶದಲ್ಲಿ ಮಹಾ ಶೃಂಗಾರಗಳಿಂದ ಕೂಡಿದ ಒಂದು ಪಟ್ಟಣವನ್ನು ಕಂಡು ಅದರ ನಿಜವನ್ನು ತಿಳಿಯುವ ಕುತೂಹಲದಿಂದ ಹೊರಟೆನು.

೧೬. ಆ ನಗರವು ವಿಚಿತ್ರವಾದ ಕೋಟೆಯಿಂದಲೂ, ಮಹಾದ್ವಾರ ಪರಿಘಗಳಿಂದಲೂ, ಬಹು ವಿಧಗಳಾದ ಕಳಶಗಳಿಂದಲೂ ಕೂಡಿದ್ದುದನ್ನು ಕಂಡು ನಾನು ದ್ವಾರದ ಸಮೀಪಕ್ಕೆ ಹೋದೆನು.

೧೭. ಎಂಬತ್ತಾರುಸಾವಿರ ಯೋಜನಗಳ ಎತ್ತರವುಳ್ಳ ಆ ಬಾಗಿಲುವಾಡದಲ್ಲಿ ಅರ್ಧ ಭಾಗವು ಪ್ರತ್ಯೇಕಿಸಲ್ಪಟ್ಟು ಚಿನ್ನದಿಂದಲೂ ನವರತ್ನಗಳಿಂದಲೂ ರಂಜಿಸುತ್ತಿದ್ದಿತು.

೧೮. ಮಹಾರಾಜನೆ! ಅದರ ಮಧ್ಯದಲ್ಲಿ ಅನರ್ಘವಾದ ಶಯ್ಯೆಯನ್ನು ನೋಡಿದೆನು. ಅದರ ಮೇಲೆ ದಿವ್ಯ ಕೇಶರಾಶಿಯಿಂದ ಶೋಭಿಸುವ ಪುರುಷನೊರ್ವನು ಮಲಗಿದ್ದನು.

ವಿಕುಂಚಿತಾಗ್ರಕೇಶಾಂತಂ ಸಮಸ್ತಂ ಯೋಜನಾಯುತಂ ।
ಮುಕುಟೇನ ವಿಚಿತ್ರೇಣ ದೀಪ್ತಿಕಾಂತೇನ ಶೋಭಿತಂ ॥ ೧೯ ॥
ಶ್ಯಾಮಂ ಕಮಲಪತ್ರಾಭಂ ಸುಪ್ರಭಂ ಚ ಸುನಾಸಿಕಂ ।
ಸಿಂಹಾಸ್ಯಮಾಯುತಭುಜಂ ಗಲ್ಲಶ್ಮಶ್ರುವರಾಂತಿಕಂ ॥ ೨೦ ॥
ತ್ರಿವಲೀಭಂಗಸುಭಗಂ ಕರ್ಣಕುಂಡಲಭೂಷಿತಂ ।
ವಿಶಾಲಾಭಂ ಸುಪೀನಾಂಗಂ ಪಾರ್ಶ್ವಸ್ವಾವರ್ತಭೂಷಿತಂ ॥ ೨೧ ॥
ಶೋಭಿತಂ ಕಟಿಭಾಗೇನ ವಿಭಕ್ತಂ ಜಾನುಸಂಘಯೋಃ ।
ಪದ್ಮಾಂಕಿತತಲಂ ದೇವಮಾತಾಮ್ರಸುನಖಾಂಗುಲಿಂ ॥ ೨೨ ॥
ಮೇಘನಾದಸುಗಂಭೀರಂ ಸರ್ವಾವಯವಸುಂದರಂ ।
ಶಯ್ಯಾಮಧ್ಯಗತಂ ದೇವಮಪಶ್ಯಂ ಪುರುಷೋತ್ತಮಂ ॥ ೨೩ ॥
ಶಂಖಚಕ್ರಗದಾಪಾಣಿಂ ಶಯಾನಂ ದಕ್ಷಿಣೇನ ತು ।
ಅಪಸೂತ್ರೋದ್ಯತಕರಂ ಸೂರ್ಯಾಯುತಸಮಪ್ರಭಂ ॥ ೨೪ ॥

---

೧೯. ಆತನ ಯೋಜನದ ಉದ್ದದ ಕೇಶಗಳು ಕೊನೆಯಲ್ಲಿ ಗುಂಗುರುಗಳಿಂದ ಕೂಡಿ ತಲೆಯು ವಿಚಿತ್ರವೂ ಮಹಾ ಪ್ರಕಾಶಮಯವೂ ಆದ ಕಿರೀಟದಿಂದ ಶೋಭಿಸುತ್ತಿದ್ದಿತು.

೨೦. ಆತನು ನೀಲಮೇಘಶ್ಯಾಮಲನೂ, ಕಮಲದಳಾಯತನೇತ್ರನೂ, ತೇಜೋರಾಶಿಯೂ, ಸುಂದರನಾಸಿಕನೂ, ಸಿಂಹಮುಖನೂ, ವಿಶಾಲಭುಜನೂ, ಕೆನ್ನೆಗಳಲ್ಲಿ ಶ್ಮಶ್ರುಚಿಹ್ನೆಗಳುಳ್ಳವನೂ ಆಗಿದ್ದನು.

೨೧. ಹೊಟ್ಟೆಯಲ್ಲಿ ಮನೋಹರಗಳಾದ ತ್ರಿವಳಿಗಳಿಂದಲೂ, ಕಿವಿಗಳಲ್ಲಿ ಕುಂಡಲಗಳಿಂದಲೂ, ವಿಶಾಲವಾದ ವಕ್ಷದಿಂದಲೂ, ಪುಷ್ಟಾವಯವಗಳಿಂದಲೂ, ಪಕ್ಕಗಳಲ್ಲಿ ಶುಭಚಕ್ರಗಳಿಂದಲೂ ಶೋಭಿಸುತ್ತಿದ್ದನು.

೨೨. ಶೋಭಿಸುವ ನಡುವಿನಿಂದಲೂ, ಸುಂದರಗಳಾದ ಮೊಣಕಾಲು ಕೆಳಗಾಲುಗಳಿಂದಲೂ, ಪದ್ಮಚಿಹ್ನೆಗಳ ಪಾದಗಳಿಂದಲೂ, ಕೆಂಪಾದ ಉಗುರುಳ್ಳ ಬೆರಳುಗಳಿಂದಲೂ ಆ ದೇವನು ರಾಜಿಸುತ್ತಿದ್ದನು.

೨೩. ಮೇಘಗರ್ಜನೆಯಂತೆ ಗಂಭೀರವಾಣಿಯವನೂ, ಸರ್ವಾಂಗಸುಂದರನೂ, ಅನರ್ಘಶಯ್ಯೆಯ ಮಧ್ಯದಲ್ಲಿ ಮಲಗಿರುವವನೂ ಆದ ಪುರುಷೋತ್ತಮನನ್ನು ನಾನು ಕಂಡೆನು.

೨೪. ಶಂಖ, ಚಕ್ರ, ಗದೆಗಳನ್ನು ಹಿಡಿದುಕೊಂಡು, ಬಲಪಕ್ಕಕ್ಕೆ ತಿರುಗಿ ಮಲಗಿ, ಜಪಮಾಲೆಯನ್ನು ಕೈಯಲ್ಲೆತ್ತಿ ಹಿಡಿದು, ಹತ್ತುಸಾವಿರ ಸೂರ್ಯರ ತೇಜಸ್ಸಿನಿಂದ ಕೂಡಿದ ಆತನನ್ನು ನಾನು ನೋಡಿದೆನು.

ತಂ ದೃಷ್ಟ್ವಾ ಭಕ್ತಿಮಾನ್ದೇವಂ ಸ್ತೋತುಕಾಮೋ ವ್ಯವಸ್ಥಿತಃ ।
ಜಯೇಶ ಜಯ ವಾಗೀಶ ಜಯ ದಿವ್ಯಾಂಗಭೂಷಣ ॥ ೨೫ ॥
ಜಯ ದೇವಪತೇ ಶ್ರೀಮನ್ಸಾಕ್ಷಾದ್ಬ್ರಹ್ಮ ಸನಾತನ ।
ತವ ಲೋಕಾಃ ಶರೀರಸ್ಥಾಸ್ತ್ವಂ ಗತಿಃ ಪರಮೇಶ್ವರ ॥ ೨೬ ॥
ತ್ವದಾಧಾರಾ ಹಿ ದೇವೇಶ ಸರ್ವೇ ಲೋಕಾ ವ್ಯವಸ್ಥಿತಾಃ ।
ತ್ವಂ ಶ್ರೇಷ್ಠಃ ಸರ್ವಸತ್ವಾನಾಂ ತ್ವಂ ಕರ್ತಾ ಧರಣೀಧರಃ ॥ ೨೭ ॥
ತ್ವಂ ಹೌತ್ರಮಗ್ನಿಹೋತ್ರಾಣಾಂ ಸೂತ್ರಮಂತ್ರಸ್ತ್ವಮೇವ ಚ ।
ಗೋಕರ್ಣಂ ಭದ್ರಕರ್ಣಂ ಚ ತ್ವಂ ಚ ಮಾಹೇಶ್ವರಂ ಪದಂ ॥ ೨೮ ॥
ತ್ವಂ ಕೀರ್ತಿಃ ಸರ್ವಕೀರ್ತೀನಾಂ ದೈನ್ಯಪಾಪಪ್ರಣಾಶಿನೀ ।
ತ್ವಂ ನೈಮಿಷಂ ಕುರುಕ್ಷೇತ್ರಂ ತ್ವಂ ಚ ವಿಷ್ಣುಪದಂ ಪರಂ ॥ ೨೯ ॥
ತ್ವಯಾ ತು ಲೀಲಯಾ ದೇವ ಪದಾಕ್ರಾಂತಾ ಚ ಮೇದಿನೀ ।
ತ್ವಯಾ ಬದ್ಧೋ ಬಲಿರ್ದೇವ ತ್ವಯೇಂದ್ರಸ್ಯ ಪದಂ ಕೃತಂ ॥ ೩೦ ॥

---

೨೫. ಆ ದೇವದೇವನನ್ನು ನೋಡಿ ಭಕ್ತಿಭಾವದಿಂದ ಸ್ತೋತ್ರಮಾಡಲುಪಕ್ರಮಿಸಿದೆನು. ''ಸರ್ವೇಶ್ವರನೆ! ವಾಗಧಿಪತಿಯೆ! ದಿವ್ಯಾಭರಣಧಾರಿಯೆ! ನಿನಗೆ ಜಯವಾಗಲಿ.

೨೬. ದೇವನಾಯಕನೆ! ಶ್ರೀನಿವಾಸನೆ! ಸನಾತನವಾದ ಬ್ರಹ್ಮವಸ್ತುವೆ! ಎಲ್ಲ ಲೋಕಗಳೂ ನಿನ್ನ ಶರೀರದಲ್ಲಿಯೇ ಅಡಗಿರುವುವು. ಅವುಗಳಿಗೆ ಪರಮೇಶ್ವರನಾದ ನೀನೇ ಗತಿಯು.

೨೭. ದೇವೇಶ್ವರನೆ! ನಿನ್ನ ಆಧಾರದ ಬಲದಿಂದಲೇ ಸಕಲ ಲೋಕಗಳೂ ವ್ಯವಸ್ಥೆಗೊಂಡಿರುವುವು. ಸಕಲ ಪ್ರಾಣಿಗಳಲ್ಲಿಯೂ ನೀನೇ ಶ್ರೇಷ್ಠನು. ಲೋಕಕರ್ತನು. ಭೂಮಿಯನ್ನುದ್ಧಾರಮಾಡುವವನು.

೨೮. ನೀನೇ ಅಗ್ನಿಹೋತ್ರಗಳಲ್ಲಿ ಹೋತೃವು. ನೀನೇ ಸೂತ್ರವು, ಮಂತ್ರವು. ಗೋಕರ್ಣ, ಭದ್ರಕರ್ಣ, ಮಹೇಶ್ವರಗಳೆಂಬ ಪದಗಳೂ ನೀನೇ ಆಗಿರುವೆ.

೨೯. ನೀನೇ ದೈನ್ಯದ ಪಾಪವನ್ನು ನಾಶಗೊಳಿಸುವ ಕೀರ್ತಿಯು. ಓ ಸ್ವಾಮಿಯೆ! ಪುಣ್ಯಕ್ಷೇತ್ರಗಳಾದ ನೈಮಿಷ ಮತ್ತು ಕುರುಕ್ಷೇತ್ರಗಳು ನೀನೆ. ನೀನೇ ಅತ್ಯುತ್ತಮವಾದ ವಿಷ್ಣುಪದವೂ ಆಗಿರುವೆ.

೩೦. ದೇವ! ನೀನು ಈ ಭೂಮಂಡಲವನ್ನೆಲ್ಲವನ್ನೂ ಒಂದಡಿಯಿಂದಲೇ ಲೀಲಾಜಾಲವಾಗಿ ಆಕ್ರಮಿಸಿದೆ. ನೀನೇ ದೇವೇಂದ್ರನಿಗೆ ಇಂದ್ರಪದವಿಯನ್ನು ಕಲ್ಪಿಸಿಕೊಟ್ಟೆ.

ತ್ವಂ ಕಲಿರ್ದ್ವಾಪರಂ ದೇವ ತ್ರೇತಾ ಕೃತಯುಗಂ ತಥಾ ।
ಪ್ರಲಂಬದಮನಶ್ಚ ತ್ವಂ ಸ್ರಷ್ಟಾ ತ್ವಂ ಚ ವಿನಾಶಕೃತ್ ॥ ೩೧ ॥
ತ್ವಯಾ ವೈ ಧಾರ್ಯತೇ ಲೋಕಾಸ್ತ್ವಂ ಕಾಲಃ ಸರ್ವಸಂಕ್ಷಯಃ ।
ತ್ವಯಾ ಹಿ ದೇವ ಸೃಷ್ಟಾಸ್ತಾಃ ಸರ್ವಾ ವೈ ದೇವಯೋನಯಃ ॥ ೩೨ ॥
ತ್ವಂ ಪಂಥಾಃ ಸರ್ವಲೋಕಾನಾಂ ತ್ವಂ ಚ ಮೋಕ್ಷಃ ಪರಾ ಗತಿಃ ।
ಬ್ರಹ್ಮಾ ತ್ವದುದ್ಭವೋ ದೇವೋ ರಜೋರೂಪಸ್ಸನಾತನಃ ।
ರುದ್ರಃ ಕ್ರೋಧೋದ್ಭವೋಽಪ್ಯೇವಂ ತ್ವಂ ಚ ಸತ್ವೇ ವ್ಯವಸ್ಥಿತಃ ॥ ೩೩ ॥
ಏತಚ್ಚರಾಚರಂ ದೇವ ಕ್ರೀಡನಾರ್ಥಂ ತ್ವಯಾ ಕೃತಂ ।
ಏವಂ ಸಂತಪ್ತದೇಹೇನ ಸ್ತುತೋ ದೇವೋ ಮಯಾ ಪ್ರಭುಃ ॥ ೩೪ ॥
ಭಕ್ತ್ಯಾ ಪರಮಯಾ ರಾಜನ್ ಸರ್ವಭೂತಪತಿಃ ಪ್ರಭುಃ ।
ಸ್ತುವನ್ ವೈ ತತ್ರ ಪಶ್ಯಾಮಿ ವಾರಿಪೂರ್ಣಾಂಸ್ತತೋ ಘಟಾನ್ ॥ ೩೫ ॥

---

೩೧. ಕೃತ, ತ್ರೇತ, ದ್ವಾಪರ, ಕಲಿಗಳೆಂಬ ಚತುರ್ಯುಗಗಳೂ ನೀನೇ ಆಗಿರುವೆ. ನೀನೇ ಪ್ರಲಂಬ ದೈತ್ಯನನ್ನು ಮರ್ದಿಸಿದೆ. ಜಗತ್ತನ್ನು ಸೃಜಿಸುವವನೂ, ಲಯಗೊಳಿಸುವವನೂ ನೀನೆ.

೩೨. ಜಗತ್ತನ್ನು ಭರಿಸಿ ಪೋಷಿಸುತ್ತ ಕಟ್ಟಕಡೆಗೆ ಅದನ್ನು ಸಂಪೂರ್ಣವಾಗಿ ನಾಶಗೊಳಿಸುವ ಕಾಲನೂ ನೀನೆ ಆಗಿರುವೆಯಲ್ಲದೆ ಸಮಸ್ತ ದೇವತೆಗಳನ್ನು ಸೃಜಿಸಿದವನೂ ಆಗಿರುವೆ.

೩೩. ಸಮಸ್ತ ಜನರಿಗೂ ನೀನೇ ದಾರಿಯಾಗಿರುವೆಯಲ್ಲದೆ ಮೋಕ್ಷಸ್ವರೂಪನೂ ಆಗಿರುವೆ. ನಿನ್ನ ಭಕ್ತವೃಂದಕ್ಕೆಲ್ಲ ನೀನೇ ಗತಿಸ್ವರೂಪನು. ರಜೋರೂಪನೂ, ಸನಾತನನೂ ಆದ ಬ್ರಹ್ಮದೇವನು ನಿನ್ನಿಂದಲೇ ಉದ್ಭವಿಸಿರುವನು. ನಿನ್ನ ಕ್ರೋಧದಿಂದ ರುದ್ರನುದ್ಭವಿಸಿದನಷ್ಟೆ. ಆದರೆ ನೀನುಮಾತ್ರ ಕೇವಲ ಸತ್ತ್ವಗುಣದಲ್ಲಿಯೇ ನೆಲಸಿರುವೆ.

೩೪. ಎಲೈ ಸ್ವಾಮಿಯೆ! ನೀನು ಈ ದೃಶ್ಯ ಪ್ರಪಂಚವೆಲ್ಲವನ್ನೂ ಕ್ರೀಡೆಗೋಸ್ಕರವಾಗಿಯೆ ನಿರ್ಮಿಸಿರುವೆ.'' ಅಯ್ಯಾ ಧರ್ಮನಂದನನೇ! ಕೇವಲ ಸಂತಪ್ತಶರೀರನಾಗಿದ್ದ ನಾನು ದೇವದೇವನಾದ ಆ ಪ್ರಭುವನ್ನು ಈ ರೀತಿ ಸ್ತುತಿಸಿದೆನು.

೩೫. ದೊರೆಯೆ! ಈ ಪ್ರಕಾರವಾಗಿ ಪರಮಭಕ್ತಿಯಿಂದ ನಾನು ಆ ಸ್ವಾಮಿಯನ್ನು ಸ್ತುತಿಸುತ್ತಿದ್ದಂತೆಯೆ ಆದೇ ಪ್ರದೇಶದಲ್ಲಿಯೇ ವಾರಿಪೂರ್ಣಗಳಾದ ಘಟಗಳನ್ನು ಕಂಡೆನು.

ತತೋ ಮಯಾ ವಿಸ್ಮೃತಾ ಯಾ ತೃಷಾ ಸಾವರ್ಧಿತಾ ಪುನಃ ।
ಉಪಾಸರ್ಪಂ ತತಸ್ತಸ್ಯ ಪಾರ್ಶ್ವಂ ವೈ ಪುರುಷಸ್ಯಹಿ ॥ ೩೬ ॥
ಪಾನೀಯಂ ಪಾತುಕಾಮೇನ ಚಿಂತಿತಂ ಚ ಮಯಾ ಪುನಃ ।
ನಾಽಪಶ್ಯತ ಹಿ ಮಾಂ ಚೈಷ ಸುಪ್ತೋ ನ ಚ ಪ್ರಬುಧ್ಯತೇ ॥ ೩೭ ॥
ಯಸ್ತು ಪಾಪೇನ ಸಂಮೂಢಃ ಸುಖಂ ಸುಪ್ತಂ ಪ್ರಬೋಧಯೇತ್ ।
ಜಾಯತೇ ತಸ್ಯ ಪಾಪಸ್ಯ ಬ್ರಹ್ಮಹತ್ಯಾಫಲಂ ಮಹತ್ ॥ ೩೮ ॥
ಏವಂ ಸಂಚಿಂತ್ಯಮಾನೇ ತು ದ್ವಿತೀಯೋಹ್ಯಾಗತಃಪುಮಾನ್ ।
ನೇಕ್ಷತೇ ಜಲ್ಪತೇ ಕಿಂಚಿದ್ವಾಮಸ್ಕಂಧೇ ಮೃಗಾಜಿನಂ ॥ ೩೯ ॥
ಜಟೀ ಕಮಂಡಲುಧರೋ ದಂಡೀಮೇಖಲಯಾವೃತಃ ।
ಭಸ್ಮೋನ್ಮೃದಿತಸರ್ವಾಂಗೋ ಮಹಾತೇಜಾಸ್ತ್ರಿಲೋಚನಃ ॥ ೪೦ ॥
ಯಾವತ್ತಂ ಸ್ತೋತುಕಾಮೋಽಹಮಪಶ್ಯಂ ಸ್ವಚ್ಛಚಕ್ಷುಷಾ ।
ತಾವತ್ಸರ್ವಾಂಗಸಂಭೂತ್ಯಾ ಮಹತ್ಯಾ ರೂಪಸಂಪದಾ ॥ ೪೧ ॥
ಅಪಶ್ಯಂ ಸಂವೃತಾಂ ನಾರೀಂ ಸರ್ವಾಭರಣಭೂಷಿತಾಂ ।
ದೃಷ್ಟ್ವಾ ತಾಂ ಪತಿತೋ ಭೂಮೌ ಜಯಸ್ವೇತಿ ಬ್ರುವಂಸ್ತತಃ ॥ ೪೨ ॥

---

೩೬. ತರುವಾಯ ಮರೆತೇಹೋಗಿದ್ದ ನನ್ನ ನೀರಡಿಕೆಯು ಮತ್ತೆ ಬೆಳೆಯ ತೊಡಗಿತು. ಆಗ ನಾನು ಆ ಪುರುಷನ ಪಾರ್ಶ್ವಕ್ಕೆ ಸರಿದೆನು.

೩೭. ನೀರನ್ನು ಕುಡಿಯಲಪೇಕ್ಷಿಸಿದ ನಾನು ಮತ್ತೆ ಯೋಚಿಸತೊಡಗಿದೆನು; "ಈ ಪುರುಷನಾದರೋ ನನ್ನನ್ನು ನೋಡಲೇ ಇಲ್ಲವು. ನಿದ್ದೆಹೋಗಿದ್ದ ಈತನು ಎಚ್ಚರಗೊಳ್ಳಲೂ ಇಲ್ಲವು.

೩೮. ಯಾವ ಪಾಪಿಷ್ಠನು ಸುಖಸುಪ್ತನಾಗಿರುವವನನ್ನು ಎಚ್ಚರಗೊಳಿಸುತ್ತಾನೆಯೋ ಆ ಮೂಢನು ಒಡನೆಯೇ ಮಹತ್ತರವಾದ ಬ್ರಹ್ಮಹತ್ಯಾದೋಷಕ್ಕೆ ಭಾಗಿಯಾಗುತ್ತಾನೆ."

೩೯. ನಾನು ಈ ರೀತಿ ಚಿಂತಿಸುತ್ತಿರುವಂತೆಯೇ ಎರಡನೆಯವನೊಬ್ಬನು ಬಂದನು. ಎಡಭುಜದಮೇಲೆ ಕೃಷ್ಣಾಜಿನವನ್ನು ಹೊದೆದಿದ್ದ ಆ ಪುರುಷನಾದರೋ ನನ್ನನ್ನು ನೋಡಲೂ ಇಲ್ಲವಲ್ಲದೆ ನನ್ನೊಡನೆ ಮಾತನಾಡಲೂ ಇಲ್ಲವು.

೪೦. ಆತನು ಜಟೆಗಳನ್ನು ಬಿಟ್ಟುಕೊಂಡು, ಕೈಯಲ್ಲಿ ಕಮಂಡಲುವನ್ನು ಹಿಡಿದು, ಮತ್ತೊಂದು ಕೈಯಲ್ಲಿ ದಂಡವನ್ನು ಧರಿಸಿ, ಸೊಂಟದಲ್ಲಿ ಉಡಿನೂಲಿನಿಂದ ಶೋಭಿಸುತ್ತ, ಸರ್ವಾಂಗಗಳಿಗೂ ಭಸ್ಮವನ್ನು ಲೇಪಿಸಿಕೊಂಡು, ಮೂರು ಕಣ್ಣುಗಳನ್ನೊಳಕೊಂಡು ಮಹಾ ತೇಜಸ್ವಿಯಾಗಿ ವಿರಾಜಿಸುತ್ತಿದ್ದನು.

೪೧-೪೨. ನಾನು ಆತನನ್ನು ಸ್ತುತಿಸಬಯಸಿ ಸ್ವಚ್ಛದೃಷ್ಟಿಯಿಂದ ಆತನನ್ನು ನೋಡುವಷ್ಟರಲ್ಲಿಯೇ, ಸರ್ವಾಂಗ ಸಂಭೂತವಾದ ಸೌಂದರ್ಯವುಳ್ಳ

ಜಯ ರುದ್ರಾಂಗಸಂಭೂತೇ ಜಯ ಬ್ರಾಹ್ಮಿ ಸನಾತನಿ ।
ಜಯ ಕೌಮಾರಿ ಮಾಹೇಂದ್ರಿ ವೈಷ್ಣವೀ ವಾರುಣೀ ತಥಾ ॥ ೪೩ ॥
ಜಯ ಕೌಬೇರಿ ಸಾವಿತ್ರಿ ಜಯಧಾತ್ರಿ ವರಾನನೇ ।
ತೃಷ್ಣಯಾ ತಪ್ತದೇಹಸ್ಯ ರಕ್ಷಾಂಕುರು ಚರಾಚರೇ ॥ ೪೪ ॥

ಶ್ರೀ ದೇವ್ಯುವಾಚ :—

ಪ್ರಸನ್ನಾ ವಿಪ್ರಶಾರ್ದೂಲ ತವವಾಕ್ಯೈಃಸುಶೋಭನೈಃ ।
ವರ್ತ್ತತೇ ಮಾನಸೇ ಯತ್ತೇ ಮಯಾ ಜ್ಞಾತಂ ದ್ವಿಜೋತ್ತಮ ॥ ೪೫ ॥
ಶೃಣು ವಿಪ್ರ ಮಮಾಽಪ್ಯಸ್ತಿ ವ್ರತಮೇತತ್ಸುದಾರುಣಂ ।
ಸ್ತ್ರೀಲಘುತ್ವಾನ್ಮಯಾರಬ್ಧಂ ದುಷ್ಕರಂ ಮಂದಮೇಧಯಾ ॥ ೪೬ ॥
ಯದಿ ಭಾವೀ ಚ ಮೇ ಪುತ್ರೋ ಧರ್ಮಿಷ್ಠೋ ಲೋಕವಿಶ್ರುತಃ ।
ವಿಪ್ರಸ್ಯ ತು ಸ್ತನಂ ದತ್ವಾ ಪಶ್ಚಾದ್ದಾಸ್ಯಾಮಿ ಬಾಲಕೇ ॥ ೪೭ ॥

---

ವಳಾಗಿ, ಸರ್ವಾಭರಣಭೂಷಿತೆಯಾಗಿದ್ದ ನಾರಿಯೊರ್ವಳನ್ನು ಕಂಡು "ತಾಯಿ! ಭಕ್ತರ ಅಭೀಷ್ಟಸಿದ್ಧಿಗಾಗಿ ಜಯಶೀಲೆಯಾಗು" ಎಂದು ನುಡಿಯುತ್ತ ಭೂಮಿಯಲ್ಲಿ ಬಿದ್ದು ನಮಸ್ಕರಿಸಿದೆನು.

೪೩. "ಓ ರುದ್ರಾಂಗಸಂಭೂತೆಯೆ ಜಯಿಸು! ಬ್ರಾಹ್ಮಿಯೂ, ಸನಾತನೆಯೂ, ಕೌಮಾರಿಯೂ, ಮಹೇಂದ್ರಿಯೂ, ವೈಷ್ಣವಿಯೂ, ವಾರಾಹೀದೇವಿಯೂ ಆದ ಓ ತಾಯೇ ಜಯಜಯ!

೪೪. ಕುಬೇರಶಕ್ತಿಯೂ, ಸಾವಿತ್ರಿಯೂ, ಧಾತ್ರಿಯೂ ಆದ ವರಾನನೆಯೆ! ನೀರಡಿಕೆಯಿಂದ ಬೆಂದೊಡಲಿನವನಾದ ನನಗೆ ರಕ್ಷೆಯನ್ನು ನೀಡು. ಚರಾಚರ ಸ್ವರೂಪಿಣಿಯೆ! ಕಾಪಾಡು" ಎಂದು ನಾನು ಆಕೆಯನ್ನು ಸ್ತುತಿಸಿದೆನು.

೪೫. ಶ್ರೀ ದೇವಿಯು ಹೇಳುತ್ತಾಳೆ:—ಎಲೈ ವಿಪ್ರಶಾರ್ದೂಲನೇ! ಈ ನಿನ್ನ ಶುಭವಾಕ್ಯಗಳಿಂದ ನಾನು ಪ್ರಸನ್ನಳಾಗಿರುವೆನು. ದ್ವಿಜೋತ್ತಮಾ! ನಿನ್ನ ಮನಸ್ಸಿನಲ್ಲಿರುವುದನ್ನು ನಾನು ತಿಳಿದಿರುವೆನು.

೪೬. ಎಲೈ ವಿಪ್ರನೇ! ಕೇಳು. ನನಗೊಂದು ದಾರುಣತಮವಾದ ವ್ರತವಿರುವುದು. ಮಂದಬುದ್ಧಿಯವಳಾದ ನಾನು ಸ್ತ್ರೀಲಾಘವದಿಂದ ಆ ವ್ರತವನ್ನು ಆರಂಭಿಸಿಬಿಟ್ಟಿರುವೆನು.

೪೭. "ಮುಂದೆ ನನಗೊಬ್ಬ ಧರ್ಮಿಷ್ಠನೂ, ಲೋಕವಿಖ್ಯಾತನೂ ಆದ ಪುತ್ರನುಂಟಾದರೆ, ಆಗ ನಾನು ಮೊದಲು ವಿಪ್ರನೊಬ್ಬನಿಗೆ ಸ್ತನ್ಯಪಾನಮಾಡಿಸಿ ಆ ತರುವಾಯ ಆ ನನ್ನ ಬಾಲಕನಿಗೆ ಪಾನಮಾಡಿಸುವೆನು" ಎಂಬುದೇ ಆ ವ್ರತವು.

ಸ ಮೇ ಪುತ್ರಃ ಸಮುತ್ಪನ್ನೋ ಯಥೋಕ್ತೋ ಮೇ ಮಹಾಮುನೇ ।
ಸ್ತನಂ ಪಿಬ ತ್ವಂ ವಿಪ್ರೇಂದ್ರ ಯದಿ ಜೀವಿತುಮಿಚ್ಛಸಿ ॥ ೪೮ ॥

ಶ್ರೀ ಮಾರ್ಕಂಡೇಯ ಉವಾಚ:—

ಅಕಾರ್ಯಮೇತದ್ವಿಪ್ರಾಣಾಂ ಯಸ್ತ್ವಮಂ ಪಿಬತೇ ಸ್ತನಂ ।
ಪುನಶ್ಚೈವೋಪನಯನಂ ವ್ರತಸಿದ್ಧಿಂ ನ ಗಚ್ಛತಿ ॥ ೪೯ ॥
ಬ್ರಾಹ್ಮಣತ್ವಂ ತ್ರಿಭಿರ್ಲೋಕೈರ್ದುರ್ಲಭಂ ಪದ್ಮಲೋಚನೇ ।
ಸಂಸ್ಕಾರೈಃ ಸಂಸ್ಕೃತೋ ವಿಪ್ರೋ ಯೈಶ್ಚ ಜಾಯೇತ ತಚ್ಛೃಣು ॥ ೫೦ ॥
ಪ್ರಥಮಂ ಚೈವ ನಾರೀಷು ಸಂಸ್ಕಾರೈರ್ಬೀಜವಾಪನಂ ।
ಬೀಜಪ್ರಕ್ಷೇಪಣಾದೇವ ಬೀಜಕ್ಷೇಪಃ ಸ ಉಚ್ಯತೇ ॥ ೫೧ ॥
ತದಂತೇ ಚ ಮಹಾಭಾಗೇ ಗರ್ಭಾಧಾನಂ ದ್ವಿತೀಯಕಂ ।
ಪುಂಸವನಂ ತೃತೀಯಂತು ಸೀಮಂತಂ ಚ ಚತುರ್ಥಕಂ ॥ ೫೨ ॥
ಪಂಚಮಂ ಜಾತಕರ್ಮ ಸ್ಯಾನ್ನಾಮ ವೈ ಷಷ್ಠಮುಚ್ಯತೇ ।
ನಿಷ್ಕ್ರಾಮಃ ಸಪ್ತಮಶ್ಚೈವ ಹ್ಯನ್ನಪ್ರಾಶನಮಷ್ಟಮಂ ॥ ೫೩ ॥
ನವಮಂ ವೈ ಚೂಡಕರ್ಮ ದಶಮಂ ಮೌಂಜಿಬಂಧನಂ ।
ಐಷಿಕಂ ದಾರ್ವಿಕಂ ಚೈವ ಸೌಮಿಕಂ ಭೌಮಿಕಂ ತಥಾ ॥ ೫೪ ॥

---

೪೮. ಎಲೈ ಮಹಾಮುನಿಯೆ! ಈಗ ನಾನು ಕೋರಿದಂಥ ಸತ್ಪುತ್ರನು ನನ್ನಲ್ಲಿ ಜನಿಸಿರುವನು. ಆದುದರಿಂದ ಇದೀಗ ನೀನು ಜೀವಿಸಬಯಸುವೆಯಾದರೆ ನನ್ನ ಸ್ತನ್ಯವನ್ನು ಪಾನಮಾಡು.

೪೯. ಮಾರ್ಕಂಡೇಯನು ಹೇಳುತ್ತಾನೆ:—ತಾಯೆ! ವಿಪ್ರರಿಗೆ ನೀನು ಅಪ್ಪಣೆಕೊಡಿಸಿದುದು ಅಕಾರ್ಯವು. ವಿಪ್ರನು ನೀನು ಹೇಳಿದಂತೆ ಸ್ತನ್ಯಪಾನ ಮಾಡಿದ್ದೇ ಆದರೆ ಅವನು ಪುನಃ ಉಪನೀತನಾಗುವವರೆಗೂ ವ್ರತಸಿದ್ಧಿಯನ್ನು ಪಡೆಯುವುದಿಲ್ಲವು.

೫೦. ಓ ಕಮಲನೇತ್ರೆಯೆ! ಬ್ರಾಹ್ಮಣ್ಯವೆಂಬುದು ಮೂರುಲೋಕಗಳಲ್ಲಿಯೂ ದುರ್ಲಭವಾದುದು. ಮಾನವನು ಯಾವ ಯಾವ ಸಂಸ್ಕಾರಗಳಿಂದ ಸಂಸ್ಕೃತನಾಗಿ ವಿಪ್ರನಾಗುವನೆಂಬುದನ್ನು ಹೇಳುವೆನು ; ಕೇಳು.

೫೧. ಮೊದಲು ನಾರಿಯರಲ್ಲಿ ಸಂಸ್ಕಾರದಿಂದಲೇ ಆಗುವ ಕರ್ಮವು ಬೀಜಾವಾಪನವು. ಬೀಜಪ್ರಕ್ಷೇಪಣದಿಂದಲೇ ಆ ಕರ್ಮವು ಬೀಜಕ್ಷೇಪವೆನಿಸುವುದು.

೫೨. ಇದಾದಮೇಲೆ ಗರ್ಭಾಧಾನ; ಇದು ಎರಡನೆಯ ಸಂಸ್ಕಾರವು. ಮೂರನೆಯದೇ ಪುಂಸವನ; ನಾಲ್ಕನೆಯದು ಸೀಮಂತವು.

೫೩. ಇದಾದ ಬಳಿಕ ಐದನೆಯದಾಗಿ ಜಾತಕರ್ಮ, ನಾಮಕರಣ ಆರನೆಯದು; ಏಳನೆಯದೇ ನಿಷ್ಕ್ರಾಮಕರ್ಮ; ಅನ್ನಪ್ರಾಶನವು ಎಂಟನೆಯದು.

೫೪-೫೫. ಒಂಬತ್ತನೆಯದು ಚೂಡಾಕರ್ಮ, ಮೌಂಜೀಬಂಧನವು ಹತ್ತ

ಪತ್ನೀ ಸಂಯೋಜನಂ ಚಾಽನ್ಯದ್ದೈವಕರ್ಮ ತತಃ ಪರಂ ।
ಮಾನುಷ್ಯಂ ಪಿತೃಕರ್ಮ ಸ್ಯಾದ್ದಶಮಾಷ್ಟಾಸು ಶೋಭನೇ ॥ ೫೫ ॥
ಭೂತಂ ಭವ್ಯಂ ತಥೇಷ್ಟಂ ಚ ಪಾರ್ವಣಂ ಚ ತತಃ ಪರಂ ॥ ೫೬ ॥
ಶ್ರಾದ್ಧಂ ಶ್ರಾವಣ್ಯಾಮಾಗ್ರಯಣಂ ಚ
ಚೈತ್ರಾಶ್ವಯುಜ್ಯಾಂ ದರ್ಶಪೌರ್ಣಮಾಸ್ಯಾಂ ।
ನಿರೂಢಪಶುಸವನಸೌತ್ರಾಮಣ್ಯ
ಗ್ನಿಷ್ಟೋಮಾಽತ್ಯಗ್ನಿಷ್ಟೋಮಾಃ ॥ ೫೭ ॥
ಷೋಡಶೀವಾಜಪೇಯಾಽತಿರಾತ್ರಾ
ಪ್ತೋರ್ಯಾಮೋ ದಶವಾಜಪೇಯಾಃ ।
ಸರ್ವಭೂತೇಷು ಕ್ಷಾಂತಿರನಸೂಯಾ
ಶೌಚ ಮಂಗಲಮಕಾರ್ಪಣ್ಯಮಸ್ಪೃಹೇತಿ ॥ ೫೮ ॥
ಏಭಿರಷ್ಟಚತ್ವಾರಿಂಶದ್ಭಿಃ ಸಂಸ್ಕಾರೈಃ
ಸಂಸ್ಕೃತೋ ಬ್ರಾಹ್ಮಣೋ ಭವತಿ ॥ ೫೯ ॥
ಏವಂ ಜ್ಞಾತ್ವಾ ಮಹಾಭಾಗೇ ನತು ಮಾಂ ಪಾತುಮರ್ಹಸಿ ।
ಶಿಶುಪೇಯಂ ಸ್ತನಂ ಭದ್ರೇ ಕಥಂ ವೈ ಮದ್ವಿಧಃ ಪಿಬೇತ್ ॥ ೬೦ ॥
ಮಮೈತದ್ವಚನಂ ಶ್ರುತ್ವಾ ನಾರೀ ವಚನಮಬ್ರವೀತ್ ॥ ೬೧ ॥
ಯದಿ ತ್ವಂ ನ ಪಿಬೇಃ ಸ್ತನ್ಯಂ ಪಯೋ ಬಾಲೋ ಮರಿಷ್ಯತಿ ।
ಶ್ರೂಯತೇ ತ್ರಿಷು ಲೋಕೇಷು ವೇದೇಷು ಚ ಸ್ಮೃತಿಷ್ವಪಿ ।

---

ನೆಯ ಕರ್ಮ; ತರುವಾಯ ಐಷಿಕ, ದಾರ್ವಿಕ, ಸೌಮಿಕ, ಭೌಮಿಕ, ವಿವಾಹ, ದೈವ, ಮಾನುಷ, ಪಿತೃಕರ್ಮಗಳು ಎಂದು ಹದಿನೆಂಟು ಕರ್ಮಗಳಿರುತ್ತವೆ.

೫೬–೫೯. ಇಷ್ಟಿಯಲ್ಲದೆ, ಭೂತ, ಭವ್ಯ, ಇಷ್ಟ, ಪಾರ್ವಣ, ಶ್ರಾದ್ಧ, ಶ್ರಾವಣಿಯಲ್ಲಿ ಆಗ್ರಯಣ(ಉಪಾಕರ್ಮ),ಚೈತ್ರ, ಆಶ್ವಯುಜ ಮಾಸಗಳಲ್ಲಿಯೂ ದಶಪೌರ್ಣಮಾಸಿಗಳಲ್ಲಿಯೂ, ಷೋಡಶೀ, ವಾಜಪೇಯ, ಅತಿರಾತ್ರ, ಆಪ್ತೋ ರ್ಯಾಮ, ದಶವಾಜಪೇಯಗಳೂ, ಸರ್ವಭೂತಗಳಲ್ಲಿಯೂ ಕ್ಷಮೆ, ಅಸೂಯೆ ಇಲ್ಲದಿರುವುದು, ಶೌಚಮಂಗಲ, ಅಕೃಪಣತೆ, ಅಸ್ಪೃಹೆ ಎಂಬೀ ನಲವತ್ತೆಂಟು ಸಂಸ್ಕಾರಗಳಿಂದ ಸಂಸ್ಕೃತನಾಗಿ ಬ್ರಾಹ್ಮಣನಾಗುತ್ತಾನೆ.

೬೦. ಎಲೌ ಮಹಾಭಾಗ್ಯಶಾಲಿನಿಯೆ! ಇದನ್ನು ಅರಿತುಕೊಂಡು ನನಗೆ ಸ್ತನ್ಯಪಾನವನ್ನು ಮಾಡಿಸಲುಜ್ಜುಗಗೊಳ್ಳಬೇಡ. ಎಳೆಗೂಸುಗಳು ಕುಡಿಯ ಬೇಕಾದ ಸ್ತನ್ಯವನ್ನು ನನ್ನಂಥವನು ಕುಡಿಯುವುದು ಹೇಗೆ!

೬೧. ಈ ನನ್ನ ಮಾತನ್ನು ಕೇಳಿ ಆ ನಾರಿಯು ನನ್ನನ್ನು ಕುರಿತು ಹೇಳಿ ದಳು:

ಮುಚ್ಯತೇ ಸರ್ವಪಾಪೇಭ್ಯೋ ಭ್ರೂಣಹತ್ಯಾ ನ ಮುಂಚತಿ ॥ ೬೨ ॥
ಭವಿತ್ರೀ ತವ ಹತ್ಯಾ ಚ ಮಹಾಭಾಗವತಃ ಪುನಃ ।
ಜನ್ಮಾನಿ ಚ ಶತಾನ್ಯಷ್ಟೌ ಕ್ಲಿಶ್ಯತೇ ಭ್ರೂಣಹತ್ಯಯಾ ॥ ೬೩ ॥
ಮೃತಃ ಶುನತ್ವಂಚಾಪ್ನೋತಿ ವರ್ಷಾಣಾಂತು ಶತತ್ರಯಂ ।
ತತಸ್ತಸ್ಯ ಕ್ಷಯೇ ಜಾತೇ ಕಾಕಯೋನಿಂ ವ್ರಜೇತ್ಪುನಃ ॥ ೬೪ ॥
ತತ್ರಾಪಿ ಚ ಶತಾನ್ಯಷ್ಟೌ ಕ್ಲಿಶ್ಯತೇ ಪಾಪಕರ್ಮಣಿ ।
ವರಾಹೋ ದಶಜನ್ಮಾನಿ ತದಂತೇ ಜಾಯತೇ ಕೃಮಿಃ ॥ ೬೫ ॥
ತತಶ್ಚಾರೋಹಿಣೀಂ ಪ್ರಾಪ್ಯ ಗೋಗಜಾಶ್ವನೃಜನ್ಮಭಾಕ್ ।
ಶ್ರೂಯತೇ ಶ್ರುತಿಶಾಸ್ತ್ರೇಷು ವೇದೇಷು ಚ ಪರಂತಪ ॥ ೬೬ ॥
ಸರ್ವಪಾಪಾಧಿಕಂ ಪಾಪಂ ಬಾಲಹತ್ಯಾ ದ್ವಿಜೋತ್ತಮ ।
ಬಾಲಹತ್ಯಾಯುತೋ ವಿಪ್ರಃ ಪಚ್ಯತೇ ನರಕೇ ಧ್ರುವಂ ॥ ೬೭ ॥

---

೬೨. ಅಯ್ಯಾ ವಿಪ್ರನೇ! ನೀನು ನನ್ನ ಸ್ತನ್ಯವನ್ನು ಕುಡಿಯದಿದ್ದರೆ, ನನ್ನ ಬಾಲಕನು ಮಡಿದುಹೋಗುವನು. ಮೂರು ಲೋಕಗಳಲ್ಲಿಯೂ, ವೇದಗಳಲ್ಲಿಯೂ, ಸ್ಮೃತಿಗಳಲ್ಲಿಯೂ ಸಮಸ್ತಪಾತಕಗಳಿಂದಲೂ ಮಾನವನು ಬಿಡುಗಡೆಹೊಂದುವನೆಂದು ಹೇಳಿವೆಯಾದರೂ ಭ್ರೂಣಹತ್ಯೆಯಿಂದ ಬಿಡುಗಡೆ ಹೊಂದುವನೆಂದು ಹೇಳಿರುವುದಿಲ್ಲ.

೬೩. ಮಹಾಭಗವದ್ಭಕ್ತನಾದ ನಿನಗೆ ನನ್ನ ಸ್ತನ್ಯವನ್ನು ಪಾನಮಾಡದಿರುವುದರ ಸಲುವಾಗಿ ಭ್ರೂಣಹತ್ಯಾದೋಷವು ಬರುತ್ತದೆ. ಅದರಿಂದ ನೀನು ನೂರೆಂಟು ಜನ್ಮಗಳನ್ನೆತ್ತಬೇಕಾಗುವುದು.

೬೪. ಈ ಭ್ರೂಣಹತ್ಯಾ ದೋಷಕ್ಕೊಳಗಾಗುವ ನೀನು ಮಡಿದ ಬಳಿಕ ಮುನ್ನೂರು ವರ್ಷಗಳಕಾಲ ನಾಯಿಯಾಗಿ, ಅದು ಕಳೆದ ತರುವಾಯ ಮತ್ತೆ ಕಾಗೆಯ ಜನ್ಮವನ್ನು ಹೊಂದುವೆ.

೬೫. ಆ ಕಾಗೆಯ ಜನ್ಮದಲ್ಲಿಯೂ ಅದೇ ಭ್ರೂಣಹತ್ಯಾದೋಷದಿಂದ ಎಂಟುನೂರು ವರ್ಷಗಳಕಾಲ ಸಂಕಟಪಡುತ್ತೀಯೆ. ಆದಾದ ಬಳಿಕ ಹಂದಿಯಾಗಿ ಹತ್ತು ಜನ್ಮಗಳನ್ನೆತ್ತಿ ಕಡೆಗೆ ಕೃಮಿಯಾಗಿ ಹುಟ್ಟುವೆ.

೬೬. ಆಮೇಲೆ ಆರೋಹಣ ಕ್ರಮವನ್ನು ಅನುಸರಿಸಿ ಗೋವು, ಗಜ, ಅಶ್ವ, ನರಜನ್ಮಗಳನ್ನು ಪಡೆಯುವೆ. ಅಯ್ಯಾ ಪರಂತಪನೆ! ಶ್ರುತಿಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ, ವೇದಗಳಲ್ಲಿಯೂ ಈ ಪ್ರಕಾರವಾಗಿ ಕೇಳಿಬರುತ್ತದೆ.

೬೭. ಅಯ್ಯಾ ದ್ವಿಜೋತ್ತಮನೇ! ಬಾಲಹತ್ಯೆಯು ಎಲ್ಲ ಪಾಪಗಳಿಗಿಂತಲೂ ಅಧಿಕವಾದುದು. ಬಾಲಹತ್ಯೆಗೊಳಗಾದ ವಿಪ್ರನು ಸತ್ಯವಾಗಿಯೂ ನರಕಗಳಲ್ಲಿ ಬೇಯಿಸಲ್ಪಡುತ್ತಾನೆ.

ವರ್ಷಾಣಿ ಚ ಶತಾನ್ಯಷ್ಟೌ ಪ್ರಾಪ್ನೋತಿ ಯಮಯಾತನಾಂ ।
ತಸ್ಮಾದಲ್ಪತರೋ ದೋಷಃ ಪಿಬತೋ ಮೇ ಸ್ತನಂ ತವ ॥ ೬೮ ॥
ತಥೈವಾಽಪಿಬತಃ ಪಾಪಂ ಜಾಯತೇ ಬಹುವಾರ್ಷಿಕಂ ।
ಕ್ಷುಧಾತೃಷಾವಿರಾಮಸ್ತೇ ಪುಣ್ಯಂ ಚ ಪಿಬತಃ ಸ್ತನಂ ॥ ೬೯ ॥
ಅತೋ ನಚೇತಃ ಸಂದಿಗ್ಧಂ ಕರ್ತವ್ಯಮಿಹ ಕರ್ಹಿಚಿತ್ ।
ಏಹಿ ವಿಪ್ರ ಯಥಾಕಾಮಂ ಬಾಲಾರ್ಥೇ ಪಿಬ ಮೇ ಸ್ತನಂ ॥ ೭೦ ॥
ತತೋಽಹಂ ವಚನಂ ಶ್ರುತ್ವಾ ಸ್ತನಂ ಪಾತುಂ ಸಮುದ್ಯತಃ ।
ನ ಚ ತೃಪ್ತಿಂ ವಿಜಾನಾಮಿ ಪಿಬತಃ ಸ್ತನಮುತ್ತಮಂ ॥ ೭೧ ॥
ತ್ರಿಂಶದ್ವರ್ಷಸಹಸ್ರಾಣಿ ಭಾರತೈವಂ ಶತಾನಿಚ ।
ತತಃ ಪ್ರಬುದ್ಧೋತ್ಸಂಗೇಽಹಂ ಮಾಯಾ ನಿದ್ರಾವಿಮೋಹಿತಃ ॥ ೭೨ ॥
ನಿದ್ರಾವಿಗತಮೋಹೋಽಹಂ ಯಾವತ್ಪಶ್ಯಾಮಿ ಪಾಂಡವ ।
ತಾವತ್ಸುಪ್ತಂ ನಪಶ್ಯಾಮಿ ಸ ಚ ತಂ ಬಾಲಕಂ ವಿಭೋ ॥ ೭೩ ॥

---

೬೮. ಅವನು ಆ ನರಕಗಳಲ್ಲಿ ಎಂಟುನೂರು ವರ್ಷಗಳಕಾಲ ಯಮಯಾತನೆಯನ್ನು ಅನುಭವಿಸುವನು. ಆದುದರಿಂದ ನನ್ನ ಸ್ತನ್ಯವನ್ನು ಪಾನ ಮಾಡುವುದರಿಂದ ನಿನಗೆ ಸಂಭವಿಸುವ ದೋಷವು ಅಲ್ಪವೇ ಸರಿ.

೬೯. ನೀನು ನನ್ನ ಸ್ತನ್ಯವನ್ನು ಪಾನಮಾಡದಿದ್ದರೆ ಬಹುವರ್ಷಗಳು ಅನುಭವಿಸಬೇಕಾದ ಪಾಪವು ಘಟಿಸುತ್ತದೆ. ಪ್ರಕೃತದಲ್ಲಿ ನೀನು ನನ್ನ ಸ್ತನ್ಯವನ್ನು ಪಾನಮಾಡಿದರೆ ನಿನ್ನ ಹಸಿವು ಬಾಯಾರಿಕೆಗಳು ಕಳೆಯುವುದಲ್ಲದೆ ನಿನಗೆ ಮಹತ್ತರವಾದ ಪುಣ್ಯವೂ ಲಭಿಸುತ್ತದೆ.

೭೦. ಆದುದರಿಂದ ಎಲೈ ವಿಪ್ರನೆ! ಎಂದಿಗೂ ನೀನು ಈ ಸಂಶಯವನ್ನು ತಾಳಬೇಡ. ಬಾ; ನನ್ನ ಬಾಲಕನನ್ನು ಬದುಕಿಸುವ ಪುಣ್ಯಕರ್ಮದ ಸಲುವಾಗಿ ನನ್ನ ಸ್ತನ್ಯವನ್ನು ಪಾನಮಾಡು.''

೭೧. ಎಲೈ ರಾಜನೆ! ಆ ಸ್ತ್ರೀಯು ಹೀಗೆ ನುಡಿದ ಬಳಿಕ ಅದೆಲ್ಲವನ್ನೂ ಕೇಳಿದ ನಾನು ಆಕೆಯ ಸ್ತನ್ಯವನ್ನು ಪಾನಮಾಡಲು ಉದ್ಯತನಾದೆನು. ಬಳಿಕ ಉತ್ತಮವಾದ ಆಕೆಯ ಸ್ತನ್ಯವನ್ನು ಪಾನಮಾಡಿದಂತೆಲ್ಲಾ ನನಗೆ ತೃಪ್ತಿಯೇ ಆಗಲಿಲ್ಲವು.

೭೨. ಎಲೈ ಭಾರತನೇ! ಈ ಪ್ರಕಾರವಾಗಿ ನಾನು ಮೂವತ್ತು ಸಾವಿರದ ಒಂದು ನೂರು ವರ್ಷಗಳಕಾಲ ಆಕೆಯ ಸ್ತನ್ಯವನ್ನು ಪಾನಮಾಡುತ್ತಿದ್ದು ಆ ಮೋಹನಿದ್ರೆಯಿಂದ ಮೈಮರೆತಿದ್ದು ಆ ತರುವಾಯ ಎಚ್ಚರಗೊಂಡೆನು.

೭೩. ಹೀಗೆ ಮೋಹ ನಿದ್ರೆಯು ಕಳೆದು ಎಚ್ಚೆತ್ತು ನೋಡುವಷ್ಟರಲ್ಲಿಯೇ ಮಲಗಿದ್ದ ಆ ಬಾಲಕನನ್ನು ನಾನು ಕಾಣಲೇ ಇಲ್ಲವು.

ಚತುರಸ್ತಾಂಶ್ಚ ವೈ ಕುಂಭಾನ್ಪಶ್ಯಾಮಿ ತತ್ರ ಭಾರತ ।
ನ ಚ ಪಶ್ಯಾಮಿ ತಾಂ ದೇವೀಂ ಗತಾ ವೈ ಕುತ್ರಚಿಚ್ಚ ತೇ ॥ ೨೪ ॥
ಏವಂ ವಿಮೃಶಮಾನಸ್ಯ ಚಿಂತಯಾನಸ್ಯ ತಿಷ್ಠತಃ ।
ಈಷದ್ಧಸಿತಯಾ ವಾಚಾ ದೇವೀ ವಚನಮಬ್ರವೀತ್ ॥ ೨೫ ॥

ಶ್ರೀ ದೇವ್ಯುವಾಚ :—

ಕೃಷ್ಣಃ ಸ ಪುರುಷಃ ಸುಪ್ತೋ ದ್ವಿತೀಯೋಽಪ್ಯಾಗತೋ ಹರಃ ।
ಯೇ ಚತ್ವಾರಶ್ಚ ತೇ ಕುಂಭಾಃ ಸಮುದ್ರಾಸ್ತೇ ದ್ವಿಜೋತ್ತಮ ॥ ೨೬ ॥
ಯಶ್ಚ ಬಾಲಸ್ತ್ವಯಾ ದೃಷ್ಟೋ ಬ್ರಹ್ಮಾ ಲೋಕಪಿತಾಮಹಃ ।
ಅಹಂ ಚ ಪೃಥಿವೀ ಜ್ಞೇಯಾ ಸಪ್ತದ್ವೀಪಾ ಸಪರ್ವತಾ ॥ ೨೭ ॥
ಯಾ ಗತಾ ತ್ವಾಂ ಪರಿತ್ಯಜ್ಯ ಭೂತಲೇ ಸುಪ್ರತಿಷ್ಠಿತಾ ।
ಇಮಾಂ ಚ ಪ್ರೇಕ್ಷಸೇ ವಿಪ್ರ ನರ್ಮದಾಂ ಸರಿತಾಂ ವರಾಂ ॥ ೨೮ ॥
ಸರ್ವಸತ್ವೋಪಕಾರಾಯ ಬೃಹತೇ ಪುಣ್ಯಲಕ್ಷಣಾ ।
ರೇವಾನದೀ ತು ವಿಖ್ಯಾತಾ ನ ಮೃತಾ ತೇನ ನರ್ಮದಾ ॥ ೨೯ ॥

---

೨೪. ಅಯ್ಯಾ ಭಾರತನೇ! ಆದರೆ ಆ ಪ್ರದೇಶದಲ್ಲಿ ನಾಲ್ಕು ಕುಂಭಗಳನ್ನು ಮಾತ್ರ ನೋಡಿದೆನು. ಎಲ್ಲಿಯೂ ಆ ದೇವಿಯನ್ನು ಕಾಣಲೇ ಇಲ್ಲವು. "ಆಕೆಯೂ, ಆ ಬಾಲಕನೂ ಎಲ್ಲಿಗೆ ಹೋದರೂ!"

೨೫. ಎಂದು ವಿಮರ್ಶೆಮಾಡಿಕೊಳ್ಳುತ್ತಲೂ, ಯೋಚಿಸುತ್ತಲೂ ಇದ್ದಂತೆಯೇ ಆ ದೇವಿಯು ಕಣ್ಣಿಗೆ ಕಾಣಿಸಿಕೊಂಡು ನಸುನಗೆಸೂಸುತ್ತ ನನ್ನನ್ನು ಕುರಿತಿಂತೆಂದಳು.

೨೬. ಶ್ರೀ ದೇವಿಯು ಹೇಳುತ್ತಾಳೆ:—"ಅಯ್ಯಾ ವಿಪ್ರನೇ! ನೀನು ಕಂಡ ಆ ಪುರುಷನು ಸಾಕ್ಷಾತ್ ಶ್ರೀ ಕೃಷ್ಣನು (ವಿಷ್ಣುವು). ಎರಡನೆಯವನಾದ ಹರನೂ ಬಂದುದಾಯಿತು. ದ್ವಿಜೋತ್ತಮಾ! ನೀನು ಯಾವ ನಾಲ್ಕು ಕುಂಭಗಳನ್ನು ಕಂಡೆಯೋ ಅವೇ ನಾಲ್ಕು ಸಮುದ್ರಗಳು.

೨೭. ನೀನು ಯಾವ ಬಾಲಕನನ್ನು ನೋಡಿದೆಯೋ ಆ ಬಾಲಕನೇ ಲೋಕಪಿತಾಮಹನಾದ ಚತುರ್ಮುಖಬ್ರಹ್ಮನು. ನಾನೇ ಸಪ್ತದ್ವೀಪವತಿಯಾದ ಪೃಥ್ವಿಯೆಂದು ತಿಳಿ.

೨೮. ಯಾವಾಕೆಯು ನಿನ್ನನ್ನು ತೊರೆದು ಹೊರಟುಹೋಗಿದ್ದಳೋ ಆ ನರ್ಮದೆಯೇ ಈಕೆಯು. ಈಕೆಯು ಭೂತಲದಲ್ಲಿ ಸುಪ್ರತಿಷ್ಠಿತೆಯಾಗಿರುವವಳು. ಸರಿದ್ವರೆಯಾದ ಈಕೆಯನ್ನು ನೋಡುತ್ತಿರುವೆಯಷ್ಟೆ.

೨೯. ಸರ್ವಭೂತಗಳ ಮಹೋಪಕಾರಕ್ಕಾಗಿಯೇ ಪುಣ್ಯ ಲಕ್ಷಣಲಕ್ಷಿತೆಯಾಗಿ ಸ್ಥಿರಳಾಗಿರುವವಳು ಈ ರೇವಾನಾಹಿನಿಯು. ಆದುದರಿಂದಲೇ ಈಕೆಯು ಮೃತಳಾಗಿರುವುದಿಲ್ಲವು.

**ಏವಂ ಜ್ಞಾತ್ವಾ ಶಮಂ ಗಚ್ಛ ಸ್ವಸ್ಥೋ ಭವ ಮಹಾಮುನೇ ।**
**ಇತ್ಯುಕ್ತ್ವಾ ಮಾಂ ತದಾ ದೇವೀ ತತ್ರೈವಾಂತರಧೀಯತ ॥ ೮೦ ॥**
**ಏವಂ ಹಿ ಶೇತೇ ಭಗವಾನ್ ಸತ್ವಸ್ಥಃ ಪ್ರಲಯೇ ಸದಾ ।**
**ಸತ್ವರೂಪೋ ಮಹಾದೇವೋ ಯದಾಧಾರೇ ಜಗತ್ಸ್ಥಿತಂ ॥ ೮೧ ॥**
**ಏವಂ ಮಯಾಽನುಭೂತಂತು ದೃಷ್ಟಮಾಶ್ಚರ್ಯಮುತ್ತಮಂ ।**
**ಸರ್ವಪಾಪಹರಂ ಪುಣ್ಯಂ ಕಥಿತಂ ತೇ ನರೋತ್ತಮ ॥ ೮೨ ॥**
**ವಿಷ್ಣೋಶ್ಚರಿತಮಿತ್ಯುಕ್ತಂ ಯತ್ತ್ವಯಾ ಪರಿಪೃಚ್ಛಿತಂ ।**
**ಭೂಯ ಏವ ಮಹಾಬಾಹೋ ಕಿಮನ್ಯಚ್ಛ್ರೋತುಮಿಚ್ಛಸಿ ॥ ೮೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ವಾರಾಹಕಲ್ಪವೃತ್ತಾಂತವರ್ಣನಂ" ನಾಮ ವಿಂಶೋಽಧ್ಯಾಯಃ**

---

೮೦. ಅಯ್ಯಾ ವಿಪ್ರನೇ! ನೀನು ಈ ಪ್ರಕಾರವಾಗಿ ತಿಳಿದುಕೊಂಡು ಶಾಂತಿಯನ್ನು ಪಡೆ. ಎಲೈ ಮಹಾಮುನಿಯೆ! ಸ್ವಸ್ಥನಾಗಿರು." ಎಲೈ ಪಾಂಡುನಂದನನೇ! ಆ ದೇವಿಯು ನನ್ನನ್ನು ಕುರಿತು ಹೀಗೆ ನುಡಿದ ತರುವಾಯ ಅಲ್ಲಿಯೇ ಅಂತರ್ಧಾನವನ್ನು ಪಡೆದಳು.

೮೧. ಹೀಗೆ ಪ್ರಳಯದಲ್ಲಿಯೂ ಭಗವಂತನು ಸತ್ತ್ವಸ್ಥನಾಗಿಯೇ ನಿದ್ರಾಸಕ್ತನಾಗಿರುತ್ತಾನೆ. ಯಾವನನ್ನು ಆಧಾರವಾಗಿ ಹೊಂದಿ ಜಗತ್ತೆಲ್ಲವೂ ನೆಲಸಿರುವುದೋ ಆ ಮಹಾದೇವನು ಸತ್ತ್ವಸ್ವರೂಪನಾದವನೆಂದು ತಿಳಿ.

೮೨. ಎಲೈ ಧರ್ಮರಾಜನೇ! ಹೀಗೆ ನಾನು ಪ್ರತ್ಯಕ್ಷವಾಗಿ ಕಂಡು ಅನುಭವಿಸಿದ ಪರಮಾಶ್ಚರ್ಯಕರವೂ, ಸರ್ವಪಾಪಹರವೂ, ಪುಣ್ಯಸಂಪಾದಕವೂ, ಉತ್ತಮೋತ್ತಮವೂ ಆದ ಕಥೆಯನ್ನು ನಿನಗೆ ಹೇಳಿರುವೆನು.

೮೩. ನೀನು ಕೇಳಿದ ಶ್ರೀಮನ್ಮಹಾವಿಷ್ಣುವಿನ ಚರಿತ್ರೆಯನ್ನು ಈ ಪ್ರಕಾರವಾಗಿ ನಿನಗೆ ಶ್ರುತಪಡಿಸಿರುವೆನು. ಎಲೈ ಮಹಾಬಾಹುವೇ! ಮುಂದೆ ಮತ್ತೇನನ್ನು ಕೇಳ ಬಯಸುವೆ?"

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ವಾರಾಹಕಲ್ಪವೃತ್ತಾಂತವರ್ಣನ"ವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶೋಽಧ್ಯಾಯಃ

### ಕಪಿಲಾಸರಿತ್ಸಂಭವವರ್ಣನಂ

ಯುಧಿಷ್ಠಿರ ಉವಾಚ :—

ಶ್ರುತಂ ಮೇ ವಿವಿಧಾಶ್ಚರ್ಯಂ ತ್ವತ್ಪ್ರಸಾದಾದ್ದ್ವಿಜೋತ್ತಮ ।
ಭೂಯಶ್ಚ ಶ್ರೋತುಮಿಚ್ಛಾಮಿ ತನ್ಮೇ ಕಥಯ ಸುವ್ರತ ॥ ೧ ॥
ಕಥಮೇಷಾ ನದೀ ಪುಣ್ಯಾ ಸರ್ವನದೀಷು ಚೋತ್ತಮಾ ।
ನರ್ಮದಾ ನಾಮ ವಿಖ್ಯಾತಾ ಭೂಯೋ ಮೇ ಕಥಯಾಽನಘ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ನರ್ಮದಾ ಸರಿತಾಂ ಶ್ರೇಷ್ಠಾ ಸರ್ವಪಾಪಪ್ರಣಾಶಿನೀ ।
ತಾರಯೇತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೩ ॥
ನರ್ಮದಾಯಾಸ್ತು ಮಾಹಾತ್ಮ್ಯಂ ಯತ್ಪೂರ್ವೇಣ ಮಯಾ ಶ್ರುತಂ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವೈಕಮನಾ ನೃಪ ॥ ೪ ॥

---

### ಕನ್ನಡದ ಅನುವಾದ

#### ಕಪಿಲಾಸರಿತ್ಸಂಭವವರ್ಣನ

೧. ಯುಧಿಷ್ಠಿರನು ಕೇಳುತ್ತಾನೆ:—ಎಲೈ ದ್ವಿಜೋತ್ತಮನಾದ ಮಾರ್ಕಂಡೇಯನೇ! ನಿನ್ನ ಅನುಗ್ರಹದಿಂದ ಅನೇಕ ಆಶ್ಚರ್ಯಗಳಿಂದ ಕೂಡಿದ ಪುಣ್ಯಕಥೆಯನ್ನು ಕೇಳಿದೆನು. ಮುಂದೆ ಇನ್ನೂ ಕೇಳಬಯಸುತ್ತಿರುವೆನು. ಎಲೈ ಸುವ್ರತನೆ! ಅದನ್ನು ನನಗೆ ಅಪ್ಪಣೆಕೊಡಿಸು.

೨. ಎಲೈ ಅನಘನೇ! ಈ ನರ್ಮದಾನದಿಯು ಸಮಸ್ತ ನದಿಗಳಲ್ಲಿಯೂ ಅತ್ಯಂತ ಪುಣ್ಯತಮವಾದ ಉತ್ತಮನದಿಯೆಂಬುದು ಹೇಗೆ? ಇದು ನರ್ಮದೆ ಯೆಂದು ಪ್ರಖ್ಯಾತಿಯನ್ನು ಪಡೆದುದೆಂತು? ಈ ವಿಷಯವನ್ನು ಇನ್ನೂ ವಿಶೇಷ ವಾಗಿ ನನಗೆ ತಿಳಿಸುವವನಾಗು.

೩. ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ನರ್ಮದೆಯು ಎಲ್ಲ ನದಿಗಳಲ್ಲಿಯೂ ಶ್ರೇಷ್ಠವಾದುದು; ಸಮಸ್ತ ಪಾಪಗಳನ್ನೂ ನಿವಾರಣೆ ಮಾಡುವಂಥದು; ಸಮಸ್ತ ಭೂತಗಳನ್ನೂ, ಜಂಗಮಸ್ಥಾವರಗಳನ್ನೂ ಉದ್ಧರಿ ಸುವಂಥದು.

೪. ಪೂರ್ವದಲ್ಲಿ ನಾನು ಕೇಳಿರುವಂತೆ ಈ ನರ್ಮದೆಯ ಮಾಹಾತ್ಮ್ಯವನ್ನು ನಿನಗೆ ಹೇಳುವೆನು. ಏಕಾಗ್ರಚಿತ್ತನಾಗಿ ಆಲಿಸುವವನಾಗು.

**ಗಂಗಾ ಕನಖಲೇ ಪುಣ್ಯಾ ಕುರುಕ್ಷೇತ್ರೇ ಸರಸ್ವತೀ ।**
**ಗ್ರಾಮೇ ವಾ ಯದಿವಾಽರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ॥ ೫ ॥**
**ತ್ರಿಭಿಃ ಸಾರಸ್ವತಂ ತೋಯಂ ಸಪ್ತಾಹೇನ ತು ಯಾಮುನಂ ।**
**ಸದ್ಯಃ ಪುನಾತಿ ಗಾಂಗೇಯಂ ದರ್ಶನಾದೇವ ನಾರ್ಮದಂ ॥ ೬ ॥**
**ಕಲಿಂಗದೇಶಾತ್ಪಶ್ಚಾರ್ಧೇ ಪರ್ವತೇಽಮರಕಂಟಕೇ ।**
**ಪುಣ್ಯಾ ಚ ತ್ರಿಷು ಲೋಕೇಷು ರಮಣೀಯಾ ಪದೇ ಪದೇ ॥ ೭ ॥**
**ತತ್ರ ದೇವಾಶ್ಚ ಗಂಧರ್ವಾ ಋಷಯಶ್ಚ ತಪೋಧನಾಃ ।**
**ತಪಸ್ತಪ್ತ್ವಾ ಮಹಾರಾಜ ಸಿದ್ಧಿಂ ಪರಮಿಕಾಂ ಗತಾಃ ॥ ೮ ॥**
**ತತ್ರ ಸ್ನಾತ್ವಾ ನರೋ ರಾಜನ್ನಿಯಮಸ್ಥೋ ಜಿತೇಂದ್ರಿಯಃ ।**
**ಉಪೋಷ್ಯ ರಜನೀಮೇಕಾಂ ಕುಲಾನಾಂ ತಾರಯೇಚ್ಛತಂ ॥ ೯ ॥**
**ಸಿದ್ಧಿಕ್ಷೇತ್ರಂ ಪರಂ ತಾತ ಪರ್ವತೋ ಹ್ಯಮರಕಂಟಕಃ ।**
**ಸರ್ವದೇವಾಶ್ರಿತೋ ಯಸ್ಮಾದೃಷಿಭಿಃ ಪರಿಸೇವಿತಃ ॥ ೧೦ ॥**

---

೫. ಕನಖಲ ಕ್ಷೇತ್ರದಲ್ಲಿ ಗಂಗೆಯು ಪುಣ್ಯಪ್ರದವಾದುದು; ಕುರುಕ್ಷೇತ್ರದಲ್ಲಿ ಸರಸ್ವತಿಯು ಪುಣ್ಯನದಿಯು. ಆದರೆ ಗ್ರಾಮ, ಅರಣ್ಯವೆನ್ನದೆ ಭೂಮಂಡಲದ ಸರ್ವಪ್ರದೇಶಗಳಲ್ಲಿಯೂ ಈ ನರ್ಮದೆಯು ಪುಣ್ಯಪ್ರದವಾದುದು.

೬. ಸರಸ್ವತೀನದಿಯ ಜಲವನ್ನು ಮೂರು ದಿನ ಸೇವಿಸುವುದರಿಂದಲೂ, ಯಮುನಾ ನದೀಜಲವನ್ನು ಏಳು ದಿನಗಳಕಾಲ ಸೇವಿಸುವುದರಿಂದಲೂ, ಮಾನವನು ಕೃತಾರ್ಥನಾಗುವನು. ಗಂಗಾನದಿಯ ಜಲವು ಸೇವಿಸಿದೊಡನೆಯೇ ಮಾನವನನ್ನು ಪವಿತ್ರಗೊಳಿಸುವುದು; ಆದರೆ ನರ್ಮದೆಯು ಕೇವಲ ದರ್ಶನದಿಂದಲೇ ಪಾವನಗೊಳಿಸುವುದು.

೭. ಕಲಿಂಗದೇಶದ ಪಶ್ಚಿಮಾರ್ಧದಲ್ಲಿರುವ ಅಮರಕಂಟಕ ಪರ್ವತದಲ್ಲಿ ಉದ್ಭವಿಸಿ ಪ್ರವಹಿಸುವ ಈ ನರ್ಮದೆಯು ಮೂರು ಲೋಕಗಳಲ್ಲಿಯೂ ಪರಮ ಪುಣ್ಯಪ್ರದವೂ, ಬಹುರಮಣೀಯವೂ ಆಗಿರುವುದು.

೮. ಆ ಅಮರಕಂಟಕದಲ್ಲಿ ದೇವತೆಗಳೂ, ಗಂಧರ್ವರೂ, ತಪೋಧನರಾದ ಋಷಿಗಳೂ ತಪಸ್ಸನ್ನೆಸಗಿ ಅತ್ಯುತ್ತಮವಾದ ಸಿದ್ಧಿಯನ್ನು ಪಡೆದಿರುವರು.

೯. ಮಾನವನು ಅಲ್ಲಿ ಸ್ನಾನವನ್ನುಮಾಡಿ, ನಿಯಮದಿಂದಿದ್ದು ಜಿತೇಂದ್ರಿಯನಾಗಿ ಒಂದು ರಾತ್ರಿ ಉಪವಾಸವನ್ನು ಮಾಡಿದಲ್ಲಿ ನೂರು ಕುಲಗಳನ್ನು ಉದ್ಧರಿಸುತ್ತಾನೆ.

೧೦. ವತ್ಸ; ಧರ್ಮನಂದನ! ಅಮರಕಂಟಕವು ಶ್ರೇಷ್ಠವಾದ ಸಿದ್ಧಿಕ್ಷೇತ್ರವು. ಸಕಲ ದೇವತೆಗಳಿಗೂ ಆಶ್ರಯವೂ, ಮಹರ್ಷಿ ಸಂಸೇವಿತವೂ ಆಗಿರುವುದು.

ಸಿದ್ಧವಿದ್ಯಾಧರಾ ಭೂತಗಂಧರ್ವಾಃ ಸ್ಥಾನಮುತ್ತಮಂ ।
ದೃಶ್ಯಾಽದೃಶ್ಯಾಶ್ಚ ರಾಜೇಂದ್ರ ಸೇವಂತೇ ಸಿದ್ಧಿಕಾಂಕ್ಷಿಣಃ ॥ ೧೧ ॥
ಅಹಂ ಚ ಪರಮಂ ಸ್ಥಾನಂ ತತಃ ಪ್ರಭೃತಿ ಸಂಶ್ರಿತಃ ।
ಅತ್ರ ಪ್ರಣವರೂಪೋ ವೈ ಸ್ಥಾನೇ ತಿಷ್ಠತ್ಯುಮಾಪತಿಃ ॥ ೧೨ ॥
ಶ್ರೀಕಂಠಃ ಸಗಣಃ ಸರ್ವಭೂತಸಂಘೈರ್ನಿಷೇವಿತಃ ।
ಅಸ್ಮಾದ್ಗಿರಿವರಾದ್ಭೂಪ ವಕ್ಷ್ಯೇ ತೀರ್ಥಸ್ಯ ವಿಸ್ತರಂ ॥ ೧೩ ॥
ಯಾನಿ ಸಂತೀಹ ತೀರ್ಥಾನಿ ಪುಣ್ಯಾನಿ ನೃಪಸತ್ತಮ ।
ಯಾನಿ ಯಾನೀಹ ತೀರ್ಥಾನಿ ನರ್ಮದಾಯಾಸ್ತಟದ್ವಯೇ ॥ ೧೪ ॥
ನ ತೇಷಾಂ ವಿಸ್ತರಂ ವಕ್ತುಂ ಶಕ್ತೋ ಬ್ರಹ್ಮಾಽಪಿ ಭೂಪತೇ ।
ಯೋಜನಾನಾಂ ಶತಂ ಸಾಗ್ರಂ ಶ್ರೂಯತೇ ಸರಿದುತ್ತಮಾ ॥ ೧೫ ॥
ವಿಸ್ತರೇಣತು ರಾಜೇಂದ್ರ ಅರ್ಧಯೋಜನಮಾಯತಾ ।
ಷಷ್ಟಿತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥೈವ ಚ ॥ ೧೬ ॥
ಪರ್ವತಾದುದಧಿಂ ಯಾವದುಭೇ ಕೂಲೇ ನ ಸಂಶಯಃ ॥ ೧೭ ॥

---

೧೧. ಸಿದ್ಧಿಯನ್ನು ಬಯಸಿ, ಸಿದ್ಧರೂ, ವಿದ್ಯಾಧರರೂ, ಭೂತಗಣಗಳೂ, ಗಂಧರ್ವರೂ ಕಣ್ಣಿಗೆ ಕಾಣಿಸುವಂತೆಯೂ, ಕಾಣಿಸದಂತೆಯೂ ಉತ್ತಮವಾದ ಈ ಅಮರಕಂಟಕ ಸ್ಥಾನವನ್ನು ಸೇವಿಸುತ್ತಿರುವರು.

೧೨. ನಾನು ಮೋಹನಿದ್ರೆಯಿಂದ ಎಚ್ಚರಗೊಂಡಂದಿನಿಂದಲೂ ಈ ಶ್ರೇಷ್ಠ ಸ್ಥಾನವನ್ನಾಶ್ರಯಿಸಿರುವೆನು. ಇಲ್ಲಿ ಉಮಾಪತಿಯಾದ ಶ್ರೀಮನ್ಮಹಾದೇವನು ಪ್ರಣವರೂಪದಿಂದ ನೆಲಸಿರುವನು.

೧೩. ಎಲೈ ಭೂಪತಿಯೆ! ಶ್ರೀಕಂಠನು ತನ್ನ ಗಣಗಳಿಂದ ಪರಿವಾರಿತನಾಗಿ ಸಮಸ್ತಭೂತಸಂಘಗಳಿಂದಲೂ ಇಲ್ಲಿ ಸೇವೆಗೊಳ್ಳುತ್ತಿರುವನು. ಇನ್ನು ನಿನಗೆ ಈ ತೀರ್ಥಕ್ಷೇತ್ರದ ವಿಸ್ತಾರವನ್ನು ಕುರಿತು ಹೇಳುವೆನು; ಕೇಳು.

೧೪–೧೫. ಎಲೈ ನೃಪಸತ್ತಮನೇ! ಪುಣ್ಯನದಿಯಾದ ಈ ನರ್ಮದೆಯ ಉಭಯ ತೀರಗಳಲ್ಲಿಯೂ ನೆಲಸಿರುವ ಪುಣ್ಯ ತೀರ್ಥಗಳು ಯಾವುವಿರುವುವೋ ಅವುಗಳ ವಿಸ್ತಾರವನ್ನು ವಿಸ್ತರಿಸಿ ಹೇಳಲು ಬ್ರಹ್ಮದೇವನಿಗೂ ಆಳವಲ್ಲವು. ನರ್ಮದಾ ನದಿಯು ಆಮೂಲಾಗ್ರವಾಗಿ ಒಂದು ನೂರು ಯೋಜನಗಳಿರುವುದೆಂದು ಕೇಳಿಬರುವುದು.

೧೬. ರಾಜೇಂದ್ರ! ವಿಸ್ತಾರದಲ್ಲಿ ಇದು ಅರ್ಧಯೋಜನವಿರುವುದು. ಉಭಯ ಕೂಲಗಳಲ್ಲಿರುವ ತೀರ್ಥಗಳಂತೂ ಅರುವತ್ತುಸಾವಿರದ ಅರುವತ್ತು ಕೋಟಿಗಳು.

೧೭–೧೮. ಅಮರಕಂಟಕ ಪರ್ವತದಿಂದ ಮೊದಲಾಗಿ ಸಾಗರವನ್ನು

ಸಪ್ತಷಷ್ಟಿಸಹಸ್ರಾಣಿ ಸಪ್ತಷಷ್ಟಿಶತಾನಿ ಚ ।
ಸಪ್ತಷಷ್ಟಿಸ್ತಥಾಕೋಟ್ಯೋ ವಾಯುಸ್ತೀರ್ಥಾನಿ ಚಾಽಬ್ರವೀತ್ ॥ ೧೮ ॥
ಪರಂ ಕೃತಯುಗೇ ತಾನಿ ಯಾಂತಿ ಪ್ರತ್ಯಕ್ಷತಾಂ ನೃಪ ।
ಪಶ್ಯಂತಿ ಮಾನವಾಃ ಸರ್ವೇ ಸತತಂ ಧರ್ಮಬುದ್ಧಯಃ ॥ ೧೯ ॥
ಯಥಾ ಯಥಾ ಕಲಿರ್ಘೋರೋ ವರ್ತತೇ ದಾರುಣೋ ನೃಪ ।
ತಥಾ ತಥಾಽಲ್ಪತಾಂ ಯಾಂತಿ ಹೀನಸತ್ವಾ ಯತೋ ನರಾಃ ॥ ೨೦ ॥
ಜಾಲೇಶ್ವರಾದಿ ತೀರ್ಥಾನಿ ಪರ್ವತೇಽಸ್ಮಿನ್ನರಾಧಿಪ ।
ಪಿತೃತೃಪ್ತಿಪ್ರದಾನ್ಯಾಹುಃ ಸ್ವರ್ಗಮೋಕ್ಷಪ್ರದಾನಿ ಚ ॥ ೨೧ ॥
ಶ್ರೇಷ್ಠಂ ದಾರುವನಂ ತತ್ರ ಚರುಕಾ ಸಂಗಮಃ ಶುಭಃ ।
ಉತ್ತರೇ ನರ್ಮದಾಯಾಸ್ತು ಚರುಕೇಶ್ವರಮುತ್ತಮಂ ॥ ೨೨ ॥
ದಾರುಕೇಶ್ವರತೀರ್ಥಂ ಚ ವ್ಯತೀಪಾತೇಶ್ವರಂ ತಥಾ ।
ಪಾತಾಲೇಶ್ವರತೀರ್ಥಂ ಚ ಕೋಟಿಯಜ್ಞಂ ತಥೈವ ಚ ॥ ೨೩ ॥
ಇತಿ ಚೈವೋತ್ತರೇಕೂಲೇ ರೇವಾಯಾ ನೃಪಸತ್ತಮ ।
ಅಮರೇಶ್ವರಪಾರ್ಶ್ವೇ ಚ ಲಿಂಗಾನ್ಯಷ್ಟೋತ್ತರಂ ಶತಂ ॥ ೨೪ ॥
ವರುಣೇಶ್ವರಮುಖ್ಯಾನಿ ಸರ್ವಪಾಪಹರಾಣಿ ಚ ॥ ೨೫ ॥

---

ಸೇರುವವರೆಗೂ ಈ ಪುಣ್ಯನದಿಯ ಉಭಯ ಪಾರ್ಶ್ವಗಳಲ್ಲಿಯೂ ಇರುವ ಪುಣ್ಯ ತೀರ್ಥಗಳ ಸಂಖ್ಯೆಯು ಅರುವತ್ತೇಳುಸಾವಿರದ ಅರುವತ್ತೇಳುನೂರು ಮಾತ್ರವಲ್ಲದೆ ಅರುವತ್ತೇಳು ಕೋಟಿಗಳೆಂದು ವಾಯುದೇವನು ಹೇಳಿರುವನು.

೧೯. ಆದರೆ ಕೃತಯುಗದಲ್ಲಿ ಮಾತ್ರ ಈ ತೀರ್ಥಗಳೆಲ್ಲವೂ ಪ್ರತ್ಯಕ್ಷವಾಗಿದ್ದವು. ಈಗಲಾದರೋ ಧರ್ಮ ಬುದ್ಧಿಯುಳ್ಳ ಮಾನವನು ಮಾತ್ರ ಇವುಗಳನ್ನು ಯಾವಾಗಲೂ ನೋಡುವನು.

೨೦. ಅಯ್ಯಾ ರಾಜನೇ! ಘೋರವಾದ ಕಲಿಯು ಹೇಗೆಹೇಗೆ ದಾರುಣವಾಗಿ ವರ್ಧಿಸುವನೋ ಹಾಗೆಲ್ಲ ಮಾನವರು ಅಲ್ಪಸತ್ತ್ವರೂ, ಹೀನಸತ್ತ್ವರೂ ಆಗುತ್ತಾರೆ.

೨೧. ಆಗ ಅಮರಕಂಟಕಪರ್ವತದಲ್ಲಿರುವ ಜಾಲೇಶ್ವರವೇ ಮೊದಲಾದ ತೀರ್ಥಗಳು ಪಿತೃದೇವತೆಗಳಿಗೆ ತೃಪ್ತಿಪ್ರದಗಳೂ, ಸ್ವರ್ಗ ಮೋಕ್ಷಪ್ರದಗಳೂ ಎನಿಸುವುವು.

೨೨. ದಾರುವನವು ಶ್ರೇಷ್ಠವಾದುದು; ಚರುಕಾಸಂಗಮವು ಬಹು ಶುಭಕರವು. ನರ್ಮದೆಯ ಉತ್ತರಕ್ಕಿರುವ ಚರುಕೇಶ್ವರ ಕ್ಷೇತ್ರವು ಉತ್ತಮವು.

೨೩–೨೫. ದಾರುಕೇಶ್ವರ ತೀರ್ಥ, ವ್ಯತೀಪಾತೇಶ್ವರ, ಪಾತಾಲೇಶ್ವರ, ಕೋಟಿ ಯಜ್ಞ ಎಂಬ ಈ ತೀರ್ಥಗಳು ರೇವೆಯ ಉತ್ತರ ತೀರದಲ್ಲಿ ಶ್ರೇಷ್ಠ

**ಮಾಂಧಾತೃಪುರಪಾರ್ಶ್ವೇ ಚ ಸಿದ್ಧೇಶ್ವರಯಮೇಶ್ವರೌ ।**
**ಓಂಕಾರಾತ್ಪೂರ್ವಭಾಗೇ ಚ ಕೇದಾರಂ ತೀರ್ಥಮುತ್ತಮಂ ॥ ೨೬ ॥**
**ತತ್ಸಮೀಪೇ ಮಹಾರಾಜ ಸ್ವರ್ಗದ್ವಾರಮಘಾಪಹಂ ।**
**ನಾಮ್ನಾ ಬ್ರಹ್ಮೇಶ್ವರಂ ಪುಣ್ಯಂ ಸಪ್ತ ಸಾರಸ್ವತಂ ಪುರಂ ॥ ೨೭ ॥**
**ರುದ್ರಾಷ್ಟಕಂ ಚ ಸಾವಿತ್ರಂ ಸೋಮತೀರ್ಥಂ ತಥೈವಚ ।**
**ಏತಾನಿ ದಕ್ಷಿಣೇ ತೀರೇ ರೇವಾಯಾ ಭರತರ್ಷಭ ॥ ೨೮ ॥**
**ಅಸ್ಮಿಂಸ್ತು ಪರ್ವತೇ ತಾತ ರುದ್ರಾಣಾಂ ಕೋಟಯಃ ಸ್ಥಿತಾಃ ।**
**ಸ್ನಾನೈಸ್ತುಷ್ಟಿರ್ಭವೇತ್ತೇಷಾಂ ಗಂಧಮಾಲ್ಯಾನುಲೇಪನೈಃ ॥ ೨೯ ॥**
**ಪ್ರೀತಾಸ್ತೇಽಪಿ ಭವಂತ್ಯತ್ರ ರುದ್ರಾ ರಾಜನ್ನಸಂಶಯಃ ।**
**ಜಪೇನ ಪಾಪಸಂಶುದ್ಧಿರ್ಧ್ಯಾನೇನಾನಂತ್ಯಮಶ್ನುತೇ ॥ ೩೦ ॥**
**ದಾನೇನ ಭೋಗಾನಾಪ್ನೋತಿ ಇತ್ಯೇವಂ ಶಂಕರೋಽಬ್ರವೀತ್ ।**
**ಪರ್ವತಾತ್ಪಶ್ಚಿಮೇ ದೇಶೇ ಸ್ವಯಂ ದೇವೋ ಮಹೇಶ್ವರಃ ।**
**ಸ್ಥಿತಃ ಪ್ರಣವರೂಪೋಽಸೌ ಜಗದಾದಿಃ ಸನಾತನಃ ॥ ೩೧ ॥**

---

ವಾದುವು. ಅಮರೇಶ್ವರದ ಪಕ್ಕದಲ್ಲಿ ನೂರೆಂಟು ಲಿಂಗಗಳಿರುವುವು. ವರುಣೇಶ್ವರವೇ ಮೊದಲಾದ ಅವುಗಳೆಲ್ಲವೂ ಸಮಸ್ತಪಾಪಗಳನ್ನೂ ಪರಿಹರಿಸುವಂಥವು.

೨೬–೨೭. ಮಾಂಧಾತೃಪುರದ ಪಾರ್ಶ್ವದಲ್ಲಿ ಸಿದ್ಧೇಶ್ವರ ಯಮೇಶ್ವರ ತೀರ್ಥಗಳಿರುವುವು. ಓಂಕಾರೇಶ್ವರಕ್ಕೆ ಪೂರ್ವಭಾಗದಲ್ಲಿ ಉತ್ತಮತೀರ್ಥವಾದ ಕೇದಾರವಿರುವುದು. ಈ ಕೇದಾರ ತೀರ್ಥದ ಸಮೀಪದಲ್ಲಿರುವ ಸ್ವರ್ಗದ್ವಾರವು ಪಾಪನಾಶಕವಾದುದು. ಅಲ್ಲಿಂದ ಮುಂದಕ್ಕೆ ಪುಣ್ಯಕರವಾದ ಬ್ರಹ್ಮೇಶ್ವರವೂ ಸಪ್ತಸಾರಸ್ವತ ತೀರ್ಥವೂ ಇರುವುವು.

೨೮. ರುದ್ರಾಷ್ಟಕ, ಸಾವಿತ್ರ, ಸೋಮತೀರ್ಥ ಇವುಗಳೆಲ್ಲವೂ ನರ್ಮದೆಯ ದಕ್ಷಿಣತೀರದಲ್ಲಿರುವುವು.

೨೯. ಎಲೈ ವತ್ಸನೇ! ಈ ಅಮರಕಂಟಕ ಪರ್ವತದಲ್ಲಿಯಾದರೊ ಕೋಟಿ ರುದ್ರರು ನೆಲಸಿರುವರು. ಅಭಿಷೇಕಮಾಡಿಸುವುದರಿಂದಲೂ, ಗಂಧಮಾಲ್ಯಾನುಲೇಪನಗಳಿಂದಲೂ ಅವರಿಗೆ ತೃಪ್ತಿಯುಂಟಾಗುವುದು.

೩೦–೩೧. ದೊರೆಯೆ! ಹೀಗೆ ಸ್ನಾನಪೂಜೆಗಳನ್ನು ಮಾಡುವುದರಿಂದ ಆ ರುದ್ರರು ಸುಪ್ರೀತರಾಗುವರೆಂಬುದರಲ್ಲಿ ಸಂಶಯವಿಲ್ಲವು, ಅಲ್ಲಿ ಜಪದಿಂದ ಪಾಪ ಸಂಶುದ್ಧಿಯೂ, ಧ್ಯಾನದಿಂದ ಆತ್ಮಸಂಶುದ್ಧಿಯುಂಟಾಗಿ ಮೋಕ್ಷವೂ ಲಭಿಸುತ್ತದೆ. ದಾನಮಾಡುವುದರಿಂದ ಸಕಲಭೋಗಗಳೂ ದೊರಕುತ್ತವೆಯೆಂದು ಶಂಕರನೇ ಸಾಕ್ಷಾತ್ತಾಗಿ ಹೇಳಿರುವನು. ಅಮರಕಂಟಕ ಗಿರಿಯ ಪಶ್ಚಿಮ

ತತ್ರ ಸ್ನಾತ್ವಾ ಶುಚಿರ್ಭೂತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ ।
ಪಿತೃಕಾರ್ಯಂ ಪ್ರಕುರ್ವೀತ ವಿಧಿದೃಷ್ಟೇನ ಕರ್ಮಣಾ ॥ ೩೨ ॥
ತಿಲೋದಕೇನ ತತ್ರೈವ ತರ್ಪಯೇತ್ಪಿತೃದೇವತಾಃ ।
ಆಸಪ್ತಮಂ ಕುಲಂ ತಸ್ಯ ಸ್ವರ್ಗೇ ಮೋದತಿ ಪಾಂಡವ ॥ ೩೩ ॥
ಆತ್ಮನಾ ಸಹ ಭೋಗಾಂಶ್ಚ ವಿವಿಧಾಂಲ್ಲಭತೇ ಸುಖೀ ।
ಷಷ್ಟಿರ್ವರ್ಷಸಹಸ್ರಾಣಿ ಕ್ರೀಡತೇ ಸುರಪೂಜಿತಃ ॥ ೩೪ ॥
ಮೋದತೇ ಸುಚಿರಂ ಕಾಲಂ ಪಿತೃಪೂಜಾಫಲರ್ಧಿತಃ ।
ತತಃ ಸ್ವರ್ಗಾತ್ಪರಿಭ್ರಷ್ಟೋ ಜಾಯತೇ ವಿಮಲೇ ಕುಲೇ ॥ ೩೫ ॥
ಧನವಾನ್ ದಾನಶೀಲಶ್ಚ ನೀರೋಗೋ ಲೋಕಪೂಜಿತಃ ।
ಪುನಃಸ್ಮರತಿ ತತ್ತೀರ್ಥಂ ಗಮನಂ ಕುರುತೇ ಪುನಃ ॥ ೩೬ ॥
ದ್ವಿತೀಯೇ ಜನ್ಮನಿ ಭವೇದ್ಧ್ರದಸ್ಯಾನುಚರೋತ್ಕಟಃ ।
ತಥೈವ ಬ್ರಹ್ಮಚರ್ಯೇಣ ಸೋಪವಾಸೋ ಜಿತೇಂದ್ರಿಯಃ ॥ ೩೭ ॥

---

ದಲ್ಲಿರುವ ಪ್ರದೇಶದಲ್ಲಿ ದೇವದೇವನಾದ ಸ್ವಯಂ ಮಹೇಶ್ವರನೇ ನೆಲಸಿರುವನು. ಆತನು ಅಲ್ಲಿ ಪ್ರಣವರೂಪನಾಗಿ ವಿರಾಜಿಸುತ್ತಿರುವನಲ್ಲದೆ, ಜಗದಾದಿಯೂ, ಸನಾತನನೂ ಆಗಿರುವನು.

೩೨. ಎಲೈ ಧರ್ಮನಂದನನೇ! ಇಲ್ಲಿ ಮಾನವನು ಸ್ನಾನಮಾಡಿ ಶುಚಿಭೂತನಾಗಿ, ಬ್ರಹ್ಮಚಾರಿಯೂ, ಜಿತೇಂದ್ರಿಯನೂ ಆಗಿ ಶಾಸ್ತ್ರದೃಷ್ಟವಾದ ರೀತಿಯಲ್ಲಿ ಪಿತೃಕಾರ್ಯವನ್ನು ಮಾಡಬೇಕು.

೩೩. ಅಲ್ಲಿಯೇ ತಿಲೋದಕದಿಂದ ಪಿತೃದೇವತೆಗಳನ್ನುದ್ದೇಶಿಸಿ ತರ್ಪಣವನ್ನು ಮಾಡಿದರೆ ಹಾಗೆಮಾಡಿದವನ ಸಪ್ತಕುಲಗಳವರು ಸ್ವರ್ಗಲೋಕವನ್ನುಸೇರಿ ಸಂತೋಷಗೊಳ್ಳುವರು.

೩೪. ಹೀಗೆ ಪಿತೃಕ್ರಿಯೆಗಳನ್ನೆಸಗಿದ ಧನ್ಯಾತ್ಮನು ತಾನು ಸಹ ವಿವಿಧ ಭೋಗಗಳನ್ನು ಪಡೆದು ಸುಖಿಸುವುದಲ್ಲದೆ ಅರುವತ್ತುಸಾವಿರ ವರ್ಷಗಳಕಾಲ ಸ್ವರ್ಗಲೋಕದಲ್ಲಿದ್ದು ಸುರರಿಂದ ಪೂಜೆಗೊಳ್ಳುವನು.

೩೫–೩೬. ಈ ಪ್ರಕಾರವಾದ ಪಿತೃಪೂಜಾಫಲದಿಂದ ಅವನು ಬಹಳಕಾಲ ಸ್ವರ್ಗದಲ್ಲಿ ಸುಖಿಸುತ್ತಿದ್ದು ತರುವಾಯ ಅಲ್ಲಿಂದ ಜಾರಿದ ಮೇಲೆ ಭೂಲೋಕದಲ್ಲಿ ಯಾವುದಾದರೂ ಪವಿತ್ರವಾದ ಕುಲದಲ್ಲಿ ಜನ್ಮವೆತ್ತುತ್ತಾನೆ. ಆಗ ಅವನು ಧನಿಕನೂ, ದಾನಶೀಲನೂ, ರೋಗರಹಿತನೂ, ಲೋಕಪೂಜಿತನೂ ಆಗಿರುತ್ತಾನೆ. ಆ ಜನ್ಮದಲ್ಲಿ ಅವನು ಹೀಗೆ ಸಕಲ ಸುಖಗಳನ್ನು ಅನುಭವಿಸುತ್ತಿದ್ದರೂ ಆ ನರ್ಮದಾ ತೀರ್ಥವನ್ನೇ ಸ್ಮರಿಸಿಕೊಂಡು ಮತ್ತೆ ಅಲ್ಲಿಗೆ ಹೋಗುತ್ತಾನೆ.

೩೭–೩೯. ಎರಡನೆಯ ಜನ್ಮದಲ್ಲಿ ಅವನು ಆ ಹ್ರದದ ಬಳಿಯಲ್ಲಿ ಭಕ್ತಿಶ್ರದ್ಧೆ

**ಸರ್ವಹಿಂಸಾನಿವೃತ್ತಸ್ತು ಲಭತೇ ಫಲಮುತ್ತಮಂ ।**
**ಏವಂ ಧರ್ಮಸಮಾಚಾರೋ ಯಸ್ತು ಪ್ರಾಣಾನ್ಪರಿತ್ಯಜೇತ್ ॥ ೩೮ ॥**
**ತಸ್ಯ ಪುಣ್ಯಫಲಂ ಯದ್ವೈ ತನ್ನಿಬೋಧ ನರಾಧಿಪ ।**
**ಶತಂ ವರ್ಷಸಹಸ್ರಾಣಿ ಸ್ವರ್ಗೇ ಮೋದತಿ ಪಾಂಡವ ॥ ೩೯ ॥**
**ಅಪ್ಸರೋಗಣಸಂಕೀರ್ಣೇ ದಿವ್ಯಶಬ್ದಾಽನುನಾದಿತೇ ।**
**ದಿವ್ಯಗಂಧಾನುಲಿಪ್ತಾಂಗೋ ದಿವ್ಯಾಽಲಂಕಾರಭೂಷಿತಃ ॥ ೪೦ ॥**
**ಕ್ರೀಡತೇ ದೇವತೈಃಸಾರ್ಧಂ ಸಿದ್ಧಗಂಧರ್ವಸಂಸ್ತುತಃ ।**
**ತತಃ ಸ್ವರ್ಗಾತ್ಪರಿಭ್ರಷ್ಟೋ ರಾಜಾ ಭವತಿ ವೀರ್ಯವಾನ್ ॥ ೪೧ ॥**
**ಹಸ್ತ್ಯಶ್ವರಥಯಾನೈಶ್ಚ ಧರ್ಮಜ್ಞಃ ಶಾಸ್ತ್ರತತ್ಪರಃ ।**
**ಗೃಹೇ ಸ್ತಂಭಶತಾಕೀರ್ಣೇ ಸೌವರ್ಣೇ ರಜತಾನ್ವಿತೇ ॥ ೪೨ ॥**
**ಸಪ್ತಾಷ್ಟಭೂಮಿಸುದ್ವಾರೇ ದಾಸೀದಾಸಸಮಾಕುಲೇ ।**
**ಮತ್ತಮಾತಂಗನಿಃಶ್ವಾಸೈರ್ವಾಜಿಹೇಷಿತನಾದಿತೈಃ ॥ ೪೩ ॥**
**ಕ್ಷುಭ್ಯತೇ ತಸ್ಯ ತದ್ದ್ವಾರಮಿಂದ್ರಸ್ಯ ಭವನಂ ಯಥಾ ।**
**ರಾಜರಾಜೇಶ್ವರಃ ಶ್ರೀಮಾನ್ ಸರ್ವಸ್ತ್ರೀಜನವಲ್ಲಭಃ ॥ ೪೪ ॥**

---

ಗಳಿಂದ ಬ್ರಹ್ಮಚರ್ಯವ್ರತವನ್ನು ಹಿಡಿದು, ಉಪವಾಸವ್ರತಿಯಾಗಿ ಜಿತೇಂದ್ರಿಯನಾಗಿಯೂ ವಾಸಮಾಡುವವನಾಗುತ್ತಾನೆ. ಅಲ್ಲದೆ ಅವನು ಎಲ್ಲ ಬಗೆಯ ಹಿಂಸಾಕೃತ್ಯಗಳಿಂದಲೂ ನಿವೃತ್ತನಾಗಿ ಉತ್ತಮೋತ್ತಮವಾದ ಫಲವನ್ನು ಪಡೆಯುತ್ತಾನೆ. ಅಯ್ಯಾ ದೊರೆಯೆ! ಈ ಪ್ರಕಾರವಾಗಿ ಧರ್ಮವನ್ನಾಚರಿಸುತ್ತ ಆ ತೀರ್ಥದಲ್ಲಿಯೇ ಪ್ರಾಣ ಪರಿತ್ಯಾಗಮಾಡುವ ಮಾನವನಿಗೆ ಯಾವ ಸದ್ಗತಿಯುಂಟಾಗುವುದೆಂಬುದನ್ನು ಹೇಳುವೆನು. ಕೇಳಿ ತಿಳಿದುಕೊಳ್ಳುವನಾಗು. ಅವನು ಒಂದು ಲಕ್ಷ ವರ್ಷಗಳ ಕಾಲ ಸ್ವರ್ಗಸುಖವನ್ನು ಭೋಗಿಸುತ್ತಾನೆ.

೪೦–೪೧. ಆ ಪುಣ್ಯಾತ್ಮನು ಅಪ್ಸರಸಮೂಹಗಳು ಕಿಕ್ಕಿರಿದು, ದಿವ್ಯ ಸಂಗೀತಧ್ವನಿಯಿಂದ ತುಂಬಿರುವ ಆ ಸ್ವರ್ಗಸೀಮೆಯಲ್ಲಿ ದಿವ್ಯಗಂಧಾನುಲಿಪ್ತವಾದ ಶರೀರವುಳ್ಳವನಾಗಿ, ಸಿದ್ಧಗಂಧರ್ವಸಂಘಗಳು ಸ್ತುತಿಸುತ್ತಿರಲು ದೇವತೆಗಳೊಡನೆ ಸಮಸಮವಾಗಿ ಕ್ರೀಡಿಸುತ್ತಾನೆ. ಆ ಬಳಿಕ ಸ್ವರ್ಗಚ್ಯುತನಾಗಿ ಭೂಲೋಕದಲ್ಲಿ ಮಹಾವೀರ್ಯವಂತನಾದ ರಾಜನಾಗಿ ಜನಿಸುತ್ತಾನೆ.

೪೨–೪೪. ಆಗ ಆತನು ಮಹಾಧರ್ಮಜ್ಞನಾಗಿದ್ದು, ಶಾಸ್ತ್ರತತ್ಪರನಾಗಿ, ಆನೆ, ಕುದುರೆ, ರಥಗಳಿಂದ ತುಂಬಿತುಳುಕುತ್ತಿರುವುದೂ, ನೂರಾರು ರಾಜತ ಕಾಂಚನಸ್ತಂಭವಿರಾಜಿತವೂ, ಏಳೆಂಟು ಕಕ್ಷ್ಯಗಳಿಂದ ಸುಶೋಭಿತವಾದ ದ್ವಾರಗಳುಳ್ಳುದೂ, ದಾಸೀದಾಸ ಸಮಾಕುಲವೂ, ಮದದಾನೆಗಳ ನಿಃಶ್ವಾಸ ಮಾರುತದಿಂದಲೂ, ಜಾತ್ಯಶ್ವಗಳ ಹೇಷಿತಗಳಿಂದಲೂ ತುಂಬಿ ತುಳುಕುತ್ತಿರು

**ತಸ್ಮಿನ್ಗೃಹೇ ವಸಿತ್ವಾ ತು ಕ್ರೀಡಾಭೋಗಸಮನ್ವಿತಃ ।**
**ಜೀವೇದ್ವರ್ಷಶತಂ ಸಾಗ್ರಂ ಸರ್ವವ್ಯಾಧಿವಿವರ್ಜಿತಃ ॥ ೪೫ ॥**
**ಏವಂ ತೇಷಾಂ ಭವೇತ್ಸರ್ವಂ ಯೇ ಮೃತಾಹ್ಯಮರೇಶ್ವರೇ ।**
**ಅಗ್ನಿಪ್ರವೇಶಂ ಯಃ ಕುರ್ಯಾದ್ಭಕ್ತ್ಯಾ ಹ್ಯಮರಕಂಟಕೇ ।**
**ಸಮೃತಃ ಸ್ವರ್ಗಮಾಪ್ನೋತಿ ಯಾಸ್ಯತೇ ಪರಮಾಂ ಗತಿಂ ॥ ೪೬ ॥**
**ಸ್ನಾನಂ ದಾನಂ ಜಪೋ ಹೋಮಃ ಶುಭಂ ವಾ ಯದಿವಾಽಶುಭಂ ।**
**ಪುರಾಣೇ ಶ್ರೂಯತೇ ರಾಜನ್ ಸರ್ವಂ ಕೋಟಿಗುಣಂ ಭವೇತ್ ॥ ೪೭ ॥**
**ತಸ್ಯಾಸ್ತೀರೇತು ಯೇ ವೃಕ್ಷಾಃ ಪತಿತಾಃ ಕಾಲಪರ್ಯಯೇ ।**
**ನರ್ಮದಾತೋಯಸಂಸ್ಪೃಷ್ಟಾಸ್ತೇ ಯಾಂತಿ ಪರಮಾಂ ಗತಿಂ ॥ ೪೮ ॥**
**ಅನಿವೃತ್ತಿಕಾ ಗತಿಸ್ತಸ್ಯ ಪವನಸ್ಯಾಂಬರೇ ಯಥಾ ॥ ೪೯ ॥**
**ಪತನಂ ಕುರುತೇ ಯಸ್ತು ತಸ್ಮಿಂಸ್ತೀರ್ಥೇ ನರಾಧಿಪ ।**
**ಕನ್ಯಾಸ್ತ್ರೀಣಿ ಸಹಸ್ರಾಣಿ ಪಾತಾಲೇ ಭೋಗ ಭಾಗಿನಃ ॥ ೫೦ ॥**

---

ವುದೂ ಆಗಿ ಮಹೇಂದ್ರಭವನಕ್ಕೆಣೆಯಾದ ಭವ್ಯಭವನದಲ್ಲಿ ನೆಲಸಿ ರಾಜ ರಾಜೇಶ್ವರನಾಗಿ ವಿರಾಜಿಸುತ್ತ ಸಮಸ್ತ ಸ್ತ್ರೀಜನಕ್ಕೂ ವಲ್ಲಭನಾಗಿರುತ್ತಾನೆ.

೪೫. ಹೀಗೆ ಆ ಅರಮನೆಯಲ್ಲಿ ವಾಸಮಾಡುತ್ತ ನೂರು ವರ್ಷಗಳು ಪೂರ್ಣವಾಗಿ ಸಕಲವ್ಯಾಧಿವಿವರ್ಜಿತನಾಗಿ ಬಾಳುವನು.

೪೬. ಅಯ್ಯಾ ಧರ್ಮರಾಜನೆ! ಹೀಗೆ ಆ ಅಮರಕಂಟಕ ಕ್ಷೇತ್ರದಲ್ಲಿ ಅಸುದೊರೆದ ಮಾನವನು ಈ ಪ್ರಕಾರವಾಗಿ ಸಮಸ್ತಭೋಗಭಾಗ್ಯಗಳನ್ನೂ ಪಡೆಯುವನು. ಆ ತೀರ್ಥದೆಡೆಯಲ್ಲಿ ಯಾವನು ಭಕ್ತಿ ಪುರಸ್ಸರವಾಗಿ ಅಗ್ನಿಪ್ರವೇಶ ವನ್ನು ಮಾಡುವನೋ ಅವನು ಮೃತನಾದ ಬಳಿಕ ಸ್ವರ್ಗವನ್ನು ಸೇರಿ ಆ ತರು ವಾಯ ಪರಮಗತಿಯನ್ನು ಪಡೆಯುತ್ತಾನೆ.

೪೭. ಸ್ನಾನ, ದಾನ, ಜಪ, ಹೋಮ, ಶುಭ ಅಥವಾ ಅಶುಭಕರ್ಮಗಳು ಯಾವಯಾವುದು ಪುರಾಣಗಳಲ್ಲಿ ಕೇಳಿ ಬರುವುವೋ ಅವುಗಳೆಲ್ಲವೂ, ಈ ಅಮರ ಕಂಟಕತೀರ್ಥದಲ್ಲಿ ಆಚರಿಸಿದ್ದಾದರೆ ಕೋಟಿಗುಣಿತಗಳಾಗುತ್ತವೆ.

೪೮. ಅಯ್ಯಾ ಧರ್ಮನಂದನನೇ! ಆ ಅಮರಕಂಟಕ ತೀರ್ಥದ ಬಳಿ ಇರುವ ವೃಕ್ಷಗಳಾವುವಿರುವುವೋ ಅವೂ ಕಾಲಾನುಕ್ರಮದಲ್ಲಿ ನೆಲಕ್ಕುರುಳಿ ನರ್ಮದಾ ತೋಯಸಂಸ್ಪೃಷ್ಟಗಳಾಗಿ ಆ ಪುಣ್ಯದಿಂದಲೇ ಅತ್ಯುತ್ತಮವಾದ ಗತಿಯನ್ನು ಹೊಂದುತ್ತವೆ.

೪೯–೫೧. ಆ ತೀರ್ಥದಲ್ಲಿ ಬಿದ್ದು ಅಸುದೊರೆವ ಧನ್ಯಾತ್ಮನು, ಗಗನದಲ್ಲಿ ವಾಯುವಿನ ಗತಿಯೆಂತೋ ಅಂತು ಅನಿವೃತ್ತಿಕರವಾದ ಗತಿಯನ್ನು ಪಡೆಯು ತ್ತಾನೆ. ಪಾತಾಳಲೋಕದಲ್ಲಿ ಭೋಗಭಾಗಿನಿಯರಾದ ಮೂರುಸಾವಿರ ಮಂದಿ

**ತಿಷ್ಠಂತಿ ಭವನೇ ತಸ್ಯ ಪ್ರೇಷಣೇ ಪ್ರಾರ್ಥಯಂತಿ ಚ ।**
**ದಿವ್ಯಭೋಗೈಃ ಸುಸಂಪನ್ನಃ ಕ್ರೀಡತೇ ಕಾಲಮಿಪ್ಸಿತಂ ॥ ೫೧ ॥**
**ಪೃಥಿವ್ಯಾಂ ಹ್ಯಾಸಮುದ್ರಾಯಾಂ ತಾದೃಶೋ ನೈವ ಜಾಯತೇ ।**
**ಯಾದೃಶೋಽಯಂ ನರಶ್ರೇಷ್ಠ ಪರ್ವತೋಽಮರಕಂಟಕಃ ॥ ೫೨ ॥**
**ತತ್ರ ತೀರ್ಥಂ ತು ವಿಜ್ಞೇಯಂ ಪರ್ವತಸ್ಯಾಽನುಪಶ್ಚಿಮೇ ।**
**ಹ್ರದೋ ಜಾಲೇಶ್ವರೋನಾಮ ತ್ರಿಷು ಲೋಕೇಷು ವಿಶ್ರುತಃ ॥ ೫೩ ॥**
**ತತ್ರ ಪಿಂಡಪ್ರದಾನೇನ ಸಂಧ್ಯೋಪಾಸನಕೇನ ತು ।**
**ಪಿತರೋ ದ್ವಾದಶಾಬ್ದಾದಿ ತರ್ಪಿತಾಸ್ತು ಭವಂತಿ ವೈ ॥ ೫೪ ॥**
**ದಕ್ಷಿಣೇ ನರ್ಮದಾತೀರೇ ಕಪಿಲಾತು ಮಹಾನದೀ ।**
**ಸರಲಾರ್ಜುನಸಂಛನ್ನಾ ಖದಿರೈರುಪಶೋಭಿತಾ ॥ ೫೫ ॥**
**ಮಾಧವೀಸಲ್ಲಕೀಭಿಶ್ಚ ವಲ್ಲೀಭಿಶ್ಚಾಽಪ್ಯಲಂಕೃತಾ ।**
**ಶ್ವಾಪದೈರ್ಗರ್ಜಮಾನೈಶ್ಚ ಗೋಮಾಯುವಾನರಾದಿಭಿಃ ॥ ೫೬ ॥**

---

ಕನ್ಯೆಯರು ಆ ಪುಣ್ಯವಂತನ ಮನೆಯ ಬಾಗಿಲಿನಲ್ಲಿ ಕಾದು ನಿಂತು ತಮ್ಮನ್ನು ಬರಮಾಡಿಕೊಳ್ಳಬೇಕೆಂದು ಬೇಡಿಕೊಳ್ಳುತ್ತಿರುತ್ತಾರೆ. ಅವನು ಅವರೆಲ್ಲರೊಡನೆಯೂ ತನಗೆ ಮನಸ್ಸು ಬಂದಷ್ಟುಕಾಲ ಭೋಗಭಾಗ್ಯಗಳನ್ನು ಅನುಭವಿಸುತ್ತಿರುತ್ತಾನೆ.

೫೨. ಆಸಮುದ್ರಾಂತವಾದ ಭೂಮಂಡಲದಲ್ಲಿಯೇ ಈ ಅಮರಕಂಟಕ ಪರ್ವತಕ್ಕೆಣೆಯಾದ ಮತ್ತೊಂದು ಪ್ರದೇಶವಿರುವುದಿಲ್ಲವು.

೫೩. ಈ ಅಮರಕಂಟಕ ಪರ್ವತದ ಪಶ್ಚಿಮಕ್ಕೆ ಜಾಲೇಶ್ವರವೆಂಬ ಮಡುವು ನೆಲಸಿರುವುದು. ಇದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು.

೫೪. ಆ ಮಡುವಿನಲ್ಲಿ ಪಿತೃದೇವತೆಗಳಿಗೆ ಪಿಂಡಪ್ರದಾನಮಾಡುವುದರಿಂದಲೂ, ಸಂಧ್ಯೋಪಾಸನೆಮಾಡುವುದರಿಂದಲೂ ಪಿತೃಗಳು ಹನ್ನೆರಡು ವರ್ಷಗಳ ಕಾಲ ತೃಪ್ತರಾಗಿರುತ್ತಾರೆ.

೫೫. ನರ್ಮದಾತೀರದ ದಕ್ಷಿಣಕ್ಕೆ ಮಹಾನದಿಯಾದ ಕಪಿಲೆಯು ಪ್ರವಹಿಸುತ್ತಿರುವುದು. ಅದು ಸರಲಾರ್ಜುನವೃಕ್ಷಗಳಿಂದ ನಿಬಿಡವಾಗಿ, ಖದಿರವೃಕ್ಷಗಳಿಂದ ಸಂಶೋಭಿತವಾಗಿರುವುದು.

೫೬. ಮಾಧವೀ ಸಲ್ಲಕೀ ಮೊದಲಾದ ಲತೆಗಳಿಂದ ಅಲಂಕೃತವಾಗಿ, ವನ್ಯಮೃಗಗಳಿಂದ ತುಂಬಿ ಅವುಗಳ ಗರ್ಜನೆಗಳಿಂದ ಧ್ವನಿಗೊಂಡು ನರಿ, ಕಪಿ ಮೊದಲಾದ ಪ್ರಾಣಿಗಳಿಂದಲೂ ಕಿಕ್ಕಿರಿದಿರುವುದು.

ಪಕ್ಷಿಜಾತಿವಿಶೇಷೈಶ್ಚ ನಿತ್ಯಂ ಪ್ರಮುದಿತಾ ನೃಪ ।
ಸಾಗ್ರಂ ಕೋಟಿಶತಂ ತತ್ರ ಋಷೀಣಾಮಿತಿ ಶುಶ್ರುಮ ॥ ೫೭ ॥
ತತಸ್ತಸ್ತ್ವಾಗತಂ ಮೋಕ್ಷಂ ಯೇಷಾಂ ಜನ್ಮ ನ ಚಾಗಮಃ ।
ಯೇನ ತತ್ರ ತಪಸ್ತಪ್ತಂ ಕಪಿಲೇನ ಮಹಾತ್ಮನಾ ॥ ೫೮ ॥
ತತ್ರ ತಚ್ಚಾಭವತ್ತೀರ್ಥಂ ಪುಣ್ಯಂ ಸಿದ್ಧನಿಷೇವಿತಂ ।
ಯೇನ ಸಾ ಕಾಪಿಲ್ಯೈಸ್ತಾತ ಸೇವಿತಾ ಋಷಿಭಿಃಪುರಾ ॥ ೫೯ ॥
ತೇನ ಸಾ ಕಪಿಲಾನಾಮ ಗೀತಾ ಪಾಪಕ್ಷಯಂಕರೀ ।
ತತ್ರ ಕೋಟಿಶತಂ ಸಾಗ್ರಂ ತೀರ್ಥಾನಾಮಮರೇಶ್ವರೇ ॥ ೬೦ ॥
ಅಹೋ ರಾತ್ರ್ಯೋಷಿತೋ ಭೂತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ।
ದಾನಂ ಚ ವಿಧಿವದ್ದತ್ವಾ ಯಥಾ ಶಕ್ತ್ಯಾ ದ್ವಿಜೋತ್ತಮೇ ॥ ೬೧ ॥
ಈಶ್ವರಾನುಗ್ರಹಾತ್ಸರ್ವಂ ತತ್ರ ಕೋಟಿಗುಣಂ ಭವೇತ್ ।
ಯಸ್ಮಾದನಕ್ಷರಂ ರೂಪಂ ಪ್ರಣವಸ್ಯೇಹ ಭಾರತ ॥ ೬೨ ॥

---

೫೭. ಅಯ್ಯಾ ದೊರೆಯೆ ! ಆ ಪ್ರದೇಶದಲ್ಲಿ ಅನೇಕ ವಿಧಗಳಾದ ಪಕ್ಷಿ ಜಾತಿಗಳು ವಾಸವಾಗಿರುವುವು. ಇಂತಹ ಆನಂದದಾಯಕವಾದ ಆ ಕಪಿಲಾ ತೀರ ಭೂಮಿಯಲ್ಲಿ ನೂರುಕೋಟಿ ಋಷಿಗಳು ವಾಸವಾಗಿರುವರೆಂದು ಕೇಳಿರುವೆವು.

೫೮. ಅವರು ಅಲ್ಲಿ ತಪಸ್ಸನ್ನುಮಾಡಿ ಮೋಕ್ಷವನ್ನು ಪಡೆದಿರುವರಲ್ಲದೆ ಮತ್ತೆ ಈ ಭೂಮಿಯಲ್ಲಿ ಜನ್ಮವೆತ್ತುವುದಾಗಲಿ ಮಡಿದು ಮತ್ತೆ ಊರ್ಧ್ವಾದಿ ಲೋಕಗಳಿಗೆ ಹೋಗುವುದಾಗಲಿ ಇರುವುದಿಲ್ಲವು. ಮಹಾತ್ಮನಾದ ಕಪಿಲ ಮಹರ್ಷಿಯೂ ಅಲ್ಲಿ ತಪಸ್ಸನ್ನುಮಾಡಿ ಸಿದ್ಧಿಯನ್ನು ಪಡೆದನು.

೫೯–೬೦. ಆ ಮುನಿಯು ತಪಸ್ಸುಮಾಡಿದ ಆ ಪ್ರದೇಶವು ಸಿದ್ಧನಿಷೇವಿತವಾದ ಪುಣ್ಯತೀರ್ಥವಾಯಿತು. ಪೂರ್ವದಲ್ಲಿ ಕಪಿಲ ಕುಲೋದ್ಭವರಾದ ಮಹರ್ಷಿಗಳೂ, ಅವರ ಶಿಷ್ಯರೂ ಆ ಪ್ರದೇಶವನ್ನು ಸೇವಿಸಿದುದರಿಂದ ಅದು ಕಪಿಲ ಕ್ಷೇತ್ರವೆಂದೇ ಪ್ರಖ್ಯಾತವಾಯಿತಲ್ಲದೆ ಸಕಲ ಪಾಪಗಳನ್ನೂ ನಾಶಗೊಳಿಸುವ ಪುಣ್ಯಕ್ಷೇತ್ರವೆಂದು ಹೊಗಳಿಹಾಡಲ್ಪಟ್ಟಿತು. ಅಲ್ಲಿಯ ಅಮರೇಶ್ವರ ಕ್ಷೇತ್ರದಲ್ಲಿ ಒಂದು ಕೋಟಿ ತೀರ್ಥಗಳಿರುವುವೆಂದು ತಿಳಿಯುತ್ತದೆ.

೬೧. ಅಲ್ಲಿ ಅಹೋರಾತ್ರಿಗಳು ವಾಸಮಾಡಿ ಶಾಸ್ತ್ರವಿಧಿಯನ್ನನುಸರಿಸಿ ಯಥಾಶಕ್ತಿಯಾಗಿ ಆ ಪ್ರದೇಶದಲ್ಲಿ ದಾನಮಾಡಿದ್ದಾದರೆ ಸಕಲಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

೬೨–೬೪. ಅಯ್ಯಾ ಧರ್ಮರಾಜನೇ! ಆ ಅಮರಕಂಟಕ ಕ್ಷೇತ್ರದಲ್ಲಿ ಪ್ರಣವದ ಅನಕ್ಷರರೂಪವೇ ನೆಲಸಿರುವುದರಿಂದ ಪರಮೇಶ್ವರಾನುಗ್ರಹವು

ಶಿವಸ್ವರೂಪಸ್ಯ ತತಃ ಕೃತಮಾತ್ರಾಕ್ಷರಂ ಭವೇತ್ ।
ತಿರ್ಯಂಚಃ ಪಶವಶ್ಚೈವ ವೃಕ್ಷಾ ಗುಲ್ಮಲತಾದಯಃ ॥ ೬೩ ॥
ತೇಽಪಿ ತತ್ರ ಕ್ಷಯಂ ಯಾತಾಃ ಸ್ವರ್ಗಂ ಯಾಂತಿ ನ ಸಂಶಯಃ ।
ವಿಶಲ್ಯಾ ತತ್ರ ಯಾ ಪ್ರೋಕ್ತಾ ತತ್ರೈವ ತು ಮಹಾನದೀ ॥ ೬೪ ॥
ಸ್ನಾತ್ವಾ ದತ್ವಾ ಯಥಾನ್ಯಾಯಂ ತತ್ರಾಽಪಿ ಸುಕೃತೀ ಭವೇತ್ ।
ತತ್ರ ದೇವಗಣಾಃ ಸರ್ವೇ ಸಕಿನ್ನರಮಹೋರಗಾಃ ॥ ೬೫ ॥
ಯಕ್ಷರಾಕ್ಷಸಗಂಧರ್ವಾ ಋಷಯಶ್ಚ ತಪೋಧನಾಃ ।
ಸರ್ವೇ ಸಮಾಗತಾಸ್ತಾಂವೈ ಪಶ್ಯಂತಿ ಹ್ಯಮರೇಶ್ವರೇ ॥ ೬೬ ॥
ತೈಶ್ಚ ಸರ್ವೈಃ ಸಮಾಗಮ್ಯ ವಂದಿತೌ ತೌ ಶುಭೌ ತಟೌ ।
ಪುರಾ ಯುಗೇ ಮಹಾಘೋರೇ ಸರ್ವಲೋಕಭಯಂಕರೇ ॥ ೬೭ ॥
ನರ್ಮದಾಯಾಃ ಸುತಸ್ತತ್ರ ಸಶಲ್ಯೋ ವಿಶಲೀಕೃತಃ ।
ಸರ್ವದೇವೈಶ್ಚ ಋಷಿಭಿರ್ವಿಶಲ್ಯಾ ತೇನ ಸಾ ಸ್ಮೃತಾ ॥ ೬೮ ॥

ಯುಧಿಷ್ಠಿರ ಉವಾಚ:—

ಉತ್ಪನ್ನಾ ತು ಕಥಂ ತಾತ ವಿಶಲ್ಯಾ ಕಪಿಲಾ ಕಥಂ ।
ಕಥಂ ವಾ ನರ್ಮದಾಪುತ್ರಃ ಶಲ್ಯಯುಕ್ತೋಽಭವನ್ಮುನೇ ॥ ೬೯ ॥
ಆಶ್ಚರ್ಯಭೂತಂ ಲೋಕಸ್ಯ ಶ್ರೋತುಮಿಚ್ಛಾಮಿ ಸುವ್ರತ ॥ ೭೦ ॥

---

ದೊರೆತು ಅಲ್ಲಿ ಮಾಡಿದ ಸಕಲವೂ ಕೋಟಿಗುಣಿತವಾದ ಫಲವನ್ನು ಕೊಡುತ್ತದೆ. ಅಲ್ಲದೆ ಅನಂತವೂ ಆಗುತ್ತದೆ. ತಿರ್ಯಗ್ಜಂತುಗಳೂ, ಪಶುಗಳೂ, ವೃಕ್ಷಗುಲ್ಮಲತಾದಿಗಳೂ ಅಲ್ಲಿ ನಾಶವನ್ನು ಪಡೆದು ತರುವಾಯ ಸ್ವರ್ಗವನ್ನು ಸೇರುವುವೆಂಬುದರಲ್ಲಿ ಸಂದೇಹವಿರುವುದಿಲ್ಲವು. ಅಲ್ಲಿ ವಿಶಲ್ಯೆಯೆಂಬ ಮಹಾನದಿಯೊಂದಿರುವುದು.

೬೫–೬೮. ಯಕ್ಷರಾಕ್ಷಸ ಗಂಧರ್ವರೂ, ಋಷಿಗಳೂ, ಇತರ ತಪೋಧನರೂ ಅಮರೇಶ್ವರ ಕ್ಷೇತ್ರದಲ್ಲಿರುವ ಆ ವಿಶಲ್ಯಾನದಿಯನ್ನು ಸಂದರ್ಶಿಸಿ ಶುಭಕರವಾದ ಅದರ ಉಭಯ ತೀರಗಳನ್ನೂ ನಮಸ್ಕರಿಸಿ ಪೂಜಿಸುತ್ತಾರೆ. ಪೂರ್ವಯುಗದಲ್ಲಿ ಮಹಾಘೋರವಾದ ಪ್ರಳಯವು ಸಂಭವಿಸಲು ಶಲ್ಯಸಹಿತನಾದ ನರ್ಮದೆಯ ಸುತನು ಅಲ್ಲಿಗೈತಂದು ಶಲ್ಯರಹಿತನಾದನಾದುದರಿಂದ ಸಮಸ್ತದೇವತೆಗಳೂ, ಋಷಿಗಳೂ ಆ ನದಿಗೆ ವಿಶಲ್ಯೆಯೆಂದು ಹೆಸರನ್ನಿತ್ತರು.

೬೯–೭೦. ಯುಧಿಷ್ಠಿರನು ಕೇಳುತ್ತಾನೆ:—ಎಲೈ ಮುನಿಯೆ! ವಿಶಲ್ಯಾನದಿಯು ಉದ್ಭವಿಸಿದುದೆಂತು? ಅದು ಕಪಿಲೆಯೆಂದು ಹೆಸರುಗೊಂಡುದು ಹೇಗೆ? ಆ ನರ್ಮದಾ ಪುತ್ರನಾದವರೂ ಶಲ್ಯ ಸಹಿತನಾದುದು ಹೇಗೆ? ಲೋಕದಲ್ಲಿ ಆಶ್ಚರ್ಯಕರವೆನಿಸಿದ ಈ ವಿಷಯವನ್ನು ಕೇಳ ಬಯಸುತ್ತೇನೆ.

ಶ್ರೀ ಮಾರ್ಕಂಡೇಯ ಉವಾಚ :—

ಪುರಾ ದಾಕ್ಷಾಯಣೀನಾಮ ಸಹಿತಾ ಶೂಲಪಾಣಿನಾ ।
ಕ್ರೀಡಿತ್ವಾ ನರ್ಮದಾತೋಯೇ ಪರಯಾ ಚ ಮುದಾ ನೃಪ ।
ಜಲಾದುತ್ತೀರ್ಯ ಸಹಸಾ ವಸ್ತ್ರಮನ್ಯತ್ಸಮಾಹರತ್ ॥ ೭೧ ॥
ದೇವ್ಯಾಸ್ತು ಸ್ನಾನವಸ್ತ್ರಂ ತತ್ಪೀಡಿತಂ ಲೀಲಯಾ ನೃಪ ॥ ೭೨ ॥
ಸಹಿತಾಽನುಚರೀಭಿಸ್ತು ಇಂದ್ರಾಯುಧನಿಭಂ ಭೃಶಂ ।
ತಸ್ಮಿನ್ನಿಷ್ಪೀಡ್ಯಮಾನೇತು ವಾರಿ ಯನ್ನಿಃಸೃತಂ ತದಾ ॥ ೭೩ ॥
ತಸ್ಮಾದಿಯಂ ಸರಿಜ್ಜಜ್ಞೇ ಕಪಿಲಾಖ್ಯಾ ಮಹಾನದೀ ।
ಸಂಯೋಗಾದಂಗರಾಗಸ್ಯ ವಸ್ತ್ರೋದ್ಯತ್ಕಪಿಲಂ ಜಲಂ ॥ ೭೪ ॥
ಗಲಿತಂ ತೇನ ಕಪಿಲಾ ವರ್ಣತೋ ನಾಮತೋಽಭವತ್ ।
ತಥಾ ಗಂಧರಸೈರ್ಯುಕ್ತಂ ನಾನಾ ಪುಷ್ಪೈಸ್ತು ವಾಸಿತಂ ॥ ೭೫ ॥
ನಾನಾವರ್ಣಾರುಣಂ ಶುಭ್ರಂ ವಸ್ತ್ರಾದ್ಯದ್ವಾರಿನಿಃಸೃತಂ ।
ಪೀಡ್ಯಮಾನಂ ಕರೈಃ ಶುಭ್ರೈಸ್ತೈಸ್ತು ಪಲ್ಲವ ಕೋಮಲೈಃ ॥ ೭೬ ॥
ಕಪಿಲಂ ಜಲಮಿಶ್ರೈಸ್ತು ತಸ್ಮಾದೇಷಾ ಸರಿದ್ವರಾ ।
ಕಪಿಲಾ ಚೋಚ್ಯತೇ ತಜ್ಞೈಃ ಪುರಾಣಾರ್ಥವಿಶಾರದೈಃ ॥ ೭೭ ॥

---

೭೧. ಮಾರ್ಕಂಡೇಯನು ಹೇಳುತ್ತಾನೆ:—ಅಯ್ಯಾ ರಾಜನೇ! ಪೂರ್ವದಲ್ಲಿ ದಾಕ್ಷಾಯಿಣೀದೇವಿಯು ಶೂಲಪಾಣಿಯಾದ ಶಂಕರನೊಡನೆ ಈ ನರ್ಮದೆಯಲ್ಲಿ ಜಲಕ್ರೀಡೆಯಾಡುತ್ತಿದ್ದು ನೀರಿನಿಂದ ಮೇಲೆದ್ದು ಬಂದು ಬೇರೊಂದು ವಸ್ತ್ರವನ್ನು ತೆಗೆದುಕೊಂಡಳು.

೭೨–೭೭. ಆಗ ದೇವಿಯ ಸಖಿಯರು ಕಾಮನಬಿಲ್ಲಿಗೆಣೆಯಾದ ಆ ಒದ್ದೆಯ ಬಟ್ಟೆಯನ್ನು ಅಲ್ಲಿಯೆ ಹಲವುಬಾರಿ ಹಿಂಡಿದರು. ಹಾಗೆ ಹಿಂಡಿದಾಗ ಯಾವ ಜಲವು ಹೊರಹೊರಟಿತೋ ಆ ಜಲವೇ ಕಪಿಲೆಯೆಂದು ಪ್ರಸಿದ್ಧವಾದ ಈ ಮಹಾನದಿಯಾಯಿತು. ದಾಕ್ಷಾಯಿಣೀದೇವಿಯ ಅಂಗರಾಗದ ಸಂಯೋಗವುಳ್ಳ ವಸ್ತ್ರದಿಂದ ಕಪಿಲವರ್ಣದ ಜಲವೇ ಹೊರಬಂದು, ವರ್ಣದಿಂದಲೂ, ಹೆಸರಿನಿಂದಲೂ ಇದು ಕಪಿಲೆಯೆಂದೇ ಪ್ರಖ್ಯಾತವಾಯಿತು. ಅಂತೆಯೇ ಗಂಧರಸಗಳಿಂದ ಕೂಡಿ, ವಿವಿಧ ಪುಷ್ಪಗಳಿಂದ ಸುವಾಸಿತವಾಗಿ, ಬಗೆಬಗೆಯ ಬಣ್ಣಗಳುಳ್ಳದಾಗಿ ಯಾವ ಶುಭ್ರ ಜಲವು, ಆ ದೇವಿಯ ವಸ್ತ್ರದಿಂದ ಸಖಿಯರು ಪಲ್ಲವ ಕೋಮಲವೂ, ಶುಭ್ರವೂ ಆದ ತಮ್ಮ ಕೈಗಳಿಂದ ಹಿಂಡಿದಾಗ ಹೊರಬಂದಿತೋ ಅದೇ ಜಲಪ್ರವಾಹವು ಕಪಿಲವರ್ಣವಾಗಿ ಸರಿದ್ವರೆಯಾಗಿ ಕಪಿಲಾನದಿಯಾಯಿತೆಂದು ಪುರಾಣಗಳ ಅರ್ಥವನ್ನು ಹೇಳುವುದರಲ್ಲಿ ವಿಶಾರದರಾದ ಮುನಿಪುಂಗವರು ಹೇಳುತ್ತಾರೆ.

**ಏಷಾ ವೈ ವಸ್ತ್ರಸಂಭೂತಾ ನರ್ಮದಾತೋಯಸಂಭವಾ ।**
**ಮಹಾ ಪುಣ್ಯತಮಾ ಜ್ಞೇಯಾ ಕಪಿಲಾ ಸರಿದುತ್ತಮಾ ॥ ೭೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಕಪಿಲಾಸರಿತ್ಸಂಭವವರ್ಣನಂ" ನಾಮ್ನೈಕವಿಂಶೋಽಧ್ಯಾಯಃ**

---

೭೮. ನರ್ಮದಾಜಲಸಿಕ್ತವಾದ ದಾಕ್ಷಾಯಿಣಿಯ ಸ್ನಾನವಸ್ತ್ರದಿಂದ ಉದ್ಭವಿಸಿದ ಸರಿದುತ್ತಮೆಯಾದ ಈ ಕಪಿಲಾನದಿಯು ಮಹಾ ಪುಣ್ಯತಮವಾದುದೆಂದು ತಿಳಿಯತಕ್ಕದ್ದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಪಿಲಾಸರಿತ್ಸಂಭವ ವರ್ಣನ" ಎಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶೋಽಧ್ಯಾಯಃ

## ವಿಶಾಲ್ಯಾಸಂಭವವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ:—**

**ಅತಃಪರಂ ಪ್ರವಕ್ಷ್ಯಾಮಿ ಸಾ ವಿಶಲ್ಯಾಹ್ಯಭೂದ್ಯಥಾ ।**
**ಆಶ್ಚರ್ಯಭೂತಾ ಲೋಕಸ್ಯ ಸರ್ವಪಾಪಕ್ಷಯಂಕರೀ ॥ ೧ ॥**
**ಬ್ರಹ್ಮಣೋ ಮಾನಸಃ ಪುತ್ರೋ ಮುಖ್ಯೋಽಹ್ಯಗ್ನಿರಜಾಯತ ।**
**ಮುಖ್ಯೋ ವಹ್ನಿರಿತಿ ಪ್ರೋಕ್ತ ಋಷಿಃ ಪರಮಧಾರ್ಮಿಕಃ ॥ ೨ ॥**
**ತಸ್ಯ ಸ್ವಾಹಾಽಭವತ್ಪತ್ನೀ ಸ್ಮೃತಾ ದಾಕ್ಷಾಯಣೀತು ಸಾ ।**
**ತಸ್ಯಾಂ ಮುಖ್ಯಾ ಮಹಾರಾಜ ತ್ರಯಃ ಪುತ್ರಾಸ್ತದಾಽಭವನ್ ॥ ೩ ॥**
**ಅಗ್ನಿರಾಹವನೀಯಸ್ತು ದಕ್ಷಿಣಾಗ್ನಿಸ್ತಥೈವಚ ।**
**ಗಾರ್ಹಪತ್ಯಸ್ತೃತೀಯಸ್ತು ತ್ರೈಲೋಕ್ಯಂ ಯೈಶ್ಚ ಧಾರ್ಯತೇ ॥ ೪ ॥**
**ತಥಾ ವೈ ಗಾರ್ಹಪತ್ಯೋಽಗ್ನಿರ್ಜಜ್ಞೇ ಪುತ್ರದ್ವಯಂ ಶುಭಂ ।**
**ಪದ್ಮಕಃ ಶಂಕುನಾಮಾ ಚ ತಾವುಭಾವಗ್ನಿಸತ್ತಮೌ ॥ ೫ ॥**

---

## ಕನ್ನಡದ ಅನುವಾದ

### ವಿಶಲ್ಯಾಸಂಭವ ವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಧರ್ಮರಾಜನೆ! ಇನ್ನು ಮುಂದೆ, ಲೋಕಕ್ಕೆಲ್ಲ ಆಶ್ಚರ್ಯಭೂತವಾಗಿ, ಸಮಸ್ತಪಾಪಗಳನ್ನೂ ನಾಶಗೊಳಿಸುವುದಾದ ವಿಶಲ್ಯಾನದಿಯು ಉದ್ಭವಿಸಿದುದೆಂತೆಂಬ ವಿಷಯವನ್ನು ಹೇಳುವೆನು ; ಕೇಳು.

೨. ಪೂರ್ವದಲ್ಲಿ ಅಗ್ನಿಯು ಬ್ರಹ್ಮನ ಮಾನಸಪುತ್ರನಾಗಿ ಜನಿಸಿದನು. ಇವನು ದೇವತೆಗಳಲ್ಲಿ ಪ್ರಮುಖನಾದವನು ಮಾತ್ರವಲ್ಲದೆ ಪರಮಧಾರ್ಮಿಕನಾದ ಋಷಿಮುಖ್ಯನೆಂದೂ ಹೇಳಲ್ಪಟ್ಟಿರುವನು.

೩. ಇವನಿಗೆ ಸ್ವಾಹಾದೇವಿಯು ಪತ್ನಿಯಾದಳು. ಈಕೆಯು ದಕ್ಷಬ್ರಹ್ಮನ ಪುತ್ರಿಯು. ಈಕೆಯಲ್ಲಿ ಮುಖ್ಯರಾದ ಮೂವರು ಪುತ್ರರುದಿಸಿದರು.

೪. ಅವರೇ ಆಹವನೀಯಾಗ್ನಿ, ದಕ್ಷಿಣಾಗ್ನಿ, ಗಾರ್ಹ್ಯಪತ್ಯಾಗ್ನಿಯೆಂಬವರು. ಈ ಮೂವರು ಅಗ್ನಿಗಳೇ ಮೂರುಲೋಕಗಳನ್ನೂ ಧರಿಸಿರುವವರು.

೫. ಇವರಲ್ಲಿ ಗಾರ್ಹಪತ್ಯಾಗ್ನಿಗೆ ಪರಮಮಂಗಳಕರರಾದ ಇಬ್ಬರು ಪುತ್ರರಾದರು. ಇವರೇ ಪದ್ಮಕ ಮತ್ತು ಶಂಕು ಎಂಬುವರು. ಇವರಿಬ್ಬರೂ ಅಗ್ನಿಸತ್ತಮರೆನಿಸಿದವರು.

**ಸ್ತುವನ್ನಗ್ನಿರ್ನದೀತೀರೇ ಸಮಾಶ್ರಿತ್ಯ ಮಹತ್ತಪಃ ।**
**ರುದ್ರಮಾರಾಧಯಾಮಾಸ ಜಿತಾತ್ಮಾ ಸುಸಮಾಹಿತಃ ॥ ೬ ॥**
**ದಶವರ್ಷಸಹಸ್ರಾಣಿ ಚಚಾರ ವಿಪುಲಂ ತಪಃ ।**
**ತಮುವಾಚ ಮಹಾದೇವಃ ಪ್ರಸನ್ನೋ ವೃಷಭಧ್ವಜಃ ॥ ೭ ॥**
**ಭೋ ಭೋ ಬ್ರೂಹಿ ಮಹಾಭಾಗ ಯತ್ತೇ ಮನಸಿ ವರ್ತತೇ ।**
**ದಾತಾ ಹ್ಯಹಮಸಂದೇಹೋ ಯದ್ಯಪಿಸ್ಯಾತ್ಸುದುರ್ಲಭಂ ॥ ೮ ॥**

**ಅಗ್ನಿರುವಾಚ :—**

**ನರ್ಮದೇಯಂ ಮಹಾಭಾಗಾ ಸರಿತೋ ಯಾಶ್ಚ ಷೋಡಶ ।**
**ಭವಂತು ಮಮ ಪತ್ನ್ಯಸ್ತಾಸ್ತ್ವತ್ಪ್ರಸಾದಾನ್ಮಹೇಶ್ವರ ॥ ೯ ॥**
**ತಾಸು ವೈ ಚಿಂತಿತಾನ್ ಪುತ್ರಾನಗ್ರ್ಯಾನುತ್ಪಾದಯಾಮ್ಯಹಂ ।**
**ಏಷ ಏವ ವರೋ ದೇವ ದೀಯತಾಂ ಮೇ ಮಹೇಶ್ವರ ॥ ೧೦ ॥**

**ಈಶ್ವರ ಉವಾಚ :—**

**ಏತಾಸ್ತು ಧಿಷ್ಣಿನಾಮ್ನ್ಯೋ ವೈ ಭವಿಷ್ಯಂತಿ ಸರಿದ್ವರಾಃ ।**
**ಪತ್ನ್ಯಸ್ತವ ವಿಶಾಲಾಕ್ಷ್ಯೋ ವೇದೇ ಖ್ಯಾತಾ ನ ಸಂಶಯಃ ॥ ೧೧ ॥**

---

೬. ಆ ಅಗ್ನಿಯಾದರೋ ನದೀತೀರವನ್ನಾಶ್ರಯಿಸಿ ಮಹತ್ತರವಾದ ತಪಸ್ಸನ್ನಾಚರಿಸುತ್ತ ಜಿತೇಂದ್ರಿಯನೂ, ಸಮಾಹಿತಚಿತ್ತನೂ ಆಗಿ ರುದ್ರನನ್ನು ಆರಾಧಿಸಿದನು.

೭. ಹೀಗೆ ಅವನು ಹತ್ತುಸಾವಿರ ವರ್ಷಗಳಕಾಲ ವಿಪುಲವಾದ ತಪಸ್ಸನ್ನು ಮಾಡಿದನು. ಆಗ ವೃಷಭಧ್ವಜನಾದ ಮಹಾದೇವನು ಆತನಲ್ಲಿ ಪ್ರಸನ್ನನಾಗಿ ಆತನನ್ನು ಕುರಿತು ಹೀಗೆಂದನು.

೮. "ಎಲೈ ಮಹಾಭಾಗ್ಯಶಾಲಿಯೆ! ಹೇಳು ಹೇಳು; ನಿನ್ನ ಮನಸ್ಸಿನಲ್ಲಿರುವುದೇನು? ಅದು ಅತ್ಯಂತ ದುರ್ಲಭವಾದ ಕೋರಿಕೆಯಾದರೂ ನಾನು ಅದನ್ನು ನೆರವೇರಿಸಿಕೊಡುತ್ತೇನೆ. ಇದರಲ್ಲಿ ಸಂದೇಹವಿಲ್ಲ."

೯. ಅಗ್ನಿಯು ಹೇಳುತ್ತಾನೆ:—ಮಹೇಶ್ವರ! ಈ ನರ್ಮದೆಯೂ, ಮತ್ತಿತರ ಹದಿನಾರು ನದಿಗಳೂ, ನಿನ್ನ ಪ್ರಸಾದದಿಂದ ನನಗೆ ಪತ್ನಿಯರಾಗಲಿ.

೧೦. ಇವರಲ್ಲಿ ನಾನು ಯೋಚಿಸುತ್ತಿರುವ ನನ್ನ ಇಷ್ಟಾನುವರ್ತಿಗಳಾದ ಪುತ್ರಶ್ರೇಷ್ಠರನ್ನು ಪಡೆಯುವೆನು. ಎಲೈ ಪರಮೇಶ್ವರನೇ! ನನಗೆ ಬೇಕಾಗಿರುವ ವರವು ಇದೇ ಆಗಿರುವುದು. ಕೃಪೆಮಾಡು."

೧೧. ಈಶ್ವರನು ಹೇಳುತ್ತಾನೆ:—ಎಲೈ ಅಗ್ನಿಯೆ! ಇವರೆಲ್ಲರೂ ಧಿಷ್ಣೆಯರೆಂಬ ಹೆಸರುಳ್ಳವರಾಗಿ ಸರಿದ್ವರೆಯರೆನಿಸಿ ನಿನ್ನ ಪತ್ನಿಯರಾಗುವರು. ಅಲ್ಲದೆ, ವಿಶಾಲಾಕ್ಷಿಯರಾದ ಇವರೆಲ್ಲರೂ ವೇದಗಳಲ್ಲಿಯೂ, ಲೋಕಗಳಲ್ಲಿಯೂ ಪ್ರಖ್ಯಾತರಾಗುವರು.

ತಾಸಾಂ ಪುತ್ರಾ ಭವಿಷ್ಯಂತಿ ಹ್ಯಗ್ನಯೋ ಯೇಽಧ್ವರೇ ಸ್ಮೃತಾಃ ।
ಧಿಷ್ಣ್ಯಾ ನಾಮ ಸುವಿಖ್ಯಾತಾ ಯಾವದಾಭೂತಸಂಪ್ಲವಂ ॥ ೧೨ ॥
ಏವಮುಕ್ತ್ವಾ ಮಹಾದೇವಸ್ತತ್ರೈವಾಂತರಧೀಯತ ।
ನರ್ಮದಾ ಚ ಸರಿಚ್ಛ್ರೇಷ್ಠಾ ತಸ್ಯ ಭಾರ್ಯಾ ಬಭೂವ ಹ ॥ ೧೩ ॥
ಕಾವೇರೀ ಕೃಷ್ಣವೇಣೀಚ ರೇವಾಚ ಯಮುನಾ ತಥಾ ।
ಗೋದಾವರೀ ವಿತಸ್ತಾಚ ಚಂದ್ರಭಾಗಾ ಇರಾವತೀ ॥ ೧೪ ॥
ವಿಪಾಶಾ ಕೌಶಿಕೀ ಚೈವ ಸರಯೂಃ ಶತರುದ್ರಿಕಾ ।
ಶಿಪ್ರಾ ಸರಸ್ವತೀ ಚೈವ ಹ್ರಾದಿನೀ ಪಾವನೀ ತಥಾ ॥ ೧೫ ॥
ಏತಾಃ ಷೋಡಶ ನದ್ಯೋ ವೈ ಭಾರ್ಯಾರ್ಥಂ ಸಂವ್ಯವಸ್ಥಿತಾಃ ।
ತದಾತ್ಮಾನಂ ವಿಭಜ್ಯಾಶು ಧಿಷ್ಣ್ಯೇಷು ಸ ಮಹಾದ್ಯುತಿಃ ॥ ೧೬ ॥
ವ್ಯಭಿಚಾರಾತ್ತು ಭರ್ತುರ್ವೈ ನರ್ಮದಾಯಾಸ್ತು ಧಿಷ್ಣ್ಯಷು ।
ಉತ್ಪನ್ನಾಃ ಶುಚಯಃ ಪುತ್ರಾಃ ಸರ್ವೇ ತೇ ಧಿಷ್ಣ್ಯಪಾಃ ಸ್ಮೃತಾಃ ॥ ೧೭ ॥
ತಸ್ಯಾಶ್ಚ ನರ್ಮದಾಯಾಸ್ತು ಧಿಷ್ಣ್ಯೇಂದ್ರೋ ನಾಮ ವಿಶ್ರುತಃ ।
ಬಭೂವ ಪುತ್ರೋ ಬಲವಾನ್ರೂಪೇಣಾಪ್ರತಿಮೋ ನೃಪ ॥ ೧೮ ॥
ತತೋ ದೇವಾಸುರಂ ಯುದ್ಧಮಭವಲ್ಲೋಮಹರ್ಷಣಂ ।
ಮಯತಾರಕಮಿತ್ಯೇವಂ ತ್ರಿಷು ಲೋಕೇಷು ವಿಶ್ರುತಂ ॥ ೧೯ ॥

---

೧೨. ಇವರಲ್ಲಿ ಧಿಷ್ಣ್ಯರೆಂದು ಯಜ್ಞಗಳಲ್ಲಿ ಸುಪ್ರಖ್ಯಾತರಾದ ಅಗ್ನಿಗಳು ಪುತ್ರರಾಗಿ ಜನಿಸಿ ಆಪ್ರಳಯದವರೆಗೂ ಸುಪ್ರತಿಷ್ಠಿತರಾಗಿರುತ್ತಾರೆ.

೧೩. ಎಲೈ ಮಹಾರಾಜನೇ! ಮಹಾದೇವನು ಈರೀತಿ ನುಡಿದು ಅಲ್ಲಿಯೇ ಅಂತರ್ಧಾನವಾದನು. ತರುವಾಯ ನದೀಶ್ರೇಷ್ಠಳಾದ ನರ್ಮದೆಯು ಆ ಅಗ್ನಿ ದೇವನಿಗೆ ಭಾರ್ಯೆಯಾದಳು.

೧೪–೧೭. ಕಾವೇರಿ, ಕೃಷ್ಣವೇಣಿ, ರೇವಾ, ಯಮುನಾ, ಗೋದಾವರಿ, ವಿತಸ್ತಾ, ಚಂದ್ರಭಾಗಾ, ಇರಾವತಿ, ವಿಪಾಶಾ, ಕೌಶಿಕಿ, ಸರಯು, ಶತರುದ್ರಿಕೆ, ಶಿಪ್ರಾ, ಸರಸ್ವತಿ, ಹ್ರಾದಿನಿ, ಪಾವನಿ ಎಂಬಿವರೇ ಆ ಅಗ್ನಿದೇವನಿಗೆ ಪತ್ನಿಯರಾದ ನದೀದೇವತೆಗಳು. ಹೀಗೆ ಇವರೆಲ್ಲರೂ ಭಾರ್ಯೆಯರಾದ ತರುವಾಯ ಅಗ್ನಿದೇವನು ಹದಿನಾರು ರೂಪಗಳನ್ನು ತಳೆದು ಇವರೊಡಗೂಡಿದ ಫಲವಾಗಿ ಇವರಲ್ಲಿ ಪುತ್ರರುದಿಸಿ ಶುಚಿರ್ಭೂತರಾದ ಧಿಷ್ಣ್ಯಪರೆಂದು ಪ್ರಸಿದ್ಧರಾದರು.

೧೮. ಅವರಲ್ಲಿ ನರ್ಮದೆಗೆ ಧಿಷ್ಣ್ಯೇಂದ್ರನೆಂದು ಪ್ರಖ್ಯಾತನಾದ ಪುತ್ರನುದಿಸಿದನು. ರೂಪದಲ್ಲಿಯೂ, ಬಲದಲ್ಲಿಯೂ ಇವನು ಅಸಮಾನನೆನಿಸಿದನು.

೧೯. ಬಳಿಕ ಮಹಾಭಯಂಕರವೂ, ರೋಮಾಂಚಕರವೂ ಆದ ದೇವಾಸುರ ಯುದ್ಧವು ಮೊದಲಾಯಿತು. ಆ ಯುದ್ಧವು ಮಯತಾರಕಯುದ್ಧವೆಂದು ಪ್ರಸಿದ್ಧವಾಗಿರುವುದು.

**ತತ್ರ ದೈತ್ಯೈರ್ಮಹಾಘೋರೈರ್ಮಯತಾರಪುರೋಗಮೈಃ ।**
**ತಾಡಿತಾಸ್ತೇ ಸುರಾಸ್ತ್ರಸ್ತಾ ವಿಷ್ಣುಂ ವೈ ಶರಣಂ ಯಯುಃ ॥ ೨೦ ॥**
**ತ್ರಾಯಸ್ವ ನೋ ಹೃಷೀಕೇಶ ಘೋರಾದಸ್ಮಾನ್ಮಹಾಭಯಾತ್ ।**
**ದೈತ್ಯಾನ್ಸರ್ವಾನ್ ಸಂಹರಸ್ವ ಮಯತಾರ ಪುರೋಗಮಾನ್ ॥ ೨೧ ॥**
**ಏವಮುಕ್ತಃ ಸ ಭಗವಾನ್ದಿಶೋ ದಶ ವ್ಯಲೋಕಯತ್ ।**
**ತತೋ ಭಗವತಾ ದೃಷ್ಟೌ ರಣೇ ಪಾವಕಮಾರುತೌ ॥ ೨೨ ॥**
**ಆಹೂತೌ ವಿಷ್ಣುನಾ ತೌತು ಸಕಾಶಂ ಜಗ್ಮತುಃ ಕ್ಷಣಾತ್ ।**
**ಸ್ಥಿತೌ ತೌ ಪ್ರಣತೌ ಚಾಗ್ರೇ ದೇವದೇವಸ್ಯ ಧೀಮತಃ ॥ ೨೩ ॥**
**ತತೋ ಧಿಷ್ಣಃ ಪಾವಕೇಂದ್ರೋ ದೇವೇನೋಕ್ತೋ ಮಹಾತ್ಮನಾ ।**
**ನಿರ್ದಹೇಮಾನ್ಮಹಾಘೋರಾನ್ನಾರ್ಮದೇಯ ಮಹಾಽಸುರಾನ್ ॥ ೨೪ ॥**
**ಅಥೈವಮುಕ್ತೌ ತೌ ದೇವೌ ರಣೇ ಪಾವಕಮಾರುತೌ ।**
**ದೈತ್ಯಾನ್ದದಹತುಃಸರ್ವಾನ್ಮಯತಾರಪುರೋಗಮಾನ್ ॥ ೨೫ ॥**
**ದಹ್ಯಮಾನಾಸ್ತು ತೇ ಸರ್ವೇ ಶಸ್ತ್ರೈರಗ್ನಿಂ ತ್ವವೇಷ್ಟಯನ್ ।**
**ದಿವ್ಯೈರಗ್ನ್ಯರ್ಕಸಂಕಾಶೈಃ ಶತಶೋಽಥ ಸಹಸ್ರಶಃ ॥ ೨೬ ॥**

---

೨೦. ಆ ಕಾಳೆಗದಲ್ಲಿ ಮಯತಾರಕರೇ ಮೊದಲಾದ ಮಹಾಭಯಂಕರ ದೈತ್ಯರು ದೇವತೆಗಳನ್ನು ಹೊಡೆದು ಘಾತಿಸಲು ಅವರೆಲ್ಲರೂ ಶ್ರೀಮನ್ಮಹಾ ವಿಷ್ಣುವನ್ನು ಶರಣುಹೊಕ್ಕರು.

೨೧. "ಎಲೈ ಹೃಷೀಕೇಶನೇ! ಘೋರವಾದ ಈ ಆಪತ್ತಿನಿಂದ ನಮ್ಮನ್ನು ಸಂರಕ್ಷಿಸು. ಮಯತಾರಕಾದಿ ಈ ಮಹಾದೈತ್ಯರೆಲ್ಲರನ್ನೂ ಸಂಹರಿಸು."

೨೨. ದೇವತೆಗಳು ಈ ರೀತಿ ಪ್ರಾರ್ಥಿಸಲು ಆ ಸರ್ವಾಂತರ್ಯಾಮಿಯು ದಶದಿಶೆಗಳನ್ನೂ ಪರೀಕ್ಷಿಸಿ ನೋಡಿ ಆ ರಣಾಂಗಣದಲ್ಲಿದ್ದ ಪಾವಕನನ್ನೂ, ಮಾರುತನನ್ನೂ ಕಂಡನು.

೨೩. ಆ ಸ್ವಾಮಿಯು ಅವರೀರ್ವರನ್ನೂ ಆಹ್ವಾನಿಸಲು ಒಡನೆಯೆ ಅವರು ಆತನ ಬಳಿಗೈದು ನಮ್ರತೆಯಿಂದ ನಮಸ್ಕರಿಸಿ ಮುಂದೆ ನಿಂತರು.

೨೪. ಆಗ ಮಹಾತ್ಮನಾದ ಮಹಾವಿಷ್ಣುವು ಪಾವಕೇಂದ್ರನಾದ ಧಿಷ್ಣಿಯನ್ನು ಕುರಿತು, "ಎಲೈ ನರ್ಮದಾ ಪುತ್ರನೇ! ನೀನು ಮಹಾ ಭಯಂಕರರಾದ ಈ ಮಹಾಸುರರೆಲ್ಲರನ್ನೂ ಸುಟ್ಟುಹಾಕು"ಎಂದು ಅಪ್ಪಣೆಮಾಡಿದನು.

೨೫. ಇಂತು ಹೇಳಲ್ಪಟ್ಟ ಆ ಧಿಷ್ಣೀಂದ್ರಪಾವಕನು, ಮಾರುತನೊಡಗೂಡಿ ಮಯತಾರನೇ ಮೊದಲಾದ ಆ ದೈತ್ಯರೆಲ್ಲರನ್ನೂ, ಸುಟ್ಟುಹಾಕಿದನು.

೨೬. ಹೀಗೆ ಸುಡಲ್ಪಡುತ್ತಿದ್ದ ಆ ಅಸುರರೆಲ್ಲರೂ ದಿವ್ಯಾಗ್ನಿಸದೃಶಗಳಾದ ಸಹಸ್ರಾರು ಬಾಣಗಳಿಂದ ಧಿಷ್ಣೀಂದ್ರನನ್ನು ಮುತ್ತಿ ಘಾತಿಸಿದರು.

ತಾಂಶ್ಚಾಽಗ್ನಿಃ ಶಸ್ತ್ರನಿಕರೈರ್ನಿರ್ದದಾಹ ಮಹಾಽಸುರಾನ್ ।
ಜ್ವಾಲಾಮಾಲಾಕುಲಂ ಸರ್ವಂ ವಾಯುನಾ ನಿರ್ಮಿತಂ ತದಾ ॥ ೨೭ ॥
ದಹ್ಯಮಾನಾಸ್ತತೋ ದೈತ್ಯಾ ಅಗ್ನಿಜ್ವಾಲಾಸಮಾವೃತಾಃ ।
ಪ್ರವಿಶ್ಯ ಪಾತಾಲತಲಂ ಜಲೇ ಲೀನಾಃ ಸಹಸ್ರಶಃ ॥ ೨೮ ॥
ತತಃ ಕುಮಾರಮಗ್ನಿಂ ತು ನರ್ಮದಾಪುತ್ರಮವ್ಯಯಂ ।
ಪೂಜಯಿತ್ವಾ ಸುರಾಃ ಸರ್ವೇ ಜಗ್ಮುಸ್ತೇ ತ್ರಿದಶಾಲಯಂ ॥ ೨೯ ॥
ಸಶಲ್ಯಸ್ತು ಮಹಾತೇಜಾ ರೇವಾಪುತ್ರೋ ವೃತೋಽಗ್ನಿಭಿಃ ।
ನರ್ಮದಾಮಾಗತಃಕ್ಷಿಪ್ರಂ ಮಾತರಂ ದ್ರಷ್ಟುಮುತ್ಸುಕಃ ॥ ೩೦ ॥
ತಂ ದೃಷ್ಟ್ವಾ ಪುತ್ರಮಾಯಾಂತಂ ಶಸ್ತ್ರೌಘೇಣ ಪರಿಕ್ಷತಂ ।
ನರ್ಮದಾ ಪುಣ್ಯಸಲಿಲಾ ಅಭ್ಯುತ್ಥಾಯ ಸುವಿಸ್ಮಿತಾ ॥ ೩೧ ॥
ಪರ್ಯಷ್ವಜತ ಬಾಹುಭ್ಯಾಂ ಪ್ರಸ್ನವಾಪೀಡಿತಸ್ತನೀ ।
ಸಶಲ್ಯಂ ಪುತ್ರಮಾದಾಯ ಕಾಪಿಲಂ ಹ್ರದಮಾವಿಶತ್ ॥ ೩೨ ॥
ಪ್ರವಿಷ್ಟಮಾತ್ರೇತು ಹ್ರದೇ ಕಾಪಿಲೇ ಪಾಪನಾಶಿನಿ ।
ಸಶಲ್ಯಂ ತಂ ವಿಶಲ್ಯಂ ಚ ಕ್ಷಣಾತ್ಕೃತವತೀ ತದಾ ॥ ೩೩ ॥

---

೨೭–೨೮. ಅಗ್ನಿಯಾದರೋ ಅವರೆಲ್ಲರನ್ನೂ ಪ್ರತ್ಯಸ್ತ್ರಗಳಿಂದ ಘಾತಿಸಿ ಸುಡತೊಡಗಲು, ಮಾರುತನು ಎತ್ತೆತ್ತಲೂ ಅಗ್ನಿಜ್ವಾಲೆಗಳನ್ನು ಹರಡಿ ಅಲ್ಲ ಕಲ್ಲೋಲಗೊಳಿಸಿದನು. ಆಗ ದೈತ್ಯರೆಲ್ಲರೂ ಆ ಅಗ್ನಿಜ್ವಾಲೆಗಳಿಂದ ಪರಿವೇಷ್ಟಿತರಾಗಿ ಪಾತಾಲತಲವನ್ನು ಸೇರಿದರು. ಸಹಸ್ರಾರುಮಂದಿ ಜಲವನ್ನೂ ಪ್ರವೇಶಿಸಿದರು.

೨೯–೩೦. ಆ ಬಳಿಕ ದೇವತೆಗಳೆಲ್ಲರೂ ನರ್ಮದಾಕುಮಾರನಾದ ಧಿಷ್ಣಿ ಪಾವಕನನ್ನು ಗೌರವಿಸಿ ಅವ್ಯಯನಾದ ಆತನನ್ನು ಪೂಜಿಸಿ ತ್ರಿದಶಾಲಯಕ್ಕೆ ಹೊರಟುಹೋದರು. ಮಹಾತೇಜಸ್ವಿಯಾದ ಆ ರೇವಾಪುತ್ರನಾದರೋ ಹೀಗೆ ವಿಜಯಿಯಾಗಿ ಸಶಲ್ಯನಾಗಿಯೇ ತನ್ನ ತಾಯಿಯನ್ನು ಕಾಣಲೋಸುಗ ನರ್ಮದಾ ತೀರಕ್ಕೆ ಬಂದನು.

೩೧. ಹೀಗೆ ತನ್ನನ್ನು ನೋಡಲು ಬರುತ್ತಿರುವವನೂ, ಶಸ್ತ್ರಸಮೂಹಗಳಿಂದ ಪರಿಕ್ಷತಗಾತ್ರನೂ ಆದ ತನ್ನ ಮಗನನ್ನು ಕಂಡು ಪುಣ್ಯಸಲಿಲೆಯಾದ ನರ್ಮದೆಯು ಸ್ವರೂಪವನ್ನು ತಾಳಿದವಳಾಗಿ ಎದ್ದು ನಿಂತಳು.

೩೨. ಒಡನೆಯೆ ಆಕೆಯು ಪ್ರಸ್ರವಿಸುತ್ತಿರುವ ಸ್ತನ್ಯವುಳ್ಳವಳಾಗಿ ಆತನನ್ನಪ್ಪಿಕೊಂಡು, ಬಾಣಗಳ ಮೊನೆಗಳು ನಾಟಿ ಗಾಯಗಳಾಗಿರುವ ಆತನನ್ನು ಕರೆದುಕೊಂಡು ಅಲ್ಲಿಯೆ ಇದ್ದ ಕಪಿಲಹ್ರದವನ್ನು ಪ್ರವೇಶಿಸಿದಳು.

೩೩. ಪಾಪನಾಶಕವಾದ ಆ ಕಾಪಿಲಹ್ರದವನ್ನು ಪ್ರವೇಶಿಸಿದೊಡನೆಯೆ ನರ್ಮದಾನಂದನನಾದ ಆ ಧಿಷ್ಣೀಂದ್ರನು ಕ್ಷಣಮಾತ್ರದಲ್ಲಿಯೇ ವಿಶಲ್ಯನಾದನು.

**ಸ ವಿಶಲ್ಯೋಽಭವದ್ಯಸ್ಮಾತ್ಪ್ರಾಪ್ಯ ತಸ್ಯಾಃ ಶಿವಂ ಜಲಂ ।**
**ಕಪಿಲಾ ನಾಮತಸ್ತೇನ ವಿಶಲ್ಯಾ ಚೋಚ್ಯತೇ ಬುಧೈಃ ॥ ೩೪ ॥**
**ಅನ್ಯೇಽಪಿ ತತ್ರ ಯೇ ಸ್ನಾತಾಃ ಶುಚಯುಸ್ತು ಸಮಾಹಿತಾಃ ।**
**ಪಾಪಶಲ್ಯೈಃ ಪ್ರಮುಚ್ಯಂತೇ ಮೃತಾ ಯಾಂತಿ ಸುರಾಲಯಂ ॥ ೩೫ ॥**
**ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾ ಪುರಾ ।**
**ಉತ್ಪತ್ತಿಕಾರಣಂ ತಾತ ವಿಶಲ್ಯಾಯಾ ನರೇಶ್ವರ ॥ ೩೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ವಿಶಲ್ಯಾಸಂಭವ ವರ್ಣನಂ" ನಾಮ ದ್ವಾವಿಂಶೋಽಧ್ಯಾಯಃ**

---

೩೪. ಆತನು ಅಲ್ಲಿ ವಿಶಲ್ಯನಾದುದರಿಂದ ಮಂಗಳಕರವಾದ ಜಲವುಳ್ಳ ಆ ಕಾಪಿಲಹ್ರದವು ವಿಶಲ್ಯೆಯೆಂದು ಬುಧರಿಂದ ಕೀರ್ತಿತವಾಗಿ ಪ್ರಖ್ಯಾತವಾಯಿತು.

೩೫. ಎಲೈ ಧರ್ಮರಾಜನೆ! ಈ ವಿಶಲ್ಯಾಹ್ರದಲ್ಲಿ ಮಜ್ಜನಮಾಡುವ ಇತರರೂ ಪಾಪಶಲ್ಯಗಳಿಂದ ವಿಮುಕ್ತರಾಗುವರಲ್ಲದೆ ಮಡಿದ ತರುವಾಯ ಸುರಲೋಕವನ್ನೂ ಸೇರುವರು.

೩೬. ಹೀಗೆ ನೀನು ಪೂರ್ವದಲ್ಲಿ ನನ್ನನ್ನು ಪ್ರಶ್ನಿಸಿದ ವಿಷಯವೆಲ್ಲವನ್ನೂ ಸಮಗ್ರವಾಗಿ ತಿಳಿಸಿರುವೆನು. ಓ ನರೇಶ್ವರ! ಇದೇ ವಿಶಲ್ಯಾಹ್ರದವು ಉದ್ಭವಿಸುವುದಕ್ಕೆ ಕಾರಣವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ವಿಶಲ್ಯಾಸಂಭವ ವರ್ಣನ"ವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶೋಽಧ್ಯಾಯಃ

### ವಿಶಲ್ಯಾಸಂಗಮಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ:—**

**ತತ್ರೈವ ಸಂಗಮೇ ರಾಜನ್ ಭಕ್ತ್ಯಾ ಪರಮಯಾ ನೃಪ ।**
**ಪ್ರಾಣಾಂಸ್ತ್ಯಜಂತಿ ಯೇ ಮರ್ತ್ಯಾಸ್ತೇ ಯಾಂತಿ ಪರಮಾಂ ಗತಿಂ ॥ ೧ ॥**
**ಸನ್ನ್ಯಸ್ತಸರ್ವಸಂಕಲ್ಪೋ ಯಸ್ತು ಪ್ರಾಣಾನ್ಪರಿತ್ಯಜೇತ್ ।**
**ಅಮರೇಶ್ವರಮಾಸಾದ್ಯ ಸ ಸ್ವರ್ಗೇ ನಿಯತಂ ವಸೇತ್ ॥ ೨ ॥**
**ಶೈಲೇಂದ್ರಂ ಯಃ ಸಮಾಸಾದ್ಯ ಆತ್ಮಾನಂ ಮುಂಚತೇ ನರಃ ।**
**ವಿಮಾನೇನಾರ್ಕವರ್ಣೇನ ಸಗಚ್ಛೇದಮರಾವತೀಂ ॥ ೩ ॥**
**ನರಂ ಪತಂತಮಾಲೋಕ್ಯ ನಗಾದಮರಕಂಟಕಾತ್ ।**
**ಬ್ರುವಂತ್ಯಪ್ಸರಸಃ ಸರ್ವಾ ಮಮ ಭರ್ತಾ ಭವೇದಿತಿ ॥ ೪ ॥**
**ಸಮಂ ಜಲಂ ಧರ್ಮವಿದೋ ವದಂತಿ**
**ಸಾರಸ್ವತಂ ಗಾಂಗಮಿತಿ ಪ್ರಬುದ್ಧಾಃ ।**

---

### ಕನ್ನಡದ ಅನುವಾದ

#### ವಿಶಲ್ಯಾಸಂಗಮ ಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಅಯ್ಯಾ ನೃಪಾಲನೇ! ಯಾವ ಮಾನವರು, ಅಲ್ಲಿಯ (ನರ್ಮದಾ) ಸಂಗಮ ಸ್ಥಳದಲ್ಲಿ ಪರಮ ಭಕ್ತಿಯಿಂದ ವಾಸಮಾಡುತ್ತಿದ್ದು ಪ್ರಾಣಗಳನ್ನು ತ್ಯಜಿಸುವರೋ ಅವರು ಪರಮಗತಿಯನ್ನು ಪಡೆಯುತ್ತಾರೆ.

೨. ಅಮರೇಶ್ವರನನ್ನು ಸಮೀಪಿಸಿ ಸರ್ವಸಂಕಲ್ಪಗಳನ್ನೂ ತೊರೆದು ಪ್ರಾಣ ಪರಿತ್ಯಾಗವನ್ನು ಮಾಡುವಾತನು ನಿಯತವಾಗಿ ಸ್ವರ್ಗಲೋಕದಲ್ಲಿ ವಾಸ ಮಾಡುವನು.

೩–೪. ಅಮರಕಂಟಕಪರ್ವತವನ್ನು ಸೇರಿ ಯಾವ ನರನು ಪ್ರಾಣಗಳನ್ನು ತೊರೆಯುವನೋ ಅವನು ಅರ್ಕವರ್ಣವಾದ ವಿಮಾನದಲ್ಲಿ ಕುಳಿತು ಅಮರಾವತಿಗೆ ಹೋಗುತ್ತಾನೆ. ಅಮರಕಂಟಕ ಪರ್ವತಾಗ್ರದಿಂದ ಬೀಳುತ್ತಿರುವ ಮಾನವನನ್ನು ಕಂಡು ಸ್ವರ್ಗಲೋಕದ ಅಪ್ಸರೆಯರು ಈತನು ನನ್ನ ಭರ್ತನಾಗುವನು ಎಂದು ತಮ್ಮ ತಮ್ಮಲ್ಲಿಯೇ ಸ್ಪರ್ಧಿಸಿ ಹೇಳಿಕೊಳ್ಳುತ್ತಾರೆ.

೫. ಧರ್ಮವಿತ್ತುಗಳಾದ ಪ್ರಬುದ್ಧರು ಸರಸ್ವತೀ ಮತ್ತು ಗಂಗಾನದಿಗಳ ಜಲಗಳು ಪಾವಿತ್ರ್ಯದಲ್ಲಿ ಸರಿಸಮಾನಗಳಾದುವೆಂದು ಹೇಳುತ್ತಾರೆ. ಆದರೆ

ತಸ್ಯೋಪರಿಷ್ಟಾತ್ಪ್ರವದಂತಿ ತಜ್ಞಾ
ರೇವಾಜಲಂ ನಾಽತ್ರ ವಿಚಾರಣಾಽಸ್ತಿ ॥ ೫ ॥
ಅನೇಕವಿದ್ಯಾಧರಕಿನ್ನರಾದ್ಯೈ
ರಧ್ಯಾಸಿತಂ ಪುಣ್ಯತಮಾಧಿವಾಸ್ಯೈಃ ।
ರೇವಾಜಲಂ ಧಾರಯತೋಹಿ ಮೂರ್ಧ್ನಾ
ಸ್ಥಾನಂ ಸುರೇಂದ್ರಾಧಿಪತೇಃ ಸಮೀಪೇ ॥ ೬ ॥
ನರ್ಮದಾ ಸರ್ವದಾ ಸೇವ್ಯಾ ಬಹುನೋಕ್ತೇನ ಕಿಂ ನೃಪ ।
ಯದೀಚ್ಛೇನ್ನ ಪುನರ್ದ್ರಷ್ಟುಂ ಘೋರಂ ಸಂಸಾರಸಾಗರಂ ॥ ೭ ॥
ತ್ರಯಾಣಾಮಪಿ ಲೋಕಾನಾಂ ಮಹತೀ ಪಾವನೀ ಸ್ಮೃತಾ ।
ಯತ್ರ ತತ್ರ ಮೃತಸ್ಯಾಽಪಿ ಧ್ರುವಂ ಗಾಣೇಶ್ವರೀ ಗತಿಃ ॥ ೮ ॥
ಅನೇಕ ಯಜ್ಞಾಯತನೈರ್ವೃತಾಂಗೀ
ನಹ್ಯತ್ರ ಕಿಂಚಿದ್ಯದತೀರ್ಥಮಸ್ತಿ ।
ತಸ್ಯಾಸ್ತು ತೀರೇ ಭವತಾ ಯದುಕ್ತಂ
ತಪಸ್ವಿನೋ ವಾಽಪ್ಯತಪಸ್ವಿನೋ ವಾ ॥ ೯ ॥
ಮ್ರಿಯಂತಿ ಯೇ ಪಾಪಕೃತೋ ಮನುಷ್ಯಾ
ಸ್ತೇ ಸ್ವರ್ಗಮಾಯಾಂತಿ ಯಥಾಽಮರೇಂದ್ರಾಃ ॥ ೧೦ ॥

---

ವಿಷಯವನ್ನು ಚೆನ್ನಾಗಿ ಬಲ್ಲವರು ರೇವಾಜಲವು ಅವರೆಡಕ್ಕಿಂತಲೂ ಅಧಿಕ ಪವಿತ್ರವಾದುದೆಂದು ಹೇಳುತ್ತಾರೆ.

೬. ಅನೇಕ ವಿದ್ಯಾಧರ ಕಿನ್ನರಾದಿ ದೇವತೆಗಳಿಂದ ಸಂಸೇವಿತವಾಗಿ ಅತ್ಯಂತ ಪುಣ್ಯಕರವಾಗಿರುವ ನರ್ಮದಾಜಲವನ್ನು ಶಿರಸ್ಸಿನಲ್ಲಿ ಧರಿಸಿದವನಿಗೆ ಸುರಲೋಕದಲ್ಲಿ ದೇವೇಂದ್ರನ ಬಳಿಯಲ್ಲಿಯೆ ವಾಸವು ಲಭಿಸುತ್ತದೆ.

೭. ಅಯ್ಯಾ ದೊರೆಯೇ! ಹೆಚ್ಚಾಗಿ ಹೇಳುವುದರಿಂದೇನುಪ್ರಯೋಜನ? ನರ್ಮದಾನದಿಯು ಎಲ್ಲಕಾಲಗಳಲ್ಲಿಯೂ ಎಲ್ಲರಿಂದಲೂ ಸಂಸೇವಿಸಲ್ಪಡ ಬೇಕಾದದ್ದು. ಸಂಸಾರ ಮಹಾಸಾಗರವನ್ನು ಪುನಃ ನೋಡುವ ಬಯಕೆಯಿಲ್ಲ ದಿದ್ದಲ್ಲಿ ಹೀಗೆ ನರ್ಮದೆಯನ್ನು ಸೇವಿಸಲೇಬೇಕು.

೮. ರೇವಾನದಿಯು ಮೂರುಲೋಕಗಳಲ್ಲಿಯೂ ಪಾವನವಾದುದೆಂದು ತಿಳಿಯಲಾಗಿರುವುದು. ಅದರ ಉಭಯತೀರಗಳಲ್ಲಿ ಯಾವ ಪ್ರದೇಶದಲ್ಲಿ ಮೃತ ನಾದರೂ ಮಾನವನಿಗೆ ಗಾಣೇಶ್ವರ ಪದವು ದೊರಕುತ್ತದೆ.

೯–೧೦. ಅಯ್ಯಾ ಧರ್ಮನಂದನನೇ! ಅನೇಕ ಯಜ್ಞಾಯತನಗಳಿಂದ ಪರಿವೃತವಾಗಿರುವ ತೀರಭೂಮಿಯುಳ್ಳ ಈ ನರ್ಮದೆಯಲ್ಲಿ ತೀರ್ಥವಲ್ಲದ ಸ್ವಲ್ಪ ಭೂಮಿಯೂ ಇರುವುದಿಲ್ಲವು. ಅದರ ತೀರದಲ್ಲಿ, ನೀನು ಹೇಳುವಂತೆ ತಪಸ್ವಿಗಳಾಗಲಿ, ತಪಸ್ವಿಗಳಲ್ಲದವರಾಗಲಿ, ಪಾಪಿಷ್ಠರೇ ಆಗಲಿ ಯಾರಾದರೂ ಸರಿಯೆ, ಮೃತರಾದಲ್ಲಿ ಅಮರೇಂದ್ರರಂತೆಯೇ ಸ್ವರ್ಗಲೋಕವನ್ನೇ ಸೇರುವರು.

**ಏವಂ ತು ಕಪಿಲಾ ಚೈವ ವಿಶಲ್ಯಾ ರಾಜಸತ್ತಮ ।**
**ಈಶ್ವರೇಣ ಪುರಾ ಸೃಷ್ಟ್ವಾ ಲೋಕಾನಾಂ ಹಿತಕಾಮ್ಯಯಾ ॥ ೧೧ ॥**
**ತತ್ರ ಸ್ನಾತ್ವಾ ನರೋ ರಾಜನ್ ಸೋಪವಾಸೋ ಜಿತೇಂದ್ರಿಯಃ ।**
**ಅಶ್ವಮೇಧಸ್ಯ ಮಹತೋಽಸಂಶಯಂ ಫಲಮಾಪ್ನುಯಾತ್ ॥ ೧೨ ॥**
**ಅನಾಶಕಂ ಚ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।**
**ಸರ್ವಪಾಪವಿನಿರ್ಮುಕ್ತೋ ಯಾತಿ ವೈ ಶಿವಮಂದಿರಂ ॥ ೧೩ ॥**
**ಪೃಥಿವ್ಯಾಂ ಸಾಗರಾಂತಾಯಾಂ ಸ್ನಾನದಾನೇನ ಯತ್ಫಲಂ ।**
**ವಿಶಲ್ಯಾಸಂಗಮೇ ಸ್ನಾತ್ವಾ ಸುಕೃತ್ತತ್ಫಲಮಶ್ನುತೇ ॥ ೧೪ ॥**
**ಏವಂ ಪುಣ್ಯಾ ಪವಿತ್ರಾ ಚ ಕಥಿತಾ ತವ ಭೂಪತೇ ।**
**ಭೂಯೋ ಮಾಂ ಪೃಚ್ಛಸಿ ಚ ಯತ್ತಚ್ಚೈವ ಕಥಯಾಮ್ಯಹಂ ॥ ೧೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ "ವಿಶಲ್ಯಾಸಂಗಮಮಾಹಾತ್ಮ್ಯವರ್ಣನಂ" ನಾಮ ತ್ರಯೋವಿಂಶೋಽಧ್ಯಾಯಃ**

---

೧೧. ಎಲೈ ರಾಜಸತ್ತಮನೇ! ಹೀಗೆ ಪರಮೇಶ್ವರನು ಲೋಕಕ್ಕೆ ಹಿತವನ್ನುಂಟುಮಾಡಬಯಸಿ ಪೂರ್ವದಲ್ಲಿ ಕಪಿಲಾ ಮತ್ತು ವಿಶಲ್ಯಾಹ್ರದಗಳನ್ನು ಸೃಜಿಸಿದನು.

೧೨. ಉಪವಾಸದಿಂದಿದ್ದು ಜಿತೇಂದ್ರಿಯನಾಗಿ ಅಲ್ಲಿ ಸ್ನಾನಮಾಡಿದ ಮಾನವನು ಮಹತ್ತರವಾದ ಅಶ್ವಮೇಧಯಜ್ಞದ ಫಲವನ್ನು ಪಡೆಯುವನೆಂಬುದರಲ್ಲಿ ಸಂಶಯವಿಲ್ಲವು.

೧೩. ಎಲೈ ನರಾಧಿಪನೇ! ಅದರ ತೀರದಲ್ಲಿ ಯಾವ ಮಾನವನು ಅನಾಶಕ ವ್ರತವನ್ನು ಆಚರಿಸುತ್ತಾನೆಯೋ ಅವನು ಸಕಲ ಪಾಪವಿಮುಕ್ತನಾಗಿ ಶಿವಮಂದಿರವನ್ನು ಸೇರುತ್ತಾನೆ.

೧೪. ಭೂಮಂಡಲವಲ್ಲಿ ಸಮುದ್ರಪರ್ಯಂತವಾಗಿ ಯಾವ ಯಾವ ತೀರ್ಥಗಳಿರುವುವೋ ಆ ತೀರ್ಥಗಳಲ್ಲೆಲ್ಲ ಸ್ನಾನಮಾಡುವುದರಿಂದ ಯಾವ ಫಲವು ದೊರಕುತ್ತದೆಯೋ ಆ ಫಲವು ವಿಶಲ್ಯಾಸಂಗಮದಲ್ಲಿ ಒಂದು ಸಲ ಸ್ನಾನಮಾಡುವುದರಿಂದಲೇ ಲಭಿಸುತ್ತದೆ.

೧೫. ಭೂಪತಿಯೆ! ಹೀಗೆ ಪುಣ್ಯಕರವೂ, ಪವಿತ್ರವೂ ಆದ ವಿಶಲ್ಯಾಸಂಗಮದ ವಿಷಯವನ್ನು ನಿನಗೆ ಹೇಳಿದೆನು. ಮುಂದೇನನ್ನು ಕೇಳಲಪೇಕ್ಷಿಸುವೆ? ಅದನ್ನೂ ಹೇಳುವೆನು; ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ವಿಶಲ್ಯಾಸಂಗಮ ಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

### ಕರನರ್ಮದಾಸಂಗಮಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ಸಂಗಮಃ ಕರನರ್ಮದಯೋಃ ಪುರೇ ಮಾಂಧಾತೃಸಂಜ್ಞಿತೇ ।**
**ಗತ್ವಾ ಸ್ನಾತ್ವಾ ತರ್ಪಯಿತ್ವಾ ಪಿತೄನ್ವಿಷ್ಣುಪುರಂ ನಯೇತ್ ॥ ೧ ॥**
**ಮರ್ದಯಿತ್ವಾ ಕರೌ ಪೂರ್ವಂ ವಿಷ್ಣುರ್ದೈತ್ಯಜಿಘಾಂಸಯಾ ।**
**ಚಕ್ರಂ ಜಗ್ರಾಹ ತತ್ರೈವ ಸ್ವೇದಾಜ್ಜಾತಾ ಸರಿದ್ವರಾ ॥ ೨ ॥**
**ಸಂಗತಾ ರೇವಯಾ ತತ್ರ ಸ್ನಾತ್ವಾ ಪಾಪೈಃ ಪ್ರಮುಚ್ಯತೇ ॥ ೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಕರನರ್ಮದಾಸಂಗಮಮಾಹಾತ್ಮ್ಯವರ್ಣನಂ" ನಾಮ ಚತುರ್ವಿಂಶೋಽಧ್ಯಾಯಃ**

---

## ಕನ್ನಡದ ಅನುವಾದ

### ಕರನರ್ಮದಾಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಓ ಧರ್ಮನಂದನಾ! ಮಾಂಧಾತೃಪುರ ಸಮೀಪದಲ್ಲಿ ಕರನರ್ಮದಾ ಸಂಗಮವಿರುವುದು. ಅಲ್ಲಿಗೆ ಹೋಗಿ ಸ್ನಾನವನ್ನುಮಾಡಿ ಪಿತೃಗಳಿಗೆ ತರ್ಪಣವನ್ನಿತ್ತರೆ ಮಾನವನು ವೈಕುಂಠವನ್ನು ಸೇರುವನು.

೨. ಪೂರ್ವದಲ್ಲಿ ಮಹಾ ವಿಷ್ಣುವು ಆ ಪ್ರದೇಶದಲ್ಲಿ ತನ್ನ ಅಂಗೈಗಳನ್ನುಜ್ಜಿ ಚಕ್ರವನ್ನು ಹಿಡಿದಂದು ಉಂಟಾದ ಬೆವರಿನಿಂದ ಸರಿದ್ವರೆಯೊಂದು ಉದ್ಭವಿಸಿತು.

೩. ಆ ನದಿಯು ನರ್ಮದೆಯೊಡನೆ ಸಂಗಮವನ್ನು ಪಡೆಯಿತು. ಆ ಸಂಗಮದಲ್ಲಿ ಸ್ನಾನಮಾಡಿದರೆ ಮಾನವನು ಪಾಪವಿಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಕರನರ್ಮದಾ ಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶೋಽಧ್ಯಾಯಃ

## ನೀಲಗಂಗಾಸಂಗಮಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಓಂಕಾರಾತ್ಪೂರ್ವಭಾಗೇ ವೈ ಸಂಗಮೋ ಲೋಕವಿಶ್ರುತಃ ।
ರೇವಯಾ ಸಂಗತಾ ಯತ್ರ ನೀಲಗಂಗಾ ನೃಪೋತ್ತಮ ॥ ೧ ॥
ತತ್ರ ಸ್ನಾತ್ವಾ ಜಪಿತ್ವಾ ಚ ಕೋಽರ್ಥೋಽಲಭ್ಯೋ ಭವೇದ್ಭುವಿ ।
ಷಷ್ಟಿವರ್ಷಸಹಸ್ರಾಣಿ ನೀಲಕಂಠಪುರೇ ವಸೇತ್ ॥ ೨ ॥
ತರ್ಪಯಿತ್ವಾ ಪಿತೄಂಛ್ರಾದ್ಧೇ ತಿಲಮಿಶ್ರೈರ್ಜಲೈರಪಿ ।
ಉದ್ಧರೇದಾತ್ಮನಾ ಸಾರ್ಧಂ ಪುರುಷಾನೇಕವಿಂಶತಿಂ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ನೀಲಗಂಗಾಸಂಗಮಮಾಹಾತ್ಮ್ಯವರ್ಣನಂ"
ನಾಮ ಪಂಚವಿಂಶೋಽಧ್ಯಾಯಃ

---

## ಕನ್ನಡದ ಅನುವಾದ

### ನೀಲಗಂಗಾಸಂಗಮ ಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಎಲೈ ಪಾಂಡುನಂದನನೆ! ಓಂಕಾರಕ್ಕೆ ಪೂರ್ವದಿಗ್ಭಾಗದಲ್ಲಿ ಒಂದು ಸಂಗಮ ಕ್ಷೇತ್ರವು ಪ್ರಸಿದ್ಧವಾಗಿರುವುದು. ಅಲ್ಲಿ ನೀಲಗಂಗಾ ನದಿಯು ನರ್ಮದೆಯೊಡನೆ ಕೂಡಿರುವುದು.

೨. ಅಲ್ಲಿ ಸ್ನಾನಮಾಡಿ, ಮಂತ್ರಜಪವನ್ನುಮಾಡಿದಾತನಿಗೆ ಅಲಭ್ಯವಾದುದು ಲೋಕದಲ್ಲಿ ಏನು ತಾನೆ ಇರುವುದು. ಅವನಿಗೆ ದೊರಕದ ಪದಾರ್ಥವೇ ಇರುವುದಿಲ್ಲವು. ಅವನು ಅರುವತ್ತುಸಾವಿರ ವರ್ಷಗಳಕಾಲ ಕೈಲಾಸದಲ್ಲಿ ವಾಸವಾಗಿರುತ್ತಾನೆ.

೩. ಅಲ್ಲಿ ಶ್ರಾದ್ಧವನ್ನುಮಾಡಿ ಪಿತೃಗಳಿಗೆ ತಿಲೋದಕದಿಂದಲೋ ಕೇವಲ ಜಲದಿಂದಲೇಯೊ ತರ್ಪಣವನ್ನಿತ್ತ ಮಾನವನು ತನ್ನೊಡನೆ ಏಕವಿಂಶತಿ ಪೂರ್ವಪುರುಷರನ್ನು ಉದ್ಧಾರಮಾಡುವವನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನೀಲಗಂಗಾಸಂಗಮ ಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡ್ತ್ರಿಂಶೋಽಧ್ಯಾಯಃ

## ಮಧೂಕತೃತೀಯಾವ್ರತವಿಧಾನಮಾಹಾತ್ಮ್ಯವರ್ಣನಂ

**ಯುಧಿಷ್ಠಿರ ಉವಾಚ :—**

**ಜಾಲೇಶ್ವರೇಽಪಿ ಯತ್ಪ್ರೋಕ್ತಂ ತ್ವಯಾ ಪೂರ್ವಂ ದ್ವಿಜೋತ್ತಮ ।**
**ತತ್ಕಥಂ ತು ಭವೇತ್ಪುಣ್ಯಮೃಷಿಸಿದ್ಧನಿಷೇವಿತಂ ॥ ೧ ॥**

**ಶ್ರೀ ಮಾರ್ಕಂಡೇಯ ಉವಾಚ :—**

**ಜಾಲೇಶ್ವರಾತ್ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ।**
**ತಸ್ಯೋತ್ಪತ್ತಿಂ ಕಥಯತಃ ಶೃಣು ತ್ವಂ ಪಾಂಡುನಂದನ ॥ ೨ ॥**
**ಪುರಾ ಋಷಿಗಣಾಃ ಸರ್ವೇ ಸೇಂದ್ರಾಶ್ಚೈವ ಮರುದ್ಗಣಾಃ ।**
**ತಾಪಿತಾ ಅಸುರೈಃ ಸರ್ವೈಃ ಕ್ಷಯಂ ನೀತಾ ಹ್ಯನೇಕಶಃ ॥ ೩ ॥**
**ಬಾಣಾಸುರಪ್ರಭೃತಿಭಿರ್ಜಂಭಶುಂಭಪುರೋಗಮೈಃ ।**
**ವಧ್ಯಮಾನಾ ಹ್ಯನೇಕೈಶ್ಚ ಬ್ರಹ್ಮಾಣಂ ಶರಣಂ ಗತಾಃ ॥ ೪ ॥**
**ವಿಮಾನೈಃ ಪರ್ವತಾಕಾರೈರ್ಹಯೈಶ್ಚೈವ ಗಜೋಪಮೈಃ ।**
**ಸ್ಯಂದನೈರ್ನಗರಾಕಾರೈಃ ಸಿಂಹಶಾರ್ದೂಲಯೋಜಿತೈಃ ॥ ೫ ॥**

---

## ಕನ್ನಡದ ಅನುವಾದ

### ಮಧೂಕತೃತೀಯಾವ್ರತವಿಧಾನಮಾಹಾತ್ಮ್ಯವರ್ಣನ

೧. ಯುಧಿಷ್ಠಿರನು ಕೇಳುತ್ತಾನೆ :—ಅಯ್ಯಾ ದ್ವಿಜೋತ್ತಮನೇ! ಹಿಂದೆ ನೀನು ಋಷಿಸಿದ್ಧನಿಷೇವಿತವಾದ ಜಾಲೇಶ್ವರಕ್ಷೇತ್ರವನ್ನು ಕುರಿತು ಹೇಳಿದೆ ಯಷ್ಟೆ. ಅದರಿಂದುಂಟಾಗುವ ಪುಣ್ಯಫಲವು ಮಾನವರಿಗೆ ಲಭಿಸುವ ಬಗೆ ಯೆಂತು?

೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಮಹಾರಾಜ! ಜಾಲೇಶ್ವರ ತೀರ್ಥಕ್ಕಿಂತಲೂ ಶ್ರೇಷ್ಠವಾದ ತೀರ್ಥವು ಹಿಂದಾವಾಗಲೂ ಇರಲಿಲ್ಲವು; ಮುಂದೆ ಉದ್ಭವಿಸಲೂ ಆರದು. ಪಾಂಡುನಂದನ, ಆ ತೀರ್ಥದ ಉತ್ಪತ್ತಿ ಕಥೆಯನ್ನು ಹೇಳುವೆನು; ಕೇಳು.

೩. ಪೂರ್ವದಲ್ಲಿ ಅಸುರಪೀಡೆಗೊಳಗಾಗಿ ಸಮಸ್ತಋಷಿಗಣಗಳೇ ಅಲ್ಲದೆ ಮಹೇಂದ್ರಸಹಿತರಾದ ಅಮರಗಣಗಳೂ ಕ್ಷಯಿಸಿಹೋದರು.

೪. ಬಾಣಾಸುರ, ಜಂಭ, ಶುಂಭರೇ ಮೊದಲಾದ ದೈತ್ಯರಿಂದ ಹಿಂಸೆ ಗೊಳಗಾದ ಆ ಋಷಿಗಳೂ, ದೇವತೆಗಳೂ ಬ್ರಹ್ಮನಲ್ಲಿಗೆ ಶರಣುಹೋದರು.

೫–೭. ಅವರಲ್ಲಿ ಕೆಲವರು ಪರ್ವತಾಕಾರಗಳಾದ ವಿಮಾನಗಳಲ್ಲಿಯೂ, ಗಜೋಪಮಗಳಾದ ಕುದುರೆಗಳ ಮೇಲೆ ಕೆಲವರೂ, ಕೆಲವರು ಸಿಂಹಶಾರ್ದೂಲ

ಕಚ್ಛಪೈರ್ಮಕರೈಶ್ಚಾಽನ್ಯೇ ಜಗ್ಮುರನ್ಯೇ ಪದಾತಯಃ ।
ಪ್ರಾಪ್ಯ ತೇ ಪರಮಂ ಸ್ಥಾನಮಶಕ್ಯಂ ಯದಧಾರ್ಮಿಕೈಃ ॥ ೬ ॥
ದೃಷ್ಟ್ವಾ ಪದ್ಮೋದ್ಭವಂ ದೇವಂ ಸರ್ವಲೋಕಸ್ಯ ಶಂಕರಂ ।
ತೇ ಸರ್ವೇ ತತ್ರ ಗತ್ವಾತು ಸ್ತುತಿಂ ಚಕ್ರುಃ ಸಮಾಹಿತಾಃ ॥ ೭ ॥
ದೇವಾ ಊಚುಃ :—
ಜಯಾಮೇಯ ಜಯಾಭೇದ್ಯ ಜಯಸಂಭೂತಿಕಾರಕ ।
ಪದ್ಮಯೋನೇ ಸುರಶ್ರೇಷ್ಠ ತ್ವಾಂ ವಯಂ ಶರಣಂ ಗತಾಃ ॥ ೮ ॥
ತಚ್ಛ್ರುತ್ವಾ ತು ವಚೋ ದೇವೋ ದೇವಾನಾಂ ಭಾವಿತಾತ್ಮನಾಂ ।
ಮೇಘಗಂಭೀರಯಾ ವಾಚಾ ಪ್ರತ್ಯುವಾಚ ಪಿತಾಮಹಃ ॥ ೯ ॥
ಕಿಂ ವೋ ಹ್ಯಾಗಮನಂ ದೇವಾಃ ಸರ್ವೇಷಾಂ ಚ ವಿವರ್ಣತಾ ।
ಕೇನಾಽವಮಾನಿತಾಃ ಸರ್ವೇ ಶೀಘ್ರಂ ಕಥಯತಾಽಮರಾಃ ॥ ೧೦ ॥
ದೇವಾ ಊಚುಃ :—
ಬಾಣೋ ನಾಮ ಮಹಾವೀರ್ಯೋ ದಾನವೋ ಬಲದರ್ಪಿತಃ ।
ತೇನಾಽಸ್ಮಾಕಂ ಹೃತಂ ಸರ್ವಂ ಧನರತ್ನೈರ್ವಿಯೋಜಿತಾಃ ॥ ೧೧ ॥

---

ಗಳು ಹೂಡಿದ ನಗರೋಪಮಗಳಾದ ರಥಗಳಲ್ಲಿಯೂ ಕುಳಿತು ಹೊರಟರು. ಕೆಲವರು ಕಚ್ಛಪಗಳಮೇಲೂ, ಮಕರಗಳ ಮೇಲೆ ಕುಳಿತೂ, ಕೆಲವರು ಪದಾತಿಗಳಾಗಿಯೂ ಹೊರಟರು. ಅವರೆಲ್ಲರೂ ಅಧರ್ಮಿಷ್ಠರಿಂದ ದುಷ್ಪ್ರಾಪ್ಯವಾದ ಬ್ರಹ್ಮಲೋಕವನ್ನು ಸೇರಿದ ತರುವಾಯ ಸಮಸ್ತಲೋಕಕ್ಕೂ ಮಂಗಳವನ್ನುಂಟು ಮಾಡುವವನಾದ ಬ್ರಹ್ಮದೇವನನ್ನು ಸಂದರ್ಶಿಸಿ ಆತನ ಬಳಿಗೈದಿ ಸಮಾಹಿತ ಚಿತ್ತರಾಗಿ ಈ ರೀತಿ ಸ್ತುತಿಸಿತೊಡಗಿದರು.

೮. ದೇವತೆಗಳು ಸ್ತುತಿಸುತ್ತಾರೆ:—"ಎಲೈ ಪದ್ಮೋದ್ಭವನೇ! ಅಮೇಯನೂ, ಅಭೇದ್ಯನೂ, ಜಗತ್ಸ್ರಷ್ಟ್ರುವೂ ಆದ ನೀನು ಭಕ್ತರ ಕಲ್ಯಾಣಕ್ಕಾಗಿ ವಿಜಯಿಯಾಗು! ಎಲೈ ಸುರಶ್ರೇಷ್ಠನೇ! ನಾವೆಲ್ಲರೂ ನಿನ್ನನ್ನು ಶರಣು ಹೊಕ್ಕಿರುವೆವು."

೯. ಭಾವಿತಾತ್ಮರಾದ ದೇವತೆಗಳ ಈ ಸ್ತುತಿಯನ್ನಾಲಿಸಿ ಬ್ರಹ್ಮನು ಮೇಘಗಂಭೀರವಾದ ಧ್ವನಿಯಿಂದ ಅವರನ್ನು ಕುರಿತು ಹೀಗೆಂದನು.

೧೦. "ಎಲೈ ದೇವತೆಗಳಿರಾ! ನೀವೆಲ್ಲರೂ ಇಲ್ಲಿಗೆ ಬರಲು ಕಾರಣವೇನು? ಹೀಗೇಕೆ ಬಣ್ಣಗೆಟ್ಟಿರುವಿರಿ? ಯಾರಿಂದ ನಿಮಗೆ ಅವಮಾನವಾಗಿರುವುದು? ಜಾಗ್ರತೆಯಾಗಿ ತಿಳಿಸಿರಿ."

೧೧. ದೇವತೆಗಳು ಹೇಳುತ್ತಾರೆ:—"ಎಲೈ ಸ್ವಾಮಿಯೆ! ಮಹಾ ಪರಾಕ್ರಮಿಯೂ, ಬಲಗರ್ವಿತನೂ ಆದ ಬಾಣನೆಂಬ ಅಸುರನೊರ್ವನಿರುವನು.

ದೇವಾನಾಂ ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಚಿಂತಯಾಮಾಸ ದೇವೇಶಸ್ತಸ್ಯ ನಾಶಾಯ ಯಾ ಕ್ರಿಯಾ ॥ ೧೨ ॥
ಅವಧ್ಯೋ ದಾನವಃ ಪಾಪಃ ಸರ್ವೇಷಾಂ ವೈ ದಿವೌಕಸಾಂ ।
ಮುಕ್ತ್ವಾ ತು ಶಂಕರಂ ದೇವಂ ನ ಮಯಾ ನ ಚ ವಿಷ್ಣುನಾ ॥ ೧೩ ॥
ತತ್ರೈವ ಸರ್ವೇ ಗಚ್ಛಾಮೋ ಯತ್ರ ದೇವೋ ಮಹೇಶ್ವರಃ ।
ಸ ಗತಿಶ್ಚೈವ ಸರ್ವೇಷಾಂ ವಿದ್ಯತೇಽನ್ಯೋ ನ ಕಶ್ಚನ ॥ ೧೪ ॥
ಏವಮುಕ್ತ್ವಾ ಸುರೈಃಸರ್ವೈರ್ಬ್ರಹ್ಮಾ ವೇದವಿದಾಂ ವರಃ ।
ಬ್ರಾಹ್ಮಣೈಃಸಹ ವಿದ್ವದ್ಭಿರ್ಗತೋ ಯತ್ರ ಮಹೇಶ್ವರಃ ॥ ೧೫ ॥
ಸ್ತುತಿಭಿಶ್ಚ ಸುಪುಷ್ಟಾಭಿಸ್ತುಷ್ಟಾವ ಪರಮೇಶ್ವರಂ ॥ ೧೬ ॥

ದೇವಾ ಊಚುಃ :–

ಜಯ ತ್ವಂ ದೇವದೇವೇಶ ಜಯೋಮಾರ್ಧಶರೀರಧೃಕ್ ।
ವೃಷಾಸನ ಮಹಾಬಾಹೋ ಶಶಾಂಕಕೃತಭೂಷಣ ॥ ೧೭ ॥
ನಮಃ ಶೂಲಾಗ್ರಹಸ್ತಾಯ ನಮಃ ಖಟ್ವಾಂಗಧಾರಿಣೇ ।
ಜಯಭೂತಪತೇ ದೇವ ದಕ್ಷಯಜ್ಞವಿನಾಶನ ॥ ೧೮ ॥

---

ಅವನು ನಮ್ಮಲ್ಲಿದ್ದ ಧನರತ್ನಗಳೆಲ್ಲವನ್ನೂ ಅಪಹರಿಸಿ ನಮ್ಮನ್ನು ಈ ಗತಿಗೀಡು ಮಾಡಿರುವನು.''

೧೨. ಇಂತು ನುಡಿದ ದೇವತೆಗಳ ಮಾತುಗಳನ್ನು ಕೇಳಿ ಲೋಕಪಿತಾಮಹನಾದ ಬ್ರಹ್ಮದೇವನು ಆ ಬಾಣಾಸುರನ ನಾಶಕ್ಕೋಸುಗ ಚಿಂತಿಸತೊಡಗಿದನು.

೧೩–೧೪. ''ಈ ಪಾಪಿ ದಾನವನು ದೇವತೆಗಳೆಲ್ಲರಿಗೂ ಅಲ್ಲದೆ ನನಗೂ ಮಹಾವಿಷ್ಣುವಿಗೂ ಅವಧ್ಯನಾಗಿರುವನು ಅವನು ಶಂಕರನೊಬ್ಬನಿಗೇ ವಧ್ಯನು. ಆದುದರಿಂದ ಆ ಮಹೇಶ್ವರನಿರುವಲ್ಲಿಗೇ ನಾವೆಲ್ಲರೂ ಹೋಗೋಣ; ನಡೆಯಿರಿ. ಅವನನ್ನುಳಿದರೆ ನಮ್ಮೆಲ್ಲರಿಗೂ ಬೇರೊಂದು ಗತಿ ಯಾವುದೂ ಇರುವುದಿಲ್ಲವು.''

೧೫. ಹೀಗೆ ನುಡಿದ ತರುವಾಯ ಆ ಚತುರಾನನು ಆ ದೇವತೆಗಳೊಡನೆಯೂ, ವಿದ್ವಾಂಸರಾದ ಬ್ರಾಹ್ಮಣರೊಡನೆಯೂ ಮಹೇಶ್ವರನಿದ್ದಲ್ಲಿಗೈತಂದನು.

೧೬. ಆಗಲಾತನು ಆ ಪರಮೇಶ್ವರನನ್ನು ಸುಪುಷ್ಟಗಳಾದ ಸ್ತುತಿಗಳಿಂದ ಸಂತೋಷಗೊಳಿಸಿದನು.

೧೭. ದೇವತೆಗಳು ಸ್ತುತಿಸುತ್ತಾರೆ:—''ದೇವದೇವೇಶ್ವರನೂ, ಉಮಾರ್ಧಶರೀರನೂ ಆದ ಓ ಪರಮೇಶ್ವರನೇ ಜಯಶೀಲನಾಗು. ವೃಷಭಾರೂಢನೂ, ಮಹಾಬಾಹುವೂ, ಶಶಾಂಕಶೇಖರನೂ ಆದ ಎಲೈ ಪ್ರಭುವೇ ಜಯಜಯ !

೧೮. ಶೂಲಾಯುಧವನ್ನು ಅಗ್ರಹಸ್ತದಲ್ಲಿ ಧರಿಸಿರುವನೂ, ಖಟ್ವಾಂಗ

**ಪಂಚಾಕ್ಷರ ನಮೋ ದೇವ ಪಂಚಭೂತಾತ್ಮವಿಗ್ರಹ ।**
**ಪಂಚವಕ್ತ್ರಮಯೇಶಾನ ವೇದೈಸ್ತ್ವಂ ತು ಪ್ರಗೀಯಸೇ ॥ ೧೯ ॥**
**ಸೃಷ್ಟಿಪಾಲನಸಂಹಾರಾಂಸ್ತ್ವಂ ಸದಾ ಕುರುಷೇ ನಮಃ ।**
**ಅಷ್ಟಮೂರ್ತೇ ಸ್ಮರಹರ ಸ್ಮರ ಸತ್ಯಂ ಯಥಾ ಸ್ತುತಃ ॥ ೨೦ ॥**
**ಪಂಚಾತ್ಮಿಕಾ ತನುರ್ದೇವ ಬ್ರಾಹ್ಮಣೈಸ್ತೇ ಪ್ರಗೀಯತೇ ।**
**ಸದ್ಯೋ ವಾಮೋ ತಥಾಽಘೋರೇ ಈಶೇ ತತ್ಪುರುಷೇ ತಥಾ ॥ ೨೧ ॥**
**ಹೇಮಜಾಲೇ ಸುವಿಸ್ತೀರ್ಣೇ ಹಂಸವತ್ಕೂಜಸೇ ಹರ ।**
**ಏವಂ ಸ್ತುತೋ ಮುನಿಗಣೈರ್ಬ್ರಹ್ಮಾದ್ಯೈಶ್ಚ ಸುರಾಽಸುರೈಃ ॥ ೨೨ ॥**
**ಪ್ರಹೃಷ್ಟಃ ಸುಮನಾ ಭೂತ್ವಾ ಸುರಸಂಘಾನುವಾಚ ಹ ॥ ೨೩ ॥**

**ಈಶ್ವರ ಉವಾಚ:—**

**ಸ್ವಾಗತಂ ದೇವವಿಪ್ರಾಣಾಂ ಸುಪ್ರಭಾತಾಽದ್ಯ ಶರ್ವರೀ ।**
**ಕಿಂ ಕುರ್ಮೋ ವದತ ಕ್ಷಿಪ್ರಂ ಕೋಽನ್ಯಃ ಸೇವ್ಯಃ ಸುರಾಽಸುರೈಃ ॥ ೨೪ ॥**

---

ಧಾರಿಯೂ, ಭೂತಗಣಗಳ ಪ್ರಭುವೂ, ದಕ್ಷಯಜ್ಞವನ್ನು ಧ್ವಂಸಗೊಳಿಸಿದವನೂ ಆದ ಓ ಪರಮೇಶ್ವರಾ! ನಿನಗೆ ನಮಸ್ಕಾರವು!

೧೯. ದೇವ! ಪಂಚಾಕ್ಷರಸ್ವರೂಪಿಯೂ, ಪಂಚಭೂತಾತ್ಮವಿಗ್ರಹನೂ, ಪಂಚವಕ್ತ್ರಮಯನೂ, ಈಶಾನನೂ, ಆದ ಓ ಸ್ವಾಮಿಯೆ! ವೇದಗಳಲ್ಲೆಲ್ಲ ನೀನೇ ಗಾನಮಾಡಲ್ಪಟ್ಟಿರುವೆ.

೨೦. ಸೃಷ್ಟಿ ಸ್ಥಿತಿ ಲಯಗಳನ್ನು ಸತತವೂ ಮಾಡುತ್ತಿರುವ ಎಲೈ ಪ್ರಭುವೆ! ನಿನಗೆ ನಮಸ್ಕಾರವು. ಅಷ್ಟಮೂರ್ತಿಯೂ, ಮದನಹರನೂ, ಆದ ನೀನು ನಮ್ಮಿಂದ ಸಂಸ್ತುತನಾಗಿ ನಮ್ಮ ಸತ್ಯಸ್ಥಿತಿಯನ್ನು ಸ್ಮರಿಸಿ ನಮ್ಮನ್ನು ರಕ್ಷಿಸು.

೨೧. ಬ್ರಹ್ಮಜ್ಞಾನಿಗಳಾದ ಮಹರ್ಷಿಗಳು ನೀನು ಪಂಚಾತ್ಮಿಕವಾದ ಶರೀರವುಳ್ಳವನೆಂದು ವಿಶೇಷವಾಗಿ ಸ್ತುತಿಸಿರುವರು. ಸದ್ಯೋಜಾತ, ವಾಮದೇವ, ಅಘೋರ, ಈಶಾನ ಮತ್ತು ತತ್ಪುರುಷಗಳೆಂಬ ರೂಪಗಳಿಂದ ನೀನು ವಿರಾಜಿಸುತ್ತಿರುವೆ.

೨೨–೨೩. ಸ್ವರ್ಣಮಯವೂ, ಸುವಿಸ್ತೀರ್ಣವೂ ಆದ (ಹೃತ್ಪಂಜರದಲ್ಲಿ) ನೀನು ಹಂಸದಂತೆ ಮಧುರವಾಗಿ ಕೂಜನ ಮಾಡುತ್ತಿರುವೆ. ಎಲೈ ಹರನೇ! ನಿನಗೆ ನಮಸ್ಕಾರವು.'' ಈ ಪ್ರಕಾರವಾಗಿ ಮುನಿಗಣಗಳೂ ಬ್ರಹ್ಮಾದಿ ದೇವತೆಗಳು ಸ್ತುತಿಸಲು ಆ ಪರಶಿವನು ಪ್ರಹೃಷ್ಟಾಂತರಂಗನಾಗಿ ಆ ಸುರಸಂಘವನ್ನು ಕುರಿತು ಹೇಳಿದನು.

೨೪. ಈಶ್ವರನು ಹೇಳುತ್ತಾನೆ:—''ದೇವಬ್ರಾಹ್ಮಣರಾದ ನಿಮ್ಮೆಲ್ಲರಿಗೂ ಸ್ವಾಗತವು. ಇಂದಿನ ರಾತ್ರಿಯು ಸುಪ್ರಭಾತವುಳ್ಳುದಾಯಿತು. ನಾವು ಈಗ

ಕಿಂ ದುಃಖಂ ಕೋನು ಸಂತಾಪಃ ಕುತೋ ವೋ ಭಯಮಾಗತಂ ।
ಕಥಯಧ್ವಂ ಮಹಾಭಾಗಾಃ ಕಾರಣಂ ಯನ್ಮನೋಗತಂ ॥ ೨೫ ॥
ಏವಮುಕ್ತಾಸ್ತು ರುದ್ರೇಣ ಪ್ರತ್ಯವೋಚನ್ ಸುರರ್ಷಭಾಃ ।
ಸ್ವಾನ್ ಸ್ವಾನ್ ದೇಹಾನ್ ದರ್ಶಯಂತೋ ಲಜ್ಜಮಾನಾ ಅಧೋಮುಖಾಃ॥
ಅಸ್ತಿ ಘೋರೋ ಮಹಾವೀರ್ಯೋ ದಾನವೋ ಬಲದರ್ಪಿತಃ ।
ಬಾಣೋ ನಾಮೇತಿ ವಿಖ್ಯಾತೋ ಯಸ್ಯ ತತ್ತ್ರಿಪುರಂ ಮಹತ್ ॥ ೨೭ ॥
ತೇನ ವೈ ಸುತಪಸ್ತಪ್ತಂ ದಶವರ್ಷಶತಾನಿಹಿ ।
ತಸ್ಯ ತುಷ್ಟೋಽಭವದ್ಬ್ರಹ್ಮಾ ನಿಯಮೇನ ದಮೇನ ಚ ॥ ೨೮ ॥
ಪುರಾಣಿ ತಾನ್ಯಭೇದ್ಯಾನಿ ದದೌ ಕಾಮಗಮಾನಿ ವೈ ।
ಆಯಸಂ ರಾಜಸಂ ಚೈವ ಸೌವರ್ಣಂ ಚ ತಥಾ ಪರಂ ॥ ೨೯ ॥
ತ್ರಿಪುರಂ ಬ್ರಹ್ಮಣಾ ಸೃಷ್ಟಂ ಭ್ರಮತ್ತತ್ಕಾಮಗಾಮಿ ಚ ।
ತಸ್ಯೈವತು ಬಲೋತ್ಕೃಷ್ಟಾಸ್ತ್ರಿಪುರೇ ದಾನವಾಃ ಸ್ಥಿತಾಃ ॥ ೩೦ ॥

---

ಮಾಡಬೇಕಾದುದೇನೆಂಬುದನ್ನು ಜಾಗ್ರತೆಯಾಗಿ ಹೇಳಿರಿ. ನಿಮ್ಮನ್ನುಳಿದು ಬೇರಾವನನ್ನು ತಾನೆ ಸುರಾಸುರರು ಸೇವಿಸಬೇಕಾಗಿರುವುದು ?

೨೫. ನಿಮಗುಂಟಾಗಿರುವ ದುಃಖವೇನು ! ನಿಮ್ಮ ಸಂತಾಪವೇನು ? ಯಾರಿಂದ ನಿಮಗೆ ಭಯವುಂಟಾಗಿರುವುದು. ಎಲೈ ಮಹಾಭಾಗರೇ ! ನಿಮ್ಮ ಮನಸ್ಸಿನಲ್ಲಿರುವ ಆ ದುಃಖಕಾರಣವನ್ನು ಹೇಳಿರಿ.''

೨೬. ಶಿವನಿಂತು ನುಡಿಯಲು ಆ ದೇವತೆಗಳೆಲ್ಲರೂ ತಮ್ಮ ತಮ್ಮ ಶರೀರಗಳನ್ನು ತಳೆದು ಲಜ್ಜಿತರಾಗಿ ತಲೆತಗ್ಗಿಸಿಕೊಂಡು ಹೇಳತೊಡಗಿದರು.

೨೭. "ಪರಮೇಶ್ವರ ! ಮಹಾಘೋರನೂ, ಮಹಾವೀರ್ಯನೂ, ಬಲಗರ್ವಿತನೂ, ಬಾಣನೆಂದು ಸುಪ್ರಸಿದ್ಧನೂ ಆದ ದಾನವನೊಬ್ಬನಿರುವನು. ತ್ರಿಪುರವೇ ಅವನಿರುವ ಮಹತ್ತರವಾದ ನಿವಾಸಸ್ಥಾನವು.

೨೮–೨೯. ಆ ಬಾಣದಾನವನು ಬ್ರಹ್ಮನನ್ನು ಕುರಿತು ಹತ್ತುಸಾವಿರ ವರ್ಷಗಳಕಾಲ ತಪಸ್ಸನ್ನು ಮಾಡಿದನು. ಜಿತೇಂದ್ರಿಯನಾಗಿ ನಿಯಮದಿಂದ ಆತನೆಸಗಿದ ಆ ತಪಸ್ಸಿನಿಂದ ಸಂತುಷ್ಟನಾಗಿ ಬ್ರಹ್ಮದೇವನು ಆತನಿಗೆ ಅಭೇದ್ಯವೂ, ಮನಬಂದೆಡೆಗೆ ಸಂಚಾರಮಾಡಬಲ್ಲದೂ ಆದ ಆಯಸ, ರಾಜತ, ಸೌವರ್ಣಮಯವಾದ ತ್ರಿಪುರಗಳನ್ನು ವರವಾಗಿ ಕೊಟ್ಟನು.

೩೦. ಸ್ವೇಚ್ಛೆಯಾಗಿ ಸಂಚರಿಸುವುವೂ, ಬ್ರಹ್ಮನಿರ್ಮಿತವೂ ಆದ ಆ ತ್ರಿಪುರಗಳಲ್ಲಿಯೇ ಬಲೋತ್ಕೃಷ್ಟರಾದ ದಾನವರೆಲ್ಲರೂ ಸೇರಿದರು.

**ತ್ರೈಲೋಕ್ಯಂ ಸಕಲಂ ದೇವ ಪೀಡಯಂತಿ ಮಹಾಸುರಾಃ ।**
**ದಂಡಪಾಶಾಸಿಶಸ್ತ್ರಾಣಿ ಅಧಿಕಾರೇ ವಿಕುರ್ವತೇ ।**
**ತ್ರಿಪುರಂ ದಾನವೈರ್ಜುಷ್ಟಂ ಭ್ರಮತ್ತಚ್ಚಕ್ರಸನ್ನಿಭಂ ॥ ೩೧ ॥**
**ಕ್ವಚಿದ್ದೃಶ್ಯಮದೃಶ್ಯಂ ವಾ ಮೃಗತೃಷ್ಣೇವ ಲಕ್ಷ್ಯತೇ ॥ ೩೨ ॥**
**ಯಸ್ಮಿನ್ಪತತಿ ತದ್ದಿವ್ಯಂ ದೃಪ್ತಸ್ಯ ತ್ರಿಪುರಂ ಮಹತ್ ।**
**ನ ತತ್ರ ಬ್ರಾಹ್ಮಣಾ ದೇವಾ ಗಾವೋ ನೈವತು ಜಂತವಃ ॥ ೩೩ ॥**
**ನ ತತ್ರ ದೃಶ್ಯತೇ ಕಿಂಚಿತ್ಪತೇದ್ಯತ್ರ ಪುರತ್ರಯಂ ।**
**ನದ್ಯೋ ಗ್ರಾಮಾಶ್ಚ ದೇಶಾಶ್ಚ ಬಹವೋ ಭಸ್ಮಸಾತ್ಕೃತಾಃ ॥ ೩೪ ॥**
**ಸುವರ್ಣಂ ರಜತಂಚೈವ ಮಣಿಮೌಕ್ತಿಕಮೇವಚ ।**
**ಸ್ತ್ರೀರತ್ನಂ ಶೋಭನಂ ಯಚ್ಚ ತತ್ಸರ್ವಂ ಕರ್ಷತೇ ಬಲಾತ್ ॥ ೩೫ ॥**
**ನ ಶಸ್ತ್ರೇಣ ನಚಾಸ್ತ್ರೇಣ ನ ದಿವಾ ನಿಶಿ ವಾ ಹರ ।**
**ಶಕ್ಯತೇ ದೇವಸಂಘೈಶ್ಚ ನಿಹಂತುಂ ಸಕಥಂಚ ನ ॥ ೩೬ ॥**
**ತದ್ದಹಸ್ವ ಮಹಾದೇವ ತ್ವಂ ಹಿ ನಃ ಪರಮಾ ಗತಿಃ ।**
**ಏವಂ ಪ್ರಸಾದಂ ದೇವೇಶ ಸರ್ವೇಷಾಂ ಕರ್ತುಮರ್ಹಸಿ ॥ ೩೭ ॥**

---

೩೧. ಆ ಮಹಾಸುರರು ಆ ತ್ರಿಪುರಗಳಲ್ಲಿ ಅಡಗಿಕೊಂಡು ಮೂರು ಲೋಕಗಳನ್ನೂ ಪೀಡಿಸುತ್ತ, ಯಮನ ದಂಡಾಯುಧವನ್ನೂ, ವರುಣನ ಪಾಶವನ್ನೂ, ಇತರ ದೇವತೆಗಳ ಅಸ್ತ್ರಶಸ್ತ್ರಗಳನ್ನೆಲ್ಲವನ್ನೂ ನಿಷ್ಫಲಗೊಳಿಸುತ್ತಿರುವರು. ದಾನವರಿಂದ ಸೇವಿತವಾದ ಆ ತ್ರಿಪುರವಾದರೋ ಚಕ್ರದಂತೆ ಸುತ್ತುತ್ತಿರುತ್ತದೆ.

೩೨. ಒಂದು ಸಲ ಕಣ್ಣಿಗೆ ಕಾಣಿಸುತ್ತಲೂ, ಮತ್ತೊಮ್ಮೆ ಕಾಣಿಸದೆಯೂ ಬಿಸಿಲ್ಗುದುರೆಯಂತೆ ತೋರುತ್ತಿರುತ್ತದೆ.

೩೩. ದಿವ್ಯವಾದ ಆ ತ್ರಿಪುರವು ಒಮ್ಮೆ ಎಲ್ಲಿಯಾದರೂ ಬಿದ್ದಿತೆಂದರೆ ಮಹತ್ತರವಾದ ಅದರ ರಭಸದ ಬಿಸಿಯಿಂದ ಅಲ್ಲಿರುವ ಬ್ರಾಹ್ಮಣರೂ, ದೇವತೆಗಳೂ, ಗೋವುಗಳೂ, ಇತರ ಜಂತುಗಳೂ ನಾಶವಾಗಿ ಹೋಗುವುವು.

೩೪. ಅದು ಬಿದ್ದೆಡೆಯದಲ್ಲಿ ಕಡೆಗೆ ನದಿಗಳೂ, ಗ್ರಾಮಗಳೂ, ದೇಶಗಳೂ ಎಲ್ಲವೂ ಭಸ್ಮವಾಗಿ ಹೋಗುವುವು.

೩೫. ಆ ಬಾಣಾಸುರನಾದರೋ ಎಲ್ಲೆಲ್ಲಿರುವ ಸುವರ್ಣ, ರಜತ, ರತ್ನ, ಮುಕ್ತಾಫಲ, ಸ್ತ್ರೀರತ್ನಾದಿಗಳನ್ನೇ ಅಲ್ಲದೆ ಮಂಗಳಕರವಾದ ಸಮಸ್ತಗಳನ್ನೂ ಬಲಾತ್ಕಾರದಿಂದ ಸೆಳೆದೊಯ್ಯುತ್ತಾನೆ.

೩೬. ಅವನು ದೇವತೆಗಳಾದ ನಮ್ಮ ಶಸ್ತ್ರಗಳಿಂದಾಗಲಿ, ಅಸ್ತ್ರಗಳಿಂದಾಗಲಿ ಹಗಲು ರಾತ್ರಿಗಳಲ್ಲಾಗಲಿ ಎಷ್ಟುಮಟ್ಟಿಗೂ ನಿಗ್ರಹಿಸಲು ಅಶಕ್ಯನಾಗಿರುವನು.

೩೭. ಆದುದರಿಂದೆಲೈ ದೇವೇಶ್ವರನೇ! ನೀನು ಆ ತ್ರಿಪುರವನ್ನು

**ಯೇನ ದೇವಾಶ್ಚ ಗಂಧರ್ವಾ ಋಷಯಶ್ಚ ತಪೋಧನಾಃ ।**
**ಪರಾಂ ಧೃತಿಂ ಸಮಾಯಾಂತಿ ತತ್ಪ್ರಭೋ ಕರ್ತುಮರ್ಹಸಿ ॥ ೩೮ ॥**
**ಈಶ್ವರ ಉವಾಚ :—**
**ಏತತ್ಸರ್ವಂ ಕರಿಷ್ಯಾಮಿ ಮಾ ವಿಷಾದಂ ಗಮಿಷ್ಯಥ ।**
**ಅಚಿರೇಣೈವ ಕಾಲೇನ ಕುರ್ಯಾಂ ಯುಷ್ಮತ್ಸುಖಾವಹಂ ॥ ೩೯ ॥**
**ಆಶ್ವಾಸಯಿತ್ವಾ ತಾನ್ದೇವಾನ್ ಸರ್ವಾನಿಂದ್ರಪುರೋಗಮಾನ್ ।**
**ಚಿಂತಯಾಮಾಸ ದೇವೇಶಸ್ತ್ರಿಪುರಸ್ಯ ವಧಂ ಪ್ರತಿ ॥ ೪೦ ॥**
**ಕಥಂ ಕೇನ ಪ್ರಕಾರೇಣ ಹಂತವ್ಯಂ ತ್ರಿಪುರಂ ಮಯಾ ।**
**ತಮೇಕಂ ನಾರದಂ ಮುಕ್ತ್ವಾ ನಾಽನ್ಯೋಽಪಾಯೋ ವಿಧೀಯತೇ ॥ ೪೧ ॥**
**ಏವಂ ಸಂಸ್ತಭ್ಯ ಚಾತ್ಮಾನಂ ತತೋ ಧ್ಯಾತಃ ಸ ನಾರದಃ ।**
**ತತ್ಕ್ಷಣಾದೇವ ಸಂಪ್ರಾಪ್ತೋ ವಾಯುಭೂತೋ ಮಹಾತಪಾಃ ॥ ೪೨ ॥**
**ಕಮಂಡಲುಧರೋ ದೇವಸ್ತ್ರಿದಂಡೀ ಜ್ಞಾನಕೋವಿದಃ ।**
**ಯೋಗಪಟ್ಟಾಕ್ಷಸೂತ್ರೇಣ ಛತ್ರೇಣೈವ ವಿರಾಜಿತಃ ॥ ೪೩ ॥**

---

ಸುಟ್ಟಿರುವು. ನಮ್ಮಲ್ಲಿ ಅನುಗ್ರಹವನ್ನು ತೋರು! ನೀನೇ ನಮಗೆ ಪರಮ ಗತಿಯು.

೩೮. ಎಲೈ ಪ್ರಭುವೆ! ದೇವತೆಗಳೂ, ಗಂಧರ್ವರೂ, ತಪೋಧನರಾದ ಮಹರ್ಷಿಗಳೂ ಪುನಃ ಧೈರ್ಯವನ್ನು ಹೊಂದುವಂತೆ ಅನುಗ್ರಹಿಸು.''

೩೯. ಈಶ್ವರನು ಹೇಳುತ್ತಾನೆ:—''ಎಲೈ ದೇವತೆಗಳಿರಾ! ನೀವು ಪ್ರಾರ್ಥಿಸಿದಂತೆ ಈ ತ್ರಿಪುರದಹನದ ಕಾರ್ಯಗಳೆಲ್ಲವನ್ನೂ ಬಹುಬೇಗನೆಯೇ ಮಾಡಿ ನಿಮಗೆ ಸುಖವನ್ನುಂಟುಮಾಡುವೆನು. ಹೊರಡಿರಿ. ನೀವು ವಿಷಾದವನ್ನು ಹೊಂದಬೇಡಿರಿ.''

೪೦. ಎಲೈ ಮಹಾರಾಜನೇ! ದೇವೇಶ್ವರನಾದ ಪರಮೇಶ್ವರನು ಇಂದ್ರಾದಿ ದೇವತೆಗಳೆಲ್ಲರನ್ನೂ ಈ ರೀತಿ ಸಂತೈಸಿ ತ್ರಿಪುರವಧದ ವಿಚಾರವಾಗಿ ಈ ರೀತಿ ಯೋಚಿಸತೊಡಗಿದನು.

೪೧. ''ಈ ತ್ರಿಪುರವನ್ನು ನಾನು ಸಂಹರಿಸುವುದು ಹೇಗೆ? ಅದಕ್ಕೇನು ಮಾಡಬೇಕು? ಈ ವಿಷಯದಲ್ಲಿ ನಾರದನನ್ನು ಬಿಟ್ಟರೆ ಯಾರೂ ಉಪಾಯವನ್ನು ಹೇಳುವವರಿಲ್ಲವು.''

೪೨. ಈ ಪ್ರಕಾರವಾಗಿ ನಿಶ್ಚಯಿಸಿ ಆ ಮಹಾದೇವನು ನಾರದನನ್ನು ಸ್ಮರಿಸಿದನು. ಆ ಕ್ಷಣದಲ್ಲಿಯೇ ಮಹಾತಪಸ್ವಿಯಾದ ಆ ಮುನಿಯು ವಾಯುಭೂತನಾಗಿ ಅಲ್ಲಿಗೈತಂದನು.

೪೩–೪೫. ಜ್ಞಾನಕೋವಿದನಾದ ಆತನು, ಕಮಂಡಲುಧರನೂ, ಯೋಗಪಟ್ಟ, ಅಕ್ಷಸೂತ್ರಗಳನ್ನು ಧರಿಸಿದವನೂ, ಛತ್ರದಿಂದ ಕಂಗೊಳಿಸುವವನೂ,

**ಜಟಾಜೂಟಾಬದ್ಧಶಿರಾ ಜ್ವಲನಾರ್ಕಸಮಪ್ರಭಃ ।**
**ತ್ರಿಧಾ ಪ್ರದಕ್ಷಿಣೀಕೃತ್ಯ ದಂಡವತ್ಪತಿತೋ ಭುವಿ ॥ ೪೪ ॥**
**ಕೃತಾಂಜಲಿಪುಟೋ ಭೂತ್ವಾ ನಾರದೋ ಭಗವಾನ್ಮುನಿಃ ।**
**ಸ್ತೋತ್ರೇಣ ಮಹತಾ ಶರ್ವಃ ಸ್ತುತೋ ಭಕ್ತ್ಯಾ ಮಹಾಮನಾಃ ॥ ೪೫ ॥**

ನಾರದ ಉವಾಚ :—

**ಜಯ ಶಂಭೋ ವಿರೂಪಾಕ್ಷ ಜಯ ದೇವ ತ್ರಿಲೋಚನ ।**
**ಜಯ ಶಂಕರ ಈಶಾನ ರುದ್ರೇಶ್ವರ ನಮೋಽಸ್ತುತೇ ॥ ೪೬ ॥**
**ತ್ವಂ ಪತಿಸ್ತ್ವಂ ಜಗತ್ಕರ್ತಾ ತ್ವಮೇವ ಲಯಕೃದ್ವಿಭೋ ।**
**ತ್ವಮೇವ ಜಗತಾಂ ನಾಥೋ ದುಷ್ಟಾಂಧಕನಿಷೂದನಃ ॥ ೪೭ ॥**
**ತ್ವಂ ನಃ ಪಾಹಿ ಸುರೇಶಾನ ತ್ರಯೀಮೂರ್ತೇ ಸನಾತನ ।**
**ಭವಮೂರ್ತೇ ಭವಾಽರೇ ತ್ವಂ ಭಜತಾಮಭಯೋ ಭವ ॥ ೪೮ ॥**
**ಭವಭಾವವಿನಾಶಾರ್ಥಂ ಭವ ತ್ವಾಂ ಶರಣಂ ಭಜೇ ।**
**ಕಿಮರ್ಥಂ ಚಿಂತಿತೋ ದೇವ ಆಜ್ಞಾ ಮೇ ದೀಯತಾಂ ಪ್ರಭೋ ॥ ೪೯ ॥**

---

ಜಟೆಗಳನ್ನು ಮುಡಿಗಟ್ಟಿ ಶೋಭಿಸುತ್ತಿರುವ ಶಿರಸ್ಸುಳ್ಳವನೂ, ಪ್ರಜ್ವಲಿಸುತ್ತಿರುವ ಸೂರ್ಯನಿಗೆಣೆಯಾಗಿ ಬೆಳಗುತ್ತಿರುವನೂ ಆಗಿದ್ದನು. ಆತನು ಪರಮೇಶ್ವರನ ಬಳಿಸಾರಿ ಆ ಸ್ವಾಮಿಗೆ ಪ್ರದಕ್ಷಿಣತ್ರಯವನ್ನು ಮಾಡಿ ಸಾಷ್ಟಾಂಗ ನಮಸ್ಕಾರವನ್ನೆಸಗಿ, ಕೈಗಳನ್ನು ಜೋಡಿಸಿಕೊಂಡು ತದೇಕಚಿತ್ತನಾಗಿ ಮಹಾರ್ಥಗರ್ಭಿತವಾದ ಸ್ತೋತ್ರದಿಂದ ಆ ದೇವದೇವನನ್ನು ಸ್ತುತಿಸತೊಡಗಿದನು.

೪೬. ನಾರದನು ಸ್ತುತಿಸುತ್ತಾನೆ :—"ವಿರೂಪಾಕ್ಷನಾದ ಎಲೈ ಶಂಭುವೆ! ಜಯಿಸು, ದೇವ, ತ್ರಿಲೋಚನ! ಜಯಜಯ !! ಶಂಕರ, ಈಶಾನ ಜಯಜಯ! ರೂದ್ರನೂ, ಈಶಾನನೂ ಆದ ಓ ಪ್ರಭುವೆ! ನಿನಗೆ ನಮಸ್ಕಾರವು.

೪೭. ಎಲೈ ದೇವದೇವನೇ! ನೀನೇ ಸಕಲಕ್ಕೂ ಸ್ವಾಮಿಯು; ನೀನೇ ಜಗತ್ಕರ್ತೃವು; ಲಯಕರ್ತೃವಾದ ವಿಭುವೂ ನೀನೇ! ದುಷ್ಟನಾದ ಅಂಧಕ ದಾನವನನ್ನು ವಧಿಸಿದ ನೀನೇ ಜಗನ್ನಾಥನು.

೪೮. ಎಲೈ ಸುರೇಶ್ವರನೆ, ತ್ರಿಮೂರ್ತಿ ಸ್ವರೂಪನೂ, ಸನಾತನನೂ ಆದ ಸ್ವಾಮಿಯೆ! ಭವನೆ!! ಭವಾರಿಯೇ, ನಮ್ಮನ್ನು ಕಾಪಾಡು; ಭಜಿಸುತ್ತಿರುವ ನಮಗೆ ಅಭಯವನ್ನು ನೀಡುವವನಾಗು !

೪೯. ಎಲೈ ಭವನೇ! ಸಂಸಾರವಾಸನೆಯು ಕಳೆದುಹೋಗುವುದಕ್ಕಾಗಿ ನಿನ್ನನ್ನು ಶರಣುಹೋಗುವೆನು. ದೇವ! ನನ್ನನ್ನು ಸ್ಮರಿಸಿದುದೇಕೆ? ಪ್ರಭುವೆ! ನನ್ನಿಂದ ಯಾವ ಕಾರ್ಯವಾಗಬೇಕಾಗಿರುವುದೋ ಅದನ್ನು ಅಪ್ಪಣೆಮಾಡು.

ಕಸ್ಯ ಸಂಕ್ಷೋಭಯೇ ಚಿತ್ತಂ ಕೋವಾಽದ್ಯ ಪತತು ಕ್ಷಿತೌ ।
ಕಮದ್ಯ ಕಲಹೇನಾಹಂ ಯೋಜಯೇ ಜಯತಾಂ ವರ ॥ ೫೦ ॥
ನಾರದಸ್ಯ ವಚಃ ಶ್ರುತ್ವಾ ದೇವದೇವೋ ಮಹೇಶ್ವರಃ ।
ಉತ್ಫುಲ್ಲನಯನೋ ಭೂತ್ವಾ ಇದಂ ವಚನಮಬ್ರವೀತ್ ॥ ೫೧ ॥
ಸ್ವಾಗತಂ ತೇ ಮುನಿಶ್ರೇಷ್ಠ ಸದೈವ ಕಲಹಪ್ರಿಯ ।
ವೀಣಾವಾದನ ತತ್ತ್ವಜ್ಞ ಬ್ರಹ್ಮಪುತ್ರ ಸನಾತನ ॥ ೫೨ ॥
ಗಚ್ಛ ನಾರದ ಶೀಘ್ರಂ ತ್ವಂ ಯತ್ರ ತತ್ತ್ರಿಪುರಂ ಮಹತ್ ।
ಬಾಣಸ್ಯ ದಾನವೇಂದ್ರಸ್ಯ ಸರ್ವಲೋಕಭಯಾವಹಂ ॥ ೫೩ ॥
ಭರ್ತಾರೋ ದೇವತಾತುಲ್ಯಾಃ ಸ್ತ್ರಿಯಸ್ತತ್ರಾಪ್ಸರಃಸಮಾಃ ।
ತಾಸಾಂ ವೈ ತೇಜಸಾ ಚೈವ ಭ್ರಮತೇ ತ್ರಿಪುರಂ ಮಹತ್ ॥ ೫೪ ॥
ನ ಶಕ್ಯತೇ ಕಥಂ ಭೇತ್ತುಂ ಸರ್ವೋಪಾಯೈರ್ದ್ವಿಜೋತ್ತಮ ।
ಗತ್ವಾ ತ್ವಂ ಮೋಹಯ ಕ್ಷಿಪ್ರಂ ಪೃಥಗ್ಧರ್ಮೈರನೇಕಧಾ ॥ ೫೫ ॥

---

೫೦. ಪ್ರಕೃತದಲ್ಲಿ ಯಾವನ ಚಿತ್ತವನ್ನು ಕ್ಷೋಭೆಗೊಳಿಸಲಿ? ಯಾವನು ಭೂಮಿಗೆ ಬೀಳಬೇಕು? ಎಲೈ ಜಯಶೀಲನೆ! ಯಾವನನ್ನು ಕಲಹದಲ್ಲಿ ತೊಡಗಿಸಲಿ?''

೫೧. ಎಲೈ ಧರ್ಮನಂದನನೇ! ಇಂತು ನುಡಿದ ನಾರದನ ನುಡಿಗಳನ್ನು ಕೇಳಿ ದೇವದೇವನಾದ ಮಹೇಶ್ವರನು ಆನಂದದಿಂದರಳಿದ ಕಂಗಳುಳ್ಳವನಾಗಿ ಆವನನ್ನು ಕುರಿತು ಹೀಗೆಂದನು.

೫೨. ''ಎಲ್ಲ ಕಾಲಗಳಲ್ಲಿಯೂ ಕಲಹಪ್ರಿಯನಾಗಿರುವ ಎಲೈ ಮುನಿಶ್ರೇಷ್ಠನೇ! ನಿನಗೆ ಸ್ವಾಗತವು. ಮುನಿಯೆ! ನೀನು ವೀಣಾವಾದನದ ತತ್ತ್ವವನ್ನು ಅರಿತವನು; ಬ್ರಹ್ಮಮಾನಸಪುತ್ರನು; ಸನಾತನನೂ ಆಗಿರುವೆ.

೫೩. ನಾರದ! ಈಗ ನೀನು, ಸಮಸ್ತಲೋಕಗಳಿಗೆ ಭಯಂಕರವೂ, ತ್ರಿಪುರವೆಂದು ಪ್ರಖ್ಯಾತವಾಗಿರುವುದೂ ಆದ ಬಾಣಾಸುರ ದಾನವೇಂದ್ರನ ಮಹಾಪಟ್ಟಣಕ್ಕೆ ಜಾಗ್ರತೆಯಾಗಿ ಹೋಗು.

೫೪. ಆ ತ್ರಿಪುರಗಳಲ್ಲಿರುವ ಸ್ತ್ರೀಯರು ಅಪ್ಸರೆಯರಿಗೆ ಸಮಾನವಾದ ರೂಪಸೌಭಾಗ್ಯವುಳ್ಳವರೂ, ದೇವತಾಸಮಾನರೂ ಆಗಿರುವರು. ಅವರೇ ಆ ಪಟ್ಟಣವನ್ನು ರಕ್ಷಿಸುತ್ತಿರುವರು. ಅವರ ತೇಜಸ್ಸಿನಿಂದಲೇ ಆ ಪಟ್ಟಣವು ಸ್ವೇಚ್ಛೆಯಾಗಿ ತಿರುಗುತ್ತಿರುವುದು.

೫೫. ಅಯ್ಯಾ ದ್ವಿಜೋತ್ತಮನೆ! ಈ ಕಾರಣದಿಂದಲೇ ಆ ಮಹಾಪಟ್ಟಣವು ಸರ್ವೋಪಾಯಗಳಿಂದಲೂ ಭೇದಿಸಲು ಸಾಧ್ಯವಾಗದಿರುವುದು. ಆದುದರಿಂದ

ನಾರದ ಉವಾಚ :—

**ತವ ವಾಕ್ಯೇನ ದೇವೇಶ ಭೇದಯಾಮಿ ಪುರೋತ್ತಮಂ ।**
**ಅಭೇದ್ಯಂ ಬಹುಧೋಪಾಯೈರ್ಯತ್ತು ದೇವೈಃ ಸವಾಸವೈಃ ॥ ೫೬ ॥**
**ಏವಮುಕ್ತ್ವಾ ಗತೋ ಭೂಪ ಶತಯೋಜನಮಾಯತಂ ।**
**ಬಾಣಸ್ಯ ತತ್ಪುರಶ್ರೇಷ್ಠಮೃದ್ಧಿವೃದ್ಧಿಸಮಾಯುತಂ ॥ ೫೭ ॥**
**ಕೃತಕೌತುಕಸಂಬಾಧಂ ನಾನಾಧಾತುವಿಚಿತ್ರಿತಂ ।**
**ಅನೇಕ ಹರ್ಮ್ಯಸಂಛನ್ನಮನೇಕಾಯತನೋಜ್ವಲಂ ॥ ೫೮ ॥**
**ದ್ವಾರತೋರಣಸಂಯುಕ್ತಂ ಕಪಾಟಾರ್ಗಲಭೂಷಿತಂ ।**
**ಬಹುಯಂತ್ರಸಮೋಪೇತಂ ಪ್ರಾಕಾರಪರಿಖೋಜ್ವಲಂ ॥ ೫೯ ॥**
**ವಾಪೀ ಕೂಪ ತಡಾಗೈಶ್ಚ ದೇವತಾಯತನೈರ್ಯುತಂ ।**
**ಹಂಸಕಾರಂಡವಾಕೀರ್ಣಂ ಪದ್ಮಿನೀಖಂಡಮಂಡಿತಂ ॥ ೬೦ ॥**
**ಅನೇಕವನಶೋಭಾಢ್ಯಂ ನಾನಾವಿಹಗಮಂಡಿತಂ ।**
**ಏವಂ ಗುಣಗಣಾಕೀರ್ಣಂ ಬಾಣಸ್ಯ ಪುರಮುತ್ತಮಂ ॥ ೬೧ ॥**

---

ನೀನು ಅಲ್ಲಿಗೆ ಹೋಗಿ ಬಹುಪ್ರಕಾರವಾಗಿ ಕಪಟೋಪಾಯಗಳಿಂದ ಆ ಸ್ತ್ರೀಯರನ್ನು ಭ್ರಾಂತರನ್ನಾಗಿ ಮಾಡು.''

೫೬. ನಾರದನು ಹೇಳುತ್ತಾನೆ:—''ಎಲೈ ದೇವೇಶ್ವರನೇ! ನಿನ್ನ ಅಪ್ಪಣೆಯಂತೆ, ಇಂದ್ರಾದಿ ದೇವತೆಗಳಿಂದ ವಿವಿಧೋಪಾಯಗಳಿಂದಲೂ ಅಭೇದ್ಯವಾಗಿರುವ ಆ ಪಟ್ಟಣವನ್ನು ಭೇದಿಸುವೆನು.''

೫೭. ಮಹಾರಾಜ! ನಾರದನಿಂತು ನುಡಿದು ಸರ್ವೈಶ್ವರ ಸಮನ್ವಿತವಾಗಿ ವೃದ್ಧಿಗೊಂಡಿರುವುದೂ, ನೂರು ಯೋಜನಗಳ ವಿಸ್ತಾರವುಳ್ಳುದೂ ಆದ ಆ ಬಾಣಾಸುರನ ಪುರಶ್ರೇಷ್ಠವನ್ನು ಕುರಿತು ಬಂದನು.

೫೮–೫೯. ಆ ಮಹಾಪಟ್ಟಣವು ಅನೇಕ ಮಂಗಳಾಲಂಕಾರಗಳಿಂದ ತುಂಬಿ ತುಳುಕುತ್ತಿದ್ದಿತು. ಬಗೆಬಗೆಯ ಧಾತುಗಳಿಂದ ಚಿತ್ರಿತವಾಗಿದ್ದಿತು. ಅನೇಕ ಭವನಗಳಿಂದ ನಿಬಿಡವಾಗಿ, ಹಲವಾರು ಉಪ್ಪರಿಗೆಯ ಮನೆಗಳಿಂದ ಉಜ್ಜ್ವಲವಾಗಿದ್ದಿತು.

೬೦. ಬಾವಿ, ಕೊಳ, ಕೆರೆಗಳಿಂದಲೂ, ದೇವತಾಯತನಗಳಿಂದಲೂ, ಹಂಸಕಾರಂಡವಾದಿಗಳಿಂದ ತುಂಬಿರುವ ಪದ್ಮಸರೋವರಗಳಿಂದಲೂ ಅಲಂಕೃತವಾಗಿದ್ದಿತು.

೬೧. ಬಗೆಬಗೆಯ ಪಕ್ಷಿಗಳಿಂದ ರಂಜಿಸುತ್ತಿದ್ದ ಅನೇಕ ವನಗಳಿಂದ ಶೋಭೆಗೊಂಡಿದ್ದಿತು. ಹೀಗೆ ಆ ಬಾಣಾಸುರನ ಪುರೋತ್ತಮವು ಸಲ್ಲಕ್ಷಣಲಕ್ಷಿತವಾಗಿದ್ದಿತು.

**ತಸ್ಯ ಮಧ್ಯೇ ಮಹಾಕಾಯಂ ಸಪ್ತಕಕ್ಷ್ಯಂ ಸುಶೋಭಿತಂ ।**
**ಬಾಣಸ್ಯ ಭವನಂ ದಿವ್ಯಂ ಸರ್ವಂ ಕಾಂಚನಭೂಷಿತಂ ॥ ೬೨ ॥**
**ಮೌಕ್ತಿಕಾದಾಮಶೋಭಾಢ್ಯಂ ವಜ್ರವೈಡೂರ್ಯಭೂಷಿತಂ ।**
**ರುಕ್ಮಪಟ್ಟತಲಾಕೀರ್ಣಂ ರತ್ನಭೂಮ್ಯಾ ಸುಶೋಭಿತಂ ॥ ೬೩ ॥**
**ಮತ್ತಮಾತಂಗ ನಿಃಶ್ವಾಸೈಃ ಸ್ಯಂದನೈಃ ಸಂಕುಲೀಕೃತಂ ।**
**ಹಯಹೇಷಿತಶಬ್ದೈಶ್ಚ ನಾರೀಣಾಂ ನೂಪುರಸ್ವನೈಃ ॥ ೬೪ ॥**
**ಖಡ್ಗತೋಮರಹಸ್ತೈಶ್ಚ ವಜ್ರಾಂಕುಶಶರಾಯುಧೈಃ ।**
**ರಕ್ಷಿತಂ ಘೋರರೂಪೈಶ್ಚ ದಾನವೈರ್ಬಲದರ್ಪಿತೈಃ ॥ ೬೫ ॥**
**ಏವಂ ಗುಣಗಣಾಕೀರ್ಣಂ ಬಾಣಸ್ಯ ಭವನೋತ್ತಮಂ ।**
**ಕೈಲಾಸಶಿಖರಪ್ರಖ್ಯಂ ಮಹೇಂದ್ರಭವನೋಪಮಂ ॥ ೬೬ ॥**
**ನಾರದೋ ಗಗನೇ ಶೀಘ್ರಮಗಮತ್ಪುರಸನ್ಮುಖಃ ।**
**ದ್ವಾರದೇಶಂ ಸಮಾಸಾದ್ಯ ಕ್ಷತ್ತಾರಂ ವಾಕ್ಯಮಬ್ರವೀತ್ ॥ ೬೭ ॥**

---

೬೨. ಆ ಪಟ್ಟಣದ ಮಧ್ಯಪ್ರದೇಶದಲ್ಲಿ ಬಹು ದೊಡ್ಡದಾದುದೂ, ಸಪ್ತ ಕಕ್ಷ್ಯಗಳಿಂದ ಶೋಭಿತವಾದುದೂ, ಸ್ವರ್ಣಾಲಂಕೃತವೂ ಆದ ಬಾಣಾಸುರನ ಅರಮನೆಯು ವಿರಾಜಿಸುತ್ತಿದ್ದಿತು.

೬೩. ಮುತ್ತಿನ ತೋರಣಗಳಿಂದೊಪ್ಪಿ, ವಜ್ರವೈಡೂರ್ಯಗಳಿಂದ ಭೂಷಿತವಾಗಿ, ಚಿನ್ನದ ತಗಡುಗಳು ಹೊಡೆದು ರತ್ನಖಚಿತವಾಗಿರುವ ನೆಲಗಳಿಂದ ಆ ಭವನವು ಸುಶೋಭಿತವಾಗಿದ್ದಿತು.

೬೪. ಮದ್ದಾನೆಗಳ ನಿಶ್ವಾಸಗಳಿಂದ ಕೂಡಿದ ರಥಗಳಿಂದ ಸಂಕುಲವಾಗಿ ಕುದುರೆಗಳ ಕೆನತಗಳಿಂದಲೂ, ನಾರಿಯರ ಕಾಲಂದುಗೆಗಳ ಘಲುಘಲು ನಾದಗಳಿಂದಲೂ ಆ ದೈತ್ಯನರಮನೆಯು ಮನೋಹರವಾಗಿದ್ದಿತು.

೬೫. ಖಡ್ಗ ತೋಮರಗಳನ್ನೂ, ವಜ್ರಾಯುಧಗಳನ್ನೂ, ಅಂಕುಶ, ಶರಾದಿ ವಿವಿಧಾಯುಧಗಳನ್ನೂ ಧರಿಸಿದ್ದ ಘೋರರೂಪರೂ, ಬಲಗರ್ವಿತರೂ ಆದ ದಾನವರು ಆ ಪಟ್ಟಣವನ್ನು ರಕ್ಷಿಸುತ್ತಿದ್ದರು.

೬೬. ಈ ಪ್ರಕಾರವಾಗಿ ಆ ಬಾಣಾಸುರನ ಭವನೋತ್ತಮವು ನಾನಾಗುಣಗಳಿಂದೊಪ್ಪಿ, ಕೈಲಾಸಪರ್ವತದ ಶಿಖರದ ಕಾಂತಿಯನ್ನು ತಳೆದು ಮಹೇಂದ್ರ ಭವನಕ್ಕೆಣೆಯಾಗಿದ್ದಿತು.

೬೭. ನಾರದನಾದರೋ ಗಗನಮಾರ್ಗವಾಗಿ ಆ ಪಟ್ಟಣವನ್ನು ಬಹು ಬೇಗನೆ ಸೇರಿ ಮಹಾದ್ವಾರದ ಬಳಿಗೈದಿ ಅಲ್ಲಿದ್ದ ದ್ವಾರಪಾಲಕನನ್ನು ಕುರಿತು ಹೀಗೆಂದನು.

ಭೋ ಭೋ ಕ್ಷತ್ತರ್ಮಹಾಬುದ್ಧೇ ರಾಜಕಾರ್ಯವಿಶಾರದ ।
ಶೀಘ್ರಂ ಬಾಣಾಯ ಚಾಚಕ್ಷ್ವ ನಾರದೋ ದ್ವಾರಿ ತಿಷ್ಠತಿ ॥ ೬೮ ॥
ಸ ವಂದಯಿತ್ವಾ ಚರಣೌ ನಾರದಸ್ಯ ತ್ವರಾನ್ವಿತಃ ।
ಸಭಾಮಧ್ಯಗತಂ ಬಾಣಂ ವಿಜ್ಞಪ್ತುಮುಪಚಕ್ರಮೇ ॥ ೬೯ ॥
ವೇಪಮಾನಾಂಗಯಷ್ಟಿಸ್ತು ಕರೇಣಪಿಹಿತಾನನಃ ।
ಶೃಣ್ವತಾಂ ಸರ್ವಯೋಧಾನಾಮಿದಂ ವಚನಮಬ್ರವೀತ್ ॥ ೭೦ ॥
ವಂದಿತೋ ದೇವಗಂಧರ್ವೈರ್ಯಕ್ಷಕಿನ್ನರದಾನವೈಃ ।
ಕಲಿಪ್ರಿಯೋ ದುರಾರಾಧ್ಯೋ ನಾರದೋ ದ್ವಾರಿ ತಿಷ್ಠತಿ ॥ ೭೧ ॥
ದ್ವಾರಪಾಲಸ್ಯ ತದ್ವಾಕ್ಯಂ ಶ್ರುತ್ವಾ ಬಾಣಸ್ತ್ವರಾನ್ವಿತಃ ।
ದ್ವಾಃಸ್ಥಮಾಹ ಮಹಾದೈತ್ಯಃ ಸವಿಸ್ಮಯಮಿದಂ ತದಾ ॥ ೭೨ ॥

ಬಾಣ ಉವಾಚ :—

ಬ್ರಹ್ಮಪುತ್ರಂ ಸತೇಜಸ್ಕಂ ದುಃಸಹಂ ದುರತಿಕ್ರಮಂ ।
ಪ್ರವೇಶಯ ಮಹಾಭಾಗಂ ಕಿಮರ್ಥಂ ವಾರಿತೋ ಬಹಿಃ ॥ ೭೩ ॥

---

೬೮. "ಎಲೈ ದ್ವಾರಪಾಲಕನೇ! ನೀನು ರಾಜಕಾರ್ಯವಿಶಾರದನು. ಜಾಗ್ರತೆಯಾಗಿ ಹೋಗಿ 'ನಾರದನು ಬಂದು ಬಾಗಿಲಿನಲ್ಲಿ ನಿಂತಿರುವನು' ಎಂದು ನಿಮ್ಮ ದೊರೆಯಾದ ಬಾಣನಿಗೆ ತಿಳಿಸು."

೬೯. ದ್ವಾರಪಾಲಕನು ಒಡನೆಯೆ ನಾರದನ ಚರಣಗಳಿಗೆ ವಂದಿಸಿ ತ್ವರೆಯಿಂದ ರಾಜಸಭೆಗೈತಂದು ಸಭಾಮಧ್ಯದಲ್ಲಿ ಮಂಡಿಸಿದ್ದ ಬಾಣನಿಗೆ ಅರಿಕೆಮಾಡತೊಡಗಿದನು.

೭೦. ಅಂಗಯಷ್ಟಿಯು ನಡುಗುತ್ತಿರಲು, ಕೈಯಿಂದ ಮುಖವನ್ನು ಮರೆಮಾಡಿಕೊಂಡು ಆ ಸಭೆಯಲ್ಲಿದ್ದ ಸಮಸ್ತಯೋಧರೂ ಕೇಳುತ್ತಿರಲು ಆ ದ್ವಾರಪಾಲಕನು ನುಡಿದನು.

೭೧. "ಮಹಾರಾಜ! ದೇವ ಗಂಧರ್ವ ಯಕ್ಷ ಕಿನ್ನರ ದಾನವರಿಂದ ವಂದಿತನೂ, ಕಲಿಪ್ರಿಯನೂ, ದುರಾರಾಧ್ಯನೂ ಆಗಿರುವ ನಾರದನೈತಂದು ಭವನದ್ವಾರದಲ್ಲಿ ನಿಂತಿರುವನು."

೭೨. ದ್ವಾರಪಾಲನ ಮಾತುಗಳನ್ನು ಕೇಳಿದೊಡನೆಯೆ ಮಹಾ ದೈತ್ಯನಾದ ಬಾಣನು ತ್ವರೆಗೊಂಡು ಆಶ್ಚರ್ಯದಿಂದ ನುಡಿದನು.

೭೩. ಬಾಣನು ಹೇಳುತ್ತಾನೆ:—"ಎಲೈ ದ್ವಾರಪಾಲಕನೇ! ಆ ನಾರದ ಮುನಿಯು, ಬ್ರಹ್ಮಮಾನಸಪುತ್ರನು; ಮಹಾತೇಜಸ್ವಿಯು; ಸಹಿಸಲಸದಳನು; ಅತಿಕ್ರಮಿಸಲಸಾಧ್ಯನಾದವನು. ಅವನನ್ನೇಕೆ ತಡೆದು ಹೊರಗೆ ನಿಲ್ಲಿಸಿರುವೆ. ಆ ಮಹಾಭಾಗನನ್ನು ಜಾಗ್ರತೆಯಾಗಿ ಪ್ರವೇಶಗೊಳಿಸು."

ಶ್ರುತ್ವಾ ಪ್ರಭೋರ್ವಚಸ್ತಸ್ಯ ಪ್ರಾವೇಶಯದುದೀರಿತಂ ।
ಗತ್ವಾ ವೇಗೇನ ಮಹತಾ ನಾರದಂ ಗೃಹಮಾಗತಂ ॥ ೭೪ ॥
ದೃಷ್ಟ್ವಾ ದೇವರ್ಷಿಮಾಯಾಂತಂ ನಾರದಂ ಸುರಪೂಜಿತಂ ।
ಸಹಸೋತ್ಥಾಯ ಸಂಹೃಷ್ಟೋ ವವಂದೇ ಚರಣೌ ಮುನೇಃ ॥ ೭೫ ॥
ದದೌ ಚಾಸನಮರ್ಘ್ಯಂಚ ಪಾದ್ಯಂ ಪೂಜಾಂ ಯಥಾವಿಧಿ ।
ನ್ಯವೇದಯಚ್ಚ ತದ್ರಾಜ್ಯಮಾತ್ಮಾನಂ ಬಾಂಧವೈಃ ಸಹ ॥ ೭೬ ॥
ಪಪ್ರಚ್ಛ ಕುಶಲಂ ಚಾಽಪಿ ಮುನಿಂ ಬಾಣಾಽಸುರಃ ಸ್ವಯಂ ॥ ೭೭ ॥

ನಾರದ ಉವಾಚ :—

ಸಾಧು ಸಾಧು ಮಹಾಬಾಹೋ ದನೋರ್ವಂಶವಿವರ್ಧನ ।
ಕೋಽನ್ಯಸ್ತ್ರಿಭುವನೇ ಶ್ಲಾಘ್ಯಸ್ತ್ವಾಂ ಮುಕ್ತ್ವಾ ದನುಪುಂಗವ ॥ ೭೮ ॥
ಪೂಜಿತೋಽಹಂ ದನುಶ್ರೇಷ್ಠ ಧನರತ್ನೈಃ ಸುಶೋಭನೈಃ ।
ರಾಜ್ಯೇನ ಚಾತ್ಮನಾಪಾಽಪಿ ಹ್ಯೇವಂ ಕಃ ಪೂಜಯೇತ್ಪರಃ ॥ ೭೯ ॥
ನಮೇ ಕಾರ್ಯಂ ಹಿ ಭೋಗೇನ ಭುಂಕ್ಷ್ವ ರಾಜ್ಯಮನಾಮಯಂ ।
ತ್ವದ್ದರ್ಶನೋತ್ಸುಕಃ ಪ್ರಾಪ್ತೋ ದೃಷ್ಟ್ವಾ ದೇವಂ ಮಹೇಶ್ವರಂ ॥ ೮೦ ॥

---

೭೪. ಪ್ರಭುವಿನ ಮಾತುಗಳನ್ನು ಕೇಳಿ ಆ ದ್ವಾರಸ್ಥನು ಬಹು ಜಾಗ್ರತೆಯಾಗಿ ಹೋಗಿ ಅರಮನೆಗೆ ಬಂದಿದ್ದ ಆ ಮುನಿಯನ್ನು ಒಳಕ್ಕೆ ಬಿಜಯಿಸಿದನು.

೭೫. ಬಾಣನಾದರೋ ಸಭಾಮಂದಿರಕ್ಕೈತರುತ್ತಿರುವ ಸುರಪೂಜಿತನಾದ ಆ ನಾರದನನ್ನು ಕಂಡೊಡನೆಯೆ ಪೀಠದಿಂದ ಮೇಲಕ್ಕೆದ್ದು ಆನಂದದಿಂದ ಆತನಡಿಗಳಿಗೆ ವಂದಿಸಿದನು.

೭೬. ಆ ಮುನೀಂದ್ರನಿಗೆ ಆಸನವನ್ನಿತ್ತು ಕುಳ್ಳಿರಿಸಿ ವಿಧ್ಯುಕ್ತವಾಗಿ ಅರ್ಘ್ಯಪಾದ್ಯಗಳನ್ನು ಸಮರ್ಪಿಸಿ ಪೂಜಿಸಿ ತನ್ನ ರಾಜ್ಯವನ್ನೂ, ಬಂಧುಸಮೇತನಾದ ತನ್ನನ್ನೂ ಆತಗೊಪ್ಪಿಸಿದನು.

೭೭. ತರುವಾಯ ಬಾಣಾಸುರನೇ ಆ ಮುನಿಯ ಕುಶಲವನ್ನೂ ಕೇಳಿದನು.

೭೮. ನಾರದನು ಹೇಳುತ್ತಾನೆ:—''ಎಲೈ ಮಹಾಬಾಹುವೇ! ಭಲೆ, ಭಲೆ! ನೀನು ದನುವಂಶವಿವರ್ಧನನು. ಅಯ್ಯಾ ದನುಪುಂಗವನಾದ ಬಾಣನೆ! ನಿನ್ನನ್ನು ಬಿಟ್ಟರೆ, ಶ್ಲಾಘ್ಯನಾದವನು ಮೂರು ಲೋಕಗಳಲ್ಲಿ ಮತ್ತಾವನು ತಾನೆ ಇರುವನು ?

೭೯. ದನುಶ್ರೇಷ್ಠನಾದ ನೀನು ಪರಮ ಮಂಗಳಕರವಾದ ಧನರತ್ನಗಳಿಂದಲೂ, ರಾಜ್ಯದಿಂದಲೇ ಅಲ್ಲದೆ ಆತ್ಮಸಮರ್ಪಣದಿಂದಲೂ ನನ್ನನ್ನು ಸತ್ಕರಿಸಿರುವೆ. ಮತ್ತಾವನು ತಾನೆ ಹೀಗೆ ನನ್ನನ್ನು ಸತ್ಕರಿಸಿಯಾನು ?

೮೦. ನನಗೆ ಈ ಭೋಗಗಳಿಂದಲೂ, ರಾಜ್ಯದಿಂದಲೂ ಯಾವ

**ಭ್ರಮತೇ ತ್ರಿಪುರಂ ಲೋಕೇ ಸ್ತ್ರೀಸತೀತ್ವಾನ್ಮಯಾ ಶ್ರುತಂ ।**
**ತಾನ್ ದ್ರಷ್ಟುಕಾಮಃ ಸಂಪ್ರಾಪ್ತಸ್ತ್ವದ್ದಾರಾನ್ದಾನವೇಶ್ವರ ॥ ೮೧ ॥**
**ಮನ್ಯಸೇ ಯದಿ ಮೇ ಶೀಘ್ರಂ ದರ್ಶಯಸ್ವ ಚ ಮಾಚಿರಂ ।**
**ನಾರದಸ್ಯ ವಚಃ ಶ್ರುತ್ವಾ ಕಂಚುಕಿಂ ಸಮುದೀಕ್ಷ್ಯ ವೈ ॥ ೮೨ ॥**
**ಅಂತಃಪುರಚರಂ ವೃದ್ಧಂ ದಂಡಪಾಣಿಂ ಗುಣಾನ್ವಿತಂ ।**
**ಉವಾಚ ರಾಜಾ ಹೃಷ್ಟಾತ್ಮಾ ಶಬ್ದೇನಾಪೂರಯನ್ದಿಶಃ ॥ ೮೩ ॥**
**ನಾರದಾಯ ಮಹಾದೇವೀಂ ದರ್ಶಯಸ್ವೇಹ ಕಂಚುಕಿನ್ ।**
**ಅಂತಪುರಚರೈಃ ಸರ್ವೈಃ ಸಮೇತಾಮವಿಶಂಕಿತಃ ॥ ೮೪ ॥**
**ನಾಥಸ್ಯಾಜ್ಞಾಂ ಪುರಸ್ಕೃತ್ಯ ಗೃಹೀತ್ವಾ ನಾರದಂ ಕರೇ ।**
**ಪ್ರವಿಶ್ಯಾಽಕಥಯದ್ದೇವ್ಯೈ ನಾರದೋಽಯಂ ಸಮಾಗತಃ ॥ ೮೫ ॥**

---

ಪ್ರಯೋಜನವೂ ಆಗಬೇಕಾದುದಿಲ್ಲವು. ಅನಾಮಯವಾದ ಈ ರಾಜ್ಯೈಶ್ವರ್ಯವನ್ನು ನೀನೇ ಅನುಭವಿಸುತ್ತಿರು. ದೇವದೇವನಾದ ಮಹೇಶ್ವರನನ್ನು ಸಂದರ್ಶಿಸಿ ಆ ತರುವಾಯ ನಿನ್ನನ್ನು ನೋಡಬೇಕೆಂದು ಇಲ್ಲಿಗೆ ಬಂದೆನು.

೮೧. ಅಯ್ಯಾ ಬಾಣನೆ! ನಿನ್ನ ಈ ತ್ರಿಪುರವು ನಿನ್ನ ಸ್ತ್ರೀಯರ ಪಾತಿವ್ರತ್ಯ ಪ್ರಭಾವದಿಂದ ಭ್ರಮಿಸುತ್ತಿರುವುದೆಂದು ನಾನು ಕೇಳಿರುವೆನು. ದಾನವೇಶ್ವರ! ನಾನು ಆ ನಿನ್ನ ಭಾರ್ಯೆಯರನ್ನು ನೋಡಬಯಸಿ ಇಲ್ಲಿಗೆ ಬಂದಿರುವೆನು.

೮೨–೮೩. ನೀನು ಸಮ್ಮತಿಸುವುದಾದರೆ ಅವರನ್ನು ನನಗೆ ದರ್ಶನ ಮಾಡಿಸು. ತಡೆಮಾಡಬೇಡ.'' ಇಂತು ನುಡಿದ ನಾರದನ ಮಾತುಗಳನ್ನು ಕೇಳಿ ಬಾಣನು ಅಂತಃಪುರದಲ್ಲಿ ಸಂಚಾರಮಾಡುವವನೂ, ವೃದ್ಧನೂ, ಕೋಲನ್ನು ಹಿಡಿದಿರುವವನೂ, ಗುಣಾಢ್ಯನೂ ಆದ ಕಂಚುಕಿಯನ್ನು ನೋಡಿ ಸಂತುಷ್ಟಾಂತರಂಗನಾಗಿ ದಶದಿಶಗಳನ್ನೂ ಗಂಭೀರನಾದದಿಂದ ತುಂಬುತ್ತ ನುಡಿದನು.

೮೪. ''ಅಯ್ಯಾ ಕಂಚುಕಿಯೇ! ನೀನು ಯಾವ ಸಂಶಯವನ್ನೂ ತಳೆಯದೆ ಈ ನಾರದ ಮುನೀಂದ್ರನಿಗೆ ಸಮಸ್ತ ಅಂತಃಪುರಸ್ತ್ರೀಯರೊಡಗೂಡಿದ ಮಹಾದೇವಿಯನ್ನು ತೋರಿಸು.''

೮೫. ಒಡೆಯನ ಅಪ್ಪಣೆಯನ್ನು ಕೇಳಿ ಕಂಚುಕಿಯು ನಾರದನ ಕೈ ಹಿಡಿದು ಆತನನ್ನು ಅಂತಃಪುರಕ್ಕೆ ಕರೆದೊಯ್ದು ಮಹಾರಾಣಿಯನ್ನು ತೋರಿ ಆಕೆಯನ್ನು ಕುರಿತು, ''ಮಹಾರಾಜ್ಞಿ! ಈತನು ನಾರದಮುನಿಯು. ನಿನ್ನನ್ನು ನೋಡಲು ಇಲ್ಲಿಗೈತಂದಿರುವನು'' ಎಂದು ಹೇಳಿದನು.

ದೃಷ್ಟ್ವಾ ದೇವೀ ಮುನಿಶ್ರೇಷ್ಠಂ ಕೃತ್ವಾ ಪಾದಾಭಿವಂದನಂ ।
ಆಸನಂ ಕಾಂಚನಂ ಶುಭ್ರಮರ್ಘ್ಯಪಾದ್ಯಾದಿಕಂ ದದೌ ॥ ೮೬ ॥
ತಸ್ಯೈ ಸಭಗವಾಂಸ್ತುಷ್ಟೋ ಹ್ಯಾಶೀರ್ವಾದಮುದಾತ್ಪರಂ ।
ನಾಽನ್ಯಾ ದೇವಿ ತ್ರಿಲೋಕೇಽಪಿ ತ್ವತ್ಸಮಾ ದೃಶ್ಯತೇಽಂಗನಾ ॥ ೮೭ ॥
ಪತಿವ್ರತಾ ಶುಭಾಚಾರಾ ಸತ್ಯಶೌಚಸಮನ್ವಿತಾ ।
ಯಸ್ಯಾಃ ಪ್ರಭಾವಾತ್ತ್ರಿಪುರಂ ಭ್ರಮತೇ ಚಕ್ರವತ್ಸದಾ ॥ ೮೮ ॥
ತಚ್ಛ್ರುತ್ವಾ ವಚನಂ ದೇವೀ ನಾರದಸ್ಯ ಮುದಾನ್ವಿತಂ ।
ಪರ್ಯಪೃಚ್ಛದೃಷಿಂ ಭಕ್ತ್ಯಾ ಧರ್ಮಂ ಧರ್ಮಭೃತಾಂ ವರಾ ॥ ೮೯ ॥

ರಾಜ್ಞ್ಯುವಾಚ :—

ಭಗವನ್ಮಾನುಷೇ ಲೋಕೇ ದೇವಾಸ್ತುಷ್ಯಂತಿ ಕೈರ್ವ್ರತೈಃ ।
ಕಾನಿ ದಾನಾನಿ ದೀಯಂತೇ ಯೇಷಾಂ ಚ ಸ್ಯಾನ್ಮಹತ್ಫಲಂ ॥ ೯೦ ॥
ಉಪವಾಸಾಶ್ಚ ಯೇ ಕೇಚಿತ್ಸ್ತ್ರೀಧರ್ಮೇ ಕಥಿತಾ ಬುಧೈಃ ।
ಯೈಃ ಕೃತೈಃ ಸ್ವರ್ಗಮಾಯಾಂತಿ ಸುಕೃತಿನ್ಯಃ ಸ್ತ್ರಿಯೋ ಯಥಾ ॥ ೯೧ ॥

---

೮೬. ಆ ದೇವಿಯಾದರೋ ಮುನಿಶ್ರೇಷ್ಠನಾದ ನಾರದನನ್ನು ಕಂಡು ಆತನಡಿಗಳಿಗೆರಗಿ ಶುಭ್ರವಾದ ಸ್ವರ್ಣಪೀಠವನಿತ್ತು ಕುಳ್ಳಿರಿಸಿ ಅರ್ಘ್ಯಪಾದ್ಯಾದಿ ಸಪರ್ಯೆಯನ್ನು ಸಮರ್ಪಿಸಿದಳು.

೮೭–೮೮. ಮುನಿಯು ಆಕೆಯ ವಿಷಯದಲ್ಲಿ ಸಂತೋಷಗೊಂಡು, "ಎಲೌ ದೇವಿಯೆ! ನಿನಗೆ ಸಮಾನಳಾದ ಅಂಗನೆಯು ಮೂರು ಲೋಕಗಳಲ್ಲಿ ಮತ್ತಾವಳೂ ಕಾಣುವುದಿಲ್ಲವು. ನೀನು ಮಹಾ ಪತಿವ್ರತೆಯು; ಮಂಗಳಕರವಾದ ಆಚಾರವುಳ್ಳವಳು; ಸತ್ಯಶೌಚಗಳು ನಿನ್ನಲ್ಲಿ ತುಂಬಿರುವುವು. ನಿನ್ನ ಪಾತಿವ್ರತ್ಯಪ್ರಭಾವದಿಂದಲೇ ಈ ತ್ರಿಪುರವು ಮಹಾವಿಷ್ಣುವಿನ ಚಕ್ರಾಯುಧದಂತೆ ಭ್ರಮಿಸುತ್ತಿರುವುದು" ಎಂದು ಆಶೀರ್ವದಿಸಿದನು.

೮೯. ಎಲೈ ಧರ್ಮಿಷ್ಠರಲ್ಲಿ ಉತ್ತಮನಾದ ಧರ್ಮರಾಜನೆ! ದೇವಿಯು ನಾರದನ ನುಡಿಗಳನ್ನು ಕೇಳಿ, ತನ್ನ ವಿಷಯದಲ್ಲಿ ಸಂತೋಷಗೊಂಡಿರುವ ಆತನನ್ನು ಭಕ್ತಿಯಿಂದ ಧರ್ಮವಿಚಾರದಲ್ಲಿ ಪ್ರಶ್ನೆಮಾಡಿದಳು.

೯೦. ರಾಣಿಯು ಕೇಳುತ್ತಾಳೆ:—ಎಲೈ ಷಡ್ಗುಣೈಶ್ವರ್ಯಭರಿತನಾದ ನಾರದಮುನಿಯೆ! ಲೋಕದಲ್ಲಿ ದೇವತೆಗಳು ಯಾವ ವ್ರತಗಳಿಂದ ತೃಪ್ತಿಗೊಳ್ಳುತ್ತಾರೆ? ಅವರ ತೃಪ್ತಿಗಾಗಿ ಯಾವಯಾವ ದಾನಗಳು ಕೊಡಲ್ಪಡುತ್ತವೆ. ಅವುಗಳಿಂದ ದೊರಕುವ ಮಹತ್ಫಲಗಳಾವುವು?

೯೧. ಸ್ತ್ರೀಧರ್ಮಗಳಲ್ಲಿ ಬುಧರಿಂದ ಉಕ್ತವಾಗಿರುವ ಉಪವಾಸ ವ್ರತಗಳಾವುವು. ಅವುಗಳನ್ನಾಚರಿಸಿದ ಸ್ತ್ರೀಯರು ಪುಣ್ಯಶಾಲಿನಿಯರಾಗಿ ಸ್ವರ್ಗವನ್ನು ಪಡೆಯುವರಷ್ಟೆ.

ಏತತ್ಸರ್ವಂ ಮಹಾಭಾಗ ಕಥಯಸ್ವ ಯಥಾತಥಂ ।
ಶ್ರೋತುಮಿಚ್ಛಾಮ್ಯಹಂ ಸರ್ವಂ ಕಥಯಸ್ವಾಽಪಿ ಶಂಕಿತಃ ॥ ೯೨ ॥

ನಾರದ ಉವಾಚ :–

ಸಾಧು ಸಾಧು ಮಹಾಭಾಗೇ ಪ್ರಶ್ನೋಽಯಂ ವೇದಿತಸ್ತ್ವಯಾ ।
ಯಂ ಶ್ರುತ್ವಾ ಸರ್ವನಾರೀಣಾಂ ಧರ್ಮವೃದ್ಧಿಸ್ತು ಜಾಯತೇ ॥ ೯೩ ॥
ಉಪವಾಸೈಶ್ಚ ದಾನೈಶ್ಚ ಪತಿಪುತ್ರೌ ವಶಾನುಗೌ ।
ಬಾಂಧವೈಃ ಪೂಜ್ಯತೇ ನಿತ್ಯಂ ಯೈಃ ಕೃತ್ಯೈಃ ಕಥಯಾಮಿ ತೇ ॥ ೯೪ ॥
ದುರ್ಭಗಾ ಸುಭಗಾ ಯೈಸ್ತು ಸುಭಗಾ ದುರ್ಭಗಾ ಭವೇತ್ ।
ಪುತ್ರಿಣೀ ಪುತ್ರರಹಿತಾ ಹ್ಯಪುತ್ರಾ ಪುತ್ರಿಣೀ ತಥಾ ॥ ೯೫ ॥
ಭರ್ತಾರಂ ಲಭತೇ ಕನ್ಯಾ ತಥಾಽನ್ಯಾ ಭರ್ತೃವರ್ಜಿತಾ ।
ಕೃತಾಽಕೃತೈಶ್ಚ ಜಾಯಂತೇ ತನ್ನಿಬೋಧಸ್ವ ಸುಂದರಿ ॥ ೯೬ ॥
ತಿಲಧೇನುಂ ಸುವರ್ಣಂಚ ರೂಪ್ಯಂ ಗಾ ವಾಸಸೀ ತಥಾ ।
ಪಾನೀಯಂ ಭೂಮಿದಾನಂಚ ಗಂಧಧೂಪಾನುಲೇಪನಂ ॥ ೯೭ ॥

---

೯೨. ಎಲೈ ಮಹಾಭಾಗನೆ! ನೀನು ಇವುಗಳೆಲ್ಲವನ್ನೂ ಯಾವ ಶಂಕೆಯನ್ನೂ ಇಟ್ಟುಕೊಳ್ಳದೆ ಯಥಾವತ್ತಾಗಿ ತಿಳಿಸು. ಕೇಳಲು ನನಗೆ ಇಚ್ಛೆಯಿರುವುದು.

೯೩. ನಾರದನು ಹೇಳುತ್ತಾನೆ :—ಎಲೌ ಮಹಾಭಾಗ್ಯಶಾಲಿನಿಯೆ! ಸಾಧು ಸಾಧು! ನೀನು ಈ ಪ್ರಶ್ನೆಯನ್ನು ಕೇಳಿದುದು ಬಹು ಸಮಂಜಸವಾದುದು. ಇವುಗಳನ್ನು ಕೇಳುವುದರಿಂದ ಸಮಸ್ತ ಸ್ತ್ರೀಯರಿಗೂ ಧರ್ಮವೃದ್ಧಿಯುಂಟಾಗುವುದು.

೯೪. ಉಪವಾಸಗಳನ್ನೂ, ದಾನಗಳನ್ನೂ ಮಾಡುವುದರಿಂದ ಸ್ತ್ರೀಯರಿಗೆ ಪತಿಪುತ್ರರು ವಶರಾಗುವರು ; ಬಾಂಧವರೆಲ್ಲರೂ ಅಂಥವರನ್ನು ಗೌರವಿಸುತ್ತಾರೆ. ಅವುಗಳನ್ನು ಹೇಳುವೆನು ; ಕೇಳು.

೯೫–೯೬. ಅವುಗಳನ್ನು ಮಾಡುವುದರಿಂದ ದುರ್ಭಗೆಯಾದವಳು ಸುಭಗೆಯಾಗುತ್ತಾಳೆ; ಅಪುತ್ರವಂತಳೂ ಪುತ್ರನನ್ನು ಪಡೆಯುವಳು ; ಕನ್ಯೆಯಾದರೆ ಒಳ್ಳೆಯ ಭರ್ತನನ್ನು ಪಡೆಯುವಳು. ಎಲೌ ಸುಂದರಿಯೆ! ಉಪವಾಸಗಳನ್ನೂ ದಾನಗಳನ್ನೂ ಮಾಡದಿದ್ದರೆ ಸ್ತ್ರೀಯು ಸುಭಗೆಯಾಗಿದ್ದರೂ ದುರ್ಭಗೆಯಾಗುವಳು. ಪುತ್ರವಂತಳಾಗಿದ್ದರೂ ಅಪುತ್ರವತಿಯಾಗುವಳು ; ಪತಿಸಹಿತೆಯಾಗಿದ್ದರೂ, ಭರ್ತೃವರ್ಜಿತೆಯಾಗುತ್ತಾಳೆ.

೯೭–೯೪. ತಿಲಧೇನು, ಸುವರ್ಣ, ರಜತ, ಗೋವು, ವಸ್ತ್ರಗಳು, ಪಾನೀಯ, ಭೂಮಿ, ಗಂಧ, ಧೂಪ, ಲೇಪನ ದ್ರವ್ಯಗಳು, ಪಾದುಕೆಗಳು, ಛತ್ರ,

**ಪಾದುಕೋಪಾನಹೌ ಛತ್ರಂ ಪುಣ್ಯಾನಿ ವ್ಯಜನಾನಿಚ ।**
**ಪಾದಾಭ್ಯಂಗಂ ಶಿರೋಽಭ್ಯಂಗಂ ಸ್ನಾನಂ ಶಯ್ಯಾಸನಾನಿ ಚ ।**
**ಏತಾನಿ ಯೇ ಪ್ರಯಚ್ಛಂತಿ ನೋಪಸರ್ಪಂತಿ ತೇ ಯಮಂ ॥ ೯೮ ॥**
**ಮಧು ಮಾಷಂ ಪಯಃಸರ್ಪಿರ್ಲವಣಂ ಗುಡವೌಷಧಂ ।**
**ಪಾನೀಯಂ ಭೂಮಿದಾನಂಚ ಶಾಲೀನೀಕ್ಷುರಸಾಂಸ್ತಥಾ ॥ ೯೯ ॥**
**ಆರಕ್ತವಾಸಸೀ ಶ್ಲಕ್ಷ್ಣೇ ದಂಪತ್ಯೋರ್ಲಲಿತಾದಿನೇ ।**
**ಸೌಭಾಗ್ಯಂ ಜಾಯತೇಽಚ್ಯೈವ ಇಹಲೋಕೇ ಪರತ್ರ ಚ ॥ ೧೦೦ ॥**
**ಬ್ರಾಹ್ಮಣೇ ವೃತ್ತಸಂಪನ್ನೇ ಸುರೂಪೇಚ ಗುಣಾನ್ವಿತೇ ।**
**ತಿಥೌ ಯಸ್ಯಾಮಿದಂ ದೇಯಂ ತತ್ತೇ ರಾಜ್ಞಿ ವದಾಮ್ಯಹಂ ॥ ೧೦೧ ॥**
**ಪ್ರತಿಪತ್ಸುಚ ಯಾ ನಾರೀ ಪೂರ್ವಾಹ್ನೇ ಚ ಶುಚಿವ್ರತಾ ।**
**ಇಂಧನಂ ಬ್ರಾಹ್ಮಣೇ ದದ್ಯಾತ್ಪ್ರೀಯತಾಂ ಮೇ ಹುತಾಶನಃ ॥ ೧೦೨ ॥**
**ತಸ್ಯಾ ಜನ್ಮಾನಿ ಷಡ್ತ್ರಿಂಶದಂಗಪ್ರತ್ಯಂಗಸಂಧಿಷು ।**
**ನ ರಜೋ ನೈವ ಸಂತಾಪೋ ಜಾಯತೇ ರಾಜವಲ್ಲಭೇ ॥ ೧೦೩ ॥**
**ದ್ವಿತೀಯಾಯಾಂ ತು ಯಾ ನಾರೀ ನವನೀತಂ ಮುದಾನ್ವಿತಾ ।**
**ದದಾತಿ ದ್ವಿಜಮುಖ್ಯಾಯ ಸುಕುಮಾರತನುರ್ಭವೇತ್ ॥ ೧೦೪ ॥**

---

ವ್ಯಂಜನಗಳು, ಪಾದಾಭ್ಯಂಗ, ಶಿರೋಭ್ಯಂಗ ಮೊದಲಾದುವುಗಳನ್ನು ದಾನ ಮಾಡಿದವರು ಯಮಲೋಕಕ್ಕೆಂದಿಗೂ ಹೋಗುವುದಿಲ್ಲವು.

೯೯–೧೦೦. ಲಲಿತಾ ದಿನದಲ್ಲಿ ದಂಪತಿಗಳಿಗೆ ಜೇನು, ಉದ್ದು, ಹಾಲು, ತುಪ್ಪ, ಉಪ್ಪು, ಬೆಲ್ಲ, ಶಾಕಗಳು, ಪಾನೀಯ, ಭೂಮಿ, ಅಕ್ಕಿ, ಇಕ್ಷುರಸ, ಮೃದುವಾದ ರಕ್ತವಸ್ತ್ರಗಳು—ಇವುಗಳನ್ನು ದಾನಮಾಡಿದರೆ ಇಹಪರಲೋಕ ಗಳಲ್ಲಿ ಸೌಭಾಗ್ಯವುಂಟಾಗುವುದು.

೧೦೧. ಎಲೌ ಮಹಾರಾಣಿಯೆ! ಸದಾಚಾರಸಂಪನ್ನನೂ, ಸುರೂಪನೂ, ಗುಣಾಢ್ಯನೂ ಆದ ಬ್ರಾಹ್ಮಣನಿಗೆ ಇದನ್ನು ಯಾವ ದಿನದಲ್ಲಿ ದಾನಮಾಡ ಬೇಕೆಂಬುದನ್ನು ಹೇಳುವೆನು ; ಕೇಳು.

೧೦೨–೧೦೩. ಪಾಡ್ಯಮಿಯಂದು ಯಾವ ನಾರಿಯು ಪೂರ್ವಾಹ್ಣದಲ್ಲಿ ಶುಚಿವ್ರತೆಯಾಗಿ "ಹುತಾಶನನು ನನ್ನಲ್ಲಿ ಪ್ರಸನ್ನನಾಗಲಿ" ಎಂದು ದಾನ ಮಾಡುವಳೋ ಅವಳು ಮುಂದಿನ ಮೂವತ್ತಾರು ಜನ್ಮಗಳಲ್ಲಿ ಪ್ರತ್ಯಂಗ ಗಳಲ್ಲಿಯೂ, ಸಂಧಿಗಳಲ್ಲಿಯೂ, ರಜಸ್ಸನ್ನಾಗಲಿ, ತಾಪವನ್ನಾಗಲಿ ಪಡೆಯು ವುದಿಲ್ಲವು.

೧೦೪. ದ್ವಿತೀಯಾತಿಥಿಯಂದು ದ್ವಿಜಶ್ರೇಷ್ಠನಿಗೆ ಸಂತೋಷಭರಿತಳಾಗಿ ನವನೀತವನ್ನು ದಾನಮಾಡಿದ ನಾರಿಯು ಸುಕುಮಾರವಾದ ಶರೀರವುಳ್ಳವ ಳಾಗುವಳು.

ಲವಣಂ ವಿಪ್ರವರ್ಯಾಯ ತೃತೀಯಾಯಾಂ ಪ್ರಯಚ್ಛತಿ ।
ಗೌರೀ ಮೇ ಪ್ರೀಯತಾಂ ದೇವೀ ತಸ್ಯಾಃ ಪುಣ್ಯಫಲಂ ಶೃಣು ॥ ೧೦೫ ॥
ಕೌಮಾರಿಕಾ ಪತಿಂ ಪ್ರಾಪ್ಯ ತೇನ ಸಾರ್ಧಮುಮಾ ಯಥಾ ।
ಕ್ರೀಡತ್ಯವಿಧವಾ ಚಾಽಪಿ ಲಭತೇ ಸಾ ಮಹದ್ಯಶಃ ॥ ೧೦೬ ॥
ನಕ್ತಂ ಕೃತ್ವಾ ಚತುರ್ಥ್ಯಾಂ ವೈ ದದ್ಯಾದ್ವಿಪ್ರಾಯ ಮೋದಕಾನ್ ।
ಪ್ರೀಯತಾಂ ಮಮ ದೇವೇಶೋ ಗಣನಾಥೋ ವಿನಾಯಕಃ ॥ ೧೦೭ ॥
ತಸ್ಯಾಸ್ತೇನ ಫಲೇನಾಶು ಸರ್ವಕರ್ಮಸು ಭಾಮಿನಿ ।
ವಿಘ್ನಂ ನ ಜಾಯತೇ ಕ್ವಾಽಪಿ ಏವಮಾಹ ಪಿತಾಮಹಃ ॥ ೧೦೮ ॥
ಪಂಚಮ್ಯಾಂ ತು ತತಃ ಪ್ರಾಪ್ಯ ಬ್ರಾಹ್ಮಣೇ ತಿಲದಾ ತು ಯಾ ।
ಸಾ ಭವೇದ್ರೂಪಸಂಪನ್ನಾ ಯಥಾ ಚೈವ ತಿಲೋತ್ತಮಾ ॥ ೧೦೯ ॥
ಷಷ್ಠ್ಯಾಂ ತು ಯಾ ಮಧೂಕಸ್ಯ ಫಲದಾ ತು ಭವೇತ್ಸದಾ ।
ಉದ್ದಿಶ್ಯಚಾಽಗ್ನಿಜಂ ದೇವಂ ಬ್ರಾಹ್ಮಣೇ ವೇದಪಾರಗೇ ॥ ೧೧೦ ॥
ತಸ್ಯಾಃ ಪುತ್ರೋ ಯಥಾ ಸ್ಕಂದೋ ದೇವಸಂಘೇಷು ಚೋತ್ತಮಃ ।
ಉತ್ಪದ್ಯತೇ ಮಹಾರಾಜಃ ಸರ್ವಲೋಕೇಷು ಪೂಜಿತಃ ॥ ೧೧೧ ॥

---

೧೦೫. "ಗೌರಿಯು ಸುಪ್ರೀತೆಯಾಗಲಿ" ಎಂದು ತದಿಗೆಯ ದಿನದಲ್ಲಿ ವಿಪ್ರನಿಗೆ ಲವಣ ದಾನಮಾಡಿದ ಸ್ತ್ರೀಗೆ ಲಭಿಸುವ ಪುಣ್ಯಫಲವನ್ನು ಹೇಳುವೆನು ; ಕೇಳು.

೧೦೬. ಕುಮಾರಿಯಾದ ಅವಳು ಉತ್ತಮಪತಿಯನ್ನು ಪಡೆದು ಅವನೊಡನೆ ಉಮಾದೇವಿಯು ಪರಮೇಶ್ವರನೊಡನೆಂತೋ ಅಂತು ಕ್ರೀಡಿಸುತ್ತಿದ್ದು ಆ ತರುವಾಯ ಮಹತ್ತರವಾದ ಯಶಸ್ಸನ್ನು ಪಡೆಯುತ್ತಾಳೆ.

೧೦೭–೧೦೮. ಚತುರ್ಥಿಯ ದಿನದಲ್ಲಿ ನಕ್ತವ್ರತವನ್ನು ಮಾಡಿ "ಗಣನಾಥನಾದ ವಿಘ್ನೇಶ್ವರನು ಸುಪ್ರೀತನಾಗಲಿ" ಎಂದು ವಿಪ್ರನಿಗೆ ಕಡಬುಗಳನ್ನು ದಾನಮಾಡಿದ ನಾರಿಯು ಆ ಪುಣ್ಯಕರ್ಮದ ಫಲದಿಂದ ಸಮಸ್ತ ಕಾರ್ಯಗಳಲ್ಲಿಯೂ ನಿರ್ವಿಘ್ನತೆಯನ್ನು ಪಡೆಯುವಳೆಂದು ಸಾಕ್ಷಾತ್ ಪಿತಾಮಹನೇ ಹೇಳಿರುವನು.

೧೦೯. ಯಾವ ನಾರಿಯು ಪಂಚಮಿಯಲ್ಲಿ ಬ್ರಾಹ್ಮಣನಿಗೆ ತಿಲದಾನ ಮಾಡುವಳೋ ಅವಳು ಸ್ವರ್ಗಸುಂದರಿಯಾದ ತಿಲೋತ್ತಮೆಯಂತೆ ಉತ್ತಮ ರೂಪವತಿಯಾಗುವಳು.

೧೧೦–೧೧೧. ಷಷ್ಠಿಯ ದಿನ ಅಗ್ನಿಸಂಭೂತನಾದ ಷಣ್ಮುಖಸ್ವಾಮಿಯನ್ನು ಉದ್ದೇಶಿಸಿ ವೇದಪಾರಂಗತನಾದ ಬ್ರಾಹ್ಮಣನಿಗೆ ಮಧೂಕ (ಹಿಪ್ಪೆ) ಫಲಗಳನ್ನು ದಾನಮಾಡಿದ ನಾರಿಯು ಉತ್ತಮ ಪುತ್ರನನ್ನು ಪಡೆಯುತ್ತಾಳೆ. ಅಲ್ಲದೆ

**ಸಪ್ತಮ್ಯಾಂ ಯಾ ದ್ವಿಜಶ್ರೇಷ್ಠಂ ಸುವರ್ಣೇನ ಪ್ರಪೂಜಯೇತ್ ।**
**ಉದ್ದಿಶ್ಯ ಜಗತೋ ನಾಥಂ ದೇವದೇವಂ ದಿವಾಕರಂ ॥ ೧೧೨ ॥**
**ತಸ್ಯ ಪುಣ್ಯಫಲಂ ಯದ್ವೈ ಕಥಿತಂ ದ್ವಿಜಸತ್ತಮೈಃ ।**
**ತತ್ತೇ ರಾಜ್ಞಿ ಪ್ರವಕ್ಷ್ಯಾಮಿ ಶೃಣುಷ್ವೈಕಮನಾಃ ಸತಿ ॥ ೧೧೩ ॥**
**ದದ್ರೂಚಿತ್ರಕಕುಷ್ಠಾನಿ ಮಂಡಲಾನಿ ವಿಚರ್ಚಿಕಾ ।**
**ನ ಭವಂತೀಹ ಚಾಂಗೇಷು ಪೂರ್ವಕರ್ಮಾರ್ಜಿತಾನ್ಯಪಿ ॥ ೧೧೪ ॥**
**ಕೃಷ್ಣಾಂ ಧೇನುಂ ತಥಾಽಷ್ಟಮ್ಯಾಂ ಯಾ ಪ್ರಯಚ್ಛತಿ ಭಾಮಿನೀ ।**
**ಬ್ರಾಹ್ಮಣೇ ವೃತ್ತಸಂಪನ್ನೇ ಪ್ರೀಯತಾಂ ಮೇ ಮಹೇಶ್ವರಃ ॥ ೧೧೫ ॥**
**ತಸ್ಯಾ ಜನ್ಮಾರ್ಜಿತಂ ಪಾಪಂ ನಶ್ಯತೇ ವಿಭವಾನ್ವಿತಾ ।**
**ಜಾಯತೇ ನಾಽತ್ರ ಸಂದೇಹೋ ಯಸ್ಮಾದ್ದಾನಮನುತ್ತಮಂ ॥ ೧೧೬ ॥**
**ಗಂಧಧೂಪಂ ತು ಯಾ ನಾರೀ ಭಕ್ತ್ಯಾ ವಿಪ್ರಾಯ ದಾಪಯೇತ್ ।**
**ಕಾತ್ಯಾಯನೀಂ ಸಮುದ್ದಿಶ್ಯ ನವಮ್ಯಾಂ ಶೃಣು ಯತ್ಫಲಂ ॥ ೧೧೭ ॥**

---

ಆ ಸತ್ಪುತ್ರನು ದೇವಸಂಘಗಳಲ್ಲಿ ಉತ್ತಮನೆನಿಸಿದ ಸ್ಕಂದನಂತೆ ವಿರಾಜಿಸುತ್ತ ಮಹಾರಾಜನಾಗಿ ಸಮಸ್ತ ಲೋಕಗಳಲ್ಲಿಯೂ ಪೂಜಿತನಾಗುವನು.

೧೧೨–೧೧೪. ಸಪ್ತಮಿಯಲ್ಲಿ ಜಗನ್ನಾಥನಾದ ಸೂರ್ಯದೇವನನ್ನುದ್ದೇಶಿಸಿ ವಿಪ್ರೋತ್ತಮನನ್ನು ಸುವರ್ಣದಿಂದ ಪೂಜಿಸಿದ ಸ್ತ್ರೀಗೆ ಲಭಿಸುವ ಪುಣ್ಯ ಫಲವನ್ನು ಹೇಳುತ್ತೇನೆ; ಇದನ್ನು ದ್ವಿಜಸತ್ತಮರೇ ಹೇಳಿರುವರು. ಎಲೌ ಮಹಾರಾಣಿಯೆ! ಏಕಚಿತ್ತದಿಂದ ಕೇಳು. ಈ ಸ್ವರ್ಣದಾನದ ಫಲದಿಂದ ಆಕೆಯು ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲವಾಗಿ ಸಂಭವಿಸಬಹುದಾದ ಕಜ್ಜಿ, ತುರಿ, ಕುಷ್ಠ, ಮಂಡಲ, ವಿಚರ್ಚಿಕೆ ಮೊದಲಾದ ರೋಗಗಳನ್ನು ಅನುಭವಿಸುವುದಿಲ್ಲ. ಅವಳು ಆರೋಗದೃಢಕಾಯಳಾಗಿರುತ್ತಾಳೆ.

೧೧೫–೧೧೬. ಅಂತೆಯೇ ಅಷ್ಟಮಿಯಂದು "ಮಹೇಶ್ವರನು ಸುಪ್ರೀತನಾಗಲೆಂದು ಸದಾಚಾರನಿಷ್ಠನಾದ ವಿಪ್ರವರ್ಯನಿಗೆ ಕರಿಯ ಆಕಳನ್ನು ದಾನ ಮಾಡುವ ಭಾಮಿನಿಯ ಪೂರ್ವಜನ್ಮಾರ್ಜಿತಗಳಾದ ಪಾಪಗಳೂ ನಶಿಸಿಹೋಗುತ್ತವೆ. ಅಲ್ಲದೆ ಆ ನಾರಿಯು ಮುಂದಣ ಜನ್ಮದಲ್ಲಿ ಐಶ್ವರ್ಯಸಂಪನ್ನೆಯಾಗಿ ಜನಿಸುವಳೆಂಬುದರಲ್ಲಿ ಸಂದೇಹವಿಲ್ಲವು. ಆದುದರಿಂದ ಈ ಕೃಷ್ಣಧೇನು ದಾನವು ಉತ್ತಮವಾದುದು.

೧೧೭–೧೧೮. ನವಮೀ ತಿಥಿಯಲ್ಲಿ ಕಾತ್ಯಾಯನಿಯನ್ನುದ್ದೇಶಿಸಿ ವಿಪ್ರ ಮುಖ್ಯನಿಗೆ ಗಂಧಧೂಪವನ್ನು ಸಮರ್ಪಿಸುವ ನಾರಿಗೆ ದೊರಕುವ ಪುಣ್ಯಫಲ

**ತಸ್ಯಾ ಭ್ರಾತಾ ಪಿತಾ ಪುತ್ರಃ ಪತಿರ್ವಾ ರಣಮುತ್ತಮಂ ।**
**ಪ್ರಾಪ್ಯತೇ ನೈವ ಸೀದಂತಿ ತೇನ ದಾನೇನ ರಕ್ಷಿತಾಃ ॥ ೧೧೮ ॥**
**ಇಕ್ಷುದಂಡರಸಂ ದೇವಿ ದಶಮ್ಯಾಂ ಯಾ ಪ್ರಯಚ್ಛತಿ ।**
**ಲೋಕಪಾಲಾನ್ ಸಮುದ್ದಿಶ್ಯ ಬ್ರಾಹ್ಮಣೇ ವ್ಯಂಗವರ್ಜಿತೇ ॥ ೧೧೯ ॥**
**ತೇನ ದಾನೇನ ಸಾ ನಿತ್ಯಂ ಸರ್ವಲೋಕಸ್ಯ ವಲ್ಲಭಾ ।**
**ಜಾಯತೇ ನಾಽತ್ರ ಸಂದೇಹ ಇತ್ಯೇವಂ ಶಂಕರೋಽಬ್ರವೀತ್ ॥ ೧೨೦ ॥**
**ಏಕಾದಶ್ಯಾಮುಪೋಷ್ಯಾಽಥ ದ್ವಾದಶ್ಯಾಮುದಕಪ್ರದಾ ।**
**ನಾರಾಯಣಂ ಸಮುದ್ದಿಶ್ಯ ಬ್ರಾಹ್ಮಣೇ ವಿಷ್ಣುತತ್ಪರೇ ॥ ೧೨೧ ॥**
**ಸಾ ಸದಾ ಸರ್ವಸಂಭಾಷೈರ್ದ್ರಾವಯೇದ್ಭಾವಯೇಜ್ಜನಂ ।**
**ಯಸ್ಮಾದ್ದಾನಂ ಮಹಲೋಕೇ ಹ್ಯನಂತಮುದಕೇ ಭವೇತ್ ॥ ೧೨೨ ॥**
**ಪಾದಾಭ್ಯಂಗಂ ಶಿರೋಽಭ್ಯಂಗಂ ಕಾಮಮುದ್ದಿಶ್ಯ ವೈ ದ್ವಿಜೇ ।**
**ದದಾತಿ ಚ ತ್ರಯೋದಶ್ಯಾಂ ಭಕ್ತ್ಯಾ ಪರಮಯಾಂಗನಾ ॥ ೧೨೩ ॥**
**ಯಸ್ಯಾಂ ಯಸ್ಯಾಂ ಮೃತಾ ಜಾಯೇದ್ಭೂಯೋ ಯೋಽಸ್ಯಾಂತು ಜನ್ಮನಿ ।**
**ತಸ್ಯಾಂ ತಸ್ಯಾಂ ತು ಸಾ ಭರ್ತುರ್ನ ವಿಯುಜ್ಯೇತ ಕರ್ಹಿಚಿತ್ ॥ ೧೨೪ ॥**

---

ವನ್ನು ಹೇಳುವೆನು; ಕೇಳು. ಆ ಪುಣ್ಯಾತ್ಮಳ ಅಣ್ಣತಮ್ಮಂದಿರಾಗಲಿ, ತಂದೆಯಾಗಲಿ, ಪತಿಯೇ ಆಗಲಿ ಭಯಂಕರವಾದ ರಣರಂಗವನ್ನು ಸೇರಿದರೂ ಈ ದಾನಫಲದಿಂದ ಸುರಕ್ಷಿತರಾಗುವರು.

೧೧೯–೧೨೦. ಯಾವ ನಾರಿಯು ಲೋಕಪಾಲಕರನ್ನುದ್ದೇಶಿಸಿ ದಶಮಿಯಲ್ಲಿ ಸುರೂಪನಾದ ಬ್ರಾಹ್ಮಣನಿಗೆ ಕಬ್ಬಿನ ಹಾಲನ್ನು ದಾನಮಾಡುವಳೋ ಆ ನಾರಿಗೆ ಲಭಿಸುವ ಪುಣ್ಯಫಲಗಳನ್ನು ಕೇಳು. ಓ ದೇವಿಯೆ! ಆಕೆಯು ಸಮಸ್ತ ಲೋಕಗಳಿಗೂ ವಲ್ಲಭೆಯಾಗುತ್ತಾಳೆಯೆಂದು ಶಂಕರನೇ ಸಾಕ್ಷಾತ್ತಾಗಿ ಹೇಳಿರುವನು.

೧೨೧–೧೨೪. ಏಕಾದಶಿಯದಿನ ಉಪವಾಸ ಮಾಡಿ ದ್ವಾದಶಿಯಂದು ಶ್ರೀಮನ್ನಾರಾಯಣನನ್ನುದ್ದೇಶಿಸಿ ವಿಷ್ಣುಭಕ್ತನಾದ ವಿಪ್ರೋತ್ತಮನಿಗೆ ಉದಕ ದಾನಮಾಡಿದ ನಾರೀಮಣಿಯು ನಿಜಪತಿಯನ್ನು ಸ್ಪರ್ಶಸಂಭಾಷಣಗಳಿಂದ ಮೋಹಗೊಳಿಸುವಳಲ್ಲದೆ ಈ ದಾನವೇ ಮಹಲೋಕದಲ್ಲಿಯೂ ಅನಂತಫಲಪ್ರದವಾಗುತ್ತದೆ. ಎಲೌ ದೇವಿಯೆ! ತ್ರಯೋದಶಿಯಲ್ಲಿ ಕಾಮದೇವನನ್ನುದ್ದೇಶಿಸಿ ವಿಪ್ರನಿಗೆ ಪಾದಾಭ್ಯಂಗನ, ಶಿರೋಽಭ್ಯಂಗನಗಳನ್ನು ಪರಮಭಕ್ತಿಯಿಂದ ಸಮರ್ಪಿಸುವ ನಾರಿಯು ಮೃತಳಾಗಿ ಯಾವಯಾವ ಜನ್ಮವನ್ನೆತ್ತಿದರೂ ಆ ಜನ್ಮಗಳಲ್ಲೆಲ್ಲ ಪತಿವಿಯೋಗವನ್ನು ಪಡೆಯುವುದಿಲ್ಲವು.

ತಥಾಽಪ್ಯೇವಂ ಚತುರ್ದಶ್ಯಾಂ ದದ್ಯಾತ್ಪಾತ್ರಮುಪಾನಹೌ ।
ಬ್ರಾಹ್ಮಣೇ ಧರ್ಮಮುದ್ದಿಶ್ಯ ತಸ್ಯಾ ಲೋಕಾ ಹ್ಯನಾಮಯಾಃ ॥ ೧೨೫ ॥
ಏವಂ ಚ ಪಕ್ಷಪಕ್ಷಾಂತೇ ಶ್ರಾದ್ಧೇ ತರ್ಪೇದ್ದ್ವಿಜೋತ್ತಮಾನ್ ।
ಅವ್ಯುಚ್ಛಿನ್ನಾ ಸದಾ ರಾಜ್ಞಿ ಸಂತತಿರ್ಜಾಯತೇ ಭುವಿ ॥ ೧೨೬ ॥
ಏವಂ ತೇ ತಿಥಿಮಾಹಾತ್ಮ್ಯಂ ದಾನಯೋಗೇನ ಭಾಷಿತಂ ।
ತಥಾ ವನಸ್ಪತೀನಾಂ ತು ಆರಾಧನವಿಧಿಂ ಶೃಣು ॥ ೧೨೭ ॥
ಜಂಬೂಂ ನಿಂಬತರುಂ ಚೈವ ತಿಂದುಕಂ ಮಧುಕಂ ತಥಾ ।
ಆಮ್ರಂ ಚಾಮಲಕಂ ಚೈವ ಶಾಲ್ಮಲೀಂ ವಟಪಿಪ್ಪಲೌ ॥ ೧೨೮ ॥
ಶಮೀಬಿಲ್ವಾಮಲೀವೃಕ್ಷಂ ಕದಲೀಂ ಪಾಟಲೀಂ ತಥಾ ॥ ೧೨೯ ॥
ಅನ್ಯಾನ್ಪುಣ್ಯತಮಾನ್ವೃಕ್ಷಾನುಪೇತ್ಯ ಸ್ವರ್ಗಮಾಪ್ನುಯಾತ್ ॥ ೧೩೦ ॥

ನಾರದ ಉವಾಚ :—

ಚೈತ್ರೇ ಮಾಸೇ ತು ಯಾ ನಾರೀ ಕುರ್ಯಾದ್ವ್ರತಮನುತ್ತಮಂ ।
ತಸ್ಯ ವ್ರತಸ್ಯ ಚಾಽನ್ಯಾನಿ ಕಲಾಂ ನಾಽರ್ಹಂತಿ ಷೋಡಶೀಂ ॥ ೧೩೧ ॥
ಶ್ರುತೇನ ಯೇನ ಸುಭಗೇ ದುರ್ಭಗತ್ವಂ ನ ಪಶ್ಯತಿ ।
ಯಥಾ ಹಿಮಂ ರವಿಂ ಪ್ರಾಪ್ಯ ವಿಲಯಂ ಯಾತಿ ಭೂತಲೇ ।
ತಥಾ ದುಃಖಂಚ ದೌರ್ಭಾಗ್ಯಂ ವ್ರತಾದಸ್ಮಾದ್ವಿಲೀಯತೇ ॥ ೧೩೨ ॥

---

೧೨೫–೧೨೬. ಅಂತೆಯೆ, ಚತುರ್ದಶಿಯ ದಿನ ಯಮಧರ್ಮನನ್ನುದ್ದೇಶಿಸಿ ಬ್ರಾಹ್ಮಣನಿಗೆ ಪಾತ್ರೆ ಮತ್ತು ಪಾದರಕ್ಷೆಗಳನ್ನು ದಾನಮಾಡಿದ ಹೆಂಗಸು ಉತ್ತಮ ಲೋಕಗಳನ್ನು ಪಡೆಯುತ್ತಾಳೆ. ಹೀಗೆಯೆ, ಪಕ್ಷಪಕ್ಷಾಂತಗಳಲ್ಲಿ ದ್ವಿಜೋತ್ತಮರನ್ನು ದಾನಗಳಿಂದ ತೃಪ್ತಿಗೊಳಿಸಬೇಕು. ಇದರಿಂದ ಈ ಭೂಲೋಕದಲ್ಲಿ ಸ್ತ್ರೀಯರಿಗೆ ಶಾಶ್ವತವಾದ ಸಂತತಿಯುಂಟಾಗುವುದು.

೧೨೭–೧೩೦. ಎಲೌ ರಾಣಿಯೆ! ಹೀಗೆ ದಾನಯೋಗದಿಂದ ತಿಥಿ ಮಾಹಾತ್ಮ್ಯವನ್ನು ನಿನಗೆ ಹೇಳಿದೆನು. ಇನ್ನು ವನಸ್ಪತಿಗಳ ಆರಾಧನಕ್ರಮ ವನ್ನು ಹೇಳುವೆನು ಕೇಳು. ನೇರಿಳೆ, ಬೇವು, ತೂಬರೆ, ಹಿಪ್ಪೆ, ಮಾವು, ನೆಲ್ಲಿ, ಬೂರಗ, ಆಲ, ಹಿಪ್ಪಲಿ, ಶಮಿ, ಬಿಲ್ವ, ಆಮಲಿ, ಕದಲಿ, ಪಾಟಲಿ ಇವೇ ಮೊದಲಾದ ಪುಣ್ಯ ವೃಕ್ಷಗಳನ್ನು ಸೇವಿಸಿದರೆ ಸ್ವರ್ಗಪ್ರಾಪ್ತಿಯುಂಟಾಗುವುದು.

೧೩೧. ನಾರದನು ಹೇಳುತ್ತಾನೆ:—ಎಲೌ ದೇವಿಯೆ! ಸ್ತ್ರೀಯು ಚೈತ್ರ ಮಾಸದಲ್ಲಿ ಒಂದು ವ್ರತವನ್ನು ಮಾಡಬೇಕು. ಇತರ ವ್ರತಗಳೆಲ್ಲವೂ ಆ ವ್ರತದ ಹದಿನಾರನೆಯ ಕಳೆಗೂ ಸಮಾನವಾದುವುಗಳಲ್ಲವು.

೧೩೨. ಈ ವ್ರತವನ್ನು ಕೇಳಿದಲ್ಲಿ ನಾರಿಯ ದೌರ್ಭಾಗ್ಯವು ನಾಶವಾಗುತ್ತದೆ ಯಲ್ಲದೆ, ಭೂಮಂಡಲದಲ್ಲಿ ರವಿಯನ್ನು ಮುಟ್ಟಿದ ಹಿಮವೆಂತೋ ಅಂತು

ಮಧುಕಾಖ್ಯಾಂತು ಲಲಿತಾಮಾರಾಧಯತಿ ಯೇನ ವೈ ।
ವಿಧಿಂ ತಂ ಶೃಣು ಸುಭಗೇ ಕಥ್ಯಮಾನಂ ಸುಖಾವಹಂ ॥ ೧೩೩ ॥
ಚೈತ್ರೇ ಶುಕ್ಲತೃತೀಯಾಯಾಂ ಸುಸ್ನಾತಾ ಶುದ್ಧಮಾನಸಾ ।
ಪ್ರತಿಮಾಂ ಮಧುವೃಕ್ಷಸ್ಯ ಶಾಂಕರೀಮುಮಯಾ ಸಹ ॥ ೧೩೪ ॥
ಕಾರಯಿತ್ವಾ ದ್ವಿಜವರ್ಯೈಃ ಪ್ರತಿಷ್ಠಾಪ್ಯ ಯಥಾ ವಿಧಿ ।
ಸುಗಂಧಿಕುಸುಮೈರ್ಧೂಪೈಸ್ತಥಾ ಕರ್ಪೂರಕುಂಕುಮೈಃ ॥ ೧೩೫ ॥
ಪೂಜಯೇದ್ವಿಧಿನಾ ದೇವಂ ಮಂತ್ರಯುಕ್ತೇನ ಭಾಮಿನೀ ॥ ೧೩೬ ॥
ಪಾದೌ ನಮಃ ಶಿವಾಯೇತಿ ಮೇಢ್ರೇ ವೈ ಮನ್ಮಥಾಯ ಚ ।
ಕಾಲೋದರಾಯೇತ್ಯುದರಂ ನೀಲಕಂಠಾಯ ಕಂಠಕಂ ॥ ೧೩೭ ॥
ಶಿರಃ ಸರ್ವಾತ್ಮನೇ ಪೂಜ್ಯ ಉಮಾಂ ಪಶ್ಚಾತ್ಪ್ರಪೂಜಯೇತ್ ।
ಕ್ಷಾಮೋದರಾಯೈ ಹ್ಯುದರಂ ಸುಕಂಠಾಯೈ ಚ ಕಂಠಕಂ ॥ ೧೩೮ ॥
ಶಿರಃ ಸೌಭಾಗ್ಯದಾಯಿನ್ಯೈ ಪಶ್ಚಾದರ್ಘ್ಯಂ ಪ್ರದಾಪಯೇತ್ ॥ ೧೩೯ ॥

---

ಈ ವ್ರತಮಾಹಾತ್ಮ್ಯದಿಂದ ಸ್ತ್ರೀಯಳನ್ನು ಮುತ್ತಿರುವ ದುಃಖಗಳೂ, ದೌರ್ಭಾಗ್ಯವೂ ಲಯಿಸಿಹೋಗುತ್ತವೆ.

೧೩೩. ಮಧುಕೆಯೆಂದು ಪ್ರಸಿದ್ಧಳಾಗಿರುವ ಲಲಿತಾಂಬಿಕೆಯನ್ನು ಈ ವ್ರತದಿಂದ ಪೂಜಿಸಬೇಕು. ಎಲೌ ಸುಭಗೆಯೆ! ಅದರ ವಿಧಾನವನ್ನು ಹೇಳುವೆನು; ಕೇಳು. ಅದು ಅತ್ಯಂತ ಸುಖಪ್ರದವಾದುದು.

೧೩೪–೧೩೬. ಚೈತ್ರ ಶುದ್ಧ ತದಿಗೆಯ ದಿನ ಸ್ತ್ರೀಯು ವಿಧ್ಯುಕ್ತವಾಗಿ ಸ್ನಾನಮಾಡಿ ಶುದ್ಧಮನಸ್ಕಳಾಗಿ ಬ್ರಾಹ್ಮಣರಿಂದ, ಉಮಾಶಂಕರರ ಪ್ರತಿಮೆಯನ್ನು ಹಿಪ್ಪೆಯ ಮರದಿಂದ ಮಾಡಿಸಿ ಯಥಾವಿಧಿಯಾಗಿ ಪ್ರತಿಷ್ಠಿಸಬೇಕು. ತರುವಾಯ ಸುಗಂಧಭರಿತವಾದ ಪುಷ್ಪಗಳಿಂದಲೂ, ಧೂಪಗಳಿಂದಲೂ, ಕರ್ಪೂರ ಕುಂಕುಮಗಳಿಂದಲೂ ಮಂತ್ರಯುಕ್ತವಾಗಿ ಪೂಜಿಸಬೇಕು.

೧೩೭. "ಶಿವಾಯನಮಃ" ಎಂದು ಶಂಕರನ ಪಾದಗಳನ್ನೂ, "ಮನ್ಮಥಾಯನಮಃ" ಎಂದು ಮೇಢ್ರವನ್ನೂ, "ಕಾಲೋದರಾಯನಮಃ" ಎಂದು ಉದರವನ್ನೂ, "ನೀಲಕಂಠಾಯನಮಃ" ಎಂದು ಕಂಠವನ್ನೂ, "ಸರ್ವಾತ್ಮನೇನಮಃ" ಎಂದು ಶಿರಸ್ಸನ್ನೂ ಪೂಜಿಸಿದ ಬಳಿಕ ಉಮಾದೇವಿಯನ್ನು ಪೂಜಿಸಬೇಕು.

೧೩೮–೧೩೯. 'ಕ್ಷಾಮೋದರಾಯೈನಮಃ' ಎಂದು ಆ ದೇವಿಯ ಉದರವನ್ನೂ, 'ಸುಕಂಠಾಯೈನಮಃ' ಎಂದು ಕಂಠವನ್ನೂ, 'ಸೌಭಾಗ್ಯದಾಯಿನ್ಯೈನಮಃ' ಎಂದು ಶಿರಸ್ಸನ್ನೂ ಪೂಜಿಸಿದ ತರುವಾಯ ಆ ದೇವದೇವಿಯರಿಗೆ ಅರ್ಘ್ಯವನ್ನು ಕೊಡಬೇಕು.

ನಮಸ್ತೇ ದೇವದೇವೇಶ ಉಮಾವರ ಜಗತ್ಪತೇ ।
ಅರ್ಘ್ಯೇಣಾನೇನ ಮೇ ಸರ್ವಂ ದೌರ್ಭಾಗ್ಯಂ ನಾಶಯಪ್ರಭೋ ॥ ೧೪೦ ॥
ಇತಿ ಅರ್ಘ್ಯಮಂತ್ರಃ

ಅರ್ಘ್ಯಂ ದತ್ವಾ ತತಃಪಶ್ಚಾತ್ಕರಕಂ ವಾರಿಪೂರಿತಂ ।
ಮಧೂಕಪಾತ್ರೋಪಭೃತಂ ಸಹಿರಣ್ಯಂ ತು ಶಕ್ತಿತಃ ॥ ೧೪೧ ॥
ಕರಕಂ ವಾರಿಸಂಪೂರ್ಣಂ ಸೌಭಾಗ್ಯೇನ ತು ಸಂಯುತಂ ।
ದತ್ತಂ ತು ಲಲಿತೇ ತುಭ್ಯಂ ಸೌಭಾಗ್ಯಾದಿವಿವರ್ಧನಂ ॥ ೧೪೨ ॥
ಇತಿ ಕರಕದಾನಮಂತ್ರಃ

ಮಂತ್ರೇಣಾಽನೇನ ವಿಪ್ರಾಯ ದದ್ಯಾತ್ಕರಕಮುತ್ತಮಂ ।
ಲವಣಂ ವರ್ಜಯೇಚ್ಛುಕ್ಲಾಂ ಯಾವದನ್ಯಾಂ ತೃತೀಯಿಕಾಂ ॥ ೧೪೩ ॥
ಕ್ಷಮಾಪ್ಯ ದೇವೀಂ ದೇವೇಶಂ ನಕ್ತಮದ್ಯಾತ್ಸ್ವಯಂ ಹವಿಃ ।
ಅನೇನ ವಿಧಿನಾ ಸಾರ್ಧಂ ಮಾಸಿ ಮಾಸಿ ಹ್ಯುಪಕ್ರಮೇತ್ ॥ ೧೪೪ ॥
ಫಾಲ್ಗುನಸ್ಯ ತೃತೀಯಾಯಾಂ ಶುಕ್ಲಾಯಾಂ ತು ಸಮಾಪ್ಯತೇ ।
ವೈಶಾಖೇ ಲವಣಂ ದೇಯಂ ಜ್ಯೇಷ್ಠೇ ಚಾಜ್ಯಂ ಪ್ರದೀಯತೇ ॥ ೧೪೫ ॥

---

೧೪೦–೧೪೧. ಅರ್ಘ್ಯಮಂತ್ರವು :—"ಉಮಾಧವನೂ, ಜಗತ್ಪತಿಯೂ, ದೇವದೇವೇಶ್ವರನೂ ಆದ ಓ ಶಂಕರನೇ! ಈ ಅರ್ಘ್ಯವನ್ನು ಸ್ವೀಕರಿಸಿ ನನ್ನ ದೌರ್ಭಾಗ್ಯವನ್ನು ನಾಶಗೊಳಿಸು." ಹೀಗೆ ಶಂಕರನಿಗೆ ಅರ್ಘ್ಯವನ್ನಿತ್ತ ಬಳಿಕ ಮಧೂಕ ಪಾತ್ರದಲ್ಲಿರಿಸಿದ ಉದಕಕುಂಭವನ್ನು ಶಕ್ತ್ಯನುಸಾರವಾದ ದಕ್ಷಿಣೆಯೊಡನೆ ಉಮಾದೇವಿಗೆ ಸಮರ್ಪಿಸಬೇಕು.

೧೪೨. ಕರಕದಾನಮಂತ್ರವು :—"ಎಲೌ ಲಲಿತಾದೇವಿಯೆ! ಸೌಭಾಗ್ಯ ವಿವರ್ಧನವಾದುದೂ, ಸೌಭಾಗ್ಯ ದ್ರವ್ಯಗಳಿಂದ ಕೂಡಿರುವುದೂ, ವಾರಿಪೂರ್ಣವೂ ಆದ ಈ ಕರಕವ(ಪಾತ್ರೆಯ)ನ್ನು ನಿನಗೆ ಸಮರ್ಪಿಸುತ್ತೇನೆ."

೧೪೩. ಮಹಾರಾಣಿ! ಮೇಲೆ ಹೇಳಿದ ಮಂತ್ರದಿಂದ ಕರಕವನ್ನು ದೇವಿಗೆ ಸಮರ್ಪಿಸಿದ ಬಳಿಕ ಅದನ್ನು ವಿಪ್ರನಿಗೆ ದಾನಮಾಡಬೇಕು. ಇದಾದ ಮೇಲೆ ಇನ್ನೊಂದು ಶುದ್ಧ ತೃತೀಯೆಯುವರೆಗೂ ವ್ರತಮಾಡಿದವಳು ಉಪ್ಪನ್ನು ಬಿಡಬೇಕು.

೧೪೪. ವ್ರತವಾದ ಬಳಿಕ ಉಮಾಶಂಕರರ ಕ್ಷಮಾಪಣೆಯನ್ನು ಬೇಡಿ ರಾತ್ರಿಯಲ್ಲಿ ತಾನೇ ಮಾಡಿದ ಹವಿಸ್ಸನ್ನು ಭುಜಿಸಬೇಕು. ಹೀಗೆಯೆ ತಿಂಗಳು ತಿಂಗಳಿನಲ್ಲಿಯೂ ವ್ರತವನ್ನು ಮಾಡುತ್ತ ಬರಬೇಕು.

೧೪೫. ಈ ಮಧೂಕ ವ್ರತವು ಚೈತ್ರದಲ್ಲಿ ಪ್ರಾರಂಭವಾಗಿ ಫಾಲ್ಗುನ ಶುದ್ಧ ತೃತೀಯಾ ದಿನಕ್ಕೆ ಸಂಪೂರ್ಣವಾಗುತ್ತದೆ. ವೈಶಾಖ ಮಾಸದಲ್ಲಿ ವಿಪ್ರನಿಗೆ ಲವಣವನ್ನು ದಾನಮಾಡಬೇಕು; ಜ್ಯೇಷ್ಠದಲ್ಲಿ ಆಜ್ಯದಾನಮಾಡಬೇಕು.

ಆಷಾಢೇ ಮಾಸಿ ನಿಷ್ಪಾವಾಃ ಪಯೋ ದೇಯಂ ತು ಶ್ರಾವಣೇ ।
ಮುದ್ಗಾ ದೇಯಾ ನಭಸ್ಯೇತು ಶಾಲಿಮಾಶ್ವಯುಜೇ ತಥಾ ॥ ೧೪೬ ॥
ಕಾರ್ತಿಕೇ ಶರ್ಕರಾಪಾತ್ರಂ ಕರಕಂ ರಸಸಂಭೃತಂ ।
ಮಾರ್ಗಶೀರ್ಷೇ ತು ಕಾರ್ಪಾಸಂ ಕರಕಂ ಘೃತಸಂಯುತಂ ॥ ೧೪೭ ॥
ಪೌಷೇತು ಕುಂಕುಮಂ ದೇಯಂ ಮಾಘೇ ಪಾತ್ರಂ ತಿಲೈರ್ಭೃತಂ ।
ಫಾಲ್ಗುನೇ ಮಾಸಿ ಸಂಪ್ರಾಪ್ತೇ ಪಾತ್ರಂ ಮೋದಕಸಂಭೃತಂ ॥ ೧೪೮ ॥
ಪಶ್ಚಾತ್ತೃತೀಯಾದೇಯಂ ಯತ್ತತ್ಪೂರ್ವಸ್ಯಾಂ ವಿವರ್ಜಯೇತ್ ।
ವಿಧಾನಮಾಸಾಂ ಸರ್ವಾಸಾಂ ಸಾಮಾನ್ಯಂ ಮನಸಃಪ್ರಿಯೇ ॥ ೧೪೯ ॥
ಪ್ರತಿಮಾಂ ಮಧುವೃಕ್ಷಸ್ಯ ತಾಮೇವ ಪ್ರತಿಪೂಜಯೇತ್ ।
ತಸ್ಮೈ ಸರ್ವಂ ತು ವಿಪ್ರಾಯ ಆಚಾರ್ಯಾಯ ಪ್ರದೀಯತೇ ॥ ೧೫೦ ॥
ತತಃ ಸಂವತ್ಸರಸ್ಯಾಂತೇ ಉದ್ಯಾಪನವಿಧಿಂ ಶೃಣು ।
ಮಧುವೃಕ್ಷಂ ತತೋ ಗಚ್ಛೇದ್ಬಹುಸಂಭಾರಸಂವೃತಃ ॥ ೧೫೧ ॥

---

೧೪೬. ಆಷಾಢದಲ್ಲಿ ಅವರೆ, ಶ್ರಾವಣದಲ್ಲಿ ಹಾಲು, ಭಾದ್ರಪದದಲ್ಲಿ ಹೆಸರು, ಆಶ್ವಯುಜದಲ್ಲಿ ಅಕ್ಕಿ (ಭತ್ತ) ಇವುಗಳನ್ನು ದಾನಮಾಡಬೇಕು.

೧೪೭. ಎಲೌ ಭಾಮಿನಿಯೆ! ಕಾರ್ತಿಕಮಾಸದಲ್ಲಿ ಶರ್ಕರಾಪಾತ್ರವನ್ನೂ, ರಸಭರಿತವಾದ ಕರಕವನ್ನೂ ದಾನಮಾಡಬೇಕು. ಈ ವಿಧದಲ್ಲಿಯೆ ಮಾರ್ಗಶೀರ್ಷ ಮಾಸದಲ್ಲಿ ಕಂಬಳಿಯನ್ನೂ, ಘೃತಪಾತ್ರೆಯನ್ನೂ ದಾನಮಾಡತಕ್ಕದ್ದು.

೧೪೮. ಪುಷ್ಯಮಾಸದಲ್ಲಿ ಕುಂಕುಮವನ್ನೂ, ಮಾಘಮಾಸದಲ್ಲಿ ತಿಲಪಾತ್ರೆಯನ್ನೂ, ಫಾಲ್ಗುನಮಾಸದಲ್ಲಿ ಕಡಬುಗಳು ತುಂಬಿದ ಪಾತ್ರೆಯನ್ನೂ ಕೊಡಬೇಕು.

೧೪೯. ಎಲೌ ಮನೋಹರಳೇ! ಪ್ರತಿಮಾಸದ ತೃತೀಯೆಯಲ್ಲಿಯೂ ದಾನಮಾಡಬೇಕಾದ ಪದಾರ್ಥವನ್ನು ಹಿಂದಿನ ತದಿಗೆಯಲ್ಲಿಯೆ ವರ್ಜ್ಯಮಾಡಬೇಕು. ಇದು ಎಲ್ಲ ತೃತೀಯಗಳಿಗೂ ಸಾಮಾನ್ಯವಾದುದು.

೧೫೦. ಆ ತರುವಾಯ ಅದೇ ಮಧುಕ (ಹಿಪ್ಪೆ)ವೃಕ್ಷದ ಪ್ರತಿಮೆಯನ್ನೇ ಪೂಜಿಸಿ ವ್ರತವನ್ನು ಸಾಂಗಗೊಳಿಸಿದ ಆಚಾರ್ಯನಾದ ವಿಪ್ರನಿಗೆ ದಾನಮಾಡಬೇಕು.

೧೫೧. ಹೀಗೆ ಸಂವತ್ಸರವು ಮುಗಿದ ಬಳಿಕ ಉದ್ಯಾಪನೆಯನ್ನು ಮಾಡಬೇಕು. ಅದರ ವಿಧಾನವನ್ನು ಹೇಳುವೆನು; ಕೇಳು. ಅನೇಕ ಪೂಜೋಪಕರಣಗಳೊಡನೆ ಮಧುವೃಕ್ಷದ ಬಳಿಗೆ ಹೋಗಬೇಕು.

ನಿಖನೇತ್ಪ್ರತಿಮಾಂ ಮಧ್ಯೇ ಮಾಧೂಕೀಂ ಮಧುಕಸ್ಯ ಚ ।
ತತ್ರಸ್ಥಂ ಪೂಜಯೇತ್ಸರ್ವಮುಮಾದೇಹಾರ್ಧಧಾರಿಣಂ ॥ ೧೫೨ ॥
ಪೂಜೋಪಹಾರೈರ್ವಿಪುಲೈಃ ಕುಂಕುಮೇನ ಪುನಃಪುನಃ ।
ಶ್ಲಕ್ಷ್ಣಾಭಿಃ ಪುಷ್ಪಮಾಲಾಭಿಃ ಕೌಸುಂಭೈಃ ಕೇಸರೇಣ ಚ ॥ ೧೫೩ ॥
ಕೌಸುಂಭೇ ವಾಸಸೀ ಶುಭ್ರೇ ಅತಸೀಪುಷ್ಪಸನ್ನಿಭೇ ।
ಪರಿಧಾಪ್ಯ ತಾಂ ಪ್ರತಿಮಾಂ ದಂಪತೀ ರವಿಸಂಖ್ಯಯಾ ॥ ೧೫೪ ॥
ಉಪಾನದ್ಯುಗಲೈಶ್ಛತ್ರೈಃ ಕಂಠಸೂತ್ರೈಃ ಸಕಂಠಿಕೈಃ ।
ಕಟಕೈರಂಗುಲೀಯೈಶ್ಚ ಶಯನೀಯೈಃ ಶುಭಾಸ್ತೃತೈಃ ॥ ೧೫೫ ॥
ಕುಂಕುಮೇನ ವಿಲಿಪ್ತಾಂಗೌ ಬಹುಪುಷ್ಪೈಶ್ಚ ಪೂಜಿತೌ ।
ಭೋಜಯೇದ್ವಿವಿಧೈ ರತ್ನೈರ್ಮಧೂಕಾವಾಸಕೇ ಸ್ಥಿತೌ ॥ ೧೫೬ ॥
ಭುಕ್ತ್ವೋತ್ಥಿತೌ ತು ವಿಶ್ರಾಮ್ಯ ಶಯ್ಯಾಸು ಚ ಕ್ಷಮಾಪಯೇತ್ ।
ಗುರುಮೂಲಂ ಯತಃ ಸರ್ವಂ ಗುರುರ್ಜ್ಞೇಯೋ ಮಹೇಶ್ವರಃ ॥ ೧೫೭ ॥

---

೧೫೨. ಆ ವೃಕ್ಷಮಧ್ಯದಲ್ಲಿ ಮಾಧೂಕಿ (ಉಮಾ) ಮಧುಕ (ಶಂಕರ)ರ ಪ್ರತಿಮೆಯನ್ನು ಕೆತ್ತಿಸಿ ಆ ಬಳಿಕ ಉಮಾರ್ಧದೇಹನಾದ ಆ ಸ್ವಾಮಿಯನ್ನು ಸರ್ವೋಪಚಾರಗಳಿಂದಲೂ ಪೂಜಿಸಬೇಕು.

೧೫೩. ವಿಪುಲವಾದ ಪೂಜೋಪಹಾರಗಳಿಂದಲೂ, ಕುಂಕುಮದಿಂದಲೂ, ನವರಾದ, ಮೃದುವಾದ ಪುಷ್ಪಮಾಲಿಕೆಗಳಿಂದಲೂ, ಕುಸುಂಭ ಮತ್ತು ಕೇಸರ ವರ್ಣದ ಹೂಗಳಿಂದಲೂ ಪುನಃ ಪುನಃ ಆ ಪ್ರತಿಮೆಯನ್ನು ಅರ್ಚಿಸ ಬೇಕು.

೧೫೪. ಅಗಸೆಯ ಹೂವಿಗೆಣೆಯಾದ ಕುಸುಂಭವರ್ಣದ ಶುಭ್ರವಾದ ವಸ್ತ್ರದ್ವಯದಿಂದ ಪ್ರತಿಮೆಯನ್ನು ಅಲಂಕರಿಸಬೇಕು. ಹೀಗೆ ಪೂಜೆಯು ಮುಗಿದ ಬಳಿಕ ಹನ್ನೆರಡು ದಂಪತಿಗಳನ್ನು ಪೂಜಿಸಬೇಕು.

೧೫೫. ದಂಪತಿಗಳಿಗೆ ಪ್ರತಿಯೊಬ್ಬರಿಗೂ, ಪಾದರಕ್ಷೆಗಳು, ಛತ್ರ, ಕಂಠಿ ಯೊಡಗೂಡಿರುವ ಕಂಠಸೂತ್ರ, ಬಳೆ, ಉಂಗುರ, ಮಂಗಳಕರವಾದ ಹಾಸಿಗೆ ಹೊದಿಕೆಗಳು ಮೊದಲಾದುವುಗಳನ್ನು ದಾನಮಾಡಬೇಕು.

೧೫೬. ಅವರಿಗೆ ಕುಂಕುಮಕೇಸರಿ ಗಂಧಾನುಲೇಪನಗಳನ್ನಿತ್ತು ಪೂಸಿ, ಬಹುವಿಧ ಪುಷ್ಪಗಳಿಂದ ಪೂಜಿಸಿ, ಮಧೂಕಾವಾಸದಲ್ಲಿರುವ ಅವರನ್ನು ಅನೇಕ ವಿಧಗಳಾದ ರತ್ನಗಳಿಂದ ಸಂತೋಷಗೊಳಿಸಿ ಭೋಜನ ಮಾಡಿಸ ಬೇಕು.

೧೫೭–೧೫೮. ಅವರು ಭೋಜನಮಾಡಿ ಎದ್ದ ಬಳಿಕ ಅವರನ್ನು ಶಯನ ಗಳಲ್ಲಿ ವಿಶ್ರಮಿಸಿಕೊಳ್ಳಲು ಪ್ರಾರ್ಥಿಸಿ ತರುವಾಯ ಅವರ ಕ್ಷಮಾಪಣೆಯನು

**ಪ್ರೀತೇ ಗುರೌ ತತಃಸರ್ವಂ ಜಗತ್ಪ್ರೀತಂ ಸುರಾಸುರಂ ।**
**ಯದ್ಯದಿಷ್ಟತಮಂ ಲೋಕೇ ಯತ್ಕಿಂಚಿದ್ದಯಿತಂ ಗೃಹೇ ॥ ೧೫೮ ॥**
**ತತ್ಸರ್ವಂ ಗುರವೇ ದೇಯಮಾತ್ಮನಃ ಶ್ರೇಯ ಇಚ್ಛತಾ ।**
**ಇದಂ ತು ಧನಿಭಿರ್ದೇಯಮನ್ಯೈರ್ದೇಯಂ ಯಥೋಚ್ಯತೇ ॥ ೧೫೯ ॥**
**ದಾಂಪತ್ಯಮೇಕಂ ವಿಧಿವತ್ಪ್ರತಿಪೂಜ್ಯ ಶುಭವ್ರತೈಃ ।**
**ದ್ವಿತೀಯಂ ಗುರುದಾಂಪತ್ಯಂ ವಿತ್ತಶಾಠ್ಯಂ ವಿವರ್ಜಯೇತ್ ॥ ೧೬೦ ॥**
**ತತಃ ಕ್ಷಮಾಪಯೇದ್ದೇವೀಂ ದೇವಂ ಚ ಬ್ರಾಹ್ಮಣಂ ಗುರುಂ ।**
**ಯಥಾ ತ್ವಂ ದೇವಿ ಲಲಿತೇ ನ ವಿಯುಕ್ತಾಽಸಿ ಶಂಭುನಾ ।**
**ತಥಾ ಮೇ ಪತಿಪುತ್ರಾಣಾಮವಿಯೋಗಃ ಪ್ರದೀಯತಾಂ ॥ ೧೬೧ ॥**
**ಅನೇನ ವಿಧಿನಾ ಕೃತ್ವಾ ತೃತೀಯಾಂ ಮಧುಸಂಜ್ಞಿಕಾಂ ॥ ೧೬೨ ॥**
**ಇಂದ್ರಾಣೀ ಚೇಂದ್ರಪತ್ನೀತ್ವಮವಾಪ ಸುತಮುತ್ತಮಂ ।**
**ಸೌಭಾಗ್ಯಂ ಸರ್ವಲೋಕೇಷು ಸರ್ವರ್ಧಿಸುಖಮುತ್ತಮಂ ॥ ೧೬೩ ॥**

---

ಕೇಳಿಕೊಳ್ಳಬೇಕು. ಎಲೌ ಮಹಾರಾಜ್ಞಿಯೆ! ಲೋಕದಲ್ಲಿ ಸಮಸ್ತಕ್ಕೂ ಗುರುವೇ ಮೂಲಕಾರಣನು. ಆತನು ಸಾಕ್ಷಾತ್ ಪರಮೇಶ್ವರನೇ ಆಗಿರುವನೆಂದು ತಿಳಿಯತಕ್ಕದ್ದು. ಗುರುವೊಬ್ಬನು ಸುಪ್ರೀತನಾದರೆ ಸುರಾಸುರ ಸಹಿತವಾದ ಜಗತ್ತೇ ಸುಪ್ರೀತವಾಗುವುದು. ಆದುದರಿಂದ ಆ ಗುರುವಿಗೆ ಲೋಕದಲ್ಲಿ ಇಷ್ಟವಾದ ಯಾವ ಯಾವ ವಸ್ತುವಿರುವುದೋ ಅದನ್ನೆಲ್ಲವನ್ನೂ ಕೊಡಬೇಕು. ಇದರಿಂದ ಆತ್ಮಶ್ರೇಯಸ್ಸುಂಟಾಗುವುದು. ಆದರೆ ಇದನ್ನು ಧನಿಕರಾದವರು ಮಾತ್ರ ಕೊಡಬೇಕು. ಇತರರು ಕೊಡಬೇಕಾದುದೇನೆಂಬುದನ್ನು ಹೇಳುವೆನು; ಆಲಿಸು.

೧೬೦. ಇತರರು ಒಂದೇ ಒಂದು ದಂಪತಿಪೂಜೆಯನ್ನು ವಿಧಿವತ್ತಾಗಿ ಮಾಡಬೇಕಲ್ಲದೆ, ಗುರುದಂಪತಿಗಳನ್ನೂ ಅಂತೆಯೇ ಪೂಜಿಸಬೇಕು. ಹೀಗೆ ಮಾಡುವಾಗ ವಿತ್ತಶಾಠ್ಯವನ್ನು ಮಾಡಬಾರದು.

೧೬೧. ಹೀಗೆ ದಂಪತಿಪೂಜೆಯನ್ನು ನೆರವೇರಿಸಿದ ತರುವಾಯ ಲಲಿತಾದೇವಿಯ (ಮಾಧೂಕೀ ನಾಮಕಳಾದ ಉಮಾದೇವಿಯ) ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು. "ಎಲೌ ಲಲಿತಾದೇವಿಯೆ! ನೀನು ಹೇಗೆ ಶಂಭುವಿನಿಂದ ಅವಿಯುಕ್ತಳಾಗಿರುವೆಯೊ ಹಾಗೆ ನನಗೂ ನನ್ನ ಪತಿಪುತ್ರರ ಅವಿಯೋಗವನ್ನು ಅನುಗ್ರಹಿಸು" ಎಂಬುದೇ ಕ್ಷಮಾಪಣೆಯ ಮಂತ್ರವು.

೧೬೨–೧೬೩. ಎಲೌ ದೇವಿಯೆ! ಈ ವಿಧಾನದಿಂದ ಮಧುಕತೃತೀಯಾ ವ್ರತವನ್ನು ಆಚರಿಸಿದ ನಾರಿಯು, ಇಂದ್ರಾಣಿಯು ಇಂದ್ರಪತ್ನೀತ್ವವನ್ನು ಪಡೆದು

ಅನೇನ ವಿಧಿನಾ ಯಾ ತು ಕುಮಾರೀ ವ್ರತಮಾಚರೇತ್ ।
ಶೋಭನಂ ಪತಿಮಾಪ್ನೋತಿ ಯಥೇಂದ್ರಾಣ್ಯಾ ಶತಕ್ರತುಃ ॥ ೧೬೪ ॥
ದುರ್ಭಗಾ ಸುಭಗತ್ವಂ ಚ ಸುಭಗಾ ಪುತ್ರಿಣೀ ಭವೇತ್ ।
ಪುತ್ರಿಣ್ಯಕ್ಷಯಮಾಪ್ನೋತಿ ನ ಶೋಕಂ ಪಶ್ಯತಿ ಕ್ವಚಿತ್ ॥ ೧೬೫ ॥
ಅನೇಕ ಜನ್ಮಜನಿತಂ ದೌರ್ಭಾಗ್ಯಂ ನಶ್ಯತಿ ಧ್ರುವಂ ।
ಮೃತಾ ತು ತ್ರಿದಿವಂ ಪ್ರಾಪ್ಯ ಉಮಯಾ ಸಹ ಮೋದತೇ ॥ ೧೬೬ ॥
ಕಲ್ಪಕೋಟಿಶತಂ ಸಾಗ್ರಂ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಪುನಸ್ತು ಸಂಭವೇ ಲೋಕೇ ಪಾರ್ಥಿವಂ ಪತಿಮಾಪ್ನುಯಾತ್ ॥ ೧೬೭ ॥
ಸುಭಗಾ ರೂಪಸಂಪನ್ನಾ ಪಾರ್ಥಿವಂ ಜನಯೇತ್ಸುತಂ ॥ ೧೬೮ ॥

---

ಉತ್ತಮಪುತ್ರನನ್ನು ಪಡೆದಂತೆ, ಸಮಸ್ತ ಲೋಕಗಳಲ್ಲಿಯೂ ಸೌಭಾಗ್ಯವನ್ನೂ ಸರ್ವಸಮೃದ್ಧಿಯನ್ನೂ ಪಡೆಯುತ್ತಾಳೆ.

೧೬೪. ಈ ಮಧೂಕತೃತೀಯಾವ್ರತವನ್ನು ಕುಮಾರಿಯಾದ ಯಾವ ನಾರಿಯು ಮಾಡುತ್ತಾಳೆಯೋ ಅವಳು ಸ್ವರ್ಗಲೋಕದಲ್ಲಿ ಇಂದ್ರಾಣಿಯು ಸ್ವರ್ಗೇಶ್ವರನಾದ ಇಂದ್ರನನ್ನು ಪತಿಯನ್ನಾಗಿ ಪಡೆದಂತೆ ಉತ್ತಮಪತಿಯನ್ನು ಪಡೆಯುವಳು.

೧೬೫. ಈ ವ್ರತಾಚರಣದಿಂದ ದುರ್ಭಗೆಯೂ ಸೌಭಾಗ್ಯವತಿಯಾಗುವಳು. ಅಪುತ್ರವಂತಳು ಸತ್ಪುತ್ರನನ್ನು ಪ್ರಸವಿಸುವಳು. ಪುತ್ರವತಿಯಾದವಳು ಅಕ್ಷಯವಾದ ಸುಖವನ್ನು ಅನುಭವಿಸುವಳಲ್ಲದೆ ಎಂದಿಗೂ ಶೋಕವೆಂಬುದನ್ನೇ ಕಾಣುವುದಿಲ್ಲವು.

೧೬೬. ಇದರಿಂದ ಅನೇಕ ಜನ್ಮಾರ್ಜಿತವಾದ ದೌರ್ಭಾಗ್ಯವು ನಾಶವಾಗುತ್ತದೆ. ಇದು ಖಂಡಿತವು. ಉತ್ತಮವಾದ ಈ ಮಧೂಕ ವ್ರತವನ್ನು ಮಾಡಿದವಳು ಮೃತಿಹೊಂದಿದ ಬಳಿಕ ಸ್ವರ್ಗಲೋಕವನ್ನು ಸೇರುವಳಲ್ಲದೆ ಉಮಾದೇವಿಯೊಡನೆಯೆ ಸಮಸಮವಾಗಿ ಸಂತೋಷಪಡುವಳು.

೧೬೭. ಒಂದು ನೂರು ಕಲ್ಪಕೋಟಿಗಳ ಕಾಲ ಸಂಪೂರ್ಣವಾಗಿ ಸಮಸ್ತ ಭೋಗಗಳನ್ನೂ ತನ್ನ ಇಚ್ಛಾನುಸಾರವಾಗಿ ಅನುಭವಿಸಿ ಆ ತರುವಾಯ ಭೂಲೋಕದಲ್ಲಿ ಜನಿಸಿ ಅಲ್ಲಿಯೂ ಮಹಾರಾಜನನ್ನೇ ಪತಿಯನ್ನಾಗಿ ಪಡೆಯುವಳು.

೧೬೮. ಆಗಲೂ ಸುಭಗೆಯೂ, ರೂಪಸಂಪನ್ನೆಯೂ ಆಗಿ ಪಾರ್ಥಿವನಾಗುವ ಪುತ್ರನನ್ನೇ ಪ್ರಸವಿಸುವಳು.

**ಏತತ್ತೇ ಕಥಿತಂ ಸರ್ವಂ ವ್ರತಾನಾಮುತ್ತಮಂ ವ್ರತಂ ।**
**ಅನ್ಯತ್ಪೃಚ್ಛಸ್ವ ಸುಭಗೇ ವಾಂಛಿತಂ ಯದ್ಧೃದಿ ಸ್ಥಿತಂ ॥ ೧೬೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಮಧುಕತೃತೀಯಾವ್ರತವಿಧಾನಮಾಹಾತ್ಮ್ಯ ವರ್ಣನಂ"**
**ನಾಮ ಷಡ್ವಿಂಶೋಽಧ್ಯಾಯಃ**

---

೧೬೯. ಎಲೌ ಮಹಾರಾಣಿಯೆ! ಹೀಗೆ ನಿನಗೆ ವ್ರತಗಳಲ್ಲೆಲ್ಲ ಉತ್ತಮೋತ್ತಮವಾದ ಮಧುಕತೃತೀಯಾವ್ರತದ ವಿಧಾನವೆಲ್ಲವನ್ನೂ ಹೇಳಿರುವೆನು. ಓ ಸುಭಗೆಯೆ! ನಿನ್ನ ಮನಸ್ಸಿನಲ್ಲಿರುವ, ಅಥವಾ ನೀನು ಕೇಳಬಯಸುವ ಮತ್ತೇನನ್ನಾದರೂ ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮಧುಕತೃತೀಯಾವ್ರತವಿಧಾನಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶೋಽಧ್ಯಾಯಃ

## ತ್ರಿಪುರಕ್ಷೋಭಣವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ನಾರದಸ್ಯ ವಚಃ ಶ್ರುತ್ವಾ ರಾಜ್ಞೀ ವಚನಮಬ್ರವೀತ್ ।
ಪ್ರಸಾದಂ ಕುರು ವಿಪ್ರೇಂದ್ರ ಗೃಹಾಣ ಚ ಯಥೇಪ್ಸಿತಂ ॥ ೧ ॥
ಸುವರ್ಣಮಣಿರತ್ನಾನಿ ವಸ್ತ್ರಾಣಿ ವಿವಿಧಾನಿ ಚ ।
ತತ್ತೇ ದಾಸ್ಯಾಮಿ ವಿಪ್ರೇಂದ್ರ ಯಚ್ಚಾಽನ್ಯದಪಿ ದುರ್ಲಭಂ ॥ ೨ ॥
ರಾಜ್ಞ್ಯಾಸ್ತು ವಚನಂ ಶ್ರುತ್ವಾ ನಾರದೋ ವಾಕ್ಯಮಬ್ರವೀತ್ ।
ಅನ್ಯೇಷಾಂ ದೀಯತಾಂ ಭದ್ರೇ ಯೇ ದ್ವಿಜಾಃ ಕ್ಷೀಣವೃತ್ತಯಃ ।
ವಯಂ ತು ಸರ್ವಸಂಪನ್ನಾ ಭಕ್ತಿಗ್ರಾಹ್ಯಾಃ ಸದೈವ ಹಿ ॥ ೩ ॥
ಇತ್ಯುಕ್ತಾ ಸಾ ತದಾ ರಾಜ್ಞೀ ವೇದವೇದಾಂಗಪಾರಗಾನ್ ।
ಆಹೂಯ ಬ್ರಾಹ್ಮಣಾನ್ನಿಃಸ್ವಾನ್ದಾತುಂ ಸಮುಪಚಕ್ರಮೇ ॥ ೪ ॥
ಯತ್ಕಿಂಚಿನ್ನಾರದೇನೋಕ್ತಂ ದಾನಂ ಸೌಭಾಗ್ಯವರ್ಧನಂ ।
ತೇನ ದಾನೇನ ಮೇ ನಿತ್ಯಂ ಪ್ರೀಯೇತಾಂ ಹರಿಶಂಕರೌ ॥ ೫ ॥

---

## ಕನ್ನಡದ ಅನುವಾದ

### ತ್ರಿಪುರಕ್ಷೋಭಣವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಧರ್ಮರಾಜನೇ! ನಾರದನ ನುಡಿಗಳನ್ನು ಕೇಳಿ ರಾಣಿಯು ಆ ಮುನಿಯನ್ನು ಕುರಿತು ಹೇಳಿದಳು. "ಎಲೈ ವಿಪ್ರೇಂದ್ರನೇ! ನಿನ್ನ ಇಷ್ಟಾನುಸಾರವಾದ ದಾನವನ್ನು ಸ್ವೀಕರಿಸು.

೨. ಸುವರ್ಣ, ಮಣಿರತ್ನಗಳು, ವಸ್ತ್ರಗಳು, ದುರ್ಲಭವಾದ ಇನ್ನೂ ಇತರ ವಿವಿಧ ವಸ್ತುಗಳು ಎಲ್ಲವನ್ನೂ ನಿನಗೆ ಕೊಡುವೆನು, ಸ್ವೀಕರಿಸು."

೩. ರಾಣಿಯ ಮಾತುಗಳನ್ನು ಕೇಳಿ ನಾರದ ಮುನಿಯು, "ಎಲೌ ಮಂಗಳಕರಳೆ! ಇವೆಲ್ಲವನ್ನೂ, ದರಿದ್ರರಾದ ಇತರ ಬ್ರಾಹ್ಮಣರಿಗೆ ಕೊಡು. ನಾವು ಸರ್ವಸಂಪನ್ನರಾದವರು. ಸತತವೂ ಭಕ್ತಿಯೊಂದನ್ನು ಮಾತ್ರವೇ ಪರಿಗ್ರಹಿಸುವವರು," ಎಂದು ಹೇಳಿದನು.

೪. ಹೀಗೆ ನಾರದನು ಹೇಳಿದ ಬಳಿಕ ಆ ಮಹಾರಾಣಿಯು ದರಿದ್ರರಾದ ವಿಪ್ರೋತ್ತಮರನ್ನು ಕರೆಯಿಸಿ ಸಮಸ್ತ ದಾನಗಳನ್ನೂ ಕೊಡಲುಪಕ್ರಮಿಸಿದಳು.

೫. "ನಾರದಮುನಿಯು ಹೇಳಿದ ಸೌಭಾಗ್ಯವರ್ಧಕವಾದ ಈ ದಾನದಿಂದ ಹರಿಹರರು ಸತತವೂ ತೃಪ್ತಿಗೊಳ್ಳಲಿ" ಎಂದು ಆಕೆಯು ಮನಸಾ ಪ್ರಾರ್ಥಿಸಿದಳು

ತತೋ ರಾಜ್ಞೀ ಚ ಸಾ ಪ್ರಾಹ ನಾರದಂ ಮುನಿಪುಂಗವಂ ॥ ೬ ॥

ರಾಜ್ಞ್ಯುವಾಚ :—

ದಾನಂ ದತ್ತಂ ತ್ವಯೋಕ್ತಂ ಯದ್ಭರ್ತೃಕರ್ಮಪರಂ ಹಿ ತತ್ ।
ಆಜನ್ಮ ಜನ್ಮ ಮೇ ಭರ್ತಾ ಭವೇದ್ಬಾಣೋ ದ್ವಿಜೋತ್ತಮ ॥ ೭ ॥
ನಾಽನ್ಯೋ ಹಿ ದೈವತಂ ತಾತ ಮುಕ್ತ್ವಾ ಬಾಣಂ ದ್ವಿಜೋತ್ತಮ ।
ತೇನ ಸತ್ಯೇನ ಮೇ ಭರ್ತಾ ಜೀವೇಚ್ಚ ಶರದಾಂ ಶತಂ ॥ ೮ ॥
ನಾಽನ್ಯೋ ಧರ್ಮೋ ಭವೇತ್ ಸ್ತ್ರೀಣಾಂ ದೈವತಂ ಹಿ ಪತಿರ್ಯಥಾ ।
ತಥಾಽಪಿ ತವ ವಾಕ್ಯೇನ ದಾನಂ ದತ್ತಂ ಯಥಾವಿಧಿ ॥ ೯ ॥
ಸ್ವಕಂ ಕರ್ಮ ಕರಿಷ್ಯಾಮೋ ಭರ್ತಾರಂ ಪ್ರತಿ ಮಾನದ ।
ಬ್ರಹ್ಮರ್ಷೇ ಗಚ್ಛ ಚೇದಾನೀಂ ತ್ವಮಾಶೀರ್ವಾದಃ ಪ್ರದೀಯತಾಂ॥ ೧೦ ॥
ತಥೇತಿ ತಾಮನುಜ್ಞಾಪ್ಯ ನಾರದೋ ನೃಪಸತ್ತಮ ।
ಸರ್ವಾಸಾಂ ಮಾನಸಂ ಹೃತ್ವಾ ಅನ್ಯತಃ ಕೃತಮಾನಸಃ ।
ಜಗಾಮಾಽದರ್ಶನಂ ವಿಪ್ರಃ ಪೂಜ್ಯಮಾನಸ್ತು ಖೇಚರೈಃ ॥ ೧೧ ॥

---

೬. ಹೀಗೆ ಸಮಸ್ತ ದಾನಗಳನ್ನೂ ಕೊಟ್ಟಾದಮೇಲೆ ಆಕೆಯು ಮುನಿಪುಂಗವನಾದ ನಾರದನನ್ನು ಕುರಿತು ಹೇಳಿದಳು.

೭. ರಾಜ್ಞಿಯು ಹೇಳುತ್ತಾಳೆ:—ಭರ್ತೃವಿನ ಶ್ರೇಯಸ್ಸನ್ನು ಕುರಿತು ನೀನು ಹೇಳಿದ ಎಲ್ಲ ದಾನಗಳನ್ನೂ ಮಾಡಿದ್ದಾಯಿತು. ಅಯ್ಯಾ ದ್ವಿಜೋತ್ತಮನೇ! ಈ ದಾನದ ಫಲವಾಗಿ ನಾನು ಪ್ರಾರ್ಥಿಸುವುದಿಷ್ಟೆ! ಜನ್ಮಜನ್ಮಾಂತರಕ್ಕೂ ಬಾಣನೇ ನನಗೆ ಪತಿಯಾಗಿರಲಿ.

೮–೯. ಎಲೈ ಮುನಿಯೆ! ಸ್ತ್ರೀಯರಿಗೆ ಇದಕ್ಕಿಂತಲೂ ಬೇರೊಂದು ಧರ್ಮವಿರುವುದಿಲ್ಲವು. ನಾರಿಯರಿಗೆ ಭರ್ತನೇ ಪರದೈವವು. ಆದರೂ ನಿನ್ನ ಮಾತಿನಂತೆ ಈ ದಾನವನ್ನು ಯಥಾವಿಧಿಯಾಗಿ ಕೊಟ್ಟುದಾಯಿತು.

೧೦. ಓ ದೇವಮುನಿಯೆ! ನಾವು ಭರ್ತನಿಗಾಗಿಯೇ ನಮ್ಮನಮ್ಮ ಕರ್ಮಗಳನ್ನು ಮಾಡುವೆವು. ಅಯ್ಯಾ ಮಾನದನೇ! ಬ್ರಹ್ಮರ್ಷಿಯಾದ ನೀನು ನಮಗೆ ಆಶೀರ್ವಾದವನ್ನಿತ್ತು ದಯಮಾಡಿಸು.

೧೧. ಇಂತೆಂದ ರಾಣಿಯ ಮಾತುಗಳನ್ನು ಕೇಳಿ ನಾರದಮುನಿಯು ಹಾಗೆಯೇ ಆಗಲೆಂದು ಆಕೆಯ ಅಪ್ಪಣೆಯನ್ನು ಪಡೆದುಕೊಂಡು ಆ ಅಂತಃಪುರದಲ್ಲಿದ್ದ ಸಮಸ್ತ ನಾರಿಯರ ಚಿತ್ತವನ್ನೂ ಅಪಹರಿಸಿಕೊಂಡು ಬೇರೊಂದೆಡೆ ಮನಸ್ಸುಳ್ಳವನಾಗಿ, ದೇವತೆಗಳಿಂದ ಪೂಜಿತನಾಗಿ ಅಲ್ಲಿಯೇ ಅಂತರ್ಧಾನವಾದನು.

**ತತೋ ಗತಮನಸ್ಕಾಸ್ತಾ ಭರ್ತಾರಂ ಪ್ರತಿ ಭಾರತ ।**
**ವಿವರ್ಣಾ ನಿಷ್ಪ್ರಭಾ ಜಾತಾ ನಾರದೇನ ವಿಮೋಹಿತಾಃ ॥ ೧೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ತ್ರಿಪುರಕ್ಷೋಭಣವರ್ಣನಂ"ನಾಮ ಸಪ್ತವಿಂಶೋಽಧ್ಯಾಯಃ**

---

೧೨. ಇತ್ತ ಬಾಣನ ಅಂತಃಪುರಸ್ತ್ರೀಯರೆಲ್ಲರೂ ತಮ್ಮ ಒಡೆಯನಾದ ಬಾಣನ ವಿಷಯದಲ್ಲಿ ಗತಮನಸ್ಕರಾಗಿ ಹೋದರು. ನಾರದನಿಂದ ವಿಮೋಹಿತರಾಗಿ ಅವರೆಲ್ಲರೂ ವಿವರ್ಣರೂ, ಕಾಂತಿಹೀನರೂ ಆದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ತ್ರಿಪುರಕ್ಷೋಭಣವರ್ಣನ"ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟವಿಂಶೋಽಧ್ಯಾಯಃ

## ಜ್ವಾಲೇಶ್ವರತೀರ್ಥಾಽಮರೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಏತಸ್ಮಿನ್ನಂತರೇ ರುದ್ರೋ ನರ್ಮದಾತಟಮಾಸ್ಥಿತಃ ।
ಕ್ರೀಡತೇ ಹ್ಯುಮಯಾ ಸಾರ್ಧಂ ನಾರದಸ್ತತ್ರ ಚಾಗತಃ ॥ ೧ ॥
ಪ್ರಣಮ್ಯ ದೇವದೇವೇಶಮುಮಯಾ ಸಹ ಶಂಕರಂ ।
ವ್ಯಜ್ಞಾಪಯತ್ತದಾ ದೇವಂ ಯದ್ವೃತ್ತಂ ತ್ರಿಪುರೇ ತದಾ ॥ ೨ ॥
ಗತೋಽಹಂ ಸ್ವಾಮಿನಿರ್ದೇಶಾದ್ಯತ್ರ ತದ್ಬಾಣಮಂದಿರಂ ।
ದೃಷ್ಟ್ವಾ ಬಾಣಂ ಯಥಾ ನ್ಯಾಯಂ ಗತೋಹ್ಯಂತಃಪುರಂ ಮಹತ್॥ ೩ ॥
ತತ್ರಭಾರ್ಯಾಸಹಸ್ರಾಣಿ ದೃಷ್ಟ್ವಾ ಬಾಣಸ್ಯ ಧೀಮತಃ ।
ಯಥಾಯೋಗ್ಯಂ ಯಥಾಕಾಮಮಾಗತಃ ಕ್ಷೋಭ್ಯ ತತ್ಪುರಂ ॥ ೪ ॥
ನಾರದಸ್ಯ ವಚಃ ಶ್ರುತ್ವಾ ಸಾಧು ಸಾಧ್ವಿತಿ ಪೂಜಯನ್ ।
ಚಿಂತಯಾಮಾಸ ದೇವೇಶೋ ಭ್ರಮಣಂ ತ್ರಿಪುರಸ್ಯಹಿ ॥ ೫ ॥

---

## ಕನ್ನಡದ ಅನುವಾದ

### ಜ್ವಾಲೇಶ್ವರತೀರ್ಥ ಅಮರೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:— ಈ ಸಮಯದಲ್ಲಿಯೇ ಶ್ರೀ ರುದ್ರನು ಉಮಾದೇವಿಯೊಡಗೂಡಿ ನರ್ಮದಾನದಿಯ ತೀರದಲ್ಲಿ ಕ್ರೀಡಾಸಕ್ತನಾಗಿದ್ದನು. ಆಗ ನಾರದಮುನಿಯು ಅಲ್ಲಿಗೈತಂದನು.

೨ ದೇವದೇವೇಶ್ವರನೂ, ಉಮಾಸಹಿತನೂ ಆದ ಆ ಶಂಕರನನ್ನು ನಮಸ್ಕರಿಸಿ ಆ ಮುನಿಯು ತ್ರಿಪುರದಲ್ಲಿ ನಡೆದ ವೃತ್ತಾಂತವೆಲ್ಲವನ್ನೂ ಆತನಿಗೀ ರೀತಿ ಅರಿಕೆಮಾಡಿದನು.

೩. "ಸ್ವಾಮಿಯ ಅಪ್ಪಣೆಯಂತೆ ಆ ಬಾಣಾಸುರನ ಅರಮನೆಗೆ ಹೋಗಿ ಆತನನ್ನು ಕಂಡು ಆತನ ಅನುಮತಿಯನ್ನು ಪಡೆದೇ ಆತನ ಅಂತಃಪುರಕ್ಕೆಹೋದೆನು.

೪. ಅಲ್ಲಿ ಮಹಾ ಧೀಮಂತನಾದ ಆತನ ಸಹಸ್ರಾರು ಮಂದಿ ಭಾರ್ಯೆಯರನ್ನು ಕಂಡು, ಅವರವರ ಯೋಗ್ಯತೆಗನುಸಾರವಾಗಿಯೂ, ನನ್ನ ಸ್ವೇಚ್ಛೆಯಿಂದಲೂ ಆ ಅಂತಃಪುರದವರೆಲ್ಲರ ಮನಸ್ಸನ್ನೂ ಕಲಿಕಿ ಬಂದಿರುವೆನು."

೫. ಶಂಕರನಾದರೊ ನಾರದನ ಮಾತುಗಳನ್ನು ಕೇಳಿ "ಭಲೆ, ಭಲೇ!" ಎಂದು ಪ್ರಶಂಸಿಸಿ ಆ ಬಳಿಕ ತ್ರಿಪುರದ ಭ್ರಮಣವನ್ನು ಕುರಿತು ತನ್ನ ಮನಸ್ಸಿನಲ್ಲಿಯೇ ಈ ಪ್ರಕಾರವಾಗಿ ಚಿಂತಿಸಿದನು.

ಕರಮುಕ್ತಂ ಯಥಾಚಕ್ರಂ ವಿಷ್ಣುನಾ ಪ್ರಭವಿಷ್ಣುನಾ ।
ಮಹಾವೇಗಂ ಮಹಾಯಾಮಂ ರಕ್ಷಿತಂ ತೇಜಸಾ ಮಮ ॥ ೬ ॥
ಸ ಚ ಮೇ ಭಕ್ತಿನಿರತೋ ಬಾಣೋ ಲೋಕೇ ಚ ವಿಶ್ರುತಃ ।
ಭಾರತೀ ಚ ಮಯಾ ದತ್ತಾ ಬ್ರಾಹ್ಮಣಾನಾಂ ವಿಶೇಷತಃ ॥ ೭ ॥
ಏವಂ ಸ ಸುಚಿರಂ ಕಾಲಂ ದೇವದೇವೋ ಮಹೇಶ್ವರಃ ।
ಚಿಂತಯಿತ್ವಾ ಸುನಿರ್ವಾಣಂ ಕಾರ್ಯಂ ಪ್ರತಿ ಜನೇಶ್ವರಃ ॥ ೮ ॥
ತತೋಽಸೌ ಮಂದರಂ ಧ್ಯಾತ್ವಾ ಚಾಪೇ ಕೃತ್ವಾ ಗುಣೇ ಮಹೀಂ ।
ವಿಷ್ಣುಂ ಸನಾತನಂ ದೇವಂ ಬಾಣೇ ಧ್ಯಾತ್ವಾ ವಿಲೋಚನಃ ॥ ೯ ॥
ಫಲೇ ಹುತಾಶನಂ ದೇವಂ ಜ್ವಲಂತಂ ಸರ್ವತೋ ಮುಖಂ ।
ಸುಪರ್ಣಂ ಪುಂಖಯೋರ್ಮಧ್ಯೇ ಜವೇ ವಾಯುಂ ಪ್ರಕಲ್ಪ್ಯ ಚ ॥ ೧೦ ॥
ರಥಂ ಮಹೀಮಯಂ ಕೃತ್ವಾ ಧುರಿ ತಾವಶ್ವಿನಾವುಭೌ ।
ಅಕ್ಷೇ ಸುರೇಶ್ವರಂ ದೇವಮಗ್ರಕೀಲ್ಯಾಂ ಧನಾಧಿಪಂ ॥ ೧೧ ॥

---

೬. "ಮಹಾ ಪ್ರಭಾವಶಾಲಿಯಾದ ಮಹಾ ವಿಷ್ಣುವಿನ ಕರದಿಂದ ಮುಕ್ತವಾದ ಚಕ್ರಾಯುಧದಂತೆ ಮಹಾ ವೇಗವುಳ್ಳದೂ, ಬಹು ವಿಸ್ತಾರವೂ ಆದ ಆ ತ್ರಿಪುರವು ನನ್ನ ತೇಜಸ್ಸಿನಿಂದ ರಕ್ಷಿತವಾಗಿರುವುದು.

೭. ಬಾಣಾಸುರನಾದರೋ ನನ್ನಲ್ಲಿ ಭಕ್ತಿನಿರತನಾದವನು. ಲೋಕಪ್ರಸಿದ್ಧನಾದವನು. ಆದರೆ ನಾನು ದೇವತೆಗಳಿಗೆ ಅದರಲ್ಲಿಯೂ ಬ್ರಾಹ್ಮಣರಿಗೆ ಆ ತ್ರಿಪುರವನ್ನು ಭೇದಿಸುವೆನೆಂದು ವಚನವಿತ್ತಿರುವೆನು; ಏನು ಮಾಡಲಿ? ತ್ರಿಪುರವನ್ನೆಂತು ಭೇದಿಸಲಿ?"

೮. ದೇವದೇವನಾದ ಮಹೇಶ್ವರನು ಈ ರೀತಿ ಬಹಳಕಾಲ ಯೋಚಿಸುತ್ತಿದ್ದು ಆ ತರುವಾಯ ತ್ರಿಪುರಭೇದನದಲ್ಲಿ ಏನುಮಾಡಬೇಕೆಂಬುದನ್ನು ಚಿಂತಿಸಿ ಒಂದು ನಿರ್ಧರಕ್ಕೆ ಬಂದನು.

೯–೧೦. ತರುವಾಯ ಆ ಸ್ವಾಮಿಯು ಮಂದರ ಪರ್ವತವನ್ನು ಧ್ಯಾನಿಸಿ ಅದನ್ನೇ ಬಿಲ್ಲಾಗಿಸಿದನು. ಭೂಮಿಯನ್ನು ನಾರಿಯನ್ನಾಗಿ ಮಾಡಿದನು. ಆ ತ್ರಿಲೋಚನನು ಸನಾತನನಾದ ವಿಷ್ಣುವನ್ನು ಧ್ಯಾನಿಸಿ ಅವನನ್ನು ಬಾಣವನ್ನಾಗಿಸಿದನು. ಸರ್ವತೋಮುಖನೂ, ಪ್ರಜ್ವಲಿಸುತ್ತಿರುವನೂ ಆದ ಅಗ್ನಿಯನ್ನು ಆ ಬಾಣಾಗ್ರದಲ್ಲಿ ಯೋಜಿಸಿದನು. ಆ ಬಾಣದ ಗರಿಗಳ ನಡುವೆ ಗರುಡನನ್ನೇ ನೆಲೆಗೊಳಿಸಿ ವಾಯುದೇವನನ್ನು ಅದರ ವೇಗವನ್ನಾಗಿ ಮಾಡಿದನು.

೧೧. ಭೂಮಂಡಲವನ್ನೇ ರಥವನ್ನಾಗಿಸಿ ಅದರ ಅಚ್ಚಿನ ಮರದಲ್ಲಿ ಅಶ್ವಿನೀ ದೇವತೆಗಳಿಬ್ಬರನ್ನೂ ಯೋಜಿಸಿದನು. ದೇವೇಂದ್ರನನ್ನು ಕಡಾಣಿಯನ್ನಾಗಿಸಿದನು. ಆ ಕಡಾಣಿಯ ಮುಂಭಾಗದಲ್ಲಿ ಕುಬೇರನನ್ನು ಯೋಜಿಸಿದನು.

ಯಮಂ ತು ದಕ್ಷಿಣೇ ಪಾರ್ಶ್ವೇ ವಾಮೇ ಕಾಲಂ ಸುದಾರುಣಂ ।
ಆದಿತ್ಯಚಂದ್ರೌ ಚಕ್ರೇ ತು ಗಂಧರ್ವಾನಾರಕಾದಿಷು ॥ ೧೨ ॥
ಯಂತಾರಂ ಚ ಸುರಜ್ಯೇಷ್ಠಂ ವೇದಾನ್ಕೃತ್ವಾ ಹಯೋತ್ತಮಾನ್ ।
ಖಲೀನಾದಿಷು ಚಾಂಗಾನಿ ರಶ್ಮೀಂಶ್ಛಂದಾಂಸಿ ಚಾಕರೋತ್ ॥ ೧೩ ॥
ಕೃತ್ವಾ ಪ್ರತೋದಮೋಂಕಾರಂ ಮುಖಗ್ರಾಹ್ಯಂ ಮಹೇಶ್ವರಃ ।
ಧಾತಾರಂ ಚಾಗ್ರತಃ ಕೃತ್ವಾ ವಿಧಾತಾರಂ ಚ ಪೃಷ್ಠತಃ ॥ ೧೪ ॥
ಮಾರುತಾತ್ಸರ್ವತೋ ದಿಗ್ಭ್ಯ ಊರ್ಧ್ವಯಂತ್ರೇ ತಥೈವ ಚ ।
ಮಹೋರಗಪಿಶಾಚಾಂಶ್ಚ ಸಿದ್ಧವಿದ್ಯಾಧರಾಂಸ್ತಥಾ ॥ ೧೫ ॥
ಗಣಾಂಶ್ಚ ಭೂತಸಂಘಾಂಶ್ಚ ಸರ್ವೇ ಸರ್ವಾಂಗಸಂಧಿಷು ।
ಯುಗಮಧ್ಯೇ ಸ್ಥಿತೋ ಮೇರುರ್ಯುಗಸ್ಯಾಧೋ ಮಹಾಗಿರಿಃ ॥ ೧೬ ॥
ಸರ್ಪಾ ಯಂತ್ರಸ್ಥಿತಾ ಘೋರಾಃ ಶಮ್ಯೇ ವರುಣನೈಋತೌ ।
ಗಾಯತ್ರೀ ಚೈವ ಸಾವಿತ್ರೀ ಸ್ಥಿತೇ ತೇ ರಶ್ಮಿಬಂಧನೇ ॥ ೧೭ ॥

---

೧೨. ಮಹಾರಾಜ! ಯಮನನ್ನು ಬಲಪಾರ್ಶ್ವದಲ್ಲಿಯೂ, ಮಹಾಭಯಂಕರನಾದ ಕಾಲನನ್ನು ಎಡಪಾರ್ಶ್ವದಲ್ಲಿಯೂ ನೆಲೆಗೊಳಿಸಿದನು. ತರುವಾಯ ಆ ಸ್ವಾಮಿಯು ಸೂರ್ಯ ಚಂದ್ರರನ್ನೇ ಚಕ್ರಗಳನ್ನಾಗಿ ಮಾಡಿ, ಅವುಗಳ ಅರಗಳಲ್ಲಿ ಗಂಧರ್ವರನ್ನು ಯೋಜಿಸಿದನು.

೧೩. ಬ್ರಹ್ಮನನ್ನು ಸಾರಥಿಯನ್ನಾಗಿ ಮಾಡಿದನು. ಋಗ್ಯಜುಸ್ಸಾಮಾಥರ್ವಣಗಳೆಂಬ ಚತುರ್ವೇದಗಳನ್ನು ಕುದುರೆಗಳನ್ನಾಗಿಸಿದನು. ವೇದಾಂಗಗಳನ್ನು ಕಡಿವಾಣಗಳನ್ನಾಗಿ ಮಾಡಿ, ಛಂದಸ್ಸುಗಳನ್ನೇ ಹಗ್ಗಗಳನ್ನಾಗಿಸಿದನು.

೧೪. ಓಂಕಾರವನ್ನೇ ಮುಖಗ್ರಾಹ್ಯವಾದ ಚಾವುಟಿಯನ್ನಾಗಿ ಮಾಡಿಕೊಂಡನು. ರಥದ ಮುಂಭಾಗ ಹಿಂಭಾಗಗಳಲ್ಲಿ ಧಾತೃ ವಿಧಾತೃಗಳನ್ನು ನಿಲ್ಲಿಸಿದನು.

೧೫. ದಶದಿಶೆಗಳಲ್ಲಿಯೂ ಮರುದ್ಗಣಗಳನ್ನು ನೆಲೆಗೊಳಿಸಿದ ಬಳಿಕ ರಥದ ಊರ್ಧ್ವಭಾಗದಲ್ಲಿ ಮಹೋರಗರನ್ನೂ, ಪಿಶಾಚರನ್ನೂ, ಸಿದ್ಧವಿದ್ಯಾಧರ ಸಮೂಹಗಳನ್ನೂ ನೆಲೆಗೊಳಿಸಿದನು.

೧೬. ಶಿವಗಣಗಳನ್ನೂ, ಭೂತಸಂಘಗಳನ್ನೂ ಆ ರಥದ ಸರ್ವಾಂಗ ಸಂಧಿಗಳಲ್ಲಿಯೂ ಯೋಜಿಸಿದನು. ನೊಗದ ನಡುವೆಯೂ, ನೊಗದಡಿಯಲ್ಲಿಯೂ ಮಹಾ ಗಿರಿಯಾದ ಮೇರುವೇ ನಿಲ್ಲುವಂತೆ ಮಾಡಿದನು.

೧೭. ಮಹಾ ಘೋರಗಳಾದ ಸರ್ಪಗಳು ಯಂತ್ರದಲ್ಲಿದ್ದುವು. ವರುಣ ನೈಋತರು ನೊಗದ ಕಣ್ಣಿಗೆ ತಗುಲುಹಾಕುವ ಮೊಳೆಗಳಾದರು. ಗಾಯತ್ರೀ ಸಾವಿತ್ರೀದೇವಿಯರು ಹಗ್ಗದ ಗಂಟುಗಳಲ್ಲಿ ನಿಂತರು.

**ಸತ್ಯಂ ರಥಧ್ವಜೇ ಶೌಚಂ ದಮಂ ರಕ್ಷಾಂ ಸಮಂತತಃ ।**
**ರಥಂ ದೇವಮಯಂ ಕೃತ್ವಾ ದೇವದೇವೋ ಮಹೇಶ್ವರಃ ॥ ೧೮ ॥**
**ಸನ್ನದ್ಧಃ ಕವಚೀ ಖಡ್ಗೀ ಬದ್ಧಗೋಧಾಂಗುಲಿತ್ರವಾನ್ ।**
**ಬದ್ಧ್ವಾ ಪರಿಕರಂ ಗಾಢಂ ಜಟಾಜೂಟಂ ನಿಯಮ್ಯ ಚ ॥ ೧೯ ॥**
**ಸಜ್ಜಂ ಕೃತ್ವಾ ಧನುರ್ದಿವ್ಯಂ ಯೋಜಯಿತ್ವಾ ರಥೋತ್ತಮಂ ।**
**ರಥಮಧ್ಯೇ ಸ್ಥಿತೋ ದೇವಃ ಶುಶುಭೇ ಚ ಯುಧಿಷ್ಠಿರ ॥ ೨೦ ॥**
**ಧನುಷಃ ಶಬ್ದನಾದೇನಾಽಕಂಪಯಚ್ಚ ಜಗತ್ರಯಂ ।**
**ಸ್ಥಾನಂ ಕೃತ್ವಾತು ವೈಶಾಖಂ ನಿಭೃತಂ ಸಂಸ್ಥಿತೋ ಹರಃ ॥ ೨೧ ॥**
**ನಿರೀಕ್ಷ್ಯ ಸುಚಿರಂ ಕಾಲಂ ಕೋಪಸಂರಕ್ತಲೋಚನಃ ।**
**ಧ್ಯಾತ್ವಾ ತಂ ಪರಮಂ ಮಂತ್ರಮಾತ್ಮಾನಂ ಚ ನಿರುಧ್ಯ ಸಃ ॥ ೨೨ ॥**
**ಮುಮೋಚ ಸಹಸಾ ಬಾಣಂ ಪುರಸ್ಯ ವಧಕಾಂಕ್ಷಯಾ ।**
**ಯದಾ ತ್ರೀಣಿ ಸಮೇತಾನಿ ಅಂತರಕ್ಷಸ್ಥಿತಾನಿ ತು ॥ ೨೩ ॥**

---

೧೮. ಆ ಮಹಾರಥದ ಧ್ವಜದಲ್ಲಿ ಸತ್ಯವನ್ನು ಪ್ರತಿಷ್ಠಿಸಿ, ಶೌಚವನ್ನೂ, ದಮವನ್ನೂ ಅದಕ್ಕೆ ಸುತ್ತಲೂ ರಕ್ಷೆಯನ್ನಾಗಿಸಿದನು. ಹೀಗೆ ದೇವದೇವನಾದ ಆ ಮಹೇಶ್ವರನು ದೇವಮಯವಾದ ರಥವನ್ನು ಸಿದ್ಧಗೊಳಿಸಿದನು.

೧೯. ಅಯ್ಯಾ ಯುಧಿಷ್ಠಿರನೇ! ಹೀಗೆ ರಥವು ಸಿದ್ಧವಾದ ಬಳಿಕ ಆ ಸ್ವಾಮಿಯು ಕವಚವನ್ನು ತೊಟ್ಟು, ಖಡ್ಗವನ್ನು ಧರಿಸಿ, ಕೈಗೆ ತೊಗಲಿನ ಚೀಲವನ್ನು ಹಾಕಿಕೊಂಡು, ದಟ್ಟಿಯನ್ನು ಬಿಗಿಸಿ ಕಟ್ಟಿ, ಜಟಾಜೂಟವನ್ನು ಬಿಗಿದು ಸನ್ನದ್ಧನಾದನು.

೨೦. ತರುವಾಯ ದಿವ್ಯವಾದ ಆ ಧನುಸ್ಸನ್ನು ಸಜ್ಜುಗೊಳಿಸಿ ರಥವನ್ನೇರಿ ಅದರ ನಡುವೆ ನಿಂತು ಆ ದೇವನು ವಿರಾಜಿಸಿದನು.

೨೧. ಆಗಲಾ ಪರಶಿವನು ಆ ದಿವ್ಯ ಧನುಸ್ಸಿನ ಠೇಂಕಾರದಿಂದ ಜಗತ್ತ್ರಯವನ್ನೂ ನಡುಗಿಸಿದನು. ಬಳಿಕ ವೈಶಾಖ ಮಾಸವನ್ನೇ ಸಮಯವನ್ನಾಗಿ ಮಾಡಿಕೊಂಡು ನಿಭೃತವಾಗಿದ್ದನು.

೨೨. ಹೀಗೆ ಬಹಳ ಕಾಲ ನಿರೀಕ್ಷಿಸುತ್ತಿದ್ದು ಕೋಪದಿಂದ ಕೆಂಪಡರಿದ ಕಂಗಳುಳ್ಳವನಾಗಿ ಪರಮ ಮಂತ್ರವಾದ ಪ್ರಣವವನ್ನು ಧ್ಯಾನಿಸಿ ಆತ್ಮನಿರೋಧವನ್ನು ಮಾಡಿದನು.

೨೩–೨೪. ಆ ತ್ರಿಪುರಗಳೂ ಅಂತರಿಕ್ಷದಲ್ಲಿ ಒಂದೆಡೆಗೇ ಬಂದು ಸೇರುವ ವರೆಗೂ ಹೀಗೆ ಅವುಗಳನ್ನೇ ನಟ್ಟನೆ ನೋಡುತ್ತಿದ್ದು ಅವು ಹಾಗೆ ಸೇರಿದ ನಿಮೇಷಾರ್ಧಕಾಲದಲ್ಲಿಯೆ ಆ ಪರಮೇಶ್ವರನು ತ್ರಿಪರ್ವಗಳೂ, ತ್ರಿಶಲ್ಯಗಳೂ

ತತಃ ಕಾಲನಿಮೇಷಾರ್ಧಂ ದೃಷ್ಟ್ವೈಕ್ಯಂ ತ್ರಿಪುರಸ್ಯ ಚ ।
ತ್ರಿಪರ್ವಣಾ ತ್ರಿಶಲ್ಯೇನ ತತಸ್ತಾನ್ಯವಸಾದಯತ್ ॥ ೨೪ ॥
ತತೋ ಲೋಕಾ ಭಯತ್ರಸ್ತಾ ತ್ರಿಪುರೇ ಭರತೋತ್ತಮ ।
ಸರ್ವಾಸುರವಿನಾಶಾಯ ಕಾಲರೂಪಾ ಭಯಾವಹಾಃ ॥ ೨೫ ॥
ಅಟ್ಟಹಾಸಾನ್ ಪ್ರಮುಂಚಂತಿ ಕಷ್ಟರೂಪಾ ನರಾಸ್ತದಾ ।
ನಿಮೇಷೋನ್ಮೇಷಣಂ ಚೈವ ಕುರ್ವಂತಿ ಲಿಪಿಕರ್ಮಸು ॥ ೨೬ ॥
ನಿಷ್ಪಂದನಯನಾ ಮರ್ತ್ಯಾಶ್ಚಿತ್ರೇಷ್ವಾಲಿಖಿತಾ ಇವ ।
ದೇವಾಯತನಗಾ ದೇವಾ ರಟಂತಿ ಪ್ರಹಸಂತಿ ಚ ।
ಸ್ವಪ್ನೇ ಪಶ್ಯಂತಿಚಾತ್ಮಾನಂ ರಕ್ತಾಂಬರವಿಭೂಷಿತಂ ॥ ೨೭ ॥
ರಕ್ತ ಮಾಲ್ಯೋತ್ತಮಾಂಗಾಶ್ಚ ಪತಂತಃ ಕಾರ್ದಮೇ ಹ್ರದೇ ।
ಪಶ್ಯಂತಿ ನಾಮ ಚಾತ್ಮಾನಂ ಸ ತೈಲಾಭ್ಯಂಗಮಸ್ತಕಂ ॥ ೨೮ ॥
ಪಶ್ಯಂತಿ ಯಾನಮಾರೂಢಂ ರಾಸಭೈಶ್ಚ ನೃಪೋತ್ತಮ ।
ಸಂವರ್ತಕೋ ಮಹಾವಾಯುರ್ಯುಗಾಂತಪ್ರತಿಮೋ ಮಹಾನ್ ॥೨೯॥

---

ಉಳ್ಳ ಬಾಣವನ್ನು ಆ ತ್ರಿಪುರಗಳ ವಧವನ್ನು ಬಯಸಿ, ಪ್ರಯೋಗಮಾಡಿ ಅವುಗಳನ್ನು ನಾಶಗೊಳಿಸಿದನು.

೨೫-೨೬. ಎಲೈ ಭರತೋತ್ತಮನೇ! ಹೀಗೆ ಪರಶಿವನು ಬಾಣಪ್ರಯೋಗ ಮಾಡಿದ ಸಮನಂತರದಲ್ಲಿ, ಅತ್ತ ತ್ರಿಪುರಗಳಲ್ಲಿದ್ದ ಸಮಸ್ತ ಪ್ರಜೆಗಳೂ ಭಯಪೀಡಿತರಾದರು. ಸಮಸ್ತ ಅಸುರರ ವಿನಾಶಕ್ಕಾಗಿಯೇ ಅನೇಕ ಅಪಶಕುನಗಳಾದುವು. ಚಿತ್ರಗಳಲ್ಲಿರುವರೂ, ಭಯಂಕರರೂ, ಆದ ಪುರುಷರು ವಿಕಾರ ರೂಪಗಳುಳ್ಳವರಾಗಿ ಅಟ್ಟಹಾಸಗಳನ್ನು ಮಾಡುವರು; ನಿಮೇಷೋನ್ಮೇಷಣವನ್ನೂ ಮಾಡುವರು.

೨೭. ಮರ್ತ್ಯರೆಲ್ಲರೂ ಚಿತ್ರಗಳಲ್ಲಿ ಬರೆಯಲ್ಪಟ್ಟವರಂತೆ ನಿಷ್ಪಂದನೇತ್ರಗಳುಳ್ಳವರಾಗಿರುವರು. ದೇವಾಲಯಗಳಲ್ಲಿರುವ ದೇವತಾ ಪ್ರತಿಮೆಗಳೆಲ್ಲ ಓಡಾಡುತ್ತಿರುವುವಲ್ಲದೆ, ಕಿಲಕಿಲನೆ ನಗುತ್ತಿರುವುವು. ಪ್ರಜೆಗಳೆಲ್ಲರೂ ಕೆಂಪು ಬಟ್ಟೆಯನ್ನುಟ್ಟವರಂತೆ ತಮ್ಮನ್ನು ತಾವೇ ಸ್ವಪ್ನದಲ್ಲಿ ಕಾಣುವರು.

೨೮. ಅಲ್ಲದೆ ರಕ್ತಾಂಬರಧಾರಿಗಳಾಗಿ, ರಕ್ತಪುಷ್ಪಗಳ ಮಾಲಿಕೆಗಳನ್ನು ಧರಿಸಿ ಕೆಸರಿನ ಕೊಳವಲ್ಲಿ ತೈಲಾಭ್ಯಂಗವನ್ನು ತಳೆದ ತಲೆಗಳುಳ್ಳವರಾಗಿ ಬೀಳುತ್ತಿರುವಂತೆ ಕನಸು ಕಾಣುವರು.

೨೯-೩೦. ಇಷ್ಟೆಯಲ್ಲದೆ ಕತ್ತೆಗಳು ಹೂಡಿದ ರಥಗಳಲ್ಲಿ ಕುಳಿತು ಹೋಗುತ್ತಿರುವಂತೆಯೂ ಅವರಿಗೆ ಕನಸಾಗುತ್ತಿರುವುದು. ಅಪ್ರತಿಮವೂ, ಮಹತ್ತರವೂ

ಗೃಹಾನುನ್ಮೂಲಯಾಮಾಸ ವೃಕ್ಷಜಾತೀನನೇಕಶಃ ।
ಭೂಮಿಕಂಪಾಃ ಸನಿರ್ಘಾತಾ ಉಲ್ಕಾಪಾತಾಃ ಸಹಸ್ರಶಃ ॥ ೩೦ ॥
ರುಧಿರಂ ವರ್ಷತೇ ದೇವೋ ಮಿಶ್ರಿತಂ ಕರ್ಕರೈರ್ಬಹು ।
ಅಗ್ನಿಕುಂಡೇಷು ವಿಪ್ರಾಣಾಂ ಹುತಃ ಸಮ್ಯಗ್ಘುತಾಶನಃ ॥ ೩೧ ॥
ಜ್ವಲತೇ ಧೂಮಸಂಯುಕ್ತೋ ವಿಸ್ಫುಲಿಂಗಕಣೈಃ ಸಹ ।
ಕುಂಜರಾ ವಿಮದಾ ಜಾತಾಸ್ತುರಗಾಃ ಸತ್ವವರ್ಜಿತಾಃ ॥ ೩೨ ॥
ಅವಾದಿತಾನಿ ವಾದ್ಯಂತೇ ವಾದಿತ್ರಾಣಿ ಸಹಸ್ರಶಃ ।
ಧ್ವಜಾಃ ಹ್ಯಕಂಪಿತಾಃ ಪೇತುಶ್ಛತ್ರಾಣಿ ವಿವಿಧಾನಿ ಚ ॥ ೩೩ ॥
ಜ್ವಲಂತಿ ಪಾದಪಾಸ್ತತ್ರ ಪರ್ಣಾನಿ ಚ ಸಮಂತತಃ ।
ಸರ್ವಂ ತದ್ವ್ಯಾಕುಲೀಭೂತಂ ಹಾಹಾಕಾರಸಮನ್ವಿತಂ ॥ ೩೪ ॥
ಉದ್ಯಾನಾನಿ ವಿಚಿತ್ರಾಣಿ ಪ್ರಬಭಂಜ ಪ್ರಭಂಜನಃ ।
ತೇನ ಸಂಪ್ರೇರಿತಾಃ ಸರ್ವೇ ಜ್ವಲಂತಿ ವಿಶಿಖಾಃ ಶಿಖಾಃ ॥ ೩೫ ॥
ವೃಕ್ಷಗುಲ್ಮವತಾ ವಲ್ಲ್ಯೋ ಗೃಹಾಣಿ ಚ ಸಮಂತತಃ ।
ದಿಗ್ವಿಭಾಗೈಶ್ಚ ಸರ್ವೈಶ್ಚ ಪ್ರವೃತ್ತೋ ಹವ್ಯವಾಹನಃ ॥ ೩೬ ॥

---

ಆದ ಸಂವರ್ತಕ ಮಾರುತವಾದರೋ ಆ ಪಟ್ಟಣದ ಮನೆಗಳನ್ನೂ, ಬಗೆ ಬಗೆಯ ಮರಗಳನ್ನೂ ಬುಡಸಹಿತ ಕಿತ್ತೊಗೆಯತೊಡಗಿತು. ಭೂಮಿಕಂಪಗಳುಂಟಾದುವು. ಸಿಡಿಲೊಡಗೂಡಿದ ಸಹಸ್ರಾರು ಉಲ್ಕೆಗಳು ಬಿದ್ದುವು.

೩೧–೩೩. ಪರ್ಜನ್ಯದೇವನು ಅನೇಕಲ್ಲೊಡಗೂಡಿದ ರಕ್ತವರ್ಷವನ್ನು ಸುರಿಸಿದನು. ವಿಪ್ರರ ಅಗ್ನಿಕುಂಡಗಳಲ್ಲಿ ಚೆನ್ನಾಗಿ ಹುತಗೊಳಿಸಿದರೂ ಅಗ್ನಿಯು ಕಿಡಿಗಳನ್ನುಗುಳುತ್ತ ಹೊಗೆಯೊಡಗೂಡಿ ಜ್ವಲಿಸುವುದು. ಆನೆಗಳು ಮದವುಡಗಿರುವುವು. ಕುದುರೆಗಳು ದುರ್ಬಲವಾಗಿರುವುವು. ನುಡಿಸದಿದ್ದರೂ ಸಹಸ್ರಾರು ವಾದ್ಯಗಳು ನುಡಿಯುತ್ತಿರುವುವು. ಕದಲದಿದ್ದರೂ ಬಗೆ ಬಗೆಯ ಧ್ವಜಗಳೂ, ಛತ್ರಗಳೂ ಇದ್ದಕ್ಕಿದ್ದಂತೆಯೇ ಮುರಿದು ನೆಲಕ್ಕುರುಳುತ್ತಿರುವುವು.

೩೪. ಹಸಿಯೆಲೆಗಳೊಡಗೂಡಿಯೆ ಅಲ್ಲಿಯ ಮರಗಳೆಲ್ಲವೂ ಹೊತ್ತಿಕೊಂಡು ಉರಿಯುತ್ತಿರುವುವು. ಹೀಗೆ ಆ ತ್ರಿಪುರಗಳಲ್ಲಿ ಎಲ್ಲವೂ ವ್ಯಾಕುಲಗೊಂಡುವು. ಅಲ್ಲದೆ ಎತ್ತ ನೋಡಿದರೂ ಹಾಹಾಕಾರಗಳೇ ತುಂಬಿಹೋದುವು.

೩೫. ವಾಯುವು ಆ ಪಟ್ಟಣಗಳ ಉದ್ಯಾನವನಗಳೆಲ್ಲವನ್ನೂ ಧ್ವಂಸಗೊಳಿಸಿದನು. ಆ ವಾಯುವಿನಿಂದ ಹರಡಿದ ಜ್ವಾಲೆಗಳು ಕಿಡಿಗಳನ್ನುಗುಳುತ್ತ ಪ್ರಜ್ವಲಿಸತೊಡಗಿದುವು.

೩೬. ಮರಗಳು, ಪೊದೆಗಳು, ಬಳ್ಳಿಗಳು, ಮನೆಗಳು ಎಲ್ಲವೂ ಎಲ್ಲೆಡೆಯೂ ಉರಿಯತೊಡಗಿದುವು. ಬೆಂಕಿಯು ಎಲ್ಲ ದಿಕ್ಕುಗಳಿಗೂ ಹರಡಿತು.

ಸರ್ವಂ ಕಿಂಶುಕಪರ್ಣಾಭಂ ಪ್ರಜ್ವಲಚ್ಚೈವ ದೃಶ್ಯತೇ ।
ಗೃಹಾದ್ಗೃಹಂ ತದಾ ಗಂತುಂ ನೈವ ಧೂಮೇನ ಶಕ್ಯತೇ ॥ ೩೭ ॥
ಹರಕೋಪಾಗ್ನಿನಿರ್ದಗ್ಧಾಃ ಕ್ರಂದಂತೇ ತ್ರಿಪುರೇ ಜನಾಃ ।
ಪ್ರದೀಪ್ತಂ ಸರ್ವತೋ ದಿಕ್ಷು ದಹ್ಯತೇ ತ್ರಿಪುರಂ ಪರಂ ॥ ೩೮ ॥
ಪತಂತಿ ಶಿಖರಾಗ್ರಾಣಿ ವಿಶೀರ್ಣಾನಿ ಸಹಸ್ರಶಃ ।
ಪಾವಕೋ ಧೂಮಸಂಪೃಕ್ತೋ ದಹ್ಯಮಾನಃ ಸಮಂತತಃ ॥ ೩೯ ॥
ನೃತ್ಯನ್ನಿವ ವ್ಯಾಪ್ತದಿಗ್ದೇಶಃ ಕಾಂತಾರೇಷ್ವಭಿಧಾವತಿ ।
ದೇವಾಗಾರೇಷು ಸರ್ವೇಷು ಗೃಹೇಷ್ವಟ್ಟಾಲಕೇಷು ಚ ॥ ೪೦ ॥
ಪ್ರವೃತ್ತೋ ಹುತಭುಕ್ತತ್ರ ಪುರೇ ಕಾಲಪ್ರಚೋದಿತಃ ।
ದದಾಹ ಲೋಕಾನ್ ಸರ್ವತ್ರ ಹರಕೋಪಪ್ರಕೋಪಿತಃ ॥ ೪೧ ॥
ದಹ್ಯತೇ ತ್ರೈಪುರಂ ಲೋಕಂ ಬಾಲವೃದ್ಧಸಮನ್ವಿತಂ ।
ಸಪುರಂ ಸಗೃಹದ್ವಾರಂ ಸವಾಹನವನಂ ನೃಪ ॥ ೪೨ ॥
ಕೇಚಿದ್ಭೋಜನಸಕ್ತಾಶ್ಚ ಪಾನಾಸಕ್ತಾಸ್ತಥಾಪರೇ ।
ಅಪರಾ ನೃತ್ಯಗೀತೇಷು ಸಂಸಕ್ತಾ ವಾರಯೋಷಿತಃ ॥ ೪೩ ॥

---

೩೭. ಪಟ್ಟಣಕ್ಕೆ ಪಟ್ಟಣವೇ ಕಿಂಶುಕವೃಕ್ಷದ ಎಲೆಗಳಂತೆ ಕೆಂಬಣ್ಣವುಳ್ಳದ್ದಾಗಿ ಉರಿಯುತ್ತಿರುವುದು ಕಂಡುಬಂದಿತು. ಎತ್ತೆತ್ತಲೂ ಹೊಗೆಯೇ ತುಂಬಿದ್ದುದರಿಂದ ಮನೆಯಿಂದ ಮನೆಗೆ ಹೋಗಲು ಸಾಧ್ಯವಾಗುತ್ತಿರಲಿಲ್ಲವು.

೩೮. ಹರನ ಕೋಪಾಗ್ನಿಗೆ ಸಿಕ್ಕಿ ಸುಟ್ಟುಹೋಗುತ್ತಿದ್ದ ಅಲ್ಲಿಯ ಜನರೆಲ್ಲ ಅರಚಿಕೊಳ್ಳುತ್ತಿದ್ದರು. ತ್ರಿಪುರಗಳು ಎಲ್ಲ ದಿಕ್ಕುಗಳಲ್ಲಿಯೂ ಬಹಳವಾಗಿ ಉರಿಯತೊಡಗಿತು.

೩೯. ಮನೆಗಳ ಉಪ್ಪರಿಗೆಗಳೆಲ್ಲವೂ ಸಾವಿರಾರು ಚೂರುಗಳಾಗಿ ನೆಲಕ್ಕೆ ಬೀಳುತ್ತಿದ್ದುವು. ಅಲ್ಲಿ ಎಲ್ಲವೂ ಹೊಗೆಯೊಡಗೂಡಿ ಎತ್ತೆತ್ತಲೂ ಸುಡುತ್ತಿದ್ದಿತು.

೪೦–೪೧. ಹೀಗೆ ವ್ಯಾಪಿಸಿದ ಬೆಂಕಿಯು ನರ್ತಿಸುತ್ತ ಕಾಡುಗಳಿಗೂ ನುಗ್ಗಿ ಹೊರಟಿತು. ಕಾಲಪ್ರಚೋದಿತವೂ, ಹರಕೋಪದಿಂದ ಕೆರಳಿದುದೂ ಆಗಿ ದೇವಾಲಯಗಳಲ್ಲಿಯೂ, ಎಲ್ಲಮನೆಗಳ ಮತ್ತು ಮನೆಗಳ ಉಪ್ಪರಿಗೆಗಳಲ್ಲಿಯೂ ಸ್ಥಿಬಿಡೀಕೃತವಾಗಿ ಆ ಬೆಂಕಿಯು ಆ ತ್ರಿಪುರಗಳಲ್ಲಿದ್ದ ಸಮಸ್ತ ಪ್ರಜೆಗಳನ್ನೂ ಸುಟ್ಟುಹಾಕಿತು.

೪೨. ಮಹಾರಾಜ! ಬಾಲವೃದ್ಧಸಮನ್ವಿತವೂ, ಗೃಹದ್ವಾರ, ವಾಹನ ಸಹಿತವೂ ಆದ ಆ ತ್ರಿಪುರವು ಬೆಂಕಿಯಿಂದ ಸುಟ್ಟುಹೋಗುತ್ತಿದ್ದಿತು.

೪೩–೪೪. ಆ ಸಮಯದಲ್ಲಿ ಮನೆಗಳಲ್ಲಿ ಕುಳಿತು ಭೋಜನಮಾಡುತ್ತಿದ್ದವರು ಕೆಲವರು; ಕುಡಿಯುತ್ತಿದ್ದವರು ಕೆಲವರು; ನೃತ್ಯಗೀತಗಳಲ್ಲಿ ತೊಡಗಿದ್ದ

ಅನ್ಯೋನ್ಯಂ ಚ ಪರಿಷ್ವಜ್ಯ ಹುತಾಶನಶಿಖಾರ್ದಿತಾಃ ।
ದಹ್ಯಮಾನಾ ನೃಪಶ್ರೇಷ್ಠ ಸರ್ವೇ ಗಚ್ಛಂತ್ಯಚೇತನಾಃ ॥ ೪೪ ॥
ಅಥಾಽನ್ಯೇ ದಾನವಾಸ್ತತ್ರ ದಹ್ಯಂತೇಽಗ್ನಿವಿಮೋಹಿತಾಃ ।
ನಶಕ್ತಾಶ್ಚಾಽನ್ಯತೋ ಗಂತುಂ ಧೂಮೇನಾಕುಲಿತಾನನಾಃ ।
ಹಂಸಕಾರಂಡವಾಕೀರ್ಣಾ ನಲಿನ್ಯೋ ಹೇಮಪಂಕಜಾಃ ॥ ೪೫ ॥
ದಹ್ಯಂತೇ ವಿವಿಧಾಸ್ತತ್ರ ವಾಪ್ಯಃ ಕೂಪಾಶ್ಚ ಭಾರತ ।
ದೃಶ್ಯಂತೇಽನಲದಗ್ಧಾನಿ ಪುರೋದ್ಯಾನಾದಿ ದೀರ್ಘಿಕಾಃ ।
ಅಮ್ಲಾನಪಂಕಜೈಶ್ಛನ್ನಾ ವಿಸ್ತೀರ್ಣಾ ವಸುಯೋಜನಾಃ ॥ ೪೬ ॥
ಗಿರಿಕೂಟನಿಭಾಸ್ತತ್ರ ಪ್ರಾಸಾದಾ ರತ್ನಶೋಭಿತಾಃ ।
ದೃಶ್ಯಂತೇಽನಲಸಂದಗ್ಧಾ ವಿಶೀರ್ಣಾ ಧರಣೀತಲೇ ॥ ೪೭ ॥
ನರಸ್ತ್ರೀಬಾಲವೃದ್ಧೇಷು ದಹ್ಯಮಾನೇಷು ಸರ್ವತಃ ।
ನಿರ್ದಯಂ ಜ್ವಲತೇ ವಹ್ನಿರ್ಹಾಹಾಕಾರೋ ಮಹಾನಭೂತ್ ।
ಕಾಚಿಚ್ಚ ಸುಖಸಂಸುಪ್ತಾ ಪ್ರಮತ್ತಾಽನ್ಯಾ ನೃಪೋತ್ತಮ ॥ ೪೮ ॥

---

ವೇಶ್ಯೆಯರು ಮತ್ತೆ ಕೆಲವರು; ಇವರೆಲ್ಲರೂ ಬೆಂಕಿಯ ಜ್ವಾಲೆಗಳಿಗೆ ಸಿಕ್ಕಿ ಬೇಯುತ್ತ ಒಬ್ಬರನ್ನೊಬ್ಬರು ತಬ್ಬಿಕೊಂಡು ಮೂರ್ಛಿತರಾಗಿ ಬೀಳುತ್ತಿದ್ದರು.

೪೫–೪೬. ಇತರ ಕೆಲವರು ದಾನವರು ಬೆಂಕಿಗೆ ಸಿಕ್ಕಿ ಸುಡುತ್ತಿದ್ದರೂ ಮುಖಕ್ಕೆಲ್ಲ ಹೊಗೆ ತುಂಬಿದ್ದುದರಿಂದ ಬೇರೊಂದೆಡೆಗೆ ಹೋಗಲು ಸಾಧ್ಯವಾಗದೆ ಮೂರ್ಛಿತರಾಗುತ್ತಿದ್ದರು. ಹಂಸಗಳಿಂದಲೂ, ನೀರು ಕೋಳಿಗಳಿಂದಲೂ, ಚಿನ್ನದ ಕಮಲಗಳಿಂದಲೂ ತುಂಬಿ ತುಳುಕುತ್ತಿದ್ದ ಕೊಳಗಳು ಕುದಿಯುತ್ತಿದ್ದುವು. ಅಂತೆಯೇ ಇತರ ಬಾವಿಗಳೂ, ಕಲ್ಯಾಣಿಗಳೂ ಸುಡುತ್ತಿದ್ದುವು. ಎಂಟು ಯೋಜನಗಳ ವಿಸ್ತೀರ್ಣವುಳ್ಳ ಆ ತ್ರಿಪುರಗಳಲ್ಲಿದ್ದ ಅಮ್ಲಾನ ಕಮಲ ಪುಷ್ಪಗಳಿಂದ ನಿಬಿಡವಾದ ಪುರೋದ್ಯಾನಗಳೂ, ಕೊಳಗಳೂ ಸುಡುತ್ತಿದ್ದುವು.

೪೭. ಬೆಟ್ಟದ ಕೋಡುಗಳಿಗೆಣೆಯಾಗಿ ರತ್ನ ಶೋಭಿತಗಳಾದ ಭವ್ಯಭವನಗಳೆಲ್ಲವೂ ಸುಟ್ಟುಸಿಡಿದು ನೆಲಕ್ಕೆ ಬೀಳುತ್ತಿದ್ದುವು.

೪೮. ನರಸ್ತ್ರೀಬಾಲವೃದ್ಧರೆಲ್ಲರೂ ಎಲ್ಲೆಡೆಗಳಲ್ಲಿಯೂ ಸುಡುತ್ತಿದ್ದರೂ, ಅಗ್ನಿದೇವನು ಏನೊಂದೂ ದಯೆಯೇ ಇಲ್ಲದೆ ಬಹು ತೀಕ್ಷ್ಣವಾಗಿ ಜ್ವಲಿಸುತ್ತಲಿದ್ದನು. ಎಲ್ಲೆಲ್ಲಿಯೂ ಮಹತ್ತರವಾದ ಹಾಹಾಕಾರಗಳುಂಟಾದುವು.

ಕ್ರೀಡಿತ್ವಾ ಚ ಸುವಿಸ್ತೀರ್ಣಶಯನಸ್ಥಾ ವರಾಂಗನಾ ।
ಕಾಚಿತ್ಸುಪ್ತಾ ವಿಶಾಲಾಕ್ಷೀ ಹಾರಾವಲಿವಿಭೂಷಿತಾ ।
ಧೂಮೇನಾಕುಲಿತಾ ದೀನಾ ನ್ಯಪತದ್ಧವ್ಯವಾಹನೇ ॥ ೪೯ ॥
ಕಾಚಿತ್ತಸ್ಮಿನ್ಪುರೇ ದೀಪ್ತೇ ಪುತ್ರಸ್ನೇಹಾಽನುಲಾಲಸಾ ।
ಪುತ್ರಮಾಲಿಂಗತೇ ಗಾಢಂ ದಹ್ಯತೇ ತ್ರಿಪುರೇಽಗ್ನಿನಾ ॥ ೫೦ ॥
ಕಾಚಿತ್ಕನಕವರ್ಣಾಭಾ ಇಂದ್ರನೀಲವಿಭೂಷಿತಾ ।
ಭರ್ತಾರಂ ಪತಿತಂ ದೃಷ್ಟ್ವಾ ಪತಿತಾ ತಸ್ಯ ಚೋಪರಿ ॥ ೫೧ ॥
ಕಾಚಿದಾದಿತ್ಯವರ್ಣಾಭಾ ಪ್ರಸುಪ್ತಾ ತು ಪ್ರಿಯೋಪರಿ ।
ಅಗ್ನಿಜ್ವಾಲಾ ಹತಾ ಗಾಢಂ ಕಂಠಮಾಲಿಂಗತೇ ನೃಪ ॥ ೫೨ ॥
ಮೇಘವರ್ಣಾಪರಾ ನಾರೀ ಚಲತ್ಕನಕಮೇಖಲಾ ।
ಶ್ವೇತವಸ್ತ್ರೋತ್ತರೀಯಾ ತು ಪಪಾತ ಧರಣೀತಲೇ ॥ ೫೩ ॥
ಕಾಚಿತ್ಕುಂದೇಂದುವರ್ಣಾಭಾ ನೀಲರತ್ನವಿಭೂಷಿತಾ ।
ಶಿರಸಾ ಪ್ರಾಂಜಲಿರ್ಭೂತ್ವಾ ವಿಜ್ಞಾಪಯತಿ ಪಾವಕಂ ॥ ೫೪ ॥

೪೯. ಆ ಸಮಯದಲ್ಲಿ ದಾನವಾಂಗನೆಯೊರ್ವಳು ಶಯ್ಯೆಯಲ್ಲಿ ಸುಖವಾಗಿ ನಿದ್ರಿಸುತ್ತಿದ್ದಳು. ಮತ್ತೊಬ್ಬ ಪ್ರಮತ್ತೆಯಾದ ಅಂಗನೆಯು ತನ್ನ ರಮಣ ನೊಡನೆ ವಿಸ್ತೀರ್ಣವಾದ ಶಯನದಲ್ಲಿ ಕ್ರೀಡಿಸುತ್ತಿದ್ದಳು. ಇನ್ನೊಬ್ಬಳು ಹಾರಾವಳಿಯಿಂದಲಂಕೃತವಾಗಿ ಪವಳಿಸಿದ್ದಳು. ಅವಳು ಹೊಗೆಯ ಬಾಧೆ ಗೀಡಾಗಿ ಒಡನೆಯೆ ಉರಿಯುತ್ತಿದ್ದ ಬೆಂಕಿಗೆ ಬಿದ್ದುಹೋದಳು.

೫೦–೫೨. ತ್ರಿಪುರಗಳು ಹೊತ್ತಿಕೊಂಡು ಉರಿಯುತ್ತಿರಲು ಒಬ್ಬಾನೊಬ್ಬ ಹೆಂಗಸು ತನ್ನ ಮಗುವಿನಲ್ಲಿನ ಮಮತೆಯಿಂದ ಅದನ್ನು ಗಟ್ಟಿಯಾಗಿ ಅಪ್ಪಿಕೊಂಡೇ ಸುಟ್ಟುಹೋದಳು. ಇಂದ್ರನೀಲ ಮಣಿಗಳಿಂದಲಂಕೃತೆಯಾಗಿದ್ದ ಸ್ವರ್ಣವರ್ಣಿನಿ ಯಾದ ಸ್ತ್ರೀಯೋರ್ವಳು ಆ ಬೆಂಕಿಯಲ್ಲಿ ಬಿದ ತನ್ನ ಪತಿಯನ್ನೀಕ್ಷಿಸಿ ಆತನ ಮೇಲೆ ತಾನೂ ಬಿದ್ದುಹೋದಳು. ಅಯ್ಯಾ ಧರ್ಮನಂದನನೇ! ಆ ಸಮಯ ದಲ್ಲಿ ಸೂರ್ಯಸಮಾನವಾದ ತೇಜಸ್ಸುಳ್ಳ ಓರ್ವ ವರಾಂಗನೆಯು ತನ್ನ ಪ್ರಿಯನ ಮೇಲೆ ಪವಳಿಸಿದ್ದು ಅಗ್ನಿಜ್ವಾಲೆಗಳು ತನ್ನನ್ನು ಆವರಿಸಲು ಭೀತಭೀತೆಯಾಗಿ ಆ ತನ್ನ ಪ್ರಿಯನ ಕೊರಲನ್ನು ಕಟ್ಟಿಕೊಂಡಳು.

೫೩–೫೪. ಮುಗಿಲಬಣ್ಣದ ಮತ್ತೊಬ್ಬ ಸುಂದರಿಯು ಅಲುಗಾಡುತ್ತಿರುವ ಚಿನ್ನದ ಒಡ್ಯಾಣವುಳ್ಳವಳೂ, ಬಿಳಿಯ ಮೇಲುದವುಳ್ಳವಳೂ ಆಗಿ ಬೆಂಕಿತಗುಲಿ ನೆಲಕ್ಕುರುಳಿದಳು. ಕುಂದಕುಸುಮದಂತೆಯೂ, ಚಂದ್ರನಂತೆಯೂ, ಸುಂದರ ಕಾಂತಿಯುವಳಾದ ಮುಗುದೊಬ್ಬ ಸುಂದರಿಯು ತನ್ನೆಡೆಗೆ ನುಗ್ಗಿ ಬರುತ್ತಿರುವ ಅಗ್ನಿಗೆ ತಲೆಬಾಗಿ ನಮಸ್ಕರಿಸಿ ಅರಿಕೆಮಾಡಿಕೊಳ್ಳುತ್ತಿರುವಳು.

ಕಸ್ಯಾಶ್ಚಿಜ್ಜ್ವಲತೇ ವಸ್ತ್ರಂ ಕೇಶಾಃ ಕಸ್ಯಾಶ್ಚ ಭಾರತ ।
ಜ್ವಲಜ್ಜ್ವಲನಸಂಕಾಶೈರ್ಹೇಮಭಾಂಡೈಸ್ತ್ರಸಂತಿ ಚ ॥ ೫೫ ॥
ಕಾಚಿತ್ಪ್ರಭೂತದುಃಖಾರ್ತಾ ವಿಲಲಾಪ ವರಾಂಗನಾ ।
ಭಸ್ಮೀಭೂತಂ ಪತಿಂ ದೃಷ್ಟ್ವಾ ಕ್ರಂದಂತೀ ಕುರರೀ ಯಥಾ ॥ ೫೬ ॥
ಆಲಿಂಗ್ಯ ಗಾಢಂ ಸಹಸಾ ಪತಿತಾ ತಸ್ಯ ಮೂರ್ಧನಿ ।
ಕಾಚಿಚ್ಚ ಬಹುದುಃಖಾರ್ತಾ ನ್ಯಲಪತ್ ಸ್ತ್ರೀ ಸ್ವವೇಶ್ಮನಿ ॥ ೫೭ ॥
ಭಸ್ಮಸಾಚ್ಚ ಕೃತಂ ದೃಷ್ಟ್ವಾ ಕ್ರಂದತೇ ಕುರರೀ ಯಥಾ ।
ಮಾತರಂ ಪಿತರಂ ಕಾಚಿದ್ದೃಷ್ಟ್ವಾ ವಿಗತಚೇತನಂ ॥ ೫೮ ॥
ವೇಪತೇ ಪತಿತಾ ಭೂಮೌ ಖೇದಿತಾ ವಡವಾ ಯಥಾ ।
ಇತಶ್ಚೇತಶ್ಚ ಕಾಚಿಚ್ಚ ದಹ್ಯಮಾನಾ ವರಾಂಗನಾ ॥ ೫೯ ॥
ನಾಽಪಶ್ಯದ್ಬಾಲಮುತ್ಸಂಗೇ ವಿಪರೀತಮುಖೀ ಸ್ಥಿತಾ ।
ಕುಂಭಿಲಸ್ಯ ಗೃಹಂ ದಗ್ಧಂ ಪತಿತಂ ಧರಣೀತಲೇ ॥ ೬೦ ॥

---

೫೫. ಆ ಸಮಯದಲ್ಲಿ ಸ್ತ್ರೀಯೊಬ್ಬಳ ವಸ್ತ್ರವೂ, ಮತ್ತೊಬ್ಬಳ ಕೇಶಗಳೂ ಹೊತ್ತಿಕೊಂಡು ಉರಿಯತೊಡಗಿದುವು. ಅದೇ ಸಮಯದಲ್ಲಿಯೇ ತಮ್ಮ ಮೈ ಮೇಲಿದ್ದ ಚಿನ್ನದೊಡವೆಗಳೂ ಜ್ವಲಿಸುತ್ತಿರುವ ಅಗ್ನಿಗೆ ಸಮಾನವಾಗಲು ಅವರೆಲ್ಲರೂ ಇನ್ನೂ ಭಯದಿಂದ ತತ್ತಳಿಸಿಹೋದರು.

೫೬. ಆಗ ಒಬ್ಬ ವರಾಂಗನೆಯು ಬೆಂಕಿಯಲ್ಲಿ ಬಿದ್ದು ಬೂದಿಯಾಗಿಹೋದ ತನ್ನ ಪತಿಯನ್ನು ಕಂಡು ಮಿತಿಮೀರಿದ ದುಃಖಕ್ಕೆ ಪಕ್ಕಾಗಿ ಕುರರ ಪಕ್ಷಿಯಂತೆ ಚೀರಿಡುತ್ತಿದ್ದಳು.

೫೭. ಇನ್ನೊಬ್ಬಳು ತನ್ನ ಮನೆಯಲ್ಲಿಯೇ ಬೆಂಕಿಗೆ ತುತ್ತಾದ ಪತಿಯನ್ನು ಗಾಢವಾಗಿ ಆಲಿಂಗಿಸಿಕೊಂಡು ಬಹು ದುಃಖಾರ್ತೆಯಾಗಿ ರೋದಿಸತೊಡಗಿದಳು.

೫೮. ಮಗದೊಬ್ಬಳು ತನ್ನ ಪತಿಯೂ ಭಸ್ಮವಾಗಿ, ತನ್ನ ತಾಯಿತಂದೆಗಳೂ ಮೂರ್ಛೆಗೊಂಡಿರುವುದನ್ನು ನೋಡಿ ಕುರರ ಪಕ್ಷಿಯಂತೆ ಚೀರಿಡುತ್ತಿರುವಳು.

೫೯. ಸುತ್ತಮುತ್ತಲೂ ಬೆಂಕಿಯು ಮುತ್ತಿಬಂದು ಸುಟ್ಟುಹೋಗುತ್ತಿರುವ ಓರ್ವ ವರಾಂಗನೆಯು ನೆಲಕ್ಕೆ ಬಿದ್ದು ಗಡಗಡನೆ ನಡುಗುತ್ತ ಹೆಣ್ಣು ಕುದುರೆಯಂತೆ ದುಃಖಗೊಂಡು ಅತ್ತಿತ್ತ ಹೊರಳಾಡುತ್ತಿರುವಳು.

೬೦. ಆ ತ್ರಿಪುರದಹನದಲ್ಲಿ ಓರ್ವಸ್ತ್ರೀಯು ತನ್ನ ಉತ್ಸಂಗದಲ್ಲಿದ್ದ ಕಂದನನ್ನೇ ಕಾಣದೆ ಕಂದಿದ ಮುಖವುಳ್ಳವಳಾಗಿ ನೋಡಲಸದಳೆಯಾಗಿದ್ದಳು. ಕುಂಭಿಲನ ಮನೆಯು ಸುಟ್ಟು ನೆಲಕ್ಕೆ ಬಿದ್ದಿತು.

ಕೂಷ್ಮಾಂಡಸ್ಯ ಚ ಧೂಮ್ರಸ್ಯ ಕುಹಕಸ್ಯ ಬಕಸ್ಯಚ ।
ವಿರೂಪನಯನಸ್ಯಾಽಪಿ ವಿರೂಪಾಕ್ಷಸ್ಯ ಚೈವಹಿ ॥ ೬೧ ॥
ಶುಂಭೋ ಡಿಂಭಶ್ಚ ರೌದ್ರಶ್ಚ ಪ್ರಹ್ಲಾದಶ್ಚಾಽಸುರೋತ್ತಮಃ ।
ದಂಡಪಾಣಿರ್ವಿಪಾಣಿಶ್ಚ ಸಿಂಹವಕ್ತ್ರಸ್ತಥಾಽನಘ ॥ ೬೨ ॥
ದುಂದುಭಿಶ್ಚೈವ ಸಂಹ್ರಾದೋ ಡಿಂಡಿರ್ಮುಂಡಿಸ್ತಥೈವಚ ।
ಬಾಣಭ್ರಾತಾಚ ಬಾಣಶ್ಚ ಕ್ರವ್ಯಾದವ್ಯಾಘ್ರವಕ್ತ್ರಕೌ ॥ ೬೩ ॥
ಏವಮನ್ಯೇಽಪಿ ಯೇ ಕೇಚಿದ್ದಾನವಾ ಬಲದರ್ಪಿತಾಃ ।
ತೇಷಾಂ ಗೃಹೇ ತಥಾ ವಹ್ನಿರ್ಜ್ವಲತೇ ನಿರ್ದಯೋ ನೃಪ ।
ದಹ್ಯಮಾನಾಃ ಸ್ತ್ರಿಯಸ್ತಾಸ್ತಾ ವಿಲಪಂತಿ ಗೃಹೇಗೃಹೇ ॥ ೬೪ ॥
ಕರುಣಾಕ್ಷರವಾದಿನ್ಯೋ ನಿರಾಧಾರಾಗತಾಃ ಶಿವಂ ।
ಯದಿ ವೈರಂ ಸುರಾರೇಶ್ಚ ಪುರುಷೋಽಪರಿ ಪಾವಕ ॥ ೬೫ ॥
ಸ್ತ್ರಿಯಃಕಿಮಪರಾಧ್ಯಂತಿ ಗೃಹಪಂಜರಕೋಕಿಲಾಃ ।
ಅನಿರ್ದಯೋ ನೃಶಂಸಸ್ತ್ವಂ ಕಸ್ತೇ ಕೋಪಃ ಸ್ತ್ರಿಯಂ ಪ್ರತಿ ॥ ೬೬ ॥
ಕಿಂ ತ್ವಯಾ ನಶ್ರುತಂ ಲೋಕೇಽವಧ್ಯಾಃ ಸರ್ವಥಾ ಸ್ತ್ರಿಯಃ ।
ಕಿಂತು ತುಭ್ಯಂ ಗುಣೋ ಹ್ಯಸ್ತಿ ದಹನೇ ಪವನೇರಿತಃ ॥ ೬೭ ॥

---

೬೧–೬೪. ಕೂಷ್ಮಾಂಡ, ಧೂಮ್ರ, ಕುಹಕ, ಬಕ, ವಿರೂಪನಯನ, ವಿರೂಪಾಕ್ಷ, ಶುಂಭ, ಡಿಂಭ, ರೌದ್ರ, ಅಸುರೋತ್ತಮನಾದ ಪ್ರಹ್ಲಾದ, ದಂಡಪಾಣಿ, ವಿಪಾಣಿ, ಸಿಂಹವಕ್ತ್ರ, ದುಂದುಭಿ, ಸಂಹ್ರಾದ, ಡಿಂಡಿ, ಮುಂಡಿ, ಬಾಣನ ತಮ್ಮ, ಬಾಣ, ಕ್ರವ್ಯಾದ, ವ್ಯಾಘ್ರವಕ್ತ್ರ ಮೊದಲಾಗಿ ಬಲದರ್ಪಿತರಾದ ಇನ್ನೂ ಇತರ ಯಾವ ಯಾವ ರಾಕ್ಷಸರಿದ್ದರೋ ಅವರೆಲ್ಲರ ಮನೆಗಳನ್ನೂ ಪಾವಕನು ದಯೆಯೇ ಇಲ್ಲದೆ ಸುಟ್ಟುಹಾಕಿದನು. ಮನೆಮನೆಗಳಲ್ಲಿಯೂ ಸ್ತ್ರೀಯರು ಸುಡತೊಡಗಿ ಗಟ್ಟಿಯಾಗಿ ಅಳುತ್ತಿರುವರು.

೬೫–೬೬. ಆ ಸ್ತ್ರೀಯರು ಬಹುದೀನವಾದ ಮಾತುಗಳನ್ನು ಆಡಿಕೊಂಡು ಅಳುತ್ತ ಯಾವ ಆಶ್ರಯವೂ ಇಲ್ಲದೆ ಶಿವನಲ್ಲಿಗೆ ಶರಣುಹೋದನು. ಅವರು ಅಗ್ನಿಯನ್ನು ಕುರಿತು ಆಡತೊಡಗಿದರು. "ಎಲೈ ಪಾವಕನೇ! ನಿನಗೆ ಸುರಶತ್ರುವಾದ ಬಾಣಾಸುರನ ಮೇಲೆ ಕ್ರೋಧವಿದ್ದರೆ ಅವನಮೇಲೆ ಬೇಕಾದಹಾಗೆ ನಿನ್ನ ಹಗೆಯನ್ನು ತೀರಿಸಿಕೊ. ಆದರೆ ಹೆಂಗಸರಾದ ನಾವು ಮಾಡಿದ ಅಪರಾಧವೇನು? ನಾವು ಗೃಹಪಂಜರಗಳಲ್ಲಿರುವ ಕೋಗಿಲೆಗಳಲ್ಲವೆ? ನೀನು ದಯೆಯಿಲ್ಲದವನು, ಘಾತುಕನು; ಹೆಂಗಸರಾದ ನಮ್ಮಮೇಲೆ ನಿನಗೇನು ಕೋಪ?

೬೭. ಸ್ತ್ರೀಯರು ಸರ್ವಥಾ ಅವಧ್ಯರೆಂಬುದನ್ನು ನೀನು ಕೇಳಿಲ್ಲವೆ? ಕೇಳಿರುವೆ. ನಿನ್ನಲ್ಲಿ ಗುಣವೂ ಇರುವುದು. ಆದರೇನು? ಈ ನೀನು ವಾಯುವಿನಿಂದ ಪ್ರೇರಿತನಾಗಿರುವೆ!

ನ ಕಾರುಣ್ಯಂ ತ್ವಯಾ ಕಿಂಚಿದ್ದಾಕ್ಷಿಣ್ಯಂ ಚ ಸ್ತ್ರಿಯಂಪ್ರತಿ ।
ದಯಾಂ ಮ್ಲೇಚ್ಛಾಹಿ ಕುರ್ವಂತಿ ವಚನಂ ವೀಕ್ಷ್ಯ ಯೋಷಿತಾಂ ॥ ೬೮ ॥
ಮ್ಲೇಚ್ಛಾನಾಮಪಿ ಚ ಮ್ಲೇಚ್ಛೋ ದುರ್ನಿವಾರ್ಯೋಽಪ್ಯಚೇತನಃ ।
ಏವಂ ವಿಲಪಮಾನಾನಾಂ ಸ್ತ್ರೀಣಾಂ ತತ್ರೈವ ಭಾರತ ॥ ೬೯ ॥
ಜ್ವಾಲಾಕಲಾಪಬಹುಲಃ ಪ್ರಜ್ವಲತ್ಯೇವ ಪಾವಕಃ ।
ಏವಂ ದೃಷ್ಟ್ವಾ ತತೋ ಬಾಣೋ ದಹ್ಯಮಾನ ಉವಾಚ ಹ ॥ ೭೦ ॥
ಅವಜ್ಞಾಯ ವಿನಷ್ಟೋಽಹಂ ಪಾಪಾತ್ಮಾ ಹರಮಂಜಸಾ ।
ಮಯಾ ಪಾಪೇನ ಮೂರ್ಖೇಣ ಯೇ ಲೋಕಾ ನಾಶಿತಾ ಧ್ರುವಂ॥ ೭೧ ॥
ಗೋಬ್ರಾಹ್ಮಣಾ ಹತಾ ನಿತ್ಯಮಿಹ ಲೋಕೇ ಪರತ್ರ ಚ ।
ನಾಶಿತಾನ್ಯನ್ನಪಾನಾನಿ ಮಠಾರಾಮಾಶ್ರಮಾಸ್ತಥಾ ॥ ೭೨ ॥
ಋಷೀಣಾಮಾಶ್ರಮಾಶ್ಚೈವ ದೇವಾರಾಮಾ ಗಣಾಲಯಾಃ ।
ತೇನ ಪಾಪೇನ ಮೇ ಧ್ವಂಸಸ್ತಪಸಶ್ಚ ಬಲಸ್ಯ ಚ ॥ ೭೩ ॥

---

೬೮. ಆದುದರಿಂದಲೇ ನಿನಗೆ ಹೆಂಗಸರ ವಿಷಯದಲ್ಲಿ ದಯಾದಾಕ್ಷಿಣ್ಯಗಳೇನೂ ಇರುವುದಿಲ್ಲವು. ಮ್ಲೇಚ್ಛರೂ ಸ್ತ್ರೀಯರಲ್ಲಿ ದಯೆಯನ್ನು ತೋರುತ್ತಾರೆ.

೬೯–೭೦. ನೀನು ಅವರಿಗಿಂತಲೂ ಕೀಳಾದವನು. ನೀನು ಆ ಮ್ಲೇಚ್ಛರಿಗೂ ಮೇಚ್ಛನಾಗಿರುವೆ. ನಿನಗೆ ಜ್ಞಾನವೇ ಇರುವುದಿಲ್ಲವು. ಆದುದರಿಂದ ನಿನ್ನನ್ನು ತಡೆಯುವುದೇ ಕಷ್ಟವಾಗಿರುವುದು.'' ಹೀಗೆ ವಿಲಪಿಸುತ್ತಿದ್ದರೂ ಆ ಪಾವಕನು ಮತ್ತೂ ಅಧಿಕವಾದ ಜ್ವಾಲೆಗಳಿಂದ ವೃದ್ಧಿಗೊಂಡು ಸುಡತೊಡಗಿದನು. ಈ ಪ್ರಕಾರವಾಗಿ ತನ್ನ ತ್ರಿಪುರಗಳು ಸುಡುತ್ತಿರಲು ಆ ಬಾಣಾಸುರನೂ ಸುಡುತ್ತ ಹೀಗೆಂದನು.

೭೧. ''ಅಕ್ಕಟಾ! ಪಾಪಿಷ್ಠನಾದ ನಾನು ಆ ಪರಮೇಶ್ವರನನ್ನು ಅರಿತುಕೊಳ್ಳದೆ ಈ ರೀತಿ ಇದ್ದಕ್ಕಿದ್ದಂತೆಯೇ ನಾಶವಾಗಿಹೋದೆನು. ಪಾಪಿಷ್ಠನೂ, ಮೂರ್ಖನೂ ಆದ ನಾನು ಅನೇಕ ಲೋಕಗಳನ್ನು ಹಾಳುಮಾಡಿದೆನು.

೭೨. ಪ್ರತಿದಿನವೂ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಗೋಬ್ರಾಹ್ಮಣರನ್ನೂ, ಅವರ ಅನ್ನಪಾನಗಳನ್ನೂ ನಾಶಗೊಳಿಸಿದೆನಲ್ಲದೆ, ಮಠಗಳು, ಉದ್ಯಾನಗಳು, ಆಶ್ರಮಗಳನ್ನೂ ನಾಶಮಾಡಿದೆನು.

೭೩. ಅಯ್ಯೋ! ಋಷ್ಯಾಶ್ರಮಗಳನ್ನೂ, ದೇವಾಲಯಗಳನ್ನೂ, ಶಿವಗಣಗಳ ನೆಲೆವನೆಗಳನ್ನೂ ಹಾಳುಮಾಡಿದೆನು. ಆ ಪಾಪದಿಂದಲೇ ನಾನು ಮಾಡಿದ ತಪಸ್ಸೂ, ನಾನು ಆರ್ಜಿಸಿದ ಬಲವೂ ಧ್ವಂಸವಾಗಿ ಹೋಯಿತು.

ಕಿಂ ಧನೇನ ಕರಿಷ್ಯಾಮಿ ರಾಜ್ಯೇಣಾಂತಃಪುರೇಣ ಚ ॥ ೭೪ ॥
ವರಂ ಶಂಕರಪಾದೌಚ ಶರಣಂ ಯಾಮಿ ಮೂಢಧೀಃ ।
ನಮಾತಾ ನಪಿತಾಚೈವ ನಬಂಧುರ್ನಾಃಪರೋ ಜನಃ ॥ ೭೫ ॥
ಮುಕ್ತ್ವಾ ಚೈವ ಮಹೇಶಾನಂ ಪರಮಾರ್ತಿಹರಂ ಪರಂ ।
ಆತ್ಮನಾಚ ಕೃತಂ ಪಾಪಮಾತ್ಮನೈವ ತು ಭುಜ್ಯತೇ ॥ ೭೬ ॥
ಅಹಂ ಪುನಃಸಮಸ್ತೈಶ್ಚ ದಹ್ಯಾಮಿ ಸಹ ಸಾಧುಭಿಃ ।
ಏವಮುಕ್ತ್ವಾ ಶಿವಂ ಲಿಂಗಂ ಕೃತ್ವಾ ತನ್ಮಸ್ತಕೋಪರಿ ॥ ೭೭ ॥
ನಿರ್ಜಗಾಮ ಗೃಹಾಚ್ಛೀಘ್ರಂ ಪಾವಕೇನಾವಗುಂಠಿತಃ ।
ಸಖಿನ್ನಃ ಖಿನ್ನಗಾತ್ರಸ್ತು ಪ್ರಸ್ಖಲಂಸ್ತು ಮುಹುರ್ಮುಹುಃ ॥ ೭೮ ॥
ಹರಂ ಗದ್ಗದಯಾ ವಾಚಾ ಸ್ತುವನ್ವೈ ಶರಣಂ ಯಯೌ ।
ತ್ವತ್ಕೋಪಾನಲ ನಿರ್ದಗ್ಧೋ ಯದಿವಧ್ಯೋಽಸ್ಮಿ ಶಂಕರ ॥ ೭೯ ॥
ತ್ವತ್ಪ್ರಸಾದಾನ್ಮಹಾದೇವ ಮಾ ಮೇ ಲಿಂಗಂ ಪ್ರಣಶ್ಯತು ।
ಅರ್ಚಿತಂ ಮೇ ಸುರಶ್ರೇಷ್ಠ ಧ್ಯಾತಂ ಭಕ್ತ್ಯಾ ಮಯಾ ವಿಭೋ ॥ ೮೦ ॥
ಪ್ರಾಣಾದಿಷ್ಟತಮಂ ದೇವ ತಸ್ಮಾದ್ರಕ್ಷಿತುಮರ್ಹಸಿ ।
ಯದಿ ತೇಽಹಮನುಗ್ರಾಹ್ಯೋ ವಧ್ಯೋ ವಾ ಸುರಸತ್ತಮ ॥ ೮೧ ॥

---

೭೪. ಇಷ್ಟೆಲ್ಲ ಆಗಿಹೋದಮೇಲೆ ಇನ್ನು ಈ ರಾಜ್ಯ, ಈ ಐಶ್ವರ್ಯ, ಈ ಅಂತಃಪುರಗಳನ್ನು ಕಟ್ಟಿಕೊಂಡು ನನಗಾಗಬೇಕಾದುದೇನಿರುವುದು!

೭೫. ಪ್ರಕೃತದಲ್ಲಿ ಮಂದಬುದ್ಧಿಯವನಾಗಿರುವ ನಾನು ಉತ್ತಮೋತ್ತಮವಾದ ಆ ಶಂಕರನ ಅಡಿಗಳಿಗೇ ಶರಣುಹೋಗುವೆನು. ಇದು ಖಂಡಿತವು. ನನಗೀಗ ಆ ಮಹಾದೇವನನ್ನುಳಿದು ತಾಯಿತಂದೆಗಳಾಗಲಿ, ಬಂಧುವಾಗಲಿ ಬೇರಾರೂ ಗತಿಯಿರುವುದಿಲ್ಲವು.

೭೬. ಅಪರಿಮಿತವಾದ ದುಃಖವನ್ನೂ ನಾಶಗೊಳಿಸುವ ಆ ಪರಮೇಶ್ವರನನ್ನು ಬಿಟ್ಟರೆ ನನಗೆ ಮತ್ತಾವ ಗತಿಯೂ ಇರುವುದಿಲ್ಲವು. ತಾನೇ ಮಾಡಿದ ಪಾಪವನ್ನು ತಾನೇ ಭುಜಿಸಬೇಕಲ್ಲವೆ?

೭೭–೮೨. ಈಗ ನಾನಾದರೋ ಸಮಸ್ತ ಸಾಧುಗಳೊಡಗೂಡಿ ಸುಟ್ಟು ಹೋಗುತ್ತಿರುವೆನು.'' ಎಲೈ ಮಹಾರಾಜನೇ! ಆ ಬಾಣಾಸುರನು ಈರೀತಿ ನುಡಿದು ಶಿವಲಿಂಗವನ್ನು ತನ್ನ ತಲೆಯಲ್ಲಿ ತಾಳಿದವನಾಗಿ ಬೆಂಕಿಯು ತನ್ನನ್ನು ಮುತ್ತಿದ್ದಂತೆಯೇ ಮನೆಯಿಂದ ಹೊರಕ್ಕೆ ಬಂದನು. ಅವನು ಬಹುದುಃಖಿತನಾಗಿ, ಬೆವರುತ್ತಿರುವ ಮೈಯುಳ್ಳವನಾಗಿ, ಅಡಿಗಡಿಗೂ ಜಾರಿಬೀಳುತ್ತ, ಪರಮೇಶ್ವರನನ್ನು ಗದ್ಗದಿತವಾದ ಕಂಠದಿಂದ ಸ್ತುತಿಸುತ್ತ ಆತನನ್ನೇ ಶರಣು ಬಂದನು. ''ಓ ಶಂಕರ! ನಿನ್ನ ಕೋಪಾಗ್ನಿಯಿಂದ ದಗ್ಧನಾಗುತ್ತಿರುವ ನಾನು

ಪ್ರತಿಜನ್ಮ ಮಹಾದೇವ ತ್ವದ್ಭಕ್ತಿರಚಲಾಸ್ತು ಮೇ ।
ಪಶುಕೀಟಪತಂಗೇಷು ತಿರ್ಯಗ್ಯೋನಿಗತೇಷು ಚ ।
ಸ್ವಕರ್ಮಣಾ ಮಹಾದೇವ ತ್ವದ್ಭಕ್ತಿರಚಲಾಽಸ್ತು ಮೇ ॥ ೮೨ ॥
ಏವಮುಕ್ತ್ವಾ ಮಹಾಭಾಗೋ ಬಾಣೋ ಭಕ್ತಿಮತಾಂ ವರಃ ।
ಸ್ತೋತ್ರೇಣ ದೇವದೇವೇಶಂ ಛಂಧಯಾಮಾಸ ಭಾರತ ॥ ೮೩ ॥

ಬಾಣ ಉವಾಚ :—

ಶಿವಶಂಕರ ಸರ್ವಹರಾಯ ನಮೋ
ಭವಭೀತಭಯಾರ್ತಿಹರಾಯ ನಮಃ ।
ಕುಸುಮಾಯುಧ ದೇಹವಿನಾಶಕರ
ಪ್ರಮದಾಪ್ರಿಯಕಾಮುಕ ದೇವ ನಮಃ ॥ ೮೪ ॥

---

ನಿನಗೆ ವಧ್ಯನೇ ಆಗಿದ್ದ ಪಕ್ಷದಲ್ಲಿ ವಧಿಸು. ಆದರೆ ಓ ವಿಭುವೆ! ನಾನು ಪರಮಭಕ್ತಿಯಿಂದ ಪೂಜಿಸಿ, ಧ್ಯಾನಿಸಿರುವ ಈ ಲಿಂಗವು ಮಾತ್ರ ಮಹಾದೇವ ನಾದ ನಿನ್ನ ಅನುಗ್ರಹದಿಂದ ನಾಶವಾಗದಿರಲಿ. ದೇವ! ಈ ಲಿಂಗವು ನನಗೆ ನನ್ನ ಪ್ರಾಣಗಳಿಗಿಂತಲೂ ಇಷ್ಟತಮವಾದುದು. ಆದುದರಿಂದೆಲೈ ಸ್ವಾಮಿಯೆ! ನೀನು ಈ ಲಿಂಗವನ್ನು ರಕ್ಷಿಸಲು ಯೋಗ್ಯನಾಗು; ಕೃಪೆಮಾಡು. ಮಹಾದೇವ! ನಾನು ನಿನ್ನ ಅನುಗ್ರಹಕ್ಕೆ ಪಾತ್ರನಾಗಿದ್ದರೂ ಸರಿಯೆ; ವಧ್ಯನಾಗಿದ್ದರೂ ಸರಿಯೆ! ಇಷ್ಟನ್ನು ಮಾತ್ರ ಅನುಗ್ರಹಿಸು. ಎಲೈ ಮಹಾದೇವನೆ! ಪ್ರತಿಯೊಂದು ಜನ್ಮದಲ್ಲಿಯೂ ನನಗೆ ನಿನ್ನಲ್ಲಿನ ಭಕ್ತಿಯು ಸ್ಥಿರವಾಗಿರಲಿ. ಎಲೈ ಶಂಭುವೇ! ನಾನು ನನ್ನ ಕರ್ಮವಶದಿಂದ ಪಶುಕೀಟ ಪತಂಗವೇ ಮೊದಲಾದ ತಿರ್ಯಗ್ಜನ್ಮಗಳನ್ನೆತ್ತಿದರೂ ನಿನ್ನಲ್ಲಿಯ ಭಕ್ತಿಯು ಮಾತ್ರ ನನ್ನಲ್ಲಿ ಅಚಲ ವಾಗಿರಲಿ.''

೮೩. ಅಯ್ಯಾ ಧರ್ಮರಾಜನೇ! ಮಹಾಭಾಗ್ಯಶಾಲಿಯೂ, ಭಕ್ತಿಮಂತ ರಲ್ಲಿ ಅತ್ಯುತ್ತಮನೂ ಆದ ಆ ಬಾಣನು ಈ ಪ್ರಕಾರವಾಗಿ ನುಡಿಯುತ್ತ ದೇವ ದೇವೇಶ್ವರನಾದ ಆ ಮಹೇಶ್ವರನನ್ನು ಸ್ತುತಿಸತೊಡಗಿದನು.

೮೪. ಬಾಣನು ಸ್ತುತಿಸುತ್ತಾನೆ:—ಶಿವ, ಶಂಕರ, ಸಮಸ್ತವನ್ನೂ ಲಯ ಗೊಳಿಸುವ ಓ ದೇವದೇವ, ನಿನಗೆ ನಮಸ್ಕಾರವು! ಸಂಸಾರ ಭಯದಿಂದ ಭೀತಿಗೊಂಡಿರುವ ಭಕ್ತರ ಭಯವನ್ನು ಪರಿಹರಿಸಿ ಅಭಯವನ್ನು ನೀಡುವ ಸ್ವಾಮಿಯೆ! ನಿನಗೆ ನಮೋನಮಃ!! ಕುಸುಮಾಯುಧನಾದ ಮದನನ ದೇಹ ವನ್ನು ನಾಶಗೊಳಿಸಿದವನೂ, ಪ್ರಮದೆಯರಿಗೆಲ್ಲರಿಗೂ ಪ್ರಿಯಕಾಮುಕನಾದವನೂ ಆದ ಎಲೈ ಪ್ರಭುವೇ! ನಿನಗೆ ನಮಸ್ಕೃತಿಯು.

ಜಯ ಪಾರ್ವತೀಶ ಪರಮಾರ್ಥಸಾರ
ಜಯವೀರ ಚಿತಭೀಮ ಭುಜಂಗಹಾರ ।
ಜಯನಿರ್ಮಲಭಸ್ಮವಿಲಿಪ್ತಗಾತ್ರ
ಜಯಮಂತ್ರಮೂಲ ಜಗದೇಕಪಾತ್ರ ॥ ೮೫ ॥
ಜಯ ವಿಷಧರ ಕಪಿಲಜಟಾಕಲಾಪ
ಜಯಭೈರವ ವಿಧೃತಪಿನಾಕಚಾಪ ।
ಜಯ ವಿಷಮನಯನ ಪರಿವಿಮುಕ್ತಸಂಗ
ಜಯಶಂಕರಧೃತಗಾಂಗತರಂಗ ॥ ೮೬ ॥
ಜಯ ಭೀಮರೂಪ ಖಟ್ವಾಂಗಹಸ್ತ
ಶಶಿಶೇಖರ ಜಯ ಜಗತಾಂ ಪ್ರಶಸ್ತ ।
ಜಯಸುರವರೇಶ ಸುರಲೋಕಸಾರ
ಜಯ ಶರ್ವ ಸಕಲನಿರ್ದಗ್ಧಸಾರ ॥ ೮೭ ॥
ಜಯಕೀರ್ತನೀಯ ಜಗತಾಂ ಪವಿತ್ರ
ಜಯವೃಷಾಂಕ ಬಹುವಿಧಚರಿತ್ರ ।
ಜಯವೀರಚಿತನರಕಂಕಾಲಮಾಲ
ಅಘಾಸುರದೇಹ ಕಂಕಾಲಕಾಲ ॥ ೮೮ ॥

---

೮೫. ಎಲೈ ಪಾರ್ವತೀಪತಿಯೆ! ಭಕ್ತರ ಸರ್ವಾಭೀಷ್ಟಸಿದ್ಧಿಗಾಗಿ ಜಯಿಸು. ಪರಮಾರ್ಥಸಾರ (ಮೋಕ್ಷ) ಸ್ವರೂಪನೇ! ಜಯ ಜಯ. ಮಹಾಭಯಂಕರವಾದ ನಾಗಹಾರವನ್ನು ತಳೆದವನೇ, ನಿರ್ಮಲವಾದ ಭಸ್ಮದಿಂದ ಲೇಪಿತವಾದ ಶರೀರವುಳ್ಳವನೇ, ಸಕಲ ಮಂತ್ರಗಳಿಗೂ ಮೂಲವೆನಿಸಿದವನೇ, ಜಗದೇಕಪಾತ್ರನೇ! ಜಯಜಯ.

೮೬. ವಿಷಧರನೂ, ಕಪಿಲಜಟಾಕಲಾಪನೂ, ಭೈರವನೂ, ಪಿನಾಕ ಧನುರ್ಧಾರಿಯೂ, ವಿಷಮೇಕ್ಷಣನೂ, ವಿಮುಕ್ತ ಸಕಲ ಸಂಗನೂ, ಶಂಕರನೂ, ಗಂಗಾಧರನೂ ಆದ ಓ ಮಹೇಶ್ವರನೇ! ಜಯಜಯ!!

೮೭. ಭಯಂಕರರೂಪವುಳ್ಳವನೂ, ಖಟ್ವಾಂಗವನ್ನು ಹಿಡಿದವನೂ, ಶಶಿಶೇಖರನೂ, ಜಗತ್ತಿಗೆಲ್ಲ ಪ್ರಶಸ್ತನೂ, ಸುರವರೇಶ್ವರನೂ, ಸುರಲೋಕಸಾರ ಸ್ವರೂಪನೂ, ಶರ್ವನೂ, ಸಮಸ್ತವೂ ಸಂಪೂರ್ಣವಾಗಿ ಧಗ್ಧವಾದ ಬಳಿಕ ಉಳಿದು ಶೋಭಿಸುವ ಸಾರಸ್ವರೂಪನೂ ಆದ ಓ ಭಗವಂತ, ಜಯಜಯ!

೮೮. ಕೀರ್ತನೀಯನೂ, ಸಕಲ ಲೋಕಗಳಿಗೆ ಪವಿತ್ರನೂ, ವೃಷಭ ಧ್ವಜನೂ, ಬಹುವಿಧ ಚರಿತ್ರನೂ, ನರರುಂಡಮಾಲಾಧಾರಿಯೂ. ಅಘಾಸುರನ ದೇಹದ ಕಂಕಾಲವನ್ನು ಧರಿಸಿದವನೂ, ಕಾಲಸ್ವರೂಪಿಯೂ ಆದ ಓ ದೇವ! ಜಯಜಯ!!

ಜಯನೀಲಕಂಠ ವರವೃಷಭಗಮನ
ಜಯ ಸಕಲಲೋಕದುರಿತಾಽನುಶಮನ ।
ಜಯಸಿದ್ಧ ಸುರಾಸುರ ವಿನತಚರಣ
ಜಯ ರುದ್ರ ರೌದ್ರ ಭವಜಲಧಿತರಣ ॥ ೮೯ ॥
ಜಯ ಗಿರಿಶ ಸುರೇಶ್ವರಮಾನನೀಯ
ಜಯ ಸೂಕ್ಷ್ಮರೂಪ ಸಂಚಿಂತನೀಯ ।
ಜಯ ದಗ್ಧತ್ರಿಪುರ ವಿಶ್ವಸತ್ವ
ಜಯ ಸಕಲಶಾಸ್ತ್ರಪರಮಾರ್ಥ ತತ್ವ ॥ ೯೦ ॥
ಜಯ ದುರವಬೋಧ ಸಂಸಾರತಾರ
ಕಲಿಕಲುಷಮಹಾರ್ಣವಘೋರತಾರ ।
ಜಯ ಸುರಾಽಸುರದೇವಗಣೇಶ ನಮೋ
ಹಯವಾನರ ಸಿಂಹಗಜೇಂದ್ರಮುಖ ॥ ೯೧ ॥
ಅತಿಹ್ರಸ್ವಸ್ಥೂಲಸುದೀರ್ಘತನು
ಉಪಲಬ್ಧಿರ್ನಶಕ್ಯತೇ ತೇಽಮರೈಃ ।
ಪ್ರಣತೋಽಸ್ಮಿ ನಿರಂಜನ ತೇ ಚರಣೌ
ಜಯ ಸಾಂಬ ಸುಲೋಚನಕಾಂತಿಹರ ॥ ೯೨ ॥

೮೯. ನೀಲಕಂಠನೂ, ವೃಷಭವಾಹನನೂ, ಸಮಸ್ತ ಭಕ್ತಲೋಕದ ದುರಿತಗಳನ್ನು ಉಪಶಮನಗೊಳಿಸುವವನೂ, ಸಿದ್ಧಸುರಾಸುರರಿಂದ ನಮಸ್ಕೃತವಾದ ಚರಣಕಮಲಗಳುಳ್ಳವನೂ, ರುದ್ರನೂ, ರೌದ್ರವಾದ ಭವಸಾಗರ ನೌಕಾಸ್ವರೂಪನೂ ಆದ ಸ್ವಾಮಿಯೆ! ಜಯಜಯ!

೯೦. ಎಲೈ ಗಿರಿಶನೆ! ಸುರೇಶ್ವರನಾದ ಮಹೇಂದ್ರನಿಂದ ಮಾನಿತನಾದವನೂ, ಸೂಕ್ಷ್ಮರೂಪನೂ, ಸಕಲ ಯೋಗಿಗಳಿಂದಲೂ ಸಂಚಿಂತನೀಯನೂ, ತ್ರಿಪುರಗಳನ್ನು ದಹಿಸಿದವನೂ, ವಿಶ್ವದ ಸತ್ತ್ವಸ್ವರೂಪನೂ, ಸಕಲ ಶಾಸ್ತ್ರಗಳ ಪರಮಾರ್ಥತತ್ತ್ವರೂಪನೂ ಆದವನೇ! ಜಯಜಯತು.

೯೧. ಯೋಗಿಗಳಿಗೂ ಅರಿತುಕೊಳ್ಳಲು ಅಸಾಧ್ಯನೂ, ಸಂಸಾರಸಾಗರದಿಂದ ಭಕ್ತರನ್ನು ಕಡೆಹಾಯಿಸುವವನೂ, ಘೋರವಾದ ಕಲಿಕಲ್ಮಷವೆಂಬ ಸಮುದ್ರವನ್ನು ದಾಟಿಸುವವನೂ ಆದ ಎಲೈ ಶಿವನೇ! ಜಯಜಯ!! ಸುರಾಸುರ ಗಣಗಳಿಗೆ ಒಡೆಯನೂ, ಕುದುರೆ, ಕಪಿ, ಸಿಂಹ, ಗಜಗಳ ಮುಖಗಳುಳ್ಳವನೂ ಆದ ಎಲೈ ವಿಭುವೇ! ನಿನಗೆ ನಮಸ್ಕಾರವು.

೯೨. ಅತಿಹ್ರಸ್ವವೂ, ಸ್ಥೂಲವೂ, ಬಹುದೀರ್ಘವೂ ಆದವನೇ, ನೀನಿಂತೇ ಇರುವೆಯೆಂಬ ಗುರುತು ಅಮರರಿಗೂ ಅರಿಯದಾಗಿದೆ. ಇಂತಹ ನಿರಂಜನ

ಅಪ್ರಾಪ್ಯ ತ್ವಾಂ ಕಿಮುತ್ಯಂತಮುಚ್ಛ್ರಯಿಣಾ ಸ ವಿನಾಶಯೇತ್ ।
ಅತಿಪ್ರಮಾಥಿ ಚ ತದಾ ತಪೋ ಮಹತ್ಸುದಾರುಣಂ ॥ ೯೩ ॥
ನ ಪುತ್ರಬಾಂಧವಾ ದಾರಾ ನ ಸಮಸ್ತಾಃ ಸುಹೃಜ್ಜನಾಃ ।
ಸಂಕಟೇಽಭ್ಯುಪಗಚ್ಛಂತಿ ವ್ರಜಂತಮೇಕಗಾಮಿನಂ ॥ ೯೪ ॥
ಯದೇವ ಕರ್ಮ ಕೈವಲ್ಯಂ ಕೃತಂ ತೇನ ಶುಭಾಶುಭಂ ।
ತದೇವ ಸಾರ್ಥವತ್ತಸ್ಯ ಭವತ್ಯಗ್ರೇ ತು ಗಚ್ಛತಃ ॥ ೯೫ ॥
ನಿರ್ಧನಸ್ಯೈವ ಚರತೋ ನ ಭಯಂ ವಿದ್ಯತೇ ಕ್ವಚಿತ್ ।
ಧನೀ ಭಯೈರ್ನಮುಚ್ಯೇತ ಧನಂ ತಸ್ಮಾತ್ತ್ಯಜಾಮ್ಯಹಂ ॥ ೯೬ ॥
ಲುಬ್ಧಾಃ ಪಾಪಾನಿ ಕುರ್ವಂತಿ ಶುದ್ಧಾಂಶಾ ನೈವ ಮಾನವಾಃ ।
ಶ್ರುತ್ವಾ ಧರ್ಮಸ್ಯ ಸರ್ವಸ್ವಂ ಶ್ರುತ್ವಾ ಚೈವಾವಧಾರ್ಯ ತತ್ ॥ ೯೭ ॥

---

ನಾದ ಓ ಪರಮೇಶ್ವರನೇ! ನಿನ್ನ ಚರಣಗಳಿಗೆರಗುವೆನು. ಮನೋಹರವಾದ ಕಾಂತಿಯುಳ್ಳ ನೇತ್ರಗಳುಳ್ಳವನೂ, ಅಂಬಿಕಾಸಹಿತನೂ ಆದ ಓ ಶಂಕರ! ಜಯಜಯ!!

೯೩. ಎಲೈ ಭಗವಂತನೇ! ನಿನ್ನನ್ನು ಹೊಂದದಿರುವವನ ಅಪರಿಮಿತವಾದ ಸಂಪತ್ತು ನಾಶವಾಗದಿರುವುದೇ? ಅಂಥವನೆಸಗಿದ ಮಹೋಗ್ರತಮವಾದ ತಪಸ್ಸು ತಾನೇ ಕ್ಷಯಿಸಿಹೋಗದಿರುವುದೇ?

೯೪. ಪರಮಾತ್ಮ! ಪುತ್ರರಾಗಲಿ, ಬಂಧುಗಳಾಗಲಿ, ಹೆಂಡಿರಾಗಲಿ, ಸಮಸ್ತಸುಹೃಜ್ಜನರಾಗಲಿ ಆಪತ್ಕಾಲದಲ್ಲಿ ಸಕಲವನ್ನೂ ತೊರೆದು ಒಂಟಿಯಾಗಿ ಹೊರಟುಹೋಗುವವನನ್ನು ಹಿಂಬಾಲಿಸಿ ಬರುವುದಿಲ್ಲವು.

೯೫. ಹಾಗೆ ಇಹವನ್ನು ತೊರೆದು ಹೋಗುವ ಪುರುಷನನ್ನು ಅವನು ಮಾಡಿರುವ ಕೇವಲವಾದ ಶುಭಾಶುಭಕರ್ಮಗಳು ಮಾತ್ರ ಸಾರ್ಥಕಗಳಾಗಿ ಅವನಿಗೂ ಮುಂದಾಗಿಯೇ ಹೋಗುವುವು.

೯೬. ಮಹದೈಶ್ವರ್ಯಸಂಪನ್ನನಾದರೂ, ನಿರ್ಧನನಾದ ದರಿದ್ರನಂತೆ ಇಹವನ್ನು ನೂಕುವ ಪುರುಷನಿಗೆ ಎಲ್ಲಿಯೂ ಭಯವೆಂಬುದಿರುವುದಿಲ್ಲವು. ಧನಿಕನಾದವನನ್ನು ಸಮಸ್ತ ಭಯಗಳೂ ಬೆಂಬತ್ತಿಯೇ ಬರುತ್ತವೆ. ಅವು ಅವನನ್ನು ಬಿಡುವುದೇ ಇಲ್ಲವು; ಆದುದರಿಂದ ನಾನು ಈ ಧನವನ್ನು ತ್ಯಾಗ ಮಾಡುವೆನು.

೯೭. ಲೋಭಿಗಳು ಪಾಪಗಳನ್ನು ಮಾಡುವರು; ಉದಾರಿಗಳೂ, ಶುದ್ಧ ಮನಸ್ಕರೂ ಆದವರು ಪಾಪಗಳನ್ನು ಮಾಡುವುದಿಲ್ಲವು. ಧರ್ಮದ ಸಾರಸರ್ವಸ್ವವನ್ನು ವಿಚಾರಮಾಡಿದಲ್ಲಿ ಈ ವಿಷಯವು ಗೊತ್ತಾಗುವುದು.

ತ್ವಂ ವಿಷ್ಣುಸ್ತ್ವಂ ಜಗನ್ನಾಥೋ ಬ್ರಹ್ಮರೂಪಃ ಸನಾತನಃ ।
ಇಂದ್ರಸ್ತ್ವಂ ದೇವದೇವೇಶ ಸುರನಾಥ ನಮೋಽಸ್ತು ತೇ ॥ ೯೮ ॥
ತ್ವಂ ಕ್ಷಿತಿರ್ವರುಣಶ್ಚೈವ ಪವನಸ್ತ್ವಂ ಹುತಾಶನಃ ।
ತ್ವಂ ದೀಕ್ಷಾ ಯಜಮಾನಶ್ಚ ಆಕಾಶಂ ಸೋಮ ಏವ ಚ ॥ ೯೯ ॥
ತ್ವಂ ಸೂರ್ಯಸ್ತ್ವಂ ತು ವಿತ್ತೇಶೋ ಯಮಸ್ತ್ವಂ ಗುರುರೇವ ಚ ।
ತ್ವಯಾ ವ್ಯಾಪ್ತಂ ಜಗತ್ಸರ್ವಂ ತ್ರೈಲೋಕ್ಯಂ ಭಾಸ್ವತಾ ಯಥಾ ॥ ೧೦೦ ॥
ಏತದ್ಬಾಣಕೃತಂ ಸ್ತೋತ್ರಂ ಶ್ರುತ್ವಾ ದೇವೋ ಮಹೇಶ್ವರಃ ।
ಕ್ರೋಧಂ ಮುಕ್ತ್ವಾ ಪ್ರಸನ್ನಾತ್ಮಾ ತದಾ ವಚನಮಬ್ರವೀತ್ ॥ ೧೦೧ ॥

ಈಶ್ವರ ಉವಾಚ:—

ನಭೇತವ್ಯಂ ನಭೇತವ್ಯಮದ್ಯಪ್ರಭೃತಿ ದಾನವ ।
ಸೌವರ್ಣೇ ಭವನೇ ತಿಷ್ಠ ಮಮ ಪಾರ್ಶ್ವೇಽಥವಾ ಪುನಃ ॥ ೧೦೨ ॥
ಪುತ್ರ ಪೌತ್ರಪ್ರಪೌತ್ರೈಶ್ಚ ಬಾಂಧವೈಃ ಸಹಭಾರ್ಯಯಾ ।
ಅದ್ಯಪ್ರಭೃತಿ ವತ್ಸ ತ್ವಮವಧ್ಯಃ ಸರ್ವಶತ್ರುಷು ॥ ೧೦೩ ॥

---

೯೮–೯೯. ಎಲೈ ಶಂಕರನೇ! ನೀನೇ ವಿಷ್ಣುವು; ಜಗನ್ನಾಥನು. ಸನಾತನವಾದ ಬ್ರಹ್ಮಸ್ವರೂಪವೂ ನೀನೇ ಆಗಿರುವೆ. ಓ ದೇವದೇವೇಶ್ವರನೇ! ನೀನೇ ಇಂದ್ರನಾಗಿರುವೆ. ಸುರೇಶ್ವರನಾದ ನಿನಗೆ ನಮೋನಮಃ. ನೀನೇ ಭೂಮಿಯು; ನೀನೇ ವರುಣನು; ವಾಯುವೂ, ಹುತಾಶನನೂ ಆಗಿರುವೆ. ದೀಕ್ಷಿತನೂ, ಯಜಮಾನನೂ, ಆಕಾಶವೂ, ಚಂದ್ರನೂ ನೀನೇ!

೧೦೦. ಸೂರ್ಯನೂ, ಕುಬೇರನೂ, ಯಮನೂ, ಗುರುವೂ, ನೀನೇ ಆಗಿರುವೆ. ಈ ಲೋಕತ್ರಯವನ್ನೂ ನೀನೇ ವ್ಯಾಪಿಸಿರುವೆ; ಅದನ್ನೂ ಬೆಳಗಿಸಿ ನೀನೂ ಬೆಳಗುತ್ತಿರುವೆ.''

೧೦೧. ಎಲೈ ಪಾಂಡುನಂದನನೇ! ಬಾಣನೆಸಗಿದ ಈ ಸ್ತೋತ್ರವನ್ನಾಲಿಸಿ ದೇವದೇವನಾದ ಮಹೇಶ್ವರನು ಕ್ರೋಧವನ್ನು ತೊರೆದು ಸುಪ್ರಸನ್ನವಾದ ಮನಸ್ಸುಳ್ಳವನಾಗಿ ಅವನನ್ನು ಕುರಿತು ಈ ಮಾತನ್ನಾಡಿದನು.

೧೦೨. ಈಶ್ವರನು ಹೇಳುತ್ತಾನೆ:—ಎಲೈ ದಾನವನೇ! ಇನ್ನುಮೇಲೆ ನೀನು ಭಯಪಡಬೇಕಾಗಿಲ್ಲವು. ನೀನು ನಿನ್ನ ಸ್ವರ್ಣಭವನದಲ್ಲಿಯೇ ಸುಖವಾಗಿರು. ಅಥವಾ ನನ್ನ ಬಳಿಯಲ್ಲಿಯಾದರೂ ಇರು.

೧೦೩. ಇದು ಮೊದಲ್ಗೊಂಡು ನೀನು ನಿನ್ನ ಪುತ್ರಪೌತ್ರಪ್ರಪೌತ್ರರಿಂದಲೂ, ಸಮಸ್ತ ಬಂಧುಗಳಿಂದಲೂ, ಕೂಡಿದವನಾಗಿ ನಿನ್ನ ಭಾರ್ಯೆಯೊಡನೆ ನಿನ್ನ ಸ್ವರ್ಣನಗರಿಯಲ್ಲಿಯೇ ನೆಲಸಿರು. ವತ್ಸ! ಇದೀಗ ನೀನು ಸಕಲ ಶತ್ರುಗಳಿಗೂ ಅವಧ್ಯನಾಗಿರುವೆ!

ಮಾರ್ಕಂಡೇಯ ಉವಾಚ :—

ಭೂಯಸ್ತಸ್ಯ ವರೋ ದತ್ತೋ ದೇವದೇವೇನ ಭಾರತ ।
ಸ್ವರ್ಗೇ ಮರ್ತ್ಯೇ ಚ ಪಾತಾಲೇ ಪೂಜಿತಃ ಸ ಸುರಾಸುರೈಃ ॥ ೧೦೪ ॥
ಅಕ್ಷಯಶ್ಚಾವ್ಯಯಶ್ಚೈವ ವತ್ಸ ತ್ವಂ ವೈ ಯಥಾಸುಖಂ ।
ತತೋ ನಿವಾರಯಾಮಾಸ ರುದ್ರಃಸಪ್ತಶಿಖಂ ತದಾ ॥ ೧೦೫ ॥
ತೃತೀಯಂ ರಕ್ಷಿತಂ ತಸ್ಯ ಪುರಂ ದೇವೇನ ಶಂಭುನಾ ।
ಜ್ವಾಲಾಮಾಲಾಕುಲಂ ಚಾನ್ಯತ್ಪತಿತಂ ಧರಣೀತಲೇ ॥ ೧೦೬ ॥
ಅರ್ಧೇನ ಪ್ರಸ್ಥಿತಾದೂರ್ಧ್ವಂ ತಸ್ಯಜ್ವಾಲಾ ದಿವಂ ಗತಾಃ ।
ಹಾಹಾಕಾರೋ ಮಹಾಂಸ್ತತ್ರ ಋಷಿಸಂಘೈರುದೀರಿತಃ ॥ ೧೦೭ ॥
ದೈವತೈಶ್ಚ ಮಹಾಭಾಗೈಃ ಸಿದ್ಧವಿದ್ಯಾಧರಾದಿಭಿಃ ।
ಏಕಂತು ಪತಿತಂ ತತ್ರ ಶ್ರೀಶೈಲೇ ಖಂಡಮುತ್ತರಂ ॥ ೧೦೮ ॥
ದ್ವಿತೀಯಂ ಪತಿತಂ ರಾಜಂಛೈಲೇ ಹ್ಯಮರಕಂಟಕೇ ।
ಪ್ರಜ್ವಲತ್ಪತಿತಂ ತತ್ರ ತೇನ ಜ್ವಾಲೇಶ್ವರಂ ಸ್ಮೃತಂ ॥ ೧೦೯ ॥

---

೧೦೪–೧೦೫. ಮಾರ್ಕಂಡೇಯನು ಹೇಳುತ್ತಾನೆ:—ಅಯ್ಯಾ ಭಾರತನೇ! ದೇವದೇವನು ಆ ಅಸುರನಿಗೆ ಇನ್ನೂ ಅಧಿಕವಾದ ವರವನ್ನನುಗ್ರಹಿಸಿದನು. "ಎಲೈ ಬಾಣನೇ! ನೀನು ಸ್ವರ್ಗ ಮರ್ತ್ಯ ಪಾತಾಳ ಲೋಕಗಳಲ್ಲಿ ಸುರಾಸುರ ನಮಸ್ಕೃತನಾಗಿ ನಾಶವಿಲ್ಲದೆಯೂ, ನೀರೋಗನಾಗಿಯೂ ಸುಖಸಂತೋಷ ಗಳಿಂದ ಇಷ್ಟಾನುಸಾರವಾಗಿ ನೆಲಸಿರುವವನಾಗು." ಇಂತು ವರವನ್ನು ನೀಡಿ ಆ ಸ್ವಾಮಿಯು, ಆ ಸ್ವರ್ಣಪುರವನ್ನೂ ಸುಡತೊಡಗಿದ್ದ ಯಜ್ಞೇಶ್ವರನನ್ನು ತಡೆದನು.

೧೦೬. ಧರ್ಮರಾಜ! ಹೀಗೆ ಆ ಶಂಕರನು ಬಾಣಾಸುರನಿಗೆ ವರವನಿತ್ತು ಅವನ ಮೂರನೆಯ ಪಟ್ಟಣವೊಂದನ್ನು ಮಾತ್ರ ಸುಡದೆ ಸಂರಕ್ಷಿಸಿದನು. ಉಳಿದೆರಡು ಪಟ್ಟಣಗಳೂ ಸುಟ್ಟುರಿದು ಭೂಮಿಗೆ ಬಿದ್ದುಹೋದವು.

೧೦೭–೧೦೯. ಆ ಪಟ್ಟಣಗಳು ಬೀಳುತ್ತಿರುವಾಗ ಮಧ್ಯಮಾರ್ಗದಲ್ಲಿ ಅದರ ಅರ್ಧ ಭಾಗವು ಊರ್ಧ್ವಮುಖವಾಗಿ ಹೊರಟು ಅದರ ಜ್ವಾಲೆಗಳು ದೇವಲೋಕಕ್ಕೆ ಹರಡಿತು. ಆಗ ಋಷಿಸಂಘಗಳು ಮಹತ್ತರವಾದ ಹಾಹಾ ಕಾರವನ್ನೆಸಗಿದರು. ದೇವತೆಗಳೂ, ಮಹಾ ಪುಣ್ಯಶಾಲಿಗಳಾದ ಸಿದ್ಧವಿದ್ಯಾ ಧರರೂ ಅಂತೆಯೆ ಹಾಹಾಕಾರಗಳನ್ನು ಮಾಡಿದರು. ಉಳಿದ ಆ ದಗ್ಧತ್ರಿಪುರದ ಅರ್ಧದಲ್ಲಿ ಒಂದು ಖಂಡವು ಶ್ರೀ ಶೈಲದಲ್ಲಿ ಬಿದ್ದಿತು. ಎರಡನೆಯ ಖಂಡವು ಅಮರಕಟಂಕಪರ್ವತದಲ್ಲಿ ಬಿದ್ದಿತು. ಪ್ರಜ್ವಲಿಸುತ್ತ ಆ ಪರ್ವತದಲ್ಲಿ ಬಿದ್ದ ಆ ಖಂಡವೇ ಜ್ವಾಲೇಶ್ವರವೆಂದು ಸ್ಮರಿಸಲಾಗಿರುವುದು.

**ದಗ್ಧೇತು ತ್ರಿಪುರೇ ರಾಜನ್ ಪತಿತೇ ಖಂಡ ಉತ್ತಮೇ**
**ರುದ್ರೋ ದೇವಃ ಸ್ಥಿತಸ್ತತ್ರ ಜ್ವಾಲಾಮಾಲಾನಿವಾರಕಃ ॥ ೧೧೦ ॥**
**ಹಾಹಾಕಾರಪರಾಣಾಂ ತು ಋಷೀಣಾಂ ರಕ್ಷಣಾಯ ಚ ।**
**ಸ್ವಯಂ ಮೂರ್ತಿರ್ಮಹೇಶಾನ ಉಮಾವೃಷಭಸಂಯುತಃ ॥ ೧೧೧ ॥**
**ಮನಸಾಽಪಿ ಸ್ಮರೇದ್ಯಸ್ತು ಭಕ್ತ್ಯಾ ಹ್ಯಮರಕಂಟಕಂ ।**
**ಚಾಂದ್ರಾಯಣಾಧಿಕಂ ಪುಣ್ಯಂ ಸ ಲಭೇನ್ನಾತ್ರ ಸಂಶಯಃ ॥ ೧೧೨ ॥**
**ಅತಿಪುಣ್ಯೋ ಗಿರಿಶ್ರೇಷ್ಠೋ ಯಸ್ಮಾದ್ಭರತಸತ್ತಮ ।**
**ಅಸ್ಮಾನ್ನಿತ್ಯಂ ಭವೇದ್ರಾಜನ್ ಸರ್ವಪಾಪಕ್ಷಯಂಕರಃ ॥ ೧೧೩ ॥**
**ನಾನಾದ್ರುಮಲತಾಕೀರ್ಣೋ ನಾನಾ ಪುಷ್ಪೋಪಶೋಭಿತಃ ।**
**ನಾನಾಗುಲ್ಮಲತಾಕೀರ್ಣೋ ನಾನಾವಲ್ಲೀಭಿರಾವೃತಃ ॥ ೧೧೪ ॥**
**ಸಿಂಹವ್ಯಾಘ್ರ ಸಮಾಕೀರ್ಣೋ ಮೃಗಯೂಥೈರಲಂಕೃತಃ ।**
**ಶ್ವಾಪದಾನಾಂ ಚ ಘೋಷೇಣ ನಿತ್ಯಂ ಪ್ರಮುದಿತೋಽಭವತ್ ॥ ೧೧೫ ॥**

---

೧೧೦. ಅರಸಾ! ತ್ರಿಪುರವು ದಗ್ಧವಾಗಿ ಅದರ ಖಂಡವೊಂದು ಆ ಅಮರ ಕಂಟಕ ಗಿರಿಯಲ್ಲಿ ಬಿದ್ದಂದು ರುದ್ರನೇ ಅಲ್ಲಿ ನಿಂತು ಅದರ ಜ್ವಾಲೆಯನ್ನು ನಿವಾರಿಸಿದನು.

೧೧೧. ಹೀಗೆ ಆ ದಗ್ಧತ್ರಿಪುರಖಂಡದ ಜ್ವಾಲೆಗಳನ್ನು ನಿವಾರಿಸಿ, ಹಾಹಾ ಕಾರಮಾಡುತ್ತಿದ್ದ ಋಷಿಗಳನ್ನು ಸಂರಕ್ಷಿಸಿದನು. ಅದಕ್ಕಾಗಿ ಆ ಪರಮೇಶ್ವರನು ಅಲ್ಲಿ ಉಮೆಯೊಡನೆಯೂ, ವೃಷಭವಾದ ನಂದಿಯೊಡನೆಯೂ ನಿಂತನು.

೧೧೨. ಯಾವನು ಭಕ್ತಿಯಿಂದ ಮನಸ್ಸಿನಲ್ಲಿಯಾದರೂ ಇಂತಹ ಅಮರ ಕಂಟಕಪರ್ವತವನ್ನು ಸ್ಮರಿಸುವನೋ ಆ ಮಾನವನು ಚಾಂದ್ರಾಯಣವ್ರತಾ ಚರಣದಿಂದುಂಟಾಗುವ ಪುಣ್ಯಕ್ಕಿಂತಲೂ ಅಧಿಕವಾದ ಪುಣ್ಯವನ್ನು ಪಡೆಯುವ ನೆಂಬುದರಲ್ಲಿ ಸಂಶಯವಿಲ್ಲ.

೧೧೩. ಎಲೈ ಮಹಾರಾಜನೇ! ಈ ಅಮರಕಂಟಕಗಿರಿಯು ಬಹು ಪುಣ್ಯ ಕರವಾದ ಕ್ಷೇತ್ರವಾದುದರಿಂದ ಇಲ್ಲಿ ಅನುದಿನವೂ ಪಾಪಕ್ಷಯವಾಗು ತ್ತಿರುವುದು.

೧೧೪–೧೧೫. ಬಗೆ ಬಗೆಯ ಮರ ಬಳ್ಳಿಗಳಿಂದಲೂ, ಬಗೆ ಬಗೆಯ ಹೂಗಳಿಂದಲೂ ಶೋಭಿತವಾಗಿ, ಅನೇಕಾನೇಕ ಗುಲ್ಮಲತೆಗಳಿಂದಲೂ, ಇತರ ಸುಮಲತೆಗಳಿಂದಲೂ ಆವೃತವಾಗಿ, ಸಿಂಹ ವ್ಯಾಘ್ರಗಳಿಂದ ತುಂಬಿ, ಜಿಂಕೆ ಹಿಂಡುಗಳಿಂದಲಂಕೃತವಾಗಿ, ಕ್ರೂರ ಮೃಗಗಳ ಘೋಷದಿಂದ ಈ ಗಿರಿಶ್ರೇಷ್ಠವು ಪ್ರಮುದಿತವಾಗಿರುವುದಾಯಿತು.

ಬ್ರಹ್ಮೇಂದ್ರವಿಷ್ಣುಪ್ರಮುಖೈರ್ಹ್ಯಮರೈಶ್ಚ ಸಹಸ್ರಶಃ ।
ಸೇವ್ಯತೇ ದೇವದೇವೇಶಃ ಶಂಕರಸ್ತತ್ರ ಪರ್ವತೇ ॥ ೧೧೬ ॥
ಪತನಂ ಕುರುತೇ ಯೋಽಸ್ಮಿನ್ಪರ್ವತೇಽಮರಕಂಟಕೇ ।
ಕ್ರೀಡತೇ ಕ್ರಮಶೋ ರಾಜನ್ಭುವನಾನಿ ಚತುರ್ದಶ ॥ ೧೧೭ ॥
ಐಂದ್ರಂ ವಾಹ್ನಂಚ ಕೌಬೇರಂ ವಾಯವ್ಯಂ ಯಾಮ್ಯಮೇವಚ ।
ನೈಋರ್ತ್ಯಂ ವಾರುಣಂ ಚೈವ ಸೌಮ್ಯಂ ಸೌರಂ ತಥೈವ ಚ ॥ ೧೧೮ ॥
ಬ್ರಾಹ್ಮಂ ಚ ಪದಮುಕ್ಲಿಷ್ಟಂ ವೈಷ್ಣವಂ ತದನಂತರಂ ।
ಉಮಾರುದ್ರಂ ಮಹಾಭಾಗ ಐಶ್ವರಂ ತದನಂತರಂ ॥ ೧೧೯ ॥
ಪರಂ ಸದಾಶಿವಂ ಶಾಂತಂ ಸೂಕ್ಷ್ಮಂ ಜ್ಯೋತಿರತೀಂದ್ರಿಯಂ ।
ತಸ್ಮಿನ್ಯಾತಿ ಲಯಂ ಧೀರೋ ವಿಧಿನಾ ನಾಽತ್ರ ಸಂಶಯಃ ॥ ೧೨೦ ॥

ಯುಧಿಷ್ಠಿರ ಉವಾಚ :—

ಕೋಽಪ್ಯತ್ರ ವಿಧಿರುದ್ದಿಷ್ಟಃ ಪತನೇ ಋಷಿಸತ್ತಮ ।
ಏತನ್ಮೇ ಸರ್ವಮಾಚಕ್ಷ್ವ ಸಂಶಯೋಽಸ್ತಿ ಮಹಾಮುನೇ ॥ ೧೨೧ ॥

---

೧೧೬. ಈ ಪರ್ವತೋತ್ತಮದಲ್ಲಿ ನೆಲಸಿರುವ ದೇವದೇವೇಶ್ವರನಾದ ಶಂಕರನನ್ನು ಬ್ರಹ್ಮ, ಇಂದ್ರ, ವಿಷ್ಣುವೇ ಮೊದಲಾದ ಸಹಸ್ರಾರು ದೇವತೆಗಳು ಸೇವಿಸುತ್ತಿರುವರು.

೧೧೭. ಯಾವ ಮಾನವನು ಈ ಅಮರಕಂಟಕಪರ್ವತಾಗ್ರದಿಂದ ಕೆಳಕ್ಕೆ ಬಿದ್ದು ಅಸುದೊರೆಯುವನೋ ಅವನು ಕ್ರಮವಾಗಿ ಚತುರ್ದಶ ಭುವನಗಳಲ್ಲಿಯೂ ಕ್ರೀಡಿಸುವನು.

೧೧೮–೧೨೦. ಐಂದ್ರ, ವಾಹ್ನ, ಕೌಬೇರ, ವಾಯವ್ಯ, ಯಾಮ್ಯ, ನೈಋರ್ತ್ಯ, ವಾರುಣ, ಸೌಮ್ಯ, ಸೌರ, ಬ್ರಾಹ್ಮ, ಅಕ್ಲಿಷ್ಟಪದವೆನಿಸಿದ ವೈಷ್ಣವ ಇದಾದ ತರುವಾಯ ಉಮಾರುದ್ರ ಆಮೇಲೆ ಐಶ್ವರ ಎಂಬೀ ಲೋಕಗಳಲ್ಲಿ ಆ ಪುಣ್ಯಾತ್ಮನು ನೆಲಸಿ ಭೋಗಭಾಗ್ಯಗಳನ್ನನುಭವಿಸಿಯಾದ ಬಳಿಕ ಶಾಂತವೂ, ಸೂಕ್ಷ್ಮವೂ, ಜ್ಯೋತಿಸ್ವರೂಪವೂ, ಅತೀಂದ್ರಿಯವೂ ಆದ ಸದಾಶಿವ ಲಿಂಗದಲ್ಲಿ ಲಯವಾಗುತ್ತಾನೆಂಬುದರಲ್ಲಿ ಸಂಶಯವಿರುವುದಿಲ್ಲವು.

೧೨೧. ಯುಧಿಷ್ಠಿರನು ಕೇಳುತ್ತಾನೆ:—ಎಲೈ ಋಷಿಶ್ರೇಷ್ಠನೇ! ಈ ಅಮರಕಂಟಕಪರ್ವತದಿಂದ ಪತನವಾಗುವುದಕ್ಕೆ ಯಾವ ವಿಧಿಯನ್ನನುಸರಿಸಬೇಕು. ಈ ವಿಷಯದಲ್ಲಿ ನನಗೆ ಸಂಶಯವಿರುವುದು. ಆದುದರಿಂದ ಮಹಾಮುನಿಯಾದ ನೀನು ಈ ವಿಷಯವೆಲ್ಲವನ್ನೂ ನನಗೆ ತಿಳಿಸುವವನಾಗು.

ಶ್ರೀ ಮಾರ್ಕಂಡೇಯ ಉವಾಚ :—

ಶೃಣುಷ್ವ ಕಥಯಿಷ್ಯಾಮಿ ತಂ ವಿಧಿಂ ಪಾಂಡುನಂದನ ।
ಯತ್ಕೃತ್ವಾ ಪ್ರಥಮಂ ಕರ್ಮ ನಿಪತೇತ್ತದನಂತರಂ ॥ ೧೨೨ ॥
ಕೃತ್ವಾ ಕೃಚ್ಛ್ರತ್ರಯಂ ಪೂರ್ವಂ ಜಪ್ತ್ವಾ ಲಕ್ಷಂ ದಶೈವ ತು ।
ಶಾಕಯಾವಕಭುಕ್ತ್ಯೈವ ಶುಚಿಸ್ತ್ರಿಷವಣೋ ನೃಪ ॥ ೧೨೩ ॥
ತ್ರಿಕಾಲಮರ್ಚಯೇದೀಶಂ ದೇವದೇವಂ ತ್ರಿಲೋಚನಂ ।
ದಶಾಂಶೇನತು ರಾಜೇಂದ್ರ ಹೋಮಂ ತತ್ರೈವ ಕಾರಯೇತ್ ॥ ೧೨೪ ॥
ಲಕ್ಷವಾರಂ ಜಪೇದ್ದೇವಂ ಗಂಧಮಾಲ್ಯೈಶ್ಚ ಪೂಜಯೇತ್ ।
ರಾತ್ರೌ ಸ್ವಪ್ನೇ ತದಾ ಪಶ್ಯೇದ್ವಿಮಾನಸ್ಥಂ ತತಃ ಕ್ಷಿಪೇತ್ ॥ ೧೨೫ ॥
ಅನೇನೈವ ವಿಧಾನೇನ ಆತ್ಮಾನಂ ಯಸ್ತು ನಿಕ್ಷಿಪೇತ್ ।
ಸ್ವರ್ಗಲೋಕಮನುಪ್ರಾಪ್ಯ ಕ್ರೀಡತೇ ತ್ರಿದಶೈಃಸಹ ॥ ೧೨೬ ॥
ತ್ರಿಂಶದ್ವರ್ಷಸಹಸ್ರಾಣಿ ತ್ರಿಂಶತ್ಕೋಟ್ಯಸ್ತಥೈವಚ ।
ಭುಕ್ತ್ವಾ ಮನೋರಮಾನ್ ಭೋಗಾಂಸ್ತದಾ ಗಚ್ಛೇನ್ಮಹೀತಲಂ॥ ೧೨೭ ॥

---

೧೨೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಪಾಂಡುನಂದನ! ಹೇಳುವೆನು, ಕೇಳು. ಮೊದಲು ಯಾವ ಕರ್ಮವನ್ನು ಮಾಡಿ ಆಮೇಲೆ ಪರ್ವತದಿಂದ ಬೀಳಬೇಕೆಂಬುದನ್ನಾಲಿಸು.

೧೨೩. ಪ್ರಥಮದಲ್ಲಿ ಕೃಚ್ಛ್ರತ್ರಯವನ್ನು ಆಚರಿಸಿ ಆಮೇಲೆ ಹತ್ತು ಲಕ್ಷ ಪಂಚಾಕ್ಷರೀ ಜಪವನ್ನು ಮಾಡಿ, ಶಾಕ ಮತ್ತು ಯವಗಳನ್ನು ಮಾತ್ರ ಭುಜಿಸಿ ಕೊಂಡು ಶುಚಿಯಾಗಿದ್ದು ತ್ರಿಷವಣ ಸ್ನಾನಗಳನ್ನು ಮಾಡುತ್ತಿರಬೇಕು.

೧೨೪–೧೨೫. ತ್ರಿಕಾಲಗಳಲ್ಲಿಯೂ ದೇವದೇವನಾದ ತ್ರಿಲೋಚನನ್ನು ಪೂಜಿಸಬೇಕು. ಭಗವಂತನನ್ನು ಕುರಿತು ಒಂದು ಲಕ್ಷ ಜಪವನ್ನು ಮಾಡ ಬೇಕು. ಅಷ್ಟೇಸಾರಿ ಗಂಧಮಾಲ್ಯಾದಿಗಳಿಂದ ಅರ್ಚಿಸಬೇಕು. ಜಪದ ದಶಾಂಶ ದಿಂದ ಹೋಮಮಾಡಬೇಕು. ಹೀಗೆ ಮಾಡಿದ ತರುವಾಯ ರಾತ್ರಿಯಲ್ಲಿ ವಿಮಾನಾರೂಢನಾದ ಪರಮೇಶ್ವರನನ್ನು ಸ್ವಪ್ನದಲ್ಲಿ ಸಂದರ್ಶಿಸುತ್ತಾನೆ. ಆ ತರುವಾಯ ಪರ್ವತಾಗ್ರದಿಂದ ಬೀಳಬೇಕು.

೧೨೬. ಯಾವ ಮಾನವನು ಈ ವಿಧಾನದಿಂದ ತನ್ನ ದೇಹವನ್ನು ಕೆಳಕ್ಕೆ ಕೆಡಹುವನೋ ಅವನು ಸ್ವರ್ಗಲೋಕವನ್ನು ಸೇರಿ ದೇವತೆಗಳೊಡನೆ ಸರಿಸಮವಾಗಿ ಸುಖಿಸುತ್ತಾನೆ.

೧೨೭. ಅವನು ಆ ಅಮರ ಲೋಕದಲ್ಲಿ ಮೂವತ್ತು ಕೋಟಿ ಮೂವತ್ತು ಸಾವಿರ ವರ್ಷಗಳ ಕಾಲ ಮನೋಹರಗಳಾದ ಭೋಗಗಳನ್ನು ಅನುಭವಿಸುತ್ತಿದ್ದು ಆ ತರುವಾಯ ಭೂಲೋಕಕ್ಕೆ ಬರುತ್ತಾನೆ.

**ಪೃಥಿವೀಮೇಕಚ್ಛತ್ರೇಣ ಭುನಕ್ತಿ ಲೋಕಪೂಜಿತಃ ।**
**ವ್ಯಾಧಿಶೋಕವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೧೨೮ ॥**
**ಜ್ವಾಲೇಶ್ವರಂ ತು ತತ್ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ।**
**ತತ್ರ ಜ್ವಾಲಾನದೀ ಪಾರ್ಥ ಪ್ರಸ್ರುತಾ ಶಿವನಿರ್ಮಿತಾ ॥ ೧೨೯ ॥**
**ನಿರ್ವಾಪ್ಯ ತದ್ಬಾಣಪುರಂ ರೇವಯಾ ಸಹ ಸಂಗತಾ ।**
**ತತ್ರ ಸ್ನಾತ್ವಾ ಮಹಾರಾಜ ವಿಧಿನಾ ಮಂತ್ರಸಂಯುತಃ ॥ ೧೩೦ ॥**
**ತಿಲಸಂಮಿಶ್ರತೋಯೇ ತು ತರ್ಪಯೇತ್ಪಿತೃದೇವತಾಃ ।**
**ಪಿಂಡದಾನೇನ ಚ ಪಿತೄನ್ಪೌಂಡರೀಕಫಲಂ ಲಭೇತ್ ॥ ೧೩೧ ॥**
**ಅನಾಶಕಂತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।**
**ಮುಚ್ಯತೇ ಸರ್ವಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ॥ ೧೩೨ ॥**
**ಅಮರಾಣಾಂ ಶತೈಶ್ಚೈವ ಸೇವಿತೋ ಹ್ಯಮರೇಶ್ವರಃ ।**
**ತಥೈವ ಋಷಿಸಂಘೈಶ್ಚ ತೇನ ಪುಣ್ಯತಮೋ ಮಹಾನ್ ॥ ೧೩೩ ॥**

---

೧೨೮. ಭೂಲೋಕಕ್ಕೆ ಬಂದು ಅವನು ಚಕ್ರೇಶ್ವರನಾಗಿ ಜನಿಸಿ ಏಕಚ್ಛತ್ರಾಧಿಪತ್ಯದಿಂದ ಭೂಮಿಯನ್ನಾಳಿ ಲೋಕಪೂಜಿತನಾಗಿ, ವ್ಯಾಧಿಗಳಿಂದಲೂ, ಇತರ ದುಃಖಗಳಿಂದಲೂ ವಿಮುಕ್ತನಾಗಿ ನೂರು ಸಂವತ್ಸರಗಳ ಕಾಲ ಜೀವಿಸುವನು.

೧೨೯. ಅಯ್ಯಾ ಪಾರ್ಥನೇ! ಆ ಪರ್ವತದಲ್ಲಿ ಜ್ವಾಲೇಶ್ವರವೆಂಬ ತೀರ್ಥವೊಂದಿರುವುದು. ಅದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು. ಪರಮೇಶ್ವರನು ಅದನ್ನು ಜ್ವಾಲೆಗಳಿಂದಲೇ ನಿರ್ಮಿಸಿದನು.

೧೩೦–೧೩೧. ಆ ಜ್ವಾಲೇಶ್ವರ ತೀರ್ಥವು ಉರಿಯುತ್ತಿದ್ದ ಬಾಣಾಸುರನ ಸ್ವರ್ಣನಗರವನ್ನು ನಂದಿಸಿ ರೇವಾನದಿಯೊಡನೆ ಸೇರಿತು. ಮಹಾರಾಜ! ಅಲ್ಲಿ ವಿಧ್ಯುಕ್ತವಾಗಿ ಸ್ನಾನಮಾಡಿ ತಿಲಮಿಶ್ರವಾದ ಜಲದಿಂದ ಪಿತೃದೇವತೆಗಳನ್ನು ತರ್ಪಣದಿಂದಲೂ, ಪಿಂಡಪ್ರದಾನದಿಂದಲೂ ಸೇವಿಸಬೇಕು. ಇದರಿಂದ ಪೌಂಡರೀಕಯಾಗದಿಂದ ಲಭಿಸುವ ಪುಣ್ಯವು ಲಭಿಸುತ್ತದೆ.

೧೩೨. ಆ ಜ್ವಾಲೇಶ್ವರ ತೀರ್ಥದಲ್ಲಿ ಯಾವನು ಅನಾಶಕವ್ರತವನ್ನು ಮಾಡುತ್ತಾನೆಯೋ ಅವನು ಸಕಲ ಪಾಪಗಳಿಂದಲೂ ಮುಕ್ತನಾಗಿ ರುದ್ರಲೋಕವನ್ನು ಸೇರುತ್ತಾನೆ.

೧೩೩. ಅಮರಕಂಟಕಗಿರಿಯಲ್ಲಿ ನೆಲಸಿರುವ ಅಮರೇಶ್ವರನನ್ನು ನೂರಾರು ಮಂದಿ ಅಮರರು ಸೇವಿಸುತ್ತಿರುವರು. ಅಂತೆಯೇ ಋಷಿಸಂಘಗಳೂ ಪುಣ್ಯತಮನಾದ ಈ ಸ್ವಾಮಿಯನ್ನು ಸಂಸೇವಿಸುತ್ತಿರುವರು.

*



ಸಮಂತಾದ್ಯೋಜನಂ ತೀರ್ಥಂ ಪುಣ್ಯಂ ಹ್ಯಮರಕಂಟಕಂ ।
ರುದ್ರಕೋಟಿಸಮೋಪೇತಂ ತೇನ ತತ್ಪುಣ್ಯಮುತ್ತಮಂ ॥ ೧೩೪ ॥
ತಸ್ಯ ಪರ್ವತರಾಜಸ್ಯ ಯಃ ಕರೋತಿ ಪ್ರದಕ್ಷಿಣಂ ।
ಪ್ರದಕ್ಷಿಣೀಕೃತಾ ತೇನ ಪೃಥಿವೀ ನಾಽತ್ರ ಸಂಶಯಃ ॥ ೧೩೫ ॥
ವಾಚಿಕಂ ಮಾನಸಂ ಚೈವ ಕಾಯಿಕಂ ತ್ರಿವಿಧಂ ಚ ಯತ್ ।
ನಶ್ಯತೇ ಪಾತಕಂ ಸರ್ವಮಿತ್ಯೇವಂ ಶಂಕರೋಽಬ್ರವೀತ್ ॥ ೧೩೬ ॥
ಅಮರೇಶ್ವರಪಾರ್ಶ್ವೇ ಚ ತೀರ್ಥಂ ಶುಕ್ರೇಶ್ವರಂ ನೃಪ ।
ತಪಸ್ತಪ್ತ್ವಾ ಪುರಾ ತತ್ರ ಶಕ್ರೇಣ ಸ್ಥಾಪಿತಂ ಕಿಲ ॥ ೧೩೭ ॥
ಕುಶಾವರ್ತಂನಾಮತೀರ್ಥಂ ಬ್ರಹ್ಮಣಾ ಚ ಕೃತಂ ಶುಭಂ ।
ಬ್ರಹ್ಮಕುಂಡಮಿತಿ ಖ್ಯಾತಂ ಹಂಸತೀರ್ಥಂ ತಥಾಽಪರಂ ॥ ೧೩೮ ॥
ಅಂಬರೀಷಸ್ಯ ತೀರ್ಥಸ್ಯ ಮಹಾಕಾಲೇಶ್ವರಂ ತಥಾ ।
ಕಾವೇರ್ಯಾಃ ಪೂರ್ವಭಾಗೇ ಚ ತೀರ್ಥಂ ವೈ ಮಾತೃಕೇಶ್ವರಂ ॥ ೧೩೯ ॥

---

೧೩೪. ಅಮರಕಂಟಕದ ಸುತ್ತಣ ಒಂದು ಯೋಜನದ ಪ್ರದೇಶವೆಲ್ಲವೂ ಕೋಟಿರುದ್ರರಿಂದ ಕೂಡಿದುದಾಗಿರುವುದು. ಆದುದರಿಂದ ಅದು ಉತ್ತಮೋತ್ತಮವೂ ಪುಣ್ಯತಮವೂ ಆದ ತೀರ್ಥವಾಗಿರುವುದು.

೧೩೫. ಎಲೈ ಧರ್ಮನಂದನನೇ! ಪರ್ವತರಾಜನಾದ ಈ ಅಮರಕಂಟಕ ಗಿರಿಯನ್ನು ಯಾವ ಮಾನವನು ಪ್ರದಕ್ಷಿಣೆ ಮಾಡುತ್ತಾನೆಯೋ ಅವನು ಅಖಿಲ ಭೂಮಂಡಲವನ್ನೇ ಪ್ರದಕ್ಷಿಣೆ ಮಾಡಿದವನಾಗುವನು.

೧೩೬. ಈ ಗಿರಿಪ್ರದಕ್ಷಿಣೆಯಿಂದ ಕಾಯಿಕ ವಾಚಿಕ ಮಾನಸಿಕಗಳೆಂಬ ಮೂರು ಬಗೆಯ ಪಾಪಗಳೂ ನಾಶವಾಗುವುದೆಂದು ಸಾಕ್ಷಾತ್ ಶಂಕರನೇ ಹೇಳಿರುವನು.

೧೩೭. ಅಯ್ಯಾ ದೊರೆಯೇ! ಈ ಅಮರೇಶ್ವರನ ಪಾರ್ಶ್ವದಲ್ಲಿಯೇ ಶಕ್ರೇಶ್ವರವೆಂಬ ತೀರ್ಥವಿರುವುದು. ಪೂರ್ವದಲ್ಲಿ ಶಕ್ರನು (ದೇವೇಂದ್ರನು) ತಪಸ್ಸನ್ನೆಸಗಿ ಶಕ್ರೇಶ್ವರನನ್ನು ಅಲ್ಲಿ ಸ್ಥಾಪಿಸಿದನಷ್ಟೆ!

೧೩೮. ಅಲ್ಲಿಯೇ ಬ್ರಹ್ಮನಿರ್ಮಿತವಾದ ಕುಶಾವರ್ತತೀರ್ಥವಿರುವುದು. ಇದು ಬಹು ಶುಭಕರವಾದುದು. ಇದಕ್ಕೆ ಬ್ರಹ್ಮಕುಂಡವೆಂಬ ಪ್ರಸಿದ್ಧಿಯಿರುವುದು. ಇದಾದ ಬಳಿಕ ಹಂಸತೀರ್ಥವು.

೧೩೯. ಅಂಬರೀಷತೀರ್ಥ, ಮಹಾ ಕಾಮೇಶ್ವರಗಳೂ ಅಲ್ಲಿಯೇ ಇರುವುವು. ಕಾವೇರಿಯ ಪೂರ್ವಭಾಗದಲ್ಲಿಯಾದರೋ ಮಾತೃಕೇಶ್ವರತೀರ್ಥವಿರುವುದು.

**ಏತಾನಿ ದಕ್ಷಿಣೇ ತೀರೇ ರೇವಾಯಾ ಭರತರ್ಷಭ ।**
**ಸಂಸೇವನಸ್ನಾನದಾನೈಃ ಪಾಪಸಂಘಹರಾಣಿಚ ॥ ೧೪೦ ॥**
**ಭೃಗುತುಂಗೇ ಮಹಾರಾಜ ಪ್ರಸಿದ್ಧೋ ಭೈರವಃಶಿವಃ ।**
**ತಸ್ಯ ಯಾಮ್ಯವಿಭಾಗೇ ಚ ತೀರ್ಥಂ ವೈ ಚಪಲೇಶ್ವರಂ ॥ ೧೪೧ ॥**
**ಏತೌ ಸ್ಥಿತೌ ದುಃಖಹರೌ ರೇವಾಯಾ ಉತ್ತರೇ ತಟೇ ।**
**ತಾವಭ್ಯರ್ಚ್ಯ ತಥಾ ನತ್ವಾ ಸಮ್ಯಗ್ಯಾತ್ರಾಫಲಂ ಭವೇತ್ ।**
**ಅದೃಷ್ಟಪೂಜಿತೌ ತೌಹಿ ನರಾಣಾಂ ವಿಘ್ನಕಾರಕೌ ॥ ೧೪೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ "ಜ್ವಾಲೇಶ್ವರತೀರ್ಥಾಽಮರೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮಷ್ಟಾವಿಂಶೋಽಧ್ಯಾಯಃ**

---

೧೪೦. ಎಲೈ ಭರತರ್ಷಭನೇ! ರೇವಾನದಿಯ ದಕ್ಷಿಣತೀರದಲ್ಲಿ ಈ ತೀರ್ಥಗಳೆಲ್ಲವೂ ಇರುತ್ತವೆ. ಸಂಸೇವಿಸಿ, ಸ್ನಾನದಾನಗಳನ್ನು ಮಾಡಿದ್ದಾದರೆ ಇವೆಲ್ಲವೂ ಪಾಪಗಳನ್ನು ಪರಿಹರಿಸುವುವು.

೧೪೧. ಮಹಾರಾಜ! ಭೃಗುತುಂಗತೀರ್ಥದಲ್ಲಿ ಶಿವನು ಭೈರವನೆಂದು ಹೆಸರಾಗಿರುವನು. ಆ ಭೈರವನ ದಕ್ಷಿಣತೀರದಲ್ಲಿ ಚಪಲೇಶ್ವರತೀರ್ಥವಿರುವುದು.

೧೪೨. ಭೈರವನನ್ನೂ, ಚಪಲೇಶ್ವರ ತೀರ್ಥವನ್ನೂ ರೇವೆಯ ಉತ್ತರ ತೀರದಲ್ಲಿ ಅರ್ಚಿಸಿದ್ದಾದರೆ ದುಃಖವನ್ನು ಕಳೆಯುವ ಅವರೀರ್ವರ ಅನುಗ್ರಹದಿಂದಲೂ ಯಾತ್ರಾಫಲವು ಸಂಪೂರ್ಣವಾಗಿ ಸಿದ್ಧಿಸುವುದು. ಇವರೀರ್ವರನ್ನೂ ಸಂದರ್ಶಿಸಿ ಪೂಜಿಸದಿದ್ದರೆ ಯಾತ್ರಾರ್ಥಿಗಳಾದ ಮಾನವರಿಗೆ ಇವರು ವಿಘ್ನಗಳನ್ನೆಸಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಜ್ವಾಲೇಶ್ವರತೀರ್ಥ ಅಮರೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನತ್ರಿಂಶೋಽಧ್ಯಾಯಃ

## ಕಾವೇರೀಸಂಗಮ ಮಾಹಾತ್ಮ್ಯವರ್ಣನಂ

ಯುಧಿಷ್ಠಿರ ಉವಾಚ :—

**ಕಾವೇರೀತಿಚ ವಿಖ್ಯಾತಾ ತ್ರಿಷು ಲೋಕೇಷು ಸತ್ತಮ ।**
**ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ತಸ್ಯಾ ಮಾರ್ಕಂಡ ತತ್ವತಃ ॥ ೧ ॥**
**ಕೀದೃಶಂ ದರ್ಶನಂ ತಸ್ಯಾಃ ಫಲಂ ಸ್ಪರ್ಶೇಽಥವಾ ವಿಭೋ ।**
**ಸ್ನಾನೇ ಜಾಪ್ಯೇಽಥವಾ ದಾನ ಉಪವಾಸೇ ತಥಾ ಮುನೇ ॥ ೨ ॥**
**ಕಥಯಸ್ವ ಮಹಾಭಾಗ ಕಾವೇರೀಸಂಗಮೇ ಫಲಂ ।**
**ಧರ್ಮಃ ಶ್ರುತೋಽಥ ದೃಷ್ಟೋವಾ ಕಥಿತೋ ವಾ ಕೃತೋಽಪಿವಾ ॥ ೩ ॥**
**ಅನುಮೋದಿತೋ ವಾ ವಿಪ್ರೇಂದ್ರ ಪುನಾತೀತಿ ಶ್ರುತಂ ಮಯಾ ।**
**ಯಥಾ ಧರ್ಮಪ್ರಸಂಗೇತು ಮುನೇ ಧರ್ಮೋಽಪಿ ಜಾಯತೇ ॥ ೪ ॥**
**ಸ್ವರ್ಗಶ್ಚ ನರಕಶ್ಚೈವ ಇತ್ಯೇವಂ ವೈದಿಕೀ ಶ್ರುತಿಃ ॥ ೫ ॥**

---

### ಕನ್ನಡದ ಅನುವಾದ

#### ಕಾವೇರಿಸಂಗಮ ಮಾಹಾತ್ಮ್ಯವರ್ಣನ

೧. ಯುಧಿಷ್ಠಿರನು ಕೇಳುತ್ತಾನೆ:—ಎಲೈ ಮಹರ್ಷಿಶ್ರೇಷ್ಠನೇ! ಕಾವೇರಿಯೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವ ನದಿಯೊಂದಿರುವುದಷ್ಟೆ. ಆ ನದಿಯ ಮಾಹಾತ್ಮ್ಯವನ್ನು ತತ್ತ್ವತಃ ಕೇಳಿ ತಿಳಿಯಬಯಸುವೆನು.

೨. ಆ ಪುಣ್ಯನದಿಯ ದರ್ಶನವೆಂಥದು? ಎಲೈ ವಿಭುವೇ! ಆ ನದಿಯ ಜಲವನ್ನು ಸ್ಪರ್ಶಿಸುವುದರಿಂದಾವ ಫಲವು ದೊರಕುತ್ತದೆ? ಅದರಲ್ಲಿ ಸ್ನಾನವನ್ನು ಮಾಡುವುದರಿಂದಲೂ, ಜಪ, ದಾನ, ಉಪವಾಸಗಳನ್ನು ಮಾಡುವುದರಿಂದಲೂ ಯಾವ ಪುಣ್ಯಫಲವು ಲಭಿಸುತ್ತದೆ?

೩–೫. ಎಲೈ ಮಹಾಭಾಗನೇ! ಕಾವೇರೀಸಂಗಮದ ಫಲವನ್ನು ತಿಳಿಯ ಹೇಳುವವನಾಗು. ಧರ್ಮವನ್ನು ಹೇಳಿದರಾಗಲಿ, ಕೇಳಿದರಾಗಲಿ, ನೋಡಿದರಾಗಲಿ ಅಥವಾ ತಾನೇ ಮಾಡಿದರಾಗಲಿ, ಇತರರು ಮಾಡಿದುದನ್ನು ಅನುಮೋದಿಸಿದರಾಗಲಿ ಮಾನವನು ಪುನೀತನಾಗುವನೆಂದು ನಾನು ಕೇಳಿರುವೆನು. ಎಲೈ ಮುನಿಯೆ! ಧರ್ಮಪ್ರಸಂಗದಲ್ಲಿ ಧರ್ಮವೃದ್ಧಿಯೂ ಪುಣ್ಯಲಾಭವೂ ಆಗುತ್ತದೆ. ಅದರಿಂದ ಸ್ವರ್ಗಪ್ರಾಪ್ತಿಯೂ ಉಂಟಾಗುವುದು. ಅದಕ್ಕೆ ವ್ಯತಿರಿಕ್ತವಾಗಿ ಆಚರಿಸಿದ್ದಾದರೆ ನರಕವೇ ಪ್ರಾಪ್ತವಾಗುತ್ತದೆ—ಎಂದು ವೇದಶ್ರುತಿಯುಂಟು!

ಶ್ರೀ ಮಾರ್ಕಂಡೇಯ ಉವಾಚ :—

**ಸಾಧು ಸಾಧು ಮಹಾಭಾಗ ಯತ್ಪೃಷ್ಟೋಽಹಂ ತ್ವಯಾಽಧುನಾ ।**
**ಶೃಣುಷ್ವೈಕಮನಾ ಭೂತ್ವಾ ಕಾವೇರೀಫಲಮುತ್ತಮಂ ॥ ೬ ॥**
**ಅಸ್ತಿ ಯಕ್ಷೋ ಮಹಾಸತ್ವಃ ಕುಬೇರೋ ನಾಮ ವಿಶ್ರುತಃ ।**
**ಸೋಽಪಿ ತೀರ್ಥಪ್ರಭಾವೇನ ರಾಜನ್ಯಕ್ಷಾಽಧಿಪೋಽಭವತ್ ॥ ೭ ॥**
**ತಚ್ಛೃಣುಷ್ವ ವಿಧಾನೇನ ಭಕ್ತ್ಯಾ ಪರಮಯಾ ನೃಪ ।**
**ಸಿದ್ಧಿಂ ಪ್ರಾಪ್ತೋ ಮಹಾಭಾಗ ಕಾವೇರೀಸಂಗಮೇನ ತು ॥ ೮ ॥**
**ಕಾವೇರ್ಯಾ ನರ್ಮದಾಯಾಸ್ತು ಸಂಗಮೋ ಲೋಕವಿಶ್ರುತೇ ।**
**ತತ್ರ ಸ್ನಾತ್ವಾ ಶುಚಿರ್ಭೂತ್ವಾ ಕುಬೇರಃ ಸತ್ಯವಿಕ್ರಮಃ ॥ ೯ ॥**
**ವಿಧಿವನ್ನಿಯಮಂ ಕೃತ್ವಾ ಶಾಸ್ತ್ರಯುಕ್ತ್ಯಾ ನರೋತ್ತಮ ।**
**ಆರಾಧಯನ್ಮಹಾದೇವಮೇಕಚಿತ್ತಃ ಸನಾತನಂ ॥ ೧೦ ॥**
**ಏಕಾಹಾರೋ ವಸನ್ಮಾಸಂ ತಥಾ ಷಷ್ಠಾಹ್ನಕಾಲಿಕಃ ।**
**ಪಕ್ಷೋಪವಾಸೀ ನ್ಯವಸತ್ಕಿಂಚಿತ್ಕಾಲಂ ನೃಪೋತ್ತಮ ॥ ೧೧ ॥**
**ಮೂಲಶಾಕಫಲೈಶ್ಚಾಽನ್ಯಂ ಕಾಲಂ ನಯತಿ ಬುದ್ಧಿಮಾನ್ ।**
**ಕಿಂಚಿತ್ಕಾಲಂ ವಸಂಸ್ತತ್ರ ತೀರ್ಥೇ ಶೈವಾಲಭೋಜನಃ ॥ ೧೨ ॥**

---

೬. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅಯ್ಯಾ ಮಹಾ ಭಾಗ್ಯವಂತನಾದ ಧರ್ಮರಾಜನೇ! ಸಾಧು, ಸಾಧು! ಒಳ್ಳೆಯ ಪುಣ್ಯಸಂಪಾದಕವಾದ ಪ್ರಶ್ನೆಯನ್ನೇ ಕೇಳಿದೆ. ನೀನು ಕೇಳಿದ ವಿಷಯವನ್ನೀಗ ಹೇಳುವೆನು. ಒಮ್ಮನದಿಂದ ಆ ಕಾವೇರೀ ಸಂಗಮ ಫಲವನ್ನು ಕೇಳುವವನಾಗು.

೭–೮. ಮಹಾ ಪರಾಕ್ರಮಶಾಲಿಯಾದ ಕುಬೇರನೆಂಬ ಯಕ್ಷನಿರುವನು. ಅವನಾದರೋ ಈ ಕಾವೇರೀತೀರ್ಥಪ್ರಭಾವದಿಂದ ಯಕ್ಷರಿಗೆಲ್ಲರಿಗೂ ರಾಜನಾದನು. ಆ ಯಕ್ಷನು ಕಾವೇರೀ ಸಂಗಮ ಮಾಹಾತ್ಮ್ಯದಿಂದಲೇ ಪರಮ ಸಿದ್ಧಿಯನ್ನು ಪಡೆದ ಕಥೆಯನ್ನು ವಿಧ್ಯುಕ್ತವಾಗಿ ಕೇಳುವವನಾಗು.

೯–೧೨. ಸತ್ಯವಿಕ್ರಮನಾದ ಆ ಕುಬೇರನು ಲೋಕಪ್ರಸಿದ್ಧವಾದ ಕಾವೇರೀ ನರ್ಮದಾ ಸಂಗಮದಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ವಿಧ್ಯುಕ್ತವಾಗಿ ನಿಯಮವನ್ನು ತಳೆದು ಸನಾತನನಾದ ಮಹಾದೇವನನ್ನು ಏಕಚಿತ್ತದಿಂದ ಆರಾಧನೆಮಾಡುತ್ತ ಒಂದು ತಿಂಗಳಕಾಲ ಷಷ್ಠಾಹ್ನಕಾಲಿಕವಾಗಿ ಏಕಭುಕ್ತವನ್ನು ಮಾಡುತ್ತಿದ್ದು ಆ ತರುವಾಯ ಕ್ರಮವಾಗಿ ಪಕ್ಷೋಪವಾಸವನ್ನು ಮಾಡುತ್ತ ಕೆಲಕಾಲವಿದ್ದನು. ತರುವಾಯ ಮಹಾ ಬುದ್ಧಿಶಾಲಿಯಾದ ಆತನು ಇನ್ನು ಕೆಲವುಕಾಲ ಕಂದಮೂಲ ಫಲಗಳನ್ನು ಮಾತ್ರ ತೆಗೆದುಕೊಳ್ಳುತ್ತಲಿದ್ದನು. ಆ ಬಳಿಕ ತೀರ್ಥದಲ್ಲಿ ದೊರಕುವ ಪಾಚಿಯನ್ನೇ ಆಹಾರವನ್ನಾಗಿ ತೆಗೆದುಕೊಂಡು ಕೆಲಕಾಲ ಕಳೆದನು.

ಪರಾಕೇಣಾನಯತ್ಕಾಲಂ ಕೃಚ್ಛ್ರೇಣಾಪಿ ಚ ಮಾನದ ।
ಚಾಂದ್ರಾಯಣೇನ ಚಾಪ್ಯನ್ಯಮನ್ಯಂ ವಾಯ್ವಂಬುಭೋಜನಃ ॥ ೧೩ ॥
ಏವಂ ತತ್ರ ನರಶ್ರೇಷ್ಠ ಕಾಮರಾಗವಿವರ್ಜಿತಃ ।
ಸ್ಥಿತೋ ವರ್ಷಶತಂ ಸಾಗ್ರಂ ಕರ್ಷಯನ್ ಸ್ವಂ ತಥಾ ವಪುಃ ॥ ೧೪ ॥
ತತೋ ವರ್ಷಶತಸ್ಯಾಂತೇ ದೇವದೇವೋ ಮಹೇಶ್ವರಃ ।
ತುಷ್ಟಸ್ತು ಪರಯಾ ಭಕ್ತ್ಯಾ ತಮುವಾಚ ಹಸನ್ನಿವ ॥ ೧೫ ॥
ಭೋ ಭೋ ಯಕ್ಷ ಮಹಾಸತ್ವ ವರಂ ವರಯ ಸುವ್ರತ ।
ಪರಿತುಷ್ಟೋಽಸ್ಮಿ ತೇ ಭಕ್ತ್ಯಾ ತವ ದಾಸ್ಯೇ ಯಥೇಪ್ಸಿತಂ ॥ ೧೬ ॥

ಯಕ್ಷ ಉವಾಚ:—

ಯದಿ ತುಷ್ಟೋಽಸಿ ದೇವೇಶ ಉಮಯಾ ಸಹ ಶಂಕರ ।
ಅದ್ಯ ಪ್ರಭೃತಿ ಸರ್ವೇಷಾಂ ಯಕ್ಷಾಣಾಮಧಿಪೋ ಭವೇ ॥ ೧೭ ॥
ಅಕ್ಷಯಶ್ಚಾವ್ಯಯಶ್ಚೈವ ತವ ಭಕ್ತಿಪುರಸ್ಸರಃ ।
ಧರ್ಮೇ ಮತಿಂ ಚ ಮೇ ನಿತ್ಯಂ ದದಸ್ವ ಪರಮೇಶ್ವರ ॥ ೧೮ ॥

---

೧೩. ಅಯ್ಯಾ ಮಾನದನೇ! ಇದಾದ ಬಳಿಕ ಆತನು ಪರಾಕ ವ್ರತದಿಂದಲೂ, ಚಾಂದ್ರಾಯಣ ವ್ರತದಿಂದಲೂ ಕೆಲವುಕಾಲವನ್ನು ಕಳೆದು ಆಮೇಲೆ ವಾಯುಭೋಜನ ವ್ರತವನ್ನು ಕೈಕೊಂಡನು.

೧೪-೧೫. ಅಯ್ಯಾ ನರಶ್ರೇಷ್ಠನೇ! ಈ ಪ್ರಕಾರವಾಗಿ ಆ ಯಕ್ಷನು ಕಾಮ ಕ್ರೋಧಗಳನ್ನು ಜಯಿಸಿ ಅವುಗಳಿಂದ ದೂರನಾಗಿ ಒಂದುನೂರು ಸಂವತ್ಸರಗಳ ಕಾಲ ತನ್ನ ಶರೀರವನ್ನು ದಂಡಿಸುತ್ತ ಮಹಾದೇವನನ್ನು ಆರಾಧನೆಮಾಡು ತ್ತಿದ್ದನು. ತರುವಾಯ ಆ ನೂರು ಸಂವತ್ಸರಗಳು ಕಳೆಯಲು ದೇವದೇವನಾದ ಮಹೇಶ್ವರನು ಆ ಯಕ್ಷನ ಪರಮಭಕ್ತಿಗೆ ಸಂತೋಷಗೊಂಡು ನಸುನಗುತ್ತ ಪ್ರಸನ್ನಮುಖನಾಗಿ ಅವನನ್ನು ಕುರಿತು ಹೇಳಿದನು :

೧೬. "ಎಲೈ ಮಹಾಸತ್ತ್ವನೂ, ಸುವ್ರತನೂ ಆದ ಯಕ್ಷನೇ! ವರವನ್ನು ಬೇಡು. ನಿನ್ನ ಭಕ್ತಿಗೆ ನಾನು ಸಂತುಷ್ಟನಾಗಿರುವೆನು. ನಿನ್ನ ಇಷ್ಟಾರ್ಥವು ಏನೇ ಆಗಿದ್ದರೂ ಅದನ್ನು ಕೊಡುವೆನು; ಕೇಳು."

೧೭. ಯಕ್ಷನು ಕೇಳುತ್ತಾನೆ:—"ಎಲೈ ಶಂಕರನೇ! ಉಮೆಯೊಡಗೂಡಿದ ನೀನು ಸಂತೋಷಗೊಂಡಿರುವೆಯಾದರೆ ಇಂದಿನಿಂದ ನಾನು ಸಮಸ್ತ ಯಕ್ಷರಿಗೂ ಅಧಿಪತಿಯಾಗುವೆನು.

೧೮. ನನಗೆ ನಿನ್ನಲ್ಲಿನ ಭಕ್ತಿಯು ಅಕ್ಷಯವಾಗಿರಲಿ. ಪರಮೇಶ್ವರ! ನನಗೆ ಯಾವಾಗಲೂ ಧರ್ಮದಲ್ಲಿಯೇ ಬುದ್ಧಿಯು ನೆಲೆಗೊಳ್ಳುವಂತೆ ಅನುಗ್ರಹಿಸು."

**ಈಶ್ವರ ಉವಾಚ :—**

**ಯತ್ತ್ವಯಾ ಪ್ರಾರ್ಥಿತಂ ಸರ್ವಂ ಫಲಂ ಧರ್ಮಸ್ಯ ತತ್ತಥಾ ।**
**ಇತ್ಯೇವಮುಕ್ತ್ವಾ ತಂ ತತ್ರ ಜಗಾಮಾಽದರ್ಶನಂ ಹರಃ ॥ ೧೯ ॥**
**ಸೋಽಪಿ ಸ್ನಾತ್ವಾ ವಿಧಾನೇನ ಸಂತರ್ಪ್ಯ ಪಿತೃದೇವತಾಃ ।**
**ಆಮಂತ್ರಯಿತ್ವಾ ತತ್ತೀರ್ಥಂ ಕೃತಾರ್ಥಶ್ಚ ಗೃಹಂ ಯಯೌ ॥ ೨೦ ॥**
**ಪೂಜಿತಸ್ತತ್ರ ಯಕ್ಷೈಸ್ತು ಸೋಽಭಿಷಿಕ್ತೋ ವಿಧಾನತಃ ।**
**ಚಕಾರ ವಿಪುಲಂ ತತ್ರ ರಾಜ್ಯಮಿಷ್ಟಿತಮುತ್ತಮಂ ॥ ೨೧ ॥**
**ತತ್ರ ಚಾಽನ್ಯೇ ಸುರಾಃ ಸಿದ್ಧಾ ಯಕ್ಷಗಂಧರ್ವಕಿನ್ನರಾಃ ।**
**ಗಣಾಶ್ಚಾಪ್ಸರಸಾಂ ತತ್ರ ಋಷಯಶ್ಚ ತಥಾಽನಘ ॥ ೨೨ ॥**
**ಕಾವೇರೀಸಂಗಮಂ ತೇನ ಸರ್ವಪಾಪಹರಂ ವಿದುಃ ।**
**ಸ್ವರ್ಗಾಣಾಮಪಿ ಸರ್ವೇಷಾಂ ದ್ವಾರಮೇತದ್ಯುಧಿಷ್ಠಿರ ॥ ೨೩ ॥**
**ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಜನ್ಮ ಸುಜೀವಿತಂ ।**
**ಕಾವೇರೀಸಂಗಮೇ ಸ್ನಾತ್ವಾ ಯೈರ್ದತ್ತಂ ಹಿ ತಿಲೋದಕಂ ॥ ೨೪ ॥**

---

೧೯. ಈಶ್ವರನು ಹೇಳುತ್ತಾನೆ:—"ಎಲೈ ಕುಬೇರನೇ! ನೀನು ಪ್ರಾರ್ಥಿಸಿ ದುದೆಲ್ಲವೂ ನೀನು ಆಚರಿಸಿರುವ ಧರ್ಮದ ಫಲವಾಗಿ ನಿನಗೆ ಲಭಿಸುವುದು." ಇಂತು ನುಡಿದು ಆ ಹರನು ಅಲ್ಲಿಯೇ ಅಂತರ್ಧಾನವಾದನು.

೨೦. ಆ ಬಳಿಕ ಯಕ್ಷನಾದರೋ ಆ ಕಾವೇರೀ ನರ್ಮದಾ ಸಂಗಮ ತೀರ್ಥದಲ್ಲಿ ಮತ್ತೆ ವಿಧ್ಯುಕ್ತವಾಗಿ ಮಿಂದು ಶಾಸ್ತ್ರೋಕ್ತರೀತಿಯಿಂದ ಪಿತೃದೇವತೆ ಗಳಿಗೆ ತರ್ಪಣವನ್ನಿತ್ತು ಆ ತೀರ್ಥದ ಅನುಮತಿಯನ್ನು ಪಡೆದುಕೊಂಡು ಕೃತಾರ್ಥನಾಗಿ ತನ್ನ ಮನೆಗೈತಂದನು.

೨೧. ಅಲ್ಲಿಯಾದರೋ ಸಮಸ್ತ ಯಕ್ಷರಿಂದಲೂ ಪೂಜಿತನಾಗಿ ಅವನು ಯಕ್ಷೇಶ್ವರನಾಗಿ ಅಭಿಷಿಕ್ತನಾಗಿ ವಿಪುಲವಾದ ಆ ಯಕ್ಷರಾಜ್ಯವನ್ನು ತನ್ನ ಇಷ್ಟಾನುಸಾರ ಆಳಿದನು.

೨೨—೨೪. ಇದನ್ನು ಕಂಡು ಆ ಕಾವೇರೀಸಂಗಮದಲ್ಲಿದ್ದ ಇತರ ದೇವತೆ ಗಳೂ, ಸಿದ್ಧರೂ, ಯಕ್ಷಗಂಧರ್ವರೂ, ಕಿನ್ನರರೂ, ಅಪ್ಸರೋಗಣಗಳೂ, ಋಷಿಗಳೂ ಆ ತೀರ್ಥವು ಸರ್ವಪಾಪಹರವಾದುದೆಂದರಿತುಕೊಂಡರು. ಅಲ್ಲದೆ ಎಲೈ ಯುಧಿಷ್ಠಿರನೇ! ಆ ತೀರ್ಥವೇ ಸ್ವರ್ಗಾದಿ ಸಮಸ್ತ ಲೋಕಾವಾಪ್ತಿಗೂ ದ್ವಾರವೆಂದು ಬಗೆದರು. ದೊರೆಯೇ! ಇಂತಹ ಪುಣ್ಯಪ್ರದವಾದ ಕಾವೇರೀ ಸಂಗಮತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತಿಲೋದಕವನ್ನು ಯಾವ ಮಾನವರು ಕೊಡುತ್ತಾರೆಯೋ ಅವರೇ ಧನ್ಯರು; ಅವರೇ ಮಹಾತ್ಮರು; ಅವರ ಜನ್ಮವೇ ಸಫಲವಾದುದು.

**ದಶಪೂರ್ವೇ ಪರೇ ತಾತ ಮಾತೃತಃ ಪಿತೃತಸ್ತಥಾ ।**
**ಪಿತರಃ ಪಿತಾಮಹಾಸ್ತೇನ ಉದ್ಧೃತಾ ನರಕಾರ್ಣವಾತ್ ॥ ೨೫ ॥**
**ತಸ್ಮಾತ್ಸರ್ವಪ್ರಯತ್ನೇನ ತತ್ರ ಸ್ನಾಯೀತ ಮಾನವಃ ।**
**ಅರ್ಚಯೇದೀಶ್ವರಂ ದೇವಂ ಯದೀಚ್ಛೇಚ್ಛಾಶ್ವತೀಂ ಗತಿಂ ॥ ೨೬ ॥**
**ಕಾವೇರೀಸಂಗಮೇ ರಾಜನ್ ಸ್ನಾನದಾನಾರ್ಚನಂ ನರೈಃ**
**ಕೃತಂ ಭಕ್ತ್ಯಾ ನರಶ್ರೇಷ್ಠ ಅಶ್ವಮೇಧಾಽಧಿಕಂ ಫಲಂ ॥ ೨೭ ॥**
**ಹೋಮೇನ ಚಾಽಕ್ಷಯಃ ಸ್ವರ್ಗೋ ಜಪಾದಾಯುರ್ವಿವರ್ಧತೇ ।**
**ಧ್ಯಾನತೋ ನಿತ್ಯಮಾಯಾತಿ ಪದಂ ಶಿವಕಲಾತ್ಮಕಂ ॥ ೨೮ ॥**
**ಅಗ್ನಿಪ್ರವೇಶಂ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರೇಶ್ವರ ।**
**ಅಗ್ನಿಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೨೯ ॥**
**ಅನಾಶಕಂತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಽಧಿಪ ।**
**ತಸ್ಯ ಪುಣ್ಯಫಲಂ ಯದ್ವೈ ತಚ್ಛೃಣುಷ್ವ ನರೋತ್ತಮ ॥ ೩೦ ॥**

---

೨೫. ಹೀಗೆ ಆ ಸಮಯದಲ್ಲಿ ತರ್ಪಣವಿತ್ತ ಧನ್ಯಮಾನವನು ತಾಯಿ ತಂದೆಗಳ ಕಡೆ ಹಿಂದಿನ ಇಂದಿನ ಹತ್ತು ತಲೆ ಮೊರೆಯುವರನ್ನೇ ಅಲ್ಲದೆ ಪಿತೃ ಪಿತಾಮಹರನ್ನೂ ಉದ್ಧಾರಮಾಡಿದವನಾಗುತ್ತಾನೆ.

೨೬. ಆದುದರಿಂದ ಶಾಶ್ವತವಾದ ಸದ್ಗತಿಯನ್ನು ಅಪೇಕ್ಷಿಸುವ ಮಾನವನು ಸರ್ವಪ್ರಯತ್ನದಿಂದಲೂ ಆ ಕಾವೇರೀಸಂಗಮತೀರ್ಥದಲ್ಲಿ ವಿಧ್ಯುಕ್ತವಾಗಿ ಸ್ನಾನವನ್ನು ಮಾಡಿ ಮಹಾದೇವನನ್ನು ಪೂಜಿಸಬೇಕು.

೨೭. ಎಲೈ ರಾಜನೇ ! ಕಾವೇರೀ ಸಂಗಮದಲ್ಲಿ ಸ್ನಾನದಾನಾರ್ಚನೆಗಳನ್ನು ಭಕ್ತಿಯಿಂದೆಸಗಿದುದಾದರೆ ಅಶ್ವಮೇಧಯಾಗವನ್ನು ಮಾಡಿದುದಕ್ಕಿಂತಲೂ ಅಧಿಕವಾದ ಫಲವು ದೊರಕುವುದು.

೨೮. ಅಲ್ಲಿ ಹೋಮವನ್ನು ಮಾಡಿದರೆ ಅಕ್ಷಯವಾದ ಸ್ವರ್ಗವು ಲಭಿಸುತ್ತದೆ; ಮಂತ್ರಜಪವನ್ನು ಮಾಡಿದ್ದಾದರೆ ಆಯುಸ್ಸು ವೃದ್ಧಿಯಾಗುತ್ತದೆ. ಪರಮೇಶ್ವರನನ್ನು ಧ್ಯಾನಿಸಿದ್ದಾದರೆ ಶಿವಕಲಾತ್ಮಿಕವಾದ ಉತ್ತಮ ಪದವಿಯು ಲಭಿಸುತ್ತದೆ.

೨೯. ಅಯ್ಯಾ ನೃಪತಿಯೆ ! ಯಾವ ಮಾನವನು ಆ ಸಂಗಮಸ್ಥಳದಲ್ಲಿ ವಿಧ್ಯುಕ್ತವಾಗಿ ಅಗ್ನಿಪ್ರವೇಶವನ್ನು ಮಾಡುತ್ತಾನೆಯೋ ಅವನು ಪ್ರಳಯದ ವರೆಗೂ ಅಗ್ನಿಲೋಕದಲ್ಲಿ ನೆಲಸಿರುತ್ತಾನೆ.

೩೦. ಎಲೈ ನರಾಧಿಪನೇ ! ಆ ತೀರ್ಥದಲ್ಲಿ ಅನಾಶಕವ್ರತವನ್ನಾಚರಿಸಿದ ಮಾನವನು ಯಾವ ಪುಣ್ಯಫಲವನ್ನು ಪಡೆಯುವನೆಂಬುದನ್ನು ಹೇಳುವೆನು ; ಕೇಳು.

ಗಂಧರ್ವಾಽಪ್ಸರಸಂಕೀರ್ಣೇ ವಿಮಾನೇ ಸೂರ್ಯಸನ್ನಿಭೇ ।
ವೀಜ್ಯಮಾನೋ ವರಸ್ತ್ರೀಭಿರ್ದೈವತೈಃಸಹ ಮೋದತೇ ॥ ೩೧ ॥
ಷಷ್ಟಿರ್ವರ್ಷಸಹಸ್ರಾಣಿ ಷಷ್ಟಿರ್ವರ್ಷಶತಾನಿಚ ।
ಕ್ರೀಡತೇ ರುದ್ರಲೋಕಸ್ಥಸ್ತದಂತೇ ಭುವಿ ಚಾಗತಃ ॥ ೩೨ ॥
ಭೋಗವಾನ್ದಾನಶೀಲಶ್ಚ ಜಾಯತೇ ಪೃಥಿವೀಪತಿಃ ।
ಆಧಿಶೋಕವಿನಿರ್ಮುಕ್ತೋ ಜೀವೇಚ್ಚ ಶರದಾಂ ಶತಂ ॥ ೩೩ ॥
ಏವಂ ಗುಣಗಣಾಕೀರ್ಣಾ ಕಾವೇರೀ ಸಾ ಸರಿನ್ನೃಪ ।
ತ್ರಿಷು ಲೋಕೇಷು ವಿಖ್ಯಾತಾ ನರ್ಮದಾಸಂಗಮೇ ಸದಾ ॥ ೩೪ ॥
ಜಿತವಾಕ್ಕಾಯಚಿತ್ತಾಶ್ಚ ಧ್ಯೇಯಧ್ಯಾನರತಾಸ್ತಥಾ ।
ಕಾವೇರೀಸಂಗಮೇ ತಾತ ತೇಽಪಿ ಮೋಕ್ಷಮವಾಪ್ನುಯುಃ ॥ ೩೫ ॥
ಶೃಣು ತೇಽನ್ಯತ್ಪ್ರವಕ್ಷ್ಯಾಮಿ ಆಶ್ಚರ್ಯಂ ನೃಪಸತ್ತಮ ।
ತ್ರಿಷು ಲೋಕೇಷು ಕಾತ್ಸ್ನ್ಯಾ ದೃಶ್ಯತೇ ಸರಿತಾ ಸಮಾ ॥ ೩೬ ॥
ಲಬ್ಧಂ ಯೈರ್ನರ್ಮದಾತೋಯಂ ಯೇ ಚ ಕುರ್ಯುಃ ಪ್ರದಕ್ಷಿಣಂ ।
ಯೇ ಪಿಬಂತಿ ಜಲಂ ತತ್ರ ತೇ ಧನ್ಯಾ ನಾಽತ್ರ ಸಂಶಯಃ ॥ ೩೭ ॥

---

೩೧–೩೨. ಗಂಧರ್ವಾಪ್ಸರರು ತುಂಬಿರುವ ದೇವವಿಮಾನದಲ್ಲಿ ಕುಳಿತು ದಿವ್ಯ ಸ್ತ್ರೀಯರು ಚಾಮರಗಳನ್ನು ಹಾಕುತ್ತಿರಲು ಅವನು ಸೂರ್ಯಸಮಾನ ವಾದ ರುದ್ರಲೋಕವನ್ನು ಸೇರಿ ದೇವತೆಗಳೊಡನೆ ಸಮಸಮವಾಗಿ ಅರುವತ್ತು ಸಾವಿರದ ಆರುನೂರು ವರ್ಷಗಳ ಕಾಲ ಭೋಗಭಾಗ್ಯಗಳನ್ನನುಭವಿಸುತ್ತಲಿದ್ದು ಆ ತರುವಾಯ ಭೂಲೋಕಕ್ಕೆ ಬರುತ್ತಾನೆ.

೩೩. ಈ ಭೂಲೋಕದಲ್ಲಿಯಾದರೋ ಆ ಪುಣ್ಯಾತ್ಮನು ಭೋಗಶಾಲಿಯೂ ದಾನಶೀಲನೂ ಆದ ರಾಜನಾಗಿ ಹುಟ್ಟುತ್ತಾನೆ. ಅಲ್ಲದೆ ಅವನು ಆಧಿವ್ಯಾಧಿ ಗಳಿಲ್ಲದವನಾಗಿ ನೂರುವರ್ಷಗಳ ಕಾಲ ಜೀವಿಸುತ್ತಾನೆ.

೩೪. ದೊರೆಯೆ! ಕಾವೇರೀಸಂಗಮವು ಇಂಥ ಮಹಿಮೆಯುಳ್ಳದು. ನರ್ಮದಾ ಸಂಗಮವಂತೂ ಜಗತ್ರಯದಲ್ಲಿಯೂ ಸುಪ್ರಸಿದ್ಧವಾದುದು.

೩೫. ವಾಕ್ಕು, ಕಾಯ, ಚಿತ್ತಗಳನ್ನು ಗೆದ್ದಿರುವವರೂ, ಧ್ಯೇಯಧ್ಯಾನ ಗಳಲ್ಲಿ ನಿರತರಾದವರೂ ಆದ ಮಾನವೋತ್ತಮರಾದರೋ ಕಾವೇರೀ ಸಂಗಮದ ಸೇವನೆಯಿಂದ ಮೋಕ್ಷವನ್ನೇ ಪಡೆಯುತ್ತಾರೆ.

೩೬. ಎಲೈ ನೃಪಸತ್ತಮನೇ! ನಿನಗೆ ಇನ್ನೊಂದು ಆಶ್ಚರ್ಯಕರವಾದ ಸಂಗತಿಯನ್ನು ಹೇಳುವೆನು; ಕೇಳು. ಮೂರು ಲೋಕಗಳಲ್ಲಿಯೂ ಈ ನರ್ಮದಾ ನದಿಗೆ ಸಾಟಿಯಾದ ಬೇರೊಂದು ತೀರ್ಥವಾವುದಿರುವುದು?

೩೭. ಯಾರಿಗೆ ನರ್ಮದೆಯ ಪವಿತ್ರ ಜಲವು ದೊರೆಯುವುದೊ, ಯಾರು ನರ್ಮದೆಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡುವರೋ, ಯಾರು ನರ್ಮದಾ

**ನ ತೇಷಾಂ ಸಂತತಿಚ್ಛೇದೋ ದಶಜನ್ಮಾನಿ ಪಂಚ ಚ ।**
**ತೇಷಾಂ ಪಾಪಂ ವಿಲೀಯೇತ ಹಿಮಂ ಸೂರ್ಯೋದಯೇ ಯಥಾ ॥೩೮॥**
**ಗಂಗಾಯಮುನಾಸಂಗೇ ವೈ ಯತ್ಫಲಂ ಲಭತೇ ನರಃ ।**
**ತತ್ಫಲಂ ಲಭತೇ ಮರ್ತ್ಯಃ ಕಾವೇರೀಸ್ನಾನಮಾಚರನ್ ॥ ೩೯ ॥**
**ಭೌಮೇ ತು ಭೂತಜಾಯೋಗೇ ವ್ಯತೀಪಾತೇ ಚ ಸಂಕ್ರಮೇ ।**
**ರಾಹುಸೋಮಸಮಾಯೋಗೇ ತದೇವಾಽಷ್ಟಗುಣಂ ಸ್ಮೃತಂ ॥ ೪೦ ॥**
**ಅಶೀತಿಶ್ಚ ಯುಗಾಃ ಪ್ರೋಕ್ತಾ ಗಂಗಾಯಾಮುನಸಂಗಮೇ ।**
**ಕಾವೇರೀನರ್ಮದಾಯೋಗೇ ತದೇವಾಽಷ್ಟಗುಣಂ ಸ್ಮೃತಂ ॥ ೪೧ ॥**
**ಗಂಗಾಷಷ್ಟಿಸಹಸ್ರೈಸ್ತು ಕ್ಷೇತ್ರಪಾಲೈಃ ಪ್ರಪೂಜ್ಯತೇ ।**
**ತದರ್ಧೈರನ್ಯತೀರ್ಥಾನಿ ರಕ್ಷಂತೇ ನಾಽತ್ರ ಸಂಶಯಃ ॥ ೪೨ ॥**
**ಅಮರೇಶ್ವರೇ ತು ಸರಿತಾಂ ಯೇ ಯೋಗಾಃ ಪರಿಕೀರ್ತಿತಾಃ ।**
**ತೇ ತ್ವಶೀತಿಸಹಸ್ರೈಸ್ತು ಕ್ಷೇತ್ರಪಾಲೈಸ್ತು ರಕ್ಷಿತಾಃ ॥ ೪೩ ॥**

ಜಲವನ್ನು ಪಾನಮಾಡುವರೋ ಅವರೇ ಪುಣ್ಯಶಾಲಿಗಳು. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲವು.

೩೮. ಅಂಥವರಿಗೆ ಸಂತತಿವಿಚ್ಛೇದವುಂಟಾಗುವುದಿಲ್ಲವು. ಏಳು ಜನ್ಮಗಳ ವರೆಗೂ ಅವರು ಮಾಡುವ ಹಿಂದೆ ಮಾಡಿರುವ ಪಾಪವೆಲ್ಲವೂ ಸೂರ್ಯೋದಯ ಕಾಲದಲ್ಲಿ ಮಂಜಿನಂತೆ ಅಡಗಿಹೋಗುವುದು.

೩೯. ಗಂಗಾಯಮುನಾಸಂಗಮದಲ್ಲಿ ಸ್ನಾನಮಾಡಿದ ಮಾನವನು ಯಾವ ಫಲವನ್ನು ಪಡೆಯುವನೋ ಅದೇ ಫಲವನ್ನು ಕಾವೇರೀಜಲದಲ್ಲಿ ಸ್ನಾನಮಾಡಿದರೂ ಲಭಿಸುತ್ತದೆ.

೪೦. ಅಮಾವಾಸ್ಯಾಯೋಗವಿರುವ ಮಂಗಳವಾರದಲ್ಲಿಯೂ, ವ್ಯತೀಪಾತ ಸಂಕ್ರಮಣ, ಚಂದ್ರಗ್ರಹಣ (ರಾಹು ಸೋಮ ಸಮಾಯೋಗ)ಗಳಲ್ಲಿ ಕಾವೇರೀ ಸ್ನಾನವು ಎಂಟರಷ್ಟು ಪುಣ್ಯತಮವಾದುದುದೆಂದು ತಿಳಿಯಲಾಗಿರುವುದು.

೪೧–೪೨. ಆ ಪುಣ್ಯದಿನಗಳಲ್ಲಿ ಗಂಗಾಯಮುನಾಸಂಗಮದಲ್ಲಿ ಸ್ನಾನ ಮಾಡಿದ್ದರಿಂದ ದೊರಕುವ ಪುಣ್ಯವು ಎಂಬತ್ತುಯುಗದಷ್ಟೆಂದೂ, ಕಾವೇರೀ ನರ್ಮದಾಸಂಗಮದಲ್ಲಿ ಅದಕ್ಕಿಂತಲೂ ಎಂಟರಷ್ಟು ಹೆಚ್ಚೆಂದೂ ತಿಳಿಯ ಲಾಗಿದೆ. ಗಂಗಾನದಿಯಾದರೋ ಅರುವತ್ತುಸಾವಿರಮಂದಿ ಕ್ಷೇತ್ರಪಾಲಕ ರಿಂದ ಸಂರಕ್ಷಿತವಾಗಿರುವುದು. ಇತರ ತೀರ್ಥಗಳು ನಲವತ್ತುಸಾವಿರಮಂದಿ ಕ್ಷೇತ್ರಪಾಲಕರಿಂದ ಸಂರಕ್ಷಿತವಾಗಿರುವುದೆಂಬುದರಲ್ಲಿ ಸಂಶಯವಿಲ್ಲವು.

೪೩. ಅಮರೇಶ್ವರಕ್ಷೇತ್ರದ ಸಂಗಮಸ್ಥಳಗಳಲ್ಲಿ ಎಂಬತ್ತುಸಾವಿರಮಂದಿ ಕ್ಷೇತ್ರಪಾಲಕರು ಅವುಗಳನ್ನು ರಕ್ಷಿಸುತ್ತಿರುವರೆಂದು ಪರಿಕೀರ್ತಿತವಾಗಿರುವುದು.

ತಥಾಽಮರೇಶ್ವರೇ ಯಾಮ್ಯೇ ಲಿಂಗಂ ವೈ ಚಪಲೇಶ್ವರಂ ।
ದ್ವಿತೀಯಂ ಚಂಡಹಸ್ತಾಖ್ಯಂ ದ್ವೇ ಲಿಂಗೇ ತೀರ್ಥರಕ್ಷಕೇ ॥ ೪೪ ॥
ಶಿವೇನ ಸ್ಥಾಪಿತೇ ಪೂರ್ವಂ ಕಾವೇರ್ಯಾದ್ಯಭಿರಕ್ಷಕೇ ।
ಲಕ್ಷೇಣ ರಕ್ಷಿತಾ ದೇವೀ ನರ್ಮದಾ ಬಹುಕಲ್ಪಗಾ ॥ ೪೫ ॥
ಧನುಷಾಂ ಷಷ್ಟ್ಯಭಿಯುಕ್ತೈಃ ಪುರುಷೈರೀಶಯೋಜಿತೈಃ ।
ಓಂಕಾರಶತಸಾಹಸ್ರೈಃ ಪರ್ವತಶ್ಚಾಽಭಿರಕ್ಷಿತಃ ॥ ೪೬ ॥
ಅನ್ಯದೇಶಕೃತಂ ಪಾಪಮಸ್ಮಿನ್ಕ್ಷೇತ್ರೇ ವಿನಶ್ಯತಿ ।
ಅಸ್ಮಿಂಸ್ತೀರ್ಥೇ ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ ॥ ೪೭ ॥
ಏಷಾ ತೇ ಕಥಿತಾ ತಾತ ಕಾವೇರೀ ಸರಿತಾಂವರಾ ।
ರುದ್ರದೇಹಸಮುತ್ಪನ್ನಾ ತೇನ ಪುಣ್ಯಾ ಸರಿದ್ವರಾ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕಾವೇರೀಸಂಗಮಮಾಹಾತ್ಮ್ಯವರ್ಣನಂ"ನಾಮೈಕೋನತ್ರಿಂಶೋಽಧ್ಯಾಯಃ

---

೪೪. ಎಲೈ ಮಹಾರಾಜನೇ! ಅಂತೆಯೇ ಈ ಅಮರೇಶ್ವರದ ಯಾಮ್ಯ ದಿಗ್ಭಾಗದಲ್ಲಿ ಚಪಲೇಶ್ವರವೆಂದೂ, ಚಂಡಹಸ್ತೇಶ್ವರವೆಂದೂ ಎರಡು ಶಿವಲಿಂಗಗಳಿರುವುವು. ಇವೆರಡೂ ಅಲ್ಲಿಯ ತೀರ್ಥಗಳನ್ನು ರಕ್ಷಿಸುತ್ತಿರುವುವು.

೪೫. ಕಾವೇರೀಸಂಗಮವೇ ಮೊದಲಾದ ತೀರ್ಥಗಳ ರಕ್ಷಣೆಗಾಗಿ ಸಾಕ್ಷಾತ್ ಪರಮೇಶ್ವರನೇ ಪೂರ್ವದಲ್ಲಿ ಈ ಎರಡು ಲಿಂಗಗಳನ್ನು ಸ್ಥಾಪಿಸಿದನು.

೪೬. ಆ ಪರಮೇಶ್ವರನೇ ನಿಯೋಜಿಸಿರುವ ಅರುವತ್ತು ಧನುಸ್ಸಂಖ್ಯೆಯ ಪುರುಷರಿಂದಲೂ, ಒಂದುಲಕ್ಷಸಂಖ್ಯೆಯ ಓಂಕಾರಗಳಿಂದಲೂ ಆ ಅಮರಕಂಟಕ ಪರ್ವತವು ಸಂರಕ್ಷಿತವಾಗಿರುವುದು.

೪೭–೪೮. ಅಯ್ಯಾ ಧರ್ಮರಾಜನೆ! ಇತರ ಕ್ಷೇತ್ರಗಳಲ್ಲಿ ಮಾಡಿದ ಪಾಪವು ಈ ಅಮರಕಂಟಕ ಕ್ಷೇತ್ರದಲ್ಲಿ ನಾಶವಾಗುವುದು. ಈ ಕ್ಷೇತ್ರದಲ್ಲಿ ಮಾಡಿದ ಪಾಪವಾದರೋ ಮಾನವನಿಗೆ ವಜ್ರಲೇಪವಾಗುವುದು. ಹೀಗೆ ಸರಿದ್ವರೆಯಾದ ಕಾವೇರಿಯ ಮಹಾತ್ಮ್ಯವನ್ನು ನಿನಗೆ ಹೇಳಿರುವೆನು. ಈ ನದಿಯು ರುದ್ರ ದೇಹದಿಂದ ಉದ್ಭವಿಸಿದುದು. ಆದುದರಿಂದಲೇ ಇದು ಪುಣ್ಯಕರವಾದುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಾವೇರೀಸಂಗಮಮಹಾತ್ಮ್ಯವರ್ಣನ"ವೆಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಂಶೋಽಧ್ಯಾಯಃ

### ದಾರುತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ನರ್ಮದೋತ್ತರಕೂಲೇತು ದಾರುತೀರ್ಥಮನುತ್ತಮಂ ।**
**ಯತ್ರ ಸಿದ್ಧೋ ಮಹಾಭಾಗ ತಪಸ್ತಪ್ತ್ವಾ ದ್ವಿಜೋತ್ತಮಃ ॥ ೧ ॥**

**ಯುಧಿಷ್ಠಿರ ಉವಾಚ :—**

**ಕೋಽಸೌ ದ್ವಿಜವರಶ್ರೇಷ್ಠಃ ಸಿದ್ಧಸ್ತತ್ರ ಮಹಾಮುನೇ ।**
**ದಾರುಕೇತಿ ಸುತಃ ಕಸ್ಯ ಏತನ್ಮೇ ವಕ್ತುಮರ್ಹಸಿ ॥ ೨ ॥**

**ಶ್ರೀ ಮಾರ್ಕಂಡೇಯ ಉವಾಚ :—**

**ಭಾರ್ಗವೇ ವಿಪುಲೇ ವಂಶೇ ಧೀಮತೋ ದೇವಶರ್ಮಣಃ ।**
**ದಾರುರ್ನಾಮ ಮಹಾಭಾಗೋ ವೇದವೇದಾಂಗಪಾರಗಃ ॥ ೩ ॥**

---

## ಕನ್ನಡದ ಅನುವಾದ

### ದಾರುತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಪಾಂಡುನಂದನಾ! ನರ್ಮದಾನದಿಯ ಉತ್ತರ ತೀರದಲ್ಲಿ ಉತ್ತಮೋತ್ತಮವಾದ ದಾರುತೀರ್ಥವಿರುವುದು. ಅಲ್ಲಿ ದಾರುಕನೆಂಬ ದ್ವಿಜವರನೊರ್ವನು ತಪಸ್ಸನ್ನುಮಾಡಿ ಸಿದ್ಧಿಯನ್ನು ಪಡೆದನು.

೨. ಯುಧಿಷ್ಠಿರನು ಕೇಳುತ್ತಾನೆ:—ಅಯ್ಯಾ ಮಹಾಮುನಿಯೆ! ಆ ತೀರ್ಥದಲ್ಲಿ ತಪಸ್ಸನ್ನೆಸಗಿ ಸಿದ್ಧಿಯನ್ನು ಪಡೆದ ದಾರುಕನೆಂಬ ದ್ವಿಜಶ್ರೇಷ್ಠನಾರು? ಆತನಾರಮಗನು? ದಯವಿಟ್ಟು ತಿಳಿಸುವವನಾಗು.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ವಿಪುಲವಾದ ಭಾರ್ಗವಕುಲದಲ್ಲಿ ದೇವಶರ್ಮನೆಂಬ ಬ್ರಾಹ್ಮಣನೊರ್ವನಿದ್ದನು. ಅವನಿಗೆ ಈ ದಾರುವು ಮಗನಾಗಿ ಜನಿಸಿದನು. ಈತನು ವೇದ ವೇದಾಂಗಗಳಲ್ಲಿ ನಿಷ್ಣಾತನಾದನು.

**ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ವಿಧಿಕ್ರಮಾತ್ ।**
**ಯತಿಧರ್ಮವಿಧಾನೇನ ಚಚಾರ ವಿಪುಲಂ ತಪಃ ॥ ೪ ॥**
**ಧ್ಯಾಯನ್ವೈ ಸ ಮಹಾದೇವಂ ನಿರಾಹಾರೋ ಯುಧಿಷ್ಠಿರ ।**
**ಉವಾಸ ತೀರ್ಥೇ ತಸ್ಮಿನ್ವೈ ಯಾವತ್ಪ್ರಾಣಪರಿಕ್ಷಯಂ ॥ ೫ ॥**
**ತಸ್ಯ ನಾಮ್ನಾ ತು ತತ್ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ।**
**ತತ್ರ ಸ್ನಾತ್ವಾ ವಿಧಾನೇನ ಅರ್ಚಯೇದ್ದೇವತಾಃ ಪಿತೄನ್ ॥ ೬ ॥**
**ಸತ್ಯವಾದೀ ಜಿತಕ್ರೋಧಃ ಸರ್ವಭೂತಹಿತೇ ರತಃ ।**
**ಸರ್ವಾನ್ಕಾಮಾನವಾಪ್ನೋತಿ ರಾಜನ್ನತ್ರೈವ ಸರ್ವಥಾ ॥ ೭ ॥**
**ಯಃ ಕುರ್ಯಾದುಪವಾಸಂ ಚ ಸತ್ಯಶೌಚಪರಾಯಣಃ ।**
**ಸೌತ್ರಾಮಣಿಫಲಂ ಚಾಸ್ಯ ಸಂಭವತ್ಯವಿಚಾರಿತಂ ॥ ೮ ॥**
**ಋಗ್ವೇದಜಾಪೀ ಋಗ್ವೇದೀ ಸಾಮ ವಾ ಸಾಮಪಾರಗಃ ।**
**ಯಜುರ್ವೇದೀ ಯಜುರ್ಜಪ್ತ್ವಾ ಲಭತೇ ಫಲಮುತ್ತಮಂ ॥ ೯ ॥**

---

೪. ಈತನು ವಿಧ್ಯುಕ್ತವಾಗಿ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥಾಶ್ರಮಗಳನ್ನು ಕಳೆದು ಯತಿಯಾಗಿ ಧರ್ಮವನ್ನು ಅನುಷ್ಠಿಸುತ್ತ ಮಹತ್ತರವಾದ ತಪಸ್ಸನ್ನುಮಾಡಿದನು.

೫. ಎಲೈ ಯುಧಿಷ್ಠಿರನೇ! ಈ ಮಹಾನುಭಾವನು ನಿರಾಹಾರವಾಗಿ ಮಹಾದೇವನನ್ನು ಧ್ಯಾನಿಸುತ್ತ ಅಂತ್ಯಕಾಲದವರೆಗೂ ಆ ತೀರ್ಥದಲ್ಲಿಯೆ ವಾಸ ಮಾಡಿದನು.

೬. ಅವನ ತರುವಾಯ ಆ ತೀರ್ಥವು ದಾರುತೀರ್ಥವೆಂದೇ ಪ್ರಸಿದ್ಧವಾಯಿತು. ಅಲ್ಲಿ ಮಾನವರು ಶಾಸ್ತ್ರವಿಧಿಯನ್ನನುಸರಿಸಿ ಸ್ನಾನಮಾಡಿ ಪಿತೃಗಳಿಗೆ ತರ್ಪಣವನ್ನುಮಾಡಬೇಕು.

೭. ಅಯ್ಯಾ ದೊರೆಯೆ! ಸತ್ಯವಾದಿಯೂ, ಕ್ರೋಧವನ್ನು ಜಯಿಸಿರುವವನೂ, ಸಮಸ್ತಭೂತಗಳಲ್ಲಿಯೂ ದಯೆಯುಳ್ಳವನೂ ಆದ ಮಾನವನು ಈ ದಾರುತೀರ್ಥದ ಸೇವನೆಯಿಂದ ಸಮಸ್ತ ಮನೋಭೀಷ್ಟಗಳನ್ನೂ ಪಡೆಯುವನೆಂಬುದರಲ್ಲಿ ಸಂಶಯವೇನೂ ಇರುವುದಿಲ್ಲವು.

೮. ಸತ್ಯಶೌಚಪರಾಯಣನಾದ ಮಾನವನು ಈ ತೀರ್ಥದಲ್ಲಿ ಉಪವಾಸವನ್ನು ಮಾಡಿದುದೇ ಆದರೆ ಸೌತ್ರಾಮಣಿಯಾಗದ ಫಲವನ್ನು ಪಡೆಯುವನು. ಇದರಲ್ಲಿ ಸಂಶಯವಿರುವುದಿಲ್ಲವು.

೯. ಈ ತೀರ್ಥದಲ್ಲಿ ಋಗ್ವೇದಿಯು ಋಗ್ವೇದವನ್ನೂ, ಸಾಮವೇದಿಯು ಸಾಮವೇದವನ್ನೂ, ಯಜುರ್ವೇದಿಯು ಯಜುರ್ವೇದವನ್ನೂ ಪಾರಾಯಣ ಮಾಡಿದರೆ ಉತ್ತಮ ಫಲವನ್ನು ಪಡೆಯುತ್ತಾನೆ.

**ಪ್ರಾಣಾಂಸ್ತ್ಯಜತಿ ಯೋ ಮರ್ತ್ಯಸ್ತಸ್ಮಿಂಸ್ತೀರ್ಥೇ ವಿಧಾನತಃ ।**
**ಅನಿವರ್ತಿಕಾ ಗತಿಸ್ತಸ್ಯ ಇತ್ಯೇವಂ ಶಂಕರೋಽಬ್ರವೀತ್ ॥ ೧೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ದಾರುತೀರ್ಥಮಾಹಾತ್ಮ್ಯವರ್ಣನಂ"ನಾಮ ತ್ರಿಂಶೋಽಧ್ಯಾಯಃ**

---

೧೦. ಯಾವ ಮಾನವನು ಶಾಸ್ತ್ರೋಕ್ತವಿಧಾನದಿಂದ ಈ ತೀರ್ಥದಲ್ಲಿ ಪ್ರಾಣ ಪರಿತ್ಯಾಗಮಾಡುವನೋ ಅವನಿಗೆ ಮೋಕ್ಷವೇ ದೊರಕುವುದೆಂದು ಶಂಕರನು ಸಾಕ್ಷಾತ್ತಾಗಿ ಹೇಳಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ದಾರುತೀರ್ಥಮಾಹಾತ್ಮ್ಯವರ್ಣನ"ವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕತ್ರಿಂಶೋಽಧ್ಯಾಯಃ

### ಬ್ರಹ್ಮಾವರ್ತತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇಚ್ಚ ರಾಜೇಂದ್ರ ತೀರ್ಥಂ ತ್ರೈಲೋಕ್ಯವಿಶ್ರುತಂ ।**
**ಬ್ರಹ್ಮಾವರ್ತಮಿತಿ ಖ್ಯಾತಂ ಸರ್ವಪಾಪಪ್ರಣಾಶನಂ ॥ ೧ ॥**
**ತತ್ರ ಸನ್ನಿಹಿತೋ ಬ್ರಹ್ಮಾ ನಿತ್ಯಸೇವೀ ಯುಧಿಷ್ಠಿರ ।**
**ಊರ್ಧ್ವಬಾಹುರ್ನಿರಾಲಂಬಶ್ಚಚಾರ ಭ್ರಮಣಂ ಸದಾ ॥ ೨ ॥**
**ಏಕಾಽಽಹಾರವಶೇತಿಷ್ಠದ್ದ್ವಾದಶಾಬ್ದಂ ಮಹಾವ್ರತೀ ।**
**ಅತ್ರ ತೀರ್ಥೇ ವಿಧಾನೇನ ಚಿಂತಯನ್ವೈ ಮಹೇಶ್ವರಂ ॥ ೩ ॥**
**ತೇನ ತತ್ಪುಣ್ಯಮಾಖ್ಯಾತಂ ಬ್ರಹ್ಮಾವರ್ತಮಿತಿ ಪ್ರಭೋ ।**
**ತತ್ರ ಸ್ನಾತ್ವಾ ವಿಧಾನೇನ ತರ್ಪಯೇತ್ಪಿತೃದೇವತಾಃ ॥ ೪ ॥**
**ಅರ್ಚಯೇದ್ದೇವಮೀಶಾನಂ ವಿಷ್ಣುಂ ವಾ ಪರಮೇಶ್ವರಂ ।**
**ಯತ್ಫಲಂ ಸರ್ವಯಜ್ಞಾನಾಂ ವಿಧಿವದ್ದಕ್ಷಿಣಾವತಾಂ ॥ ೫ ॥**

---

### ಕನ್ನಡದ ಅನುವಾದ

#### ಬ್ರಹ್ಮಾವರ್ತತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ರಾಜೇಂದ್ರ! ಈ ದಾರು ತೀರ್ಥದಲ್ಲಿ ಮಾಡಬೇಕಾದ ಕಾರ್ಯಗಳೆಲ್ಲವನ್ನೂ ಮುಗಿಸಿಕೊಂಡಾದ ಬಳಿಕ ತ್ರೀಲೋಕ್ಯವಿಶ್ರುತವೂ, ಸಕಲಪಾಪಪ್ರಣಾಶಕವೂ ಆದ ಬ್ರಹ್ಮಾವರ್ತವೆಂಬ ತೀರ್ಥಕ್ಕೆ ಹೋಗಬೇಕು.

೨. ಅಯ್ಯಾ ಯುಧಿಷ್ಠಿರನೇ! ಅಲ್ಲಿ ಬ್ರಹ್ಮನು ಸದಾಕಾಲವಲ್ಲಿಯೂ ಆ ತೀರ್ಥವನ್ನು ಸೇವಿಸಿಕೊಂಡು ಅಲ್ಲಿಯೇ ನೆಲಸಿರುವನು. ಪೂರ್ವದಲ್ಲಿ ವಿಧಾತೃವು ಊರ್ಧ್ವಬಾಹುವೂ, ನಿರಾಲಂಬನೂ ಆಗಿ ಅಲ್ಲಿಯೇ ಸುತ್ತುತ್ತಿದ್ದನು.

೩. ಮಹಾವ್ರತಿಯಾಗಿ ಒಪ್ಪತ್ತು ಮಾತ್ರ ಆಹಾರವನ್ನು ತೆಗೆದುಕೊಳ್ಳುತ್ತ ಈ ತೀರ್ಥದಲ್ಲಿ ವಿಧ್ಯುಕ್ತವಾಗಿ ಮಹಾದೇವನನ್ನು ಧ್ಯಾನಿಸುತ್ತಲಿದ್ದನು.

೪. ಎಲೈ ಪ್ರಭುವೇ! ಈ ಕಾರಣದಿಂದಲೇ ಆ ತೀರ್ಥವು ಬ್ರಹ್ಮಾವರ್ತವೆಂದು ವಿಖ್ಯಾತವಾಗಿ ಬಹು ಪುಣ್ಯಪ್ರದವಾಯಿತು. ಮಾನವರು ಆ ತೀರ್ಥದಲ್ಲಿ ವಿಧ್ಯುಕ್ತವಾಗಿ ಸ್ನಾನಮಾಡಿ ಪಿತೃಗಳಿಗೆ ತರ್ಪಣವನ್ನುಮಾಡಬೇಕು.

೫–೭. ತರುವಾಯ ದೇವದೇವನಾದ ಮಹಾದೇವನನ್ನೋ, ಮಹಾವಿಷ್ಣುವನ್ನೋ ಪೂಜಿಸತಕ್ಕದ್ದು. ಹೀಗೆ ಮಾಡಿದ್ದಾದರೆ ಈ ತೀರ್ಥದ ಪ್ರಭಾವದಿಂದ

ತತ್ಫಲಂ ಸಮವಾಪ್ನೋತಿ ತತ್ತೀರ್ಥಸ್ಯ ಪ್ರಭಾವತಃ ।
ಯಸ್ಮಿಂಸ್ತೀರ್ಥೇ ತು ಯೋ ದೇವೋ ದಾನವೋ ವಾ ದ್ವಿಜೋಽಥವಾ ॥೬॥
ಸಿದ್ಧಸ್ತೇನೈವ ತನ್ನಾಮ್ನಾ ಖ್ಯಾತಂ ಲೋಕೇ ಮಹಚ್ಚ ತತ್ ।
ನ ಜಲಂ ನ ಸ್ಥಲಂ ನಾಮ ಕ್ಷೇತ್ರಂ ವಾ ಹ್ಯೂಷರಾಣಿ ಚ ॥ ೭ ॥
ಪವಿತ್ರತ್ವಂ ಲಭಂತ್ಯೇತೇ ಪೌರುಷೇಣ ವಿನಾ ನೃಣಾಂ ।
ಸಾಮರ್ಥ್ಯಾನ್ನಿಶ್ಚಯಾದ್ಧೈರ್ಯಾತ್ಸಿಧ್ಯಂತಿ ಪುರುಷಾ ನೃಪ ॥ ೮ ॥
ಪ್ರಮಾದಾತ್ತಸ್ಯ ಲೋಭೇನ ಪತಂತಿ ನರಕೇ ಧ್ರುವಂ ॥ ೯ ॥
ಸನ್ನಿರುಧ್ಯೇಂದ್ರಿಯಗ್ರಾಮಂ ಯತ್ರ ಯತ್ರ ವಸೇನ್ಮುನಿಃ ।
ತತ್ರ ತತ್ರ ಕುರುಕ್ಷೇತ್ರಂ ನೈಮಿಷಂ ಪುಷ್ಕರಾಣಿ ಚ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಬ್ರಹ್ಮಾವರ್ತತೀರ್ಥಮಾಹಾತ್ಮ್ಯವರ್ಣನಂ" ನಾಮೈಕತ್ರಿಂಶೋಽಧ್ಯಾಯಃ

---

ವಿಧಿವತ್ತಾಗಿ ದಕ್ಷಿಣೆಯೊಡನೆ ಮಾಡಿದ ಸಕಲಯಜ್ಞಗಳ ಫಲವೂ ಲಭಿಸುತ್ತದೆ. ಎಲೈ ಮಹಾರಾಜನೇ! ಯಾವ ತೀರ್ಥದಲ್ಲಿ ದೇವತೆಯಾಗಲಿ, ದಾನವನಾಗಲಿ, ಬ್ರಾಹ್ಮಣನೇ ಆಗಲಿ ತಪಸ್ಸನ್ನುಮಾಡಿ ಯಾವನು ಸಿದ್ಧಿಯನ್ನು ಪಡೆದಿರುವನೋ ಆತನ ಹೆಸರಿನಿಂದಲೇ ಆ ತೀರ್ಥವು ಮಾಹಾತ್ಮ್ಯಯುಕ್ತವಾಗಿ ಪ್ರಸಿದ್ಧಿಯನ್ನು ಪಡೆಯುತ್ತದೆ. ಇಷ್ಟೆ ಹೊರತು ಇತರ ಜಲಪ್ರದೇಶಗಳೂ, ಸ್ಥಲಗಳೂ, ಕ್ಷೇತ್ರಗಳೂ, ಊಷರಸ್ಥಳಗಳೂ ಪಾವಿತ್ರ್ಯವನ್ನು ಪಡೆಯುವುದಿಲ್ಲವು.

೮–೯. ಅವುಗಳೆಲ್ಲವೂ ಮಾನವರು ಮಾಡುವ ಸತ್ಕರ್ಮಗಳಿಂದಲೇ ಪಾವಿತ್ರ್ಯವನ್ನು ಪಡೆಯುತ್ತವೆ. ಆ ಮಾನವರಾದರೂ ಸ್ವಸಾಮರ್ಥ್ಯದಿಂದಲೂ, ದೃಢಸಂಕಲ್ಪದಿಂದಲೂ, ಧೈರ್ಯದಿಂದಲೂ ಸಿದ್ಧಿಯನ್ನು ಪಡೆಯುತ್ತಾರೆ. ಪ್ರಮಾದದಿಂದಲೂ, ಲೋಭದಿಂದಲೂ ಅವರೇ ನರಕದಲ್ಲಿ ಬೀಳುವರೆಂಬುದು ಖಂಡಿತವು.

೧೦. ಮುನಿಯಾದವನು ಇಂದ್ರಿಯ ಗ್ರಾಮಗಳನ್ನು ತಡೆದು ಸಂಯಮದಿಂದ ಎಲ್ಲೆಲ್ಲಿ ನೆಲಸುವನೋ ಆ ಪ್ರದೇಶಗಳೇ ಕುರುಕ್ಷೇತ್ರ, ನೈಮಿಷ, ಪುಷ್ಕರ ಮೊದಲಾದ ಕ್ಷೇತ್ರಗಳಾಗಿ ಪರಿಣಮಿಸುತ್ತವೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಬ್ರಹ್ಮಾವರ್ತತೀರ್ಥಮಾಹಾತ್ಮ್ಯವರ್ಣನ"ವೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾತ್ರಿಂಶೋಽಧ್ಯಾಯಃ

### ಪತ್ರೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಪತ್ರೇಶ್ವರಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಂ ।
ಯತ್ರ ಸಿದ್ಧೋ ಮಹಾಭಾಗಶ್ಚಿತ್ರಸೇನಸುತೋ ಬಲೀ ॥ ೧ ॥

ಯುಧಿಷ್ಠಿರ ಉವಾಚ :—

ಕೋಽಸೌ ಸಿದ್ಧಸ್ತದಾ ಬ್ರಹ್ಮಂಸ್ತಸ್ಮಿಂಸ್ತೀರ್ಥೇ ಮಹಾತಪಾಃ ।
ಪುತ್ರಃ ಕಸ್ಯ ತು ಕೋ ಹೇತುರೇತದಿಚ್ಛಾಮಿ ವೇದಿತುಂ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಚಿತ್ರೋ ನಾಮ ಮಹಾತೇಜಾ ಇಂದ್ರಸ್ಯ ದಯಿತಃ ಪುರಾ ।
ತಸ್ಯ ಪುತ್ರೋ ನೃಪಶ್ರೇಷ್ಠ ಪತ್ರೇಶ್ವರ ಇತಿ ಶ್ರುತಃ ॥ ೩ ॥
ರೂಪವಾನ್ ಸುಭಗಶ್ಚೈವ ಸರ್ವಶತ್ರುಭಯಂಕರಃ ।
ಇಂದ್ರಸ್ಯ ದಯಿತೋಽತ್ಯರ್ಥಂ ಜಯ ಇತ್ಯೇವ ಚಾಽಪರಃ ॥ ೪ ॥
ಸ ಕದಾಚಿತ್ಸಭಾಮಧ್ಯೇ ಸರ್ವದೇವಸಮಾಗಮೇ ।
ಮೇನಕಾನೃತ್ಯಗೀತೇನ ಮೋಹಿತಃ ಸುಚಿರಂ ಕಿಲ ॥ ೫ ॥

---

### ಕನ್ನಡದ ಅನುವಾದ

#### ಪತ್ರೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಅನಂತರ ಸಕಲಪಾಪಗಳನ್ನು ಪರಿಹರಿಸುವ ಪತ್ರೇಶ್ವರನೆಡೆಗೆ ಹೋಗಬೇಕು. ಇಲ್ಲಿ ಮಹಾಭಾಗ್ಯವಂತನೂ, ಚಿತ್ರಸೇನನ ಪುತ್ರನೂ ಆದ ಪತ್ರೇಶ್ವರನು ಸಿದ್ಧಿಯನ್ನು ಹೊಂದಿರುವನು.

೨. ಯುಧಿಷ್ಠಿರನು ಹೇಳುತ್ತಾನೆ:—ಮುನಿಯೆ! ಆ ತೀರ್ಥದಲ್ಲಿ ಸಿದ್ಧನಾದ ಈ ಮಹಾತಪಸ್ವಿಯಾರು? ಯಾರಮಗನು? ಸಿದ್ಧನಾಗಲು ಕಾರಣವೇನು? ಇದನ್ನು ತಿಳಿಯಲು ಬಯಸುತ್ತೇನೆ.

೩-೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ನೃಪವರ್ಯನೆ! ಒಂದೆ ಅತ್ಯಂತ ತೇಜಸ್ವಿಯಾದ ಚಿತ್ರನೆಂಬವನು ಇಂದ್ರನಿಗೆ ಪ್ರಿಯನಾಗಿದ್ದನು. ಅವನಿಗೆ ಸುಂದರನೂ, ಸುಭಗನೂ, ಸಕಲಶತ್ರುಗಳಿಗೆ ಭಯಂಕರನೂ, ಇಂದ್ರನಿಗೆ ಜಯನಂತೆ ಅತಿಪ್ರಿಯನೂ ಆದ ಪತ್ರೇಶ್ವರನೆಂಬ ಮಗನಿದ್ದನು.

೫. ಅವನು ಒಂದಾನೊಂದು ವೇಳೆ ಸಮಸ್ತದೇವತೆಗಳೂ ನೆರೆದಿರುವ ಸಭೆಯ ಮಧ್ಯದಲ್ಲಿ ಮೇನಕೆಯ ನೃತ್ಯಗೀತಗಳಿಂದ ಬಹಳ ಹೊತ್ತು ಮೋಹಗೊಂಡನು.

ತಿಷ್ಠತೇ ಗತಮರ್ಯಾದೋ ಗತಪ್ರಾಣ ಇವ ಕ್ಷಣಾತ್ ।
ತಾವತ್ಸುರಪತಿರ್ದೇವಃ ಶಶಾಪಾಽಥ ಜಿತೇಂದ್ರಿಯಂ ॥ ೬ ॥
ಯಸ್ಮಾತ್ತ್ವಂ ಸ್ವರ್ಗಸಂಸ್ಥೋಽಪಿ ಮರ್ತ್ಯಧರ್ಮಮುಪೇಯಿವಾನ್ ।
ತಸ್ಮಾನ್ಮರ್ತ್ಯೇ ಚಿರಂ ಕಾಲಂ ಕ್ಷಪಯಿಷ್ಯಸ್ಯಸಂಶಯಂ ॥ ೭ ॥
ಏವಮುಕ್ತಃ ಸುರೇಂದ್ರೇಣ ಚಿತ್ರಸೇನಸುತೋ ಯುವಾ ।
ವೇಪಮಾನಃ ಸುರಶ್ರೇಷ್ಠಂ ಕೃತಾಂಜಲಿರುವಾಚ ಹ ॥ ೮ ॥

ಪತ್ರೇಶ್ವರ ಉವಾಚ :—

ಮಯಾ ಪಾಪೇನ ಮೂಢೇನ ಅಜಿತೇಂದ್ರಿಯಚೇತಸಾ ।
ಪ್ರಾಪ್ತಂ ನ್ವೈ ಯತ್ಫಲಂ ತಸ್ಯ ಪ್ರಸಾದಂ ಕರ್ತುಮರ್ಹಸಿ ॥ ೯ ॥

ಶಕ್ರ ಉವಾಚ :—

ನರ್ಮದಾತಟಿಮಾಶ್ರಿತ್ಯ ದ್ವಾದಶಾಬ್ದಂ ಜಿತೇಂದ್ರಿಯಃ ।
ಆರಾಧಯ ಶಿವಂ ಶಾಂತಂ ಪುನಃ ಪ್ರಾಪ್ಸ್ಯಸಿ ಸದ್ಗತಿಂ ॥ ೧೦ ॥
ಸತ್ಯಶೌಚರತಾನಾಂ ಚ ಧರ್ಮಿಷ್ಠಾನಾಂ ದ್ವಿಜಾತ್ಮನಾಂ ।
ಲೋಕೋಽಯಂ ಪಾಪಿನಾಂ ನೈವ ಇತಿ ಶಾಸ್ತ್ರಸ್ಯ ನಿಶ್ಚಯಃ ॥ ೧೧ ॥
ಏವಮುಕ್ತೋ ಮಹಾರಾಜ ಸಹಸ್ರಾಕ್ಷೇಣ ಧೀಮತಾ ।
ಗಂಧರ್ವತನಯೋ ಧೀಮಾನ್ಪ್ರಣಮ್ಯಾಗಾತ್ತು ಭೂತಲಂ ॥ ೧೨ ॥

---

೬. ಅವನು ಮರ್ಯಾದೆಯಿಲ್ಲದವನಾಗಿ ಕ್ಷಣಕಾಲ ಮೃತನಂತಿರಲು ಇಂದ್ರನು ಜಿತೇಂದ್ರಿಯನಲ್ಲದ ಅವನನ್ನು ಹೀಗೆ ಶಪಿಸಿದನು.

೭. ನೀನು ಸ್ವರ್ಗದಲ್ಲಿರುವವನಾಗಿ ಮನುಷ್ಯಧರ್ಮವನ್ನು ಹೊಂದಿರುವುದರಿಂದ ಭೂಲೋಕದಲ್ಲಿ ನಿಶ್ಚಯವಾಗಿಯೂ ಬಹುಕಾಲವನ್ನು ಕಳೆಯುವೆ.

೮. ಇಂದ್ರನು ಹೀಗೆ ಹೇಳಲು ಯುವಕನಾದ ಆ ಚಿತ್ರಸೇನನ ಮಗನು ನಡುಗುತ್ತ ಇಂದ್ರನನ್ನು ಕುರಿತು ಕೈಮುಗಿದುಕೊಂಡು ಇಂತೆಂದನು.

೯. ಪತ್ರೇಶ್ವರನು ಹೇಳುತ್ತಾನೆ!—ಪಾಪಿಯೂ, ಮೂಢನೂ, ಜಿತೇಂದ್ರಿಯನಲ್ಲದವನೂ ಆದ ನನ್ನಿಂದ ಹೊಂದಲ್ಪಟ್ಟ ಪಾಪಫಲದ ಪರಿಹಾರಕ್ಕಾಗಿ ಅನುಗ್ರಹಮಾಡಲರ್ಹನಾಗಿರುವೆ.

೧೦. ನೀನು ನರ್ಮದಾತೀರದಲ್ಲಿ ಹನ್ನೆರಡುವರ್ಷಗಳಕಾಲ ಜಿತೇಂದ್ರಿಯನಾಗಿ ಶಾಂತನಾದ ಶಿವನನ್ನು ಆರಾಧಿಸು, ಮರಳಿ ಸದ್ಗತಿಯನ್ನು ಪಡೆಯುವೆ.

೧೧–೧೨. ಈ ಸ್ವರ್ಗಲೋಕವು ಸತ್ಯ, ಶೌಚಗಳಲ್ಲಿ ನಿರತರೂ, ಧರ್ಮಿಷ್ಠರೂ, ಜಿತೇಂದ್ರಿಯರೂ ಆದವರಿಗಾಗಿ ಇರುವುದು, ಪಾಪಿಗಳಿಗಲ್ಲ. ಇದು ಶಾಸ್ತ್ರನಿರ್ಣಯವಾಗಿರುವುದು. ಧೀರನಾದ ಇಂದ್ರನು ಹೀಗೆ ಹೇಳಲು ಗಂಧರ್ವಪುತ್ರನಾದ ಪತ್ರೇಶ್ವರನು ವಂದಿಸಿ ಭೂಲೋಕಕ್ಕೆ ತೆರಳಿದನು.

ರೇವಾಯಾ ವಿಮಲೇ ತೋಯೇ ಬ್ರಹ್ಮಾವರ್ತಸಮೀಪತಃ ।
ಸ್ನಾತ್ವಾ ಜಪ್ತ್ವಾ ವಿಧಾನೇನ ಅರ್ಚಯಿತ್ವಾ ಚ ಶಂಕರಂ ॥ ೧೩ ॥

ವಾಯ್ವಂಬುಪಿಣ್ಯಾಕಫಲೈಶ್ಚ ಪುಷ್ಪೈಃ
ಪರ್ಣೈಶ್ಚ ಮೂಲಾಽಶನಯಾವಕೇನ ।
ತತಾಪ ಪಂಚಾಗ್ನಿತಪೋಭಿರುಗ್ರೈ
ಸ್ತತಶ್ಚ ತೋಷಂ ಸಮಗಾತ್ಸದೇವಃ ॥ ೧೪ ॥

ಪಿನಾಕಪಾಣಿಂ ವರದಂ ತ್ರಿಶೂಲಿನ
ಮುಮಾಪತಿಂ ಹ್ಯಂಧಕನಾಶನಂ ಚ ।
ಚಂದ್ರಾರ್ಧಮೌಲಿಂ ಗಜಕೃತ್ತಿವಾಸಸಂ
ದೃಷ್ಟ್ವಾ ಪಪಾತಾಗ್ರಗತಂ ಸಮೀಕ್ಷ್ಯ ॥ ೧೫ ॥

ಈಶ್ವರ ಉವಾಚ :—

ವರಂ ವೃಣೀಷ್ವ ಭದ್ರಂ ತೇ ವರದೋಽಹಂ ತವಾಽನಘ ।
ಯಮಿಚ್ಛಸಿ ದದಾಮ್ಯದ್ಯ ನಾಽತ್ರ ಕಾರ್ಯಾ ವಿಚಾರಣಾ ॥ ೧೬ ॥

ಪತ್ರೇಶ್ವರ ಉವಾಚ :—

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ಅತ್ರ ತ್ವಂ ಸತತಂ ತೀರ್ಥೇ ಮಮ ನಾಮ್ನಾ ಭವ ಪ್ರಭೋ ॥ ೧೭ ॥

---

೧೩–೧೪. ಅವನು ನರ್ಮದಾನದಿಯ ನಿರ್ಮಲವಾದ ನೀರಿನಲ್ಲಿ ಬ್ರಹ್ಮಾವರ್ತದ ಹತ್ತಿರ ಮಿಂದು ಜಪಿಸಿ, ಶಂಕರನನ್ನು ವಿಧಿಯಂತೆ ಪೂಜಿಸಿ ಗಾಳಿ, ನೀರು, ಹಿಂಡಿ, ಹಣ್ಣು, ಪುಷ್ಪ, ಎಲೆ, ಗೆಣಸು, ಅಲಸಂದಿ ಇವುಗಳನ್ನು ತಿನ್ನುತ್ತ ಪಂಚಾಗ್ನಿಮಧ್ಯದಲ್ಲಿ ಉಗ್ರತಪವನ್ನಾಚರಿಸಿದನು. ಅದರಿಂದ ಶಂಕರನು ಸಂತುಷ್ಟನಾದನು.

೧೫. ಅವನು ಪಿನಾಕವೆಂಬ ಧನುಸ್ಸನ್ನು ಹಿಡಿದವನೂ, ವರವನ್ನು ಕೊಡುವವನೂ, ತ್ರಿಶೂಲಧಾರಿಯೂ, ಅಂಧಕಾರಿಯೂ, ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿದವನೂ, ಆನೆಯ ಚರ್ಮವನ್ನು ಹೊದ್ದಿರುವವನೂ ಆದ ಮಹೇಶ್ವರನು ಪ್ರತ್ಯಕ್ಷನಾಗಿರುವುದನ್ನು ನೋಡಿ ವಂದಿಸಿದನು.

೧೬. ಈಶ್ವರನು ಹೇಳುತ್ತಾನೆ:—ನಿರ್ದುಷ್ಟನೆ! ನಾನು ನಿನಗೆ ವರವನ್ನು ಕೊಡಲು ಬಂದಿರುವೆನು. ನಿನಗೆ ಇಷ್ಟವಾದ ವರವನ್ನು ಕೇಳಿಕೊ. ಈ ವಿಷಯದಲ್ಲಿ ವಿಚಾರಮಾಡಬೇಡ.

೧೭. ಪತ್ರೇಶ್ವರನು ಹೇಳುತ್ತಾನೆ:—ದೇವೇಶ! ನೀನು ಸಂತುಷ್ಟನಾಗಿದ್ದರೆ ನನಗೆ ವರವನ್ನು ಕೊಡುವುದಾದರೆ ನೀನು ಈ ತೀರ್ಥದಲ್ಲಿ ನನ್ನ ಹೆಸರಿನಿಂದ ಯಾವಾಗಲೂ ನೆಲಸಿರು.

ಏತಚ್ಛ್ರುತ್ವಾ ಮಹಾದೇವೋ ಹರ್ಷಗದ್ಗದಯಾ ಗಿರಾ ।
ತಥೇತ್ಯುಕ್ತ್ವಾ ಯಯೌ ಹೃಷ್ಟ ಉಮಯಾ ಸಹ ಶಂಕರಃ ॥ ೧೮ ॥
ಸೋಽಪಿ ತತ್ತೀರ್ಥಮಾಪ್ಲುತ್ಯ ಗತೇ ದೇವೇ ದಿವಂ ಪ್ರತಿ ।
ಸ್ನಾತ್ವಾ ಜಾಪ್ಯವಿಧಾನೇನ ತರ್ಪಯಿತ್ವಾ ಪಿತೄನ್ಪುನಃ ॥ ೧೯ ॥
ಸ್ಥಾಪಯಾಮಾಸ ದೇವೇಶಂ ತಸ್ಮಿಂಸ್ತೀರ್ಥೇ ವಿಧಾನತಃ ।
ಪತ್ರೇಶ್ವರಂ ತು ವಿಖ್ಯಾತಂ ತ್ರಿಷು ಲೋಕೇಷು ಭಾರತ ॥ ೨೦ ॥
ಇಂದ್ರಲೋಕಂ ಗತಃ ಶಾಪಾನ್ಮುಕ್ತಃ ಸೋಽಪಿ ನರೇಶ್ವರ ।
ಹೃಷ್ಟಃ ಪ್ರಮುದಿತೋ ರಮ್ಯಂ ಜಯಶಬ್ದಾದಿಮಂಗಲೈಃ ॥ ೨೧ ॥
ಏಷ ತೇ ಕಥಿತಃ ಪ್ರಶ್ನಃ ಪೃಷ್ಟೋ ಯೋ ವೈ ಯುಧಿಷ್ಠಿರ ।
ತತ್ರ ಸ್ನಾನೇನ ಚೈಕೇನ ಸರ್ವಪಾಪೈಃ ಪ್ರಮುಚ್ಯತೇ ॥ ೨೨ ॥
ಯಸ್ತ್ವರ್ಚಯೇನ್ಮಹಾದೇವಂ ತಸ್ಮಿಂಸ್ತೀರ್ಥೇ ಯುಧಿಷ್ಠಿರ ।
ಸ್ನಾತ್ವಾಽಭ್ಯರ್ಚ್ಯ ಪಿತೄನ್ದೇವಾನ್ ಸೋಽಶ್ವಮೇಧಫಲಂ ಲಭೇತ್ ॥೨೩॥
ಮೃತೋ ವರ್ಷಶತಂ ಸಾಗ್ರಂ ಕ್ರೀಡಿತ್ವಾಚ ಶಿವೇ ಪುರೇ ।
ರಾಜಾ ವಾ ರಾಜತುಲ್ಯೋ ವಾ ಪಶ್ಚಾನ್ಮರ್ತ್ಯೇಷು ಜಾಯತೇ ॥ ೨೪ ॥

---

೧೮. ಮಹಾದೇವನು ಈ ಮಾತನ್ನು ಕೇಳಿ ಸಂತೋಷದಿಂದ ಗದ್ಗದ ವಾಣಿಯಿಂದ, 'ಹಾಗೆಯೇ ಆಗಲೆಂದು' ಹೇಳಿ ಪಾರ್ವತಿಯೊಡನೆ ಹೊರಟು ಹೋದನು.

೧೯–೨೦. ಆ ಪತ್ರೇಶ್ವರನು ಶಂಕರನು ಹೊರಟು ಹೋದ ಬಳಿಕ ಆ ತೀರ್ಥದಲ್ಲಿ ಮಿಂದು ವಿಧಿಯಂತೆ ಪಿತೃಗಳಿಗೆ ತರ್ಪಣಮಾಡಿ ಅಲ್ಲಿ ಶಂಕರನನ್ನು ಪ್ರತಿಷ್ಠೆ ಮಾಡಿದನು. ಅವನು ತ್ರಿಭುವನದಲ್ಲಿಯೂ ಪತ್ರೇಶ್ವರನೆಂದು ವಿಖ್ಯಾತನಾದನು.

೨೧. ಆ ಪತ್ರೇಶ್ವರನೂ ಶಾಪಮುಕ್ತನಾಗಿ ಜಯ ಜಯಕಾರಗಳಿಂದ ಸಂತೋಷಗೊಂಡು ಇಂದ್ರಲೋಕವನ್ನು ಸೇರಿದನು.

೨೨. ಯುಧಿಷ್ಠಿರ! ನಿನ್ನ ಪ್ರಶ್ನೆಗೆ ಈ ಉತ್ತರವನ್ನು ಹೇಳಿದ್ದೇನೆ. ಮಾನದನಾದ ಮಾನವನು ಅಲ್ಲಿ ಮಾಡಿದ ಸ್ನಾನವೊಂದರಿಂದಲೇ ಸಕಲಪಾಪ ಮುಕ್ತನಾಗುವನು.

೨೩. ಯುಧಿಷ್ಠಿರ! ಆ ತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳನ್ನು ಅರ್ಚಿಸಿ ಮಹೇಶ್ವರನನ್ನು ಪೂಜಿಸಿದವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೨೪. ಮೃತನಾಗಿ ನೂರುವರ್ಷಕಾಲ ಶಿವನ ಪಟ್ಟಣದಲ್ಲಿ ವಿನೋದಪಟ್ಟು ಅನಂತರ ಭೂಲೋಕದಲ್ಲಿ ರಾಜನಾಗಲಿ, ರಾಜನಿಗೆ ಸಮಾನನಾಗಲಿ ಆಗುವನು.

**ವೇದವೇದಾಂಗತತ್ತ್ವಜ್ಞೋ ಜೀವೇಚ್ಚ ಶರದಃಶತಂ ।**
**ವ್ಯಾಧಿಶೋಕವಿನಿರ್ಮುಕ್ತಃ ಪುನಃಸ್ಮರತಿ ತಜ್ಜಲಂ ॥ ೨೫ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**“ಪತ್ರೇಶ್ವರತೀರ್ಥಮಾಹಾತ್ಮ್ಯವರ್ಣನಂ” ನಾಮ ದ್ವಾತ್ರಿಂಶೋಽಧ್ಯಾಯಃ**

---

೨೫. ಅಲ್ಲಿ ವೇದವೇದಾಂಗ ತತ್ತ್ವಜ್ಞನೂ, ರೋಗ, ಶೋಕಗಳಿಲ್ಲದವನೂ ಆಗಿ ನೂರು ವರ್ಷಕಾಲ ಜೀವಿಸಿ ಆ ತೀರ್ಥದ ಜಲವನ್ನು ಸ್ಮರಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
“ಪತ್ರೇಶ್ವರತೀರ್ಥಮಾಹಾತ್ಮ್ಯವರ್ಣನ”ವೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ಅಗ್ನಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೆಯ ಉವಾಚ :—

**ತತೋ ಗಚ್ಛೇತ್ತು ರಾಜೇಂದ್ರ ಅಗ್ನಿತೀರ್ಥಮನುತ್ತಮಂ ।**
**ಯತ್ರ ಸನ್ನಿಹಿತೋಹ್ಯಗ್ನಿರ್ಗತಃ ಕಾಮೇನ ಮೋಹಿತಃ ॥ ೧ ॥**

ಯುಧಿಷ್ಠಿರ ಉವಾಚ :—

**ಕಥಂ ದೇವೋ ಜಗದ್ಧಾತಾ ಕಾಮೇನ ಕಲುಷೀಕೃತಃ ।**
**ಕಥಂ ಚ ನಿತ್ಯದಾವಾಸ ಏಕಸ್ಥಾನೇಷು ಜಾಯತೇ ॥ ೨ ॥**
**ಏತದ್ವಾಶ್ಚರ್ಯಮತುಲಂ ಸರ್ವಲೋಕೇಷ್ವನುತ್ತಮಂ ।**
**ಕಥಯಸ್ವ ಮಹಾಭಾಗ ಪರಂ ಕೌತೂಹಲಂ ಮಮ ॥ ೩ ॥**

ಶ್ರೀ ಮಾರ್ಕಂಡೇಯ ಉವಾಚ :—

**ಸಾಧು ಸಾಧು ಮಹಾಪ್ರಾಜ್ಞ ಪೃಷ್ಟಃಪ್ರಶ್ನಸ್ತ್ವಯಾಽನಘ ।**
**ಕಥಯಾಮಿ ಯಥಾಪೂರ್ವಂ ಶ್ರುತಮೇತನ್ಮಹೇಶ್ವರಾತ್ ॥ ೪ ॥**
**ಆಸೀತ್ಕೃತಯುಗೇ ರಾಜಾ ನಾಮ್ನಾ ದುರ್ಯೋಧನೋ ಮಹಾನ್ ।**
**ಹಸ್ತ್ಯಶ್ವರಥಸಂಪೂರ್ಣೋ ಮೇದಿನೀಪರಿಪಾಲಕಃ ॥ ೫ ॥**

---

## ಕನ್ನಡದ ಅನುವಾದ

### ಅಗ್ನಿತೀರ್ಥಮಾಹಾತ್ಮ್ಯವರ್ಣನ

೧-೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಕಾಮಮೋಹಿತನಾದ ಅಗ್ನಿಯು ಸನ್ನಿಹಿತನಾಗಿರುವ ಉತ್ತಮವಾದ ಅಗ್ನಿತೀರ್ಥಕ್ಕೆ ಹೋಗಬೇಕು. ಯುಧಿಷ್ಠಿರನು ಹೇಳುತ್ತಾನೆ:—ಜಗದ್ಧಾತೃವಾದ ಅಗ್ನಿದೇವನು ಹೇಗೆ ಕಾಮಪೀಡಿತನಾದನು? ಅವನು ಒಂದೇ ಸ್ಥಳದಲ್ಲಿ ನಿತ್ಯವೂ ಹೇಗೆ ವಾಸಮಾಡಿದನು?

೩-೫. ಇದು ಸಕಲ ಲೋಕಗಳಿಗೂ ಆಶ್ಚರ್ಯವನ್ನುಂಟುಮಾಡುವುದು. ಮಹಾಭಾಗ್ಯಶಾಲಿಯೆ! ನನಗೆ ಅತ್ಯಂತ ಕುತೂಹಲವುಂಟಾಗಿದೆ. ಇದನ್ನು ಹೇಳು. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಪ್ರಾಜ್ಞನೆ! ನೀನು ಚೆನ್ನಾಗಿ ಪ್ರಶ್ನೆಮಾಡಿರುವೆ. ಮಹೇಶ್ವರನಿಂದ ನಾನು ಕೇಳಿದ ಈ ವಿಷಯವನ್ನು ಮೊದಲಿನಂತೆಯೇ ಹೇಳುವೆನು. ಹಿಂದೆ ಕೃತಯುಗದಲ್ಲಿ ಆನೆ, ಕುದುರೆ, ರಥಗಳಿಂದ ಸಹಿತನೂ, ಭೂಮಿಯನ್ನು ಪಾಲಿಸುವವನೂ ಆದ ದುರ್ಯೋಧನನೆಂಬ ಮಹಾರಾಜನಿದ್ದನು.

ರೂಪಯೌವನಸಂಪನ್ನಂ ದೃಷ್ಟ್ವಾ ತಂ ಪೃಥಿವೀಪತಿಂ ।
ದಿವ್ಯೋಪಭೋಗಸಂಪನ್ನಂ ಪ್ರಾರ್ಥಯಾಮಾಸ ನರ್ಮದಾ ॥ ೬ ॥
ಸತು ತಾಂ ಚಕಮೇ ಕನ್ಯಾಂ ತ್ಯಕ್ತ್ವಾಽನ್ಯಂ ಪ್ರಮದಾಜನಂ ।
ಮುದಾ ಪರಮಯಾ ಯುಕ್ತೋ ಮಾಹಿಷ್ಮತ್ಯಾಃಪತಿರ್ನೃಪ ॥ ೭ ॥
ರಮತೇ ಸ ತಯಾ ಸಾರ್ಧಂ ಕಾಲೇ ವೈ ನೃಪಸತ್ತಮ ।
ನರ್ಮದಾ ಜನಯಾಮಾಸ ಕನ್ಯಾಂ ಪದ್ಮದಲೇಕ್ಷಣಾಂ ॥ ೮ ॥
ಅಂಗಪ್ರತ್ಯಂಗಸಂಪನ್ನಾ ಯಸ್ಮಾಲ್ಲೋಕೇಷು ವಿಶ್ರುತಾ ।
ತಸ್ಯಾಂ ಪಿತಾ ಚ ಮಾತಾ ಚ ಚಕ್ರತುಃ ಪ್ರೇಮಬಂಧನಂ ॥ ೯ ॥
ಕಾಲೇನಾತಿಸುದೀರ್ಘೇಣ ಯೌವನಸ್ಥಾ ವರಾಂಗನಾ ।
ಪ್ರಾರ್ಥ್ಯಮಾನಾಽಪಿ ರಾಜನ್ಯೈ ನಾತ್ಮಾನಂ ದಾತುಮಿಚ್ಛತಿ ॥ ೧೦ ॥
ತತೋಽನ್ಯದಿವಸೇ ವಹ್ನಿರ್ದ್ವಿಜರೂಪೋ ಮಹಾತಪಾಃ ।
ರಾಜಾನಂ ಪ್ರಾರ್ಥಯಾಮಾಸ ರಹೋ ಗತ್ವಾ ಶನೈಃ ಶನೈಃ ॥ ೧೧ ॥
ಭೋ ಭೋ ರಘುಕುಲಶ್ರೇಷ್ಠ ದ್ವಿಜೋಽಹಂ ಮಂದಸಂತತಿಃ ।
ದರಿದ್ರೋ ಹ್ಯಸಹಾಯಶ್ಚ ಭಾರ್ಯಾರ್ಥೇ ವರಯಾಮಿ ತಾಂ ॥ ೧೨ ॥

---

೬. ರೂಪ ಯೌವನಗಳಿಂದ ಕೂಡಿದವನೂ, ದಿವ್ಯಭೋಗಸಹಿತನೂ ಆದ ಅವನನ್ನು ನೋಡಿ ನರ್ಮದೆಯು ತನ್ನನ್ನು ವರಿಸೆಂದು ಪ್ರಾರ್ಥಿಸಿದಳು.

೭. ಮಾಹಿಷ್ಮತೀದೊರೆಯಾದ ಅವನು ಅತಿಸಂತೋಷದಿಂದ ಇತರ ಸ್ತ್ರೀಯರನ್ನು ತ್ಯಜಿಸಿ ಆ ಕನ್ಯೆಯನ್ನು ಕಾಮಿಸಿದನು.

೮. ಅವನು ಅವಳೊಡನೆ ವಿನೋದಪಡುತ್ತಿರಲು ನರ್ಮದೆಯಲ್ಲಿ ಪದ್ಮನಯನಳಾದ ಓರ್ವ ಕನ್ಯೆಯು ಜನಿಸಿದಳು.

೯. ಅಂಗಪ್ರತ್ಯಂಗಗಳಿಂದ ಸುಂದರಿಯೂ, ಲೋಕಪ್ರಸಿದ್ಧಳೂ ಆದ ಅವಳಲ್ಲಿ ತಂದೆತಾಯಿಗಳು ಅತಿಶಯಪ್ರೀತಿಯನ್ನಿಟ್ಟರು.

೧೦. ಬಹುಕಾಲದ ಮೇಲೆ ಯುವತಿಯಾದ ಅವಳಿಗೆ ವಿವಾಹಮಾಡಲು ತಂದೆಯು ಅಪೇಕ್ಷಿಸಿದರೂ ಅವಳು ಒಪ್ಪಲಿಲ್ಲ.

೧೧. ಅನಂತರ ಒಂದುದಿನ ಬ್ರಾಹ್ಮಣರೂಪಿಯೂ, ಅತಿತಪಸ್ವಿಯೂ ಆದ ಅಗ್ನಿಯು ರಹಸ್ಯದಲ್ಲಿ ರಾಜನೆಡೆಗೆ ಹೋಗಿ ಮೆಲ್ಲನೆ ಹೀಗೆ ಪ್ರಾರ್ಥಿಸಿದನು.

೧೨. ಎಲೈ ರಘುವಂಶಶ್ರೇಷ್ಠನಾದ ದೊರೆಯೆ! ಸಂತತಿಯಿಲ್ಲದವನೂ, ಬಡವನೂ, ಸಹಾಯಕರಿಲ್ಲದವನೂ, ಬ್ರಾಹ್ಮಣನೂ ಆದ ನಾನು ಆ ನಿನ್ನ ಕನ್ಯೆಯನ್ನು ವರಿಸುವೆನು.

ಕನ್ಯಾ ಸುದರ್ಶನಾ ನಾಮ ರೂಪೇಣಾऽಪ್ರತಿಮಾ ಭುವಿ ।
ತಾಂ ದದಸ್ವ ಮಹಾಭಾಗ ವರ್ಧತೇ ತವ ಮಂದಿರೇ ॥ ೧೩ ॥
ಬ್ರಹ್ಮಚರ್ಯೇಣ ನಿರ್ವಿಣ್ಣ ಏಕಾಕೀ ಕಾಮಪೀಡಿತಃ ।
ಯಾಚಮಾನಸ್ಯ ಮೇ ತಾತ ಪ್ರಸಾದಂ ಕರ್ತುಮರ್ಹಸಿ ॥ ೧೪ ॥

ರಾಜೋವಾಚ :—

ನಾऽಹಂ ದ್ರವ್ಯವಿಹೀನಸ್ಯ ಅಸವರ್ಣಸ್ಯ ಕರ್ಹಿಚಿತ್ ।
ದಾಸ್ಯಾಮಿ ಸ್ವಾಂ ಸುತಾಂ ಶುಭ್ರಾಂ ಗಮ್ಯತಾಂ ದ್ವಿಜಪುಂಗವ ॥ ೧೫ ॥
ಏವಮುಕ್ತಸ್ತದಾ ವಹ್ನಿಃ ಪರಾಂ ಪೀಡಾಮುಪಾಗತಃ ।
ನ ಕಿಂಚಿದುಕ್ತ್ವಾ ರಾಜಾನಂ ತತ್ರೈವಾऽಂತರಧೀಯತ ॥ ೧೬ ॥
ಗತೇ ಚಾऽದರ್ಶನಂ ವಿಪ್ರೇ ರಾಜಾ ಮಂತ್ರಿಪುರೋಹಿತೈಃ ।
ಮಂತ್ರಯಿತ್ವಾऽಥ ಕಾಲೇತು ತುಷ್ಟೋ ಮುಖಮುಖೇ ಸ್ಥಿತಃ ॥ ೧೭ ॥
ಯಜತಶ್ಚ ಮುಖೇ ಭಕ್ತ್ಯಾ ಬ್ರಾಹ್ಮಣೈಃಸಹ ಭಾರತ ।
ತತಶ್ಚಾऽದರ್ಶನಂ ವಹ್ನಿಃ ಸರ್ವೇಷಾಂ ಪಶ್ಯತಾಮಗಾತ್ ॥ ೧೮ ॥
ವಿಪ್ರಾ ದುರ್ಮನಸೋ ಭೂತ್ವಾ ಗತಾ ರಾಜ್ಞೋ ಹಿ ಮಂದಿರಂ ।
ವಹ್ನಿನಾಶಂ ವಿಮನಸೋ ರಾಜಾನಮಿದಮಬ್ರುವನ್ ॥ ೧೯ ॥

---

೧೩. ನಿನ್ನ ಮನೆಯಲ್ಲಿ ಬೆಳೆಯುತ್ತಿರುವ ಸುಂದರಿಯಾದ ಸುದರ್ಶನೆ ಯೆಂಬ ಆ ಕನ್ಯೆಯನ್ನು ನನಗೆ ಕೊಡು.

೧೪. ಬ್ರಹ್ಮಚರ್ಯೆಯಿಂದ ವಿರಕ್ತನೂ, ಒಬ್ಬಂಟಿಗನೂ, ಕಾಮಪೀಡಿ ತನೂ ಆಗಿ ಬೇಡುತ್ತಿರುವ ನನಗೆ ಅವಳನ್ನು ಅನುಗ್ರಹಿಸಲರ್ಹನಾಗಿರುವೆ.

೧೫. ರಾಜನು ಹೇಳುತ್ತಾನೆ:—ದ್ವಿಜವರ್ಯನೆ! ನಾನು ಸುಂದರಿಯಾದ ನನ್ನ ಮಗಳನ್ನು ಬಡವನೂ, ಅನ್ಯಜಾತಿಯವನೂ ಆದ ನಿನಗೆ ಕೊಡುವುದಿಲ್ಲ. ಹೊರಡು.

೧೬. ರಾಜನು ಹೀಗೆನ್ನಲು ಅಗ್ನಿಯು ಅತ್ಯಂತ ಕಾಮಪೀಡಿತನಾಗಿ ಅವನನ್ನು ಕುರಿತು ಏನನ್ನೂ ಹೇಳದೆ ಅಲ್ಲಿಯೇ ಅದೃಶ್ಯನಾದನು.

೧೭. ಬ್ರಾಹ್ಮಣನು ಅದೃಶ್ಯನಾಗಲು ಒಮ್ಮೆ ರಾಜನು ಮಂತ್ರಿಪುರೋಹಿತ ರೊಡನೆ ಆಲೋಚಿಸಿ ಸಂತುಷ್ಟನಾಗಿ ಯಜ್ಞಮಾಡಲಾರಂಭಿಸಿದನು.

೧೮. ಯುಧಿಷ್ಠಿರ! ಅವನು ಬ್ರಾಹ್ಮಣರೊಡನೆ ಭಕ್ತಿಯಿಂದ ಯಾಗ ಮಾಡುತ್ತಿರಲು ಸಮಸ್ತಜನರೂ ನೋಡುತ್ತಿರುವಾಗಲೆ ಅಗ್ನಿಯು ಅದೃಶ್ಯ ನಾದನು.

೧೯. ಬ್ರಾಹ್ಮಣರು ದುರ್ಮನಸ್ಕರಾಗಿ ರಾಜನ ಮನೆಗೆ ಹೋಗಿ ವೈಮನಸ್ಯ ದಿಂದ ದೊರೆಗೆ ಆ ಅಗ್ನಿನಾಶದ ಸುದ್ದಿಯನ್ನು ಹೇಳಿದರು.

ಬ್ರಾಹ್ಮಣಾ ಊಚುಃ:—
ದುರ್ಯೋಧನಮಹಾರಾಜ ಶ್ರೂಯತಾಂ ಮಹದದ್ಭುತಂ ।
ನ ಶ್ರುತಂ ನ ಚ ದೃಷ್ಟಂ ವಾ ಕೌತುಕಂ ನೃಪಪುಂಗವ ॥ ೨೦ ॥
ಅಗ್ನಿಕಾರ್ಯಪ್ರವೃತ್ತಾನಾಂ ಸರ್ವೇಷಾಂ ವಿಧಿವನ್ನೃಪ ।
ಕೇನಾಽಪಿ ಹೇತುನಾ ವಹ್ನಿರ್ದೃಶ್ಯತೇ ನ ಜ್ವಲತ್ಯುತ ॥ ೨೧ ॥
ತಚ್ಛ್ರುತ್ವಾ ವಿಪ್ರಿಯಂ ಘೋರಂ ರಾಜಾ ವಿಪ್ರಮುಖಾಚ್ಚ್ಯುತಂ ।
ಆಸನಾತ್ಪತಿತೋ ಭೂಮೌ ಛಿನ್ನಮೂಲ ಇವ ದ್ರುಮಃ ॥ ೨೨ ॥
ಆಶ್ವಾಸ್ಯ ಚ ಮುಹೂರ್ತೇನ ಉನ್ಮತ್ತ ಇವ ಸಂಸ್ತದಾ ।
ನಿರೀಕ್ಷ್ಯ ಚ ದಿಶಃ ಸರ್ವಾ ಇದಂ ವಚನಮಬ್ರವೀತ್ ॥ ೨೩ ॥
ಕಿಮೇತದಾಶ್ಚರ್ಯಮಿತಿ ಭೋ ಭೋ ದ್ವಿಜವರೋತ್ತಮಾಃ ।
ಕಥ್ಯತಾಂ ಕಾರಣಂ ಸರ್ವಂ ಶಾಸ್ತ್ರದೃಷ್ಟ್ಯಾ ವಿಭಾವ್ಯಚ ॥ ೨೪ ॥
ಮಮ ವಾ ದುಷ್ಕೃತಂ ಕಿಂಚಿದುತಾಹೋ ಭವತಾಮಿಹ ।
ಯೇನ ನಷ್ಟೋಽಗ್ನಿಶಾಲಾಯಾಂ ಹುತಭುಕ್ಕೇನ ಹೇತುನಾ ॥ ೨೫ ॥
ಮಂತ್ರಚ್ಛಿದ್ರಮಥಾಽನ್ಯದ್ವಾ ನೈವ ಕಿಂಚಿದದಕ್ಷಿಣಂ ।
ಕ್ರಿಯಾಹೀನಂ ಕೃತಂವಾಽಥ ಕೇನ ವಹ್ನಿರ್ನದೃಶ್ಯತೇ ॥ ೨೬ ॥

---

೨೦. ಬ್ರಾಹ್ಮಣರು ಹೇಳುತ್ತಾರೆ:—ದುರ್ಯೋಧನಮಹಾರಾಜ! ಒಂದು ಆಶ್ಚರ್ಯವನ್ನು ಕೇಳು. ಕುತೂಹಲವನ್ನುಂಟುಮಾಡುವ ಈ ವಿಷಯವನ್ನು ನಾವು ಈವರೆಗೆ ಕೇಳಲಿಲ್ಲ; ನೋಡಲೂ ಇಲ್ಲ.

೨೧. ನಾವು ಅಗ್ನಿಕಾರ್ಯದಲ್ಲಿ ತೊಡಗಿರಲು ಯಾವುದೊ ಒಂದು ಕಾರಣದಿಂದ ಅಗ್ನಿಯು ಕಾಣುತ್ತಲೂ ಇಲ್ಲ. ಉರಿಯುತ್ತಲೂ ಇಲ್ಲ.

೨೨. ಬ್ರಾಹ್ಮಣರು ಹೇಳಿದ ಭಯಂಕರವಾದ ಈ ಅಹಿತ ವಿಷಯವನ್ನು ಕೇಳಿ ದೊರೆಯು ಕಡಿದಬುಡವುಳ್ಳ ಮರದಂತೆ ಆಸನದಿಂದ ನೆಲದಮೇಲೆ ಬಿದ್ದನು.

೨೩. ಸ್ವಲ್ಪ ಹೊತ್ತಿನಲ್ಲಿಯೇ ಸಮಾಧಾನಗೊಂಡು ಹುಚ್ಚನಂತಾಗಿ ಸಕಲದಿಕ್ಕುಗಳನ್ನೂ ನೋಡಿ ಹೀಗೆಂದನು.

೨೪. "ದ್ವಿಜವರ್ಯರೆ! ಇದೇನಾಶ್ಚರ್ಯ! ಶಾಸ್ತ್ರದೃಷ್ಟಿಯಿಂದ ಆಲೋಚಿಸಿ ಕಾರಣವನ್ನು ಹೇಳಿರಿ.

೨೫. ಅಗ್ನಿಶಾಲೆಯಲ್ಲಿ ಅಗ್ನಿಯು ನಷ್ಟವಾಗಲು ನನ್ನ ಪಾಪವು ಕಾರಣವೊ? ಅಥವಾ ನಿಮ್ಮ ಪಾಪವು ಕಾರಣವೊ. ಅಗ್ನಿಯು ಏಕೆ ನಷ್ಟವಾಯಿತು?

೨೬. ಮಂತ್ರಚ್ಛಿದ್ರ, ದಕ್ಷಿಣಾಭಾವ, ಕ್ರಿಯಾಹೀನತೆ ಇವುಗಳಾದುವೆ? ಅಗ್ನಿಯು ಏಕೆ ಕಾಣಿಸುವುದಿಲ್ಲ?

**ಅನ್ನಹೀನೋ ದಹೇದ್ರಾಷ್ಟ್ರಂ ಮಂತ್ರಹೀನಸ್ತು ಋತ್ವಿಜಃ ।**
**ದಾತಾರಂ ದಕ್ಷಿಣಾಹೀನೋ ನಾಽಸ್ತಿ ಯಜ್ಞಸಮೋ ರಿಪುಃ ॥ ೨೭ ॥**

**ಬ್ರಾಹ್ಮಣಾ ಊಚುಃ :—**

**ನ ಮಂತ್ರಹೀನಾ ಹಿ ವಯಂ ನ ಚ ರಾಜನ್ವ್ರತೈಸ್ತಥಾ ।**
**ದ್ರವ್ಯೇಣ ಚ ನ ಹೀನಸ್ತ್ವಮನ್ಯತ್ಪಾಪಂ ವಿಚಿಂತ್ಯತಾಂ ॥ ೨೮ ॥**

**ರಾಜೋವಾಚ :—**

**ತಥಾಽಪಿ ಯೂಯಂ ಸಹಿತಾ ಉಪಾಯಂ ಚಿಂತಯಂತ್ವಿತಿ ।**
**ಯೇನ ಶ್ರೇಯೋ ಭವೇನ್ನಿತ್ಯಮಿಹಲೋಕೇ ಪರತ್ರಚ ॥ ೨೯ ॥**
**ಏವಮುಕ್ತಾಸ್ತತಃ ಸರ್ವೇ ಬ್ರಾಹ್ಮಣಾಃ ಕೃತನಿಶ್ಚಯಾಃ ।**
**ನಿರಾಹಾರಾಃ ಸ್ಥಿತಾಃ ಸರ್ವೇ ಯತ್ರ ನಷ್ಟೋ ಹುತಾಶನಃ ॥ ೩೦ ॥**
**ತತಃ ಸ್ವಪ್ನೇ ಮಹಾತೇಜಾ ಹುತಭುಗ್ಬ್ರಾಹ್ಮಣಾಂಸ್ತದಾ ।**
**ಉವಾಚ ಶ್ರೂಯತಾಂ ಸರ್ವೈರ್ಮಮ ನಾಶಸ್ಯ ಕಾರಣಂ ॥ ೩೧ ॥**
**ಪ್ರಾರ್ಥಿತೋಽಯಂ ಮಯಾ ರಾಜಾ ಸುತಾಂ ದಾತುಂ ನ ಚೇಚ್ಛತಿ ।**
**ತೇನ ನಷ್ಟೋಽಗ್ನಿಶರಣಾದಹಂ ಭೋ ದ್ವಿಜಸತ್ತಮಾಃ ॥ ೩೨ ॥**
**ಯದಿ ಮೇ ಸ್ವಸುತಾಂ ರಾಜಾ ದದಾತಿ ಪರಮಾರ್ಚಿತಾಂ ।**
**ತದಾಸ್ಯ ಜ್ವಲಮಾನೋಽಹಂ ಗೃಹೇ ತಿಷ್ಠಾಮಿ ನಾನ್ಯಥಾ ॥ ೩೩ ॥**

---

೨೭–೨೮. ಅನ್ನವಿಲ್ಲದ ಯಜ್ಞವು ರಾಜ್ಯವನ್ನೂ, ಮಂತ್ರವಿಲ್ಲದ ಯಜ್ಞವು ಋತ್ವಿಜರನ್ನೂ, ದಕ್ಷಿಣೆಯಿಲ್ಲದಿರುವುದು ದಾನಮಾಡುವವನನ್ನೂ, ದಹಿಸುವುದು. ಯಜ್ಞಕ್ಕೆ ಸಮಾನವಾದ ಶತ್ರುವಿಲ್ಲ. ಬ್ರಾಹ್ಮಣರು ಹೇಳುತ್ತಾರೆ:—ದೊರೆಯೆ! ನಾವು ಮಂತ್ರಹೀನರಲ್ಲ. ವ್ರತಹೀನರೂ ಅಲ್ಲ. ಯಜ್ಞವು ದಕ್ಷಿಣಾಹೀನವೂ ಆಗಿಲ್ಲ. ಬೇರೆ ಏನಾದರೂ ಪಾಪವಿದೆಯೋ ಆಲೋಚಿಸು.

೨೯. ರಾಜನು ಹೇಳುತ್ತಾನೆ:—ಹಾಗಾದರೆ ನನಗೆ ಇಹಪರಲೋಕಗಳಲ್ಲಿ ಹೇಗೆ ಶ್ರೇಯಸ್ಸಾದೀತೆಂಬುದನ್ನು ನೀವು ಒಟ್ಟಿಗೆ ಸೇರಿ ಆಲೋಚಿಸಿರಿ.

೩೦–೩೧. ರಾಜನು ಹೀಗೆ ಹೇಳಲು ಸಕಲಬ್ರಾಹ್ಮಣರೂ ಒಟ್ಟಿಗೆ ಸೇರಿ ನಿಶ್ಚಯಿಸಿ ಅಗ್ನಿಯು ನಷ್ಟವಾದ ಸ್ಥಳದಲ್ಲಿ ಉಪವಾಸವಾಗಿದ್ದರು. ಬಳಿಕ ಅತಿತೇಜಸ್ವಿಯಾದ ಅಗ್ನಿಯು ಸ್ವಪ್ನದಲ್ಲಿ ಆ ಬ್ರಾಹ್ಮಣರನ್ನು ಕುರಿತು ಇಂತೆಂದನು. "ಬ್ರಾಹ್ಮಣರೆ! ನಾನು ಅದೃಶ್ಯನಾಗಲು ಕಾರಣವನ್ನು ಕೇಳಿರಿ.

೩೨. ನಾನು ಈ ದೊರೆಯನ್ನು ಕನ್ಯೆಯನ್ನು ಕೊಡೆಂದು ಪ್ರಾರ್ಥಿಸಿದೆನು. ಆದರೆ ಇವನು ಕೊಡಲಿಚ್ಛಿಸಲಿಲ್ಲ. ಆದ್ದರಿಂದ ನಾನು ಅಗ್ನಿಶಾಲೆಯಿಂದ ಅದೃಶ್ಯನಾದೆನು.

೩೩. ಈ ರಾಜನು ಪರಮಪೂಜ್ಯಳಾದ ತನ್ನ ಮಗಳನ್ನು ನನಗೆ ದಾನಮಾಡಿದರೆ ನಾನು ಇವನ ಮನೆಯಲ್ಲಿ ಜ್ವಲಿಸುತ್ತಿರುವೆನು. ಇಲ್ಲದಿದ್ದರೆ ಇಲ್ಲವು.

ತಚ್ಛ್ರುತ್ವಾ ವಚನಂ ವಿಪ್ರಾ ವೈಶ್ವಾನರಮುಖೋದ್ಗತಂ ।
ವಿಸ್ಮಯೋತ್ಫುಲ್ಲನಯನಾ ರಾಜಾನಮಿದಮಬ್ರುವನ್ ॥ ೩೪ ॥
ಭವತೋ ಮತಮಾಜ್ಞಾಯ ಸರ್ವೇ ಗತ್ವಾಽಗ್ನಿಮಂದಿರಂ ।
ನಿರಾಹಾರಾಃ ಸ್ಥಿತಾ ರಾತ್ರೌ ಪಶ್ಯಾಮೋ ಜಾತವೇದಸಂ ॥ ೩೫ ॥
ತೇನೋಕ್ತಾಂ ಸ್ವಸುತಾಂ ಚೇತ್ತು ರಾಜಾ ನೋ ದಾತುಮಿಚ್ಛತಿ ।
ತತೋಽಸ್ಯ ಭೂಯೋಽಪಿ ಜ್ವಲೇಽಹಂ ನಾಽನ್ಯಥಾ ದ್ವಿಜಾಃ ॥ ೩೬ ॥
ಏವಂ ಜ್ಞಾತ್ವಾ ಮಹಾರಾಜ ಸ್ವಸುತಾಂ ದಾತುಮರ್ಹಸಿ ॥ ೩೭ ॥

ರಾಜೋವಾಚ :—

ಭವತಾಂ ತಸ್ಯ ವಾ ಕಾರ್ಯಂ ದೇವಸ್ಯ ವಚನಂ ಹೃದಿ ।
ಸಮಯಂ ಕರ್ತುಮಿಚ್ಛಾಮಿ ಕನ್ಯಾದಾನೇ ಹ್ಯನುತ್ತಮಂ ॥ ೩೮ ॥
ಮಮ ಸನ್ನಿಹಿತೋ ನಿತ್ಯಂ ಗೃಹೇ ತಿಷ್ಠತು ಪಾವಕಃ ।
ದದಾಮಿ ರುಚಿರಾಪಾಂಗೀಂ ನಾಽನ್ಯಥಾ ಕರವಾಣಿ ವೈ ॥ ೩೯ ॥
ಏವಂ ತೇ ಬ್ರಾಹ್ಮಣಾಃ ಶ್ರುತ್ವಾ ತಥಾಽಗ್ನಿಂ ಪ್ರಾಪ್ಯ ಸತ್ವರಂ ।
ಕಥಯಿತ್ವಾ ವಿವಾಹೇನ ಯೋಜಯಾಮಾಸುರಾಶು ವೈ ॥ ೪೦ ॥

---

೩೪. ಬ್ರಾಹ್ಮಣರು ಅಗ್ನಿಯು ಹೇಳಿದ ಈ ಮಾತನ್ನು ಕೇಳಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವರಾಗಿ ರಾಜನನ್ನು ಕುರಿತು ಹೀಗೆಂದರು.

೩೫. ನಾವೆಲ್ಲರೂ ನಿನ್ನ ಅಭಿಪ್ರಾಯವನ್ನು ತಿಳಿದು ಅಗ್ನಿಶಾಲೆಗೆ ಹೋಗಿ ನಿರಾಹಾರರಾಗಿದ್ದು ರಾತ್ರಿಯಲ್ಲಿ ಅಗ್ನಿಯನ್ನು ನೋಡಿದೆವು.

೩೬. ಆ ಅಗ್ನಿಯು, "ರಾಜನು ತನ್ನ ಮಗಳನ್ನು ಕೊಡಲಿಚ್ಛಿಸಿದರೆ ಮರಳಿ ನಾನು ಅವನ ಮನೆಯಲ್ಲಿ ಜ್ವಲಿಸುವೆನು. ಹಾಗಿಲ್ಲದಿದ್ದರಿಲ್ಲ" ಎಂದು ಹೇಳಿದ್ದಾನೆ.

೩೭. ಮಹಾರಾಜ! ಇದನ್ನರಿತು ನಿನ್ನ ಮಗಳನ್ನು ಆ ಅಗ್ನಿದೇವನಿಗೆ ಕೊಡಲರ್ಹನಾಗು.

೩೮. ರಾಜನು ಹೇಳುತ್ತಾನೆ:—ನಿಮ್ಮ ಅಥವಾ ಅಗ್ನಿಯ ಮಾತನ್ನು ಮನಸ್ಸಿನಲ್ಲಿ ಆಲೋಚಿಸಬೇಕು. ಕನ್ಯಾದಾನದ ವಿಷಯದಲ್ಲಿ ನಾನೊಂದು ಸಂಕೇತವನ್ನು ಮಾಡಬಯಸುವೆನು.

೩೯. ಅಗ್ನಿಯು ನನ್ನ ಮನೆಯಲ್ಲಿ ಯಾವಾಗಲೂ ಸನ್ನಿಹಿತನಾಗಿರಲಿ. ಹಾಗಾದರೆ ಮಾತ್ರವೇ ಸುಂದರಿಯಾದ ನನ್ನ ಕನ್ಯೆಯನ್ನು ಅವನಿಗೆ ಕೊಡುವೆನು. ಇಲ್ಲದಿದ್ದರೆ ಕೊಡಲಾರೆನು.

೪೦. ಬ್ರಾಹ್ಮಣರು ಈ ಮಾತನ್ನು ಕೇಳಿ ಶೀಘ್ರವಾಗಿ ಅಗ್ನಿಯೆಡೆಗೆ ಹೋಗಿ ಇದನ್ನು ಹೇಳಿ ಕೂಡಲೆ ವಿವಾಹಮಾಡಿಸಿದರು.

ಸುದರ್ಶನಾಯಾ ಲಾಭೇನ ಪರಿತುಷ್ಟೋ ಹುತಾಶನಃ ।
ಜ್ವಲತೇ ಸನ್ನಿಧೌ ನಿತ್ಯಂ ಮಾಹಿಷ್ಮತ್ಯಾಂ ಯುಧಿಷ್ಠಿರ ॥ ೪೧ ॥
ತತಃಪ್ರಭೃತಿ ತತ್ತೀರ್ಥಮಗ್ನಿತೀರ್ಥಂ ಪ್ರಚಕ್ಷತೇ ।
ಯೇ ತತ್ರ ಪಕ್ಷಸಂಧೌ ತು ಸ್ನಾನದಾನೈಸ್ತು ಭಾವಿತಾಃ ॥ ೪೨ ॥
ತರ್ಪಯಂತಿ ಪಿತ್ರೂನ್ದೇವಾಂಸ್ತೇಽಶ್ವಮೇಧಫಲೈರ್ಯುತಾಃ ।
ಸುವರ್ಣಂ ಯೇ ಪ್ರಯಚ್ಛಂತಿ ತಸ್ಮಿಂಸ್ತೀರ್ಥೇ ನರಾಧಿಪ ॥ ೪೩ ॥
ಪೃಥ್ವೀದಾನಫಲಂ ತತ್ರ ಜಾಯತೇ ನಾಽತ್ರ ಸಂಶಯಃ ।
ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥ ೪೪ ॥
ಸಮೃತೋಹ್ಯಗ್ನಿಲೋಕೇ ತು ಕ್ರೀಡತೇ ಸುರಪೂಜಿತಃ ।
ಏಷ ತೇ ಹ್ಯಗ್ನಿತೀರ್ಥಸ್ಯ ಸಂಭವಃ ಕಥಿತೋ ಮಯಾ ॥ ೪೫ ॥
ಸರ್ವಪಾಪಹರಃ ಪುಣ್ಯಃ ಶ್ರುತಮಾತ್ರೋ ನರೋತ್ತಮ ।
ಧನ್ಯಃ ಪಾಪಹರೋ ನಿತ್ಯಮಿತ್ಯೇವಂ ಶಂಕರೋಬ್ರವೀತ್ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಗ್ನಿತೀರ್ಥಮಾಹಾತ್ಮ್ಯವರ್ಣನಂ" ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

೪೧. ಯುಧಿಷ್ಠಿರ! ಅಗ್ನಿಯು ಸುದರ್ಶನೆಯ ಲಾಭದಿಂದ ಸಂತೋಷಗೊಂಡವನಾಗಿ ಮಾಹಿಷ್ಮತಿಯ ಸಮೀಪದಲ್ಲಿ ಯಾವಾಗಲೂ ಜ್ವಲಿಸುತ್ತಿದ್ದನು.

೪೨-೪೫. ಅದು ಮೊದಲ್ಗೊಂಡು ಅದು ಅಗ್ನಿತೀರ್ಥವೆನ್ನಿಸಿಕೊಂಡಿರುವುದು. ಪಕ್ಷಸಂಧಿಕಾಲಗಳಲ್ಲಿ ಅಲ್ಲಿ ಸ್ನಾನದಾನಮಾಡಿದವರೂ, ಪಿತೃದೇವತೆಗಳಿಗೆ ತರ್ಪಣಮಾಡಿದವರೂ ಅಶ್ವಮೇಧಯಾಗದ ಫಲವನ್ನು ಪಡೆಯುವರು. ಆ ತೀರ್ಥದಲ್ಲಿ ಸುವರ್ಣದಾನಮಾಡಿದವರಿಗೆ ಭೂದಾನಮಾಡಿದ ಫಲವು ದೊರೆಯುವುದು. ಅಲ್ಲಿ ಅನಾಶಕ (ಉಪವಾಸ) ವ್ರತವನ್ನಾಚರಿಸಿದವನು ಮಡಿದು ಅಗ್ನಿಲೋಕದಲ್ಲಿ ಸುರಪೂಜ್ಯನಾಗಿ ವಿಹರಿಸುವನು. ನಾನು ನಿನಗೀ ಅಗ್ನಿತೀರ್ಥದ ಉತ್ಪತ್ತಿಯನ್ನು ಹೇಳಿರುವೆನು.

೪೬. ಇದು ಕೇಳಿದ ಮಾತ್ರದಿಂದಲೇ ಸಕಲಪಾಪವನ್ನು ನೀಗಿಸುವುದೂ, ಪುಣ್ಯಕರವೂ ಆಗಿರುವುದೆಂದು ಶಂಕರನು ಹೇಳಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಗ್ನಿತೀರ್ಥಮಾಹಾತ್ಮ್ಯವರ್ಣನ"ವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು

## ಅಥ ಚತುಸ್ತ್ರಿಂಶೋಽಧ್ಯಾಯಃ

### ರವಿತೀರ್ಥವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—
ತತ್ರೈವ ತು ಭವೇದನ್ಯದಾದಿತ್ಯಸ್ಯ ಮಹಾತ್ಮನಃ ।
ಕೀರ್ತಯಾಮಿ ನರಶ್ರೇಷ್ಠ ಯದಿ ತೇ ಶ್ರವಣೇ ಮತಿಃ ॥ ೧ ॥
ಯುಧಿಷ್ಠಿರ ಉವಾಚ:—
ಏತದಾಶ್ಚರ್ಯಮತುಲಂ ಶ್ರುತ್ವಾ ತವ ಮುಖೋದ್ಗತಂ ।
ವಿಸ್ಮಯಾದ್ಧೃಷ್ಟರೋಮಾಹಂ ಜಾತೋಽಸ್ಮಿ ಮುನಿಸತ್ತಮ ॥ ೨ ॥
ಸಹಸ್ರಕಿರಣೋ ದೇವೋ ಹರ್ತಾ ಕರ್ತಾ ನಿರಂಜನಃ ।
ಅವತಾರೇಣ ಲೋಕಾನಾಮುದ್ಧರ್ತಾ ಸರ್ವದಾಽಟತೇ ॥ ೩ ॥
ಪುರುಷಾಕಾರೋ ಭಗವಾನುತಾಹೋ ತಪಸಃ ಫಲಾತ್ ।
ಕಸ್ಯ ಗೋತ್ರೇ ಸಮುತ್ಪನ್ನಃ ಕಸ್ಯ ದೇವೋಽಭವದ್ವಶೇ ॥ ೪ ॥
ಶ್ರೀ ಮಾರ್ಕಂಡೇಯ ಉವಾಚ:—
ಕುಲಿಕಾನ್ವಯಸಂಭೂತೋ ಬ್ರಾಹ್ಮಣೋ ಭಕ್ತಿಮಾಂಛುಚಿಃ ।
ಈಕ್ಷ್ಯಾಮೀತಿ ರವಿಂ ತತ್ರ ತೀರ್ಥೇ ಯಾತ್ರಾಕೃತೋದ್ಯಮಃ ॥ ೫ ॥

---

### ಕನ್ನಡದ ಅನುವಾದ

#### ರವಿತೀರ್ಥವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅಲ್ಲಿಯೇ ಇನ್ನೊಂದು ತೀರ್ಥವಿರುವುದು. ಅದು ಮಹಾತ್ಮನಾದ ಆದಿತ್ಯದೇವನದು. ಅದನ್ನು ಕೇಳ ಬಯಸುವುದಾದರೆ ಹೇಳುವೆನು.

೨. ಯುಧಿಷ್ಠಿರನು ಹೇಳುತ್ತಾನೆ:—ಮುನಿವರ್ಯನೆ! ನಿನ್ನ ಮುಖದಿಂದ ಈ ಆಶ್ಚರ್ಯವಿಷಯವನ್ನು ಕೇಳಿ ನಾನು ರೋಮಾಂಚಗೊಂಡಿರುವೆನು.

೩–೪. ಸಹಸ್ರಕಿರಣಗಳುಳ್ಳವನೂ, ಪಾಪಪರಿಹಾರಕನೂ, ಸೃಷ್ಟಿಕರ್ತನೂ, ದೋಷರಹಿತನೂ, ಅವತಾರದಿಂದ ಲೋಕಗಳನ್ನು ಉದ್ಧರಿಸುವವನೂ ಆದ ಸೂರ್ಯದೇವನು ತಪಸ್ಸಿನ ಫಲದಿಂದ ಮನುಷ್ಯಾಕಾರನಾದನೇ? ಅವನು ಯಾವನ ಗೋತ್ರದಲ್ಲಿ ಜನಿಸಿ ಯಾವನ ಅಧೀನನಾದನು?

೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಕುಲಿಕಾನ್ವಯದಲ್ಲಿ ಜನಿಸಿದವನೂ, ಭಕ್ತಿಯುಳ್ಳವನೂ, ಶುದ್ಧನೂ ಆದ ಓರ್ವ ಬ್ರಾಹ್ಮಣನು ಸೂರ್ಯನನ್ನು ನೋಡುವೆನೆಂದು ತೀರ್ಥಯಾತ್ರೆಗಾಗಿ ಉದ್ಯುಕ್ತನಾದನು.

ಯೋಜನಾನಾಂ ಶತಂ ಸಾಗ್ರಂ ನಿರಾಹಾರೋ ಗತೋದಕಃ ।
ಪ್ರಸ್ಥಿತೋ ದೇವದೇವೇನ ಸ್ವಪ್ನಾಂತೇ ವಾರಿತಃಕಿಲ ॥ ೬ ॥
ಭೋ ಭೋ ಮುನೇ ಮಹಾಸತ್ತ್ವ ಅಲಂ ತೇ ವ್ರತಮೀದೃಶಂ ।
ಸರ್ವಂ ವ್ಯಾಪ್ಯ ಸ್ಥಿತಂ ಪಶ್ಯ ಸ್ಥಾವರಂ ಜಂಗಮಂ ಚ ಮಾಂ ॥ ೭ ॥
ತಪಾಮ್ಯಹಂ ತತೋ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ನ ಮೃತಂ ಚೈವ ಮೃತ್ಯುಂ ಚ ಯಃ ಪಶ್ಯತಿ ಸಪಶ್ಯತಿ ॥ ೮ ॥
ವರಂ ವರಯ ಭದ್ರಂ ತ್ವಮಾತ್ಮನೋ ಯತ್ತ್ವಮೀಪ್ಸಿತಂ ॥ ೯ ॥

ಬ್ರಾಹ್ಮಣ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ದೇಯೋ ಯದಿ ವರೋ ಮಮ ।
ಉತ್ತರೇ ನರ್ಮದಾಕೂಲೇ ಸದಾ ಸನ್ನಿಹಿತೋ ಭವ ॥ ೧೦ ॥
ಯೇ ಭಕ್ತ್ಯಾ ಪರಯಾ ದೇವ ಯೋಜನಾನಾಂ ಶತೇ ಸ್ಥಿತಾಃ ।
ಸ್ಮರಿಷ್ಯಂತಿ ಜಿತಾತ್ಮಾನಸ್ತೇಷಾಂ ತ್ವಂ ವರದೋ ಭವ ॥ ೧೧ ॥
ಕುಬ್ಜಾಂಧಬಧಿರಾ ಮೂಕಾ ಯೇ ಕೇಚಿದ್ವಿಕಲೇಂದ್ರಿಯಾಃ ।
ತವ ಪಾದೌ ನಮಸ್ಯಂತಿ ತೇಷಾಂ ತ್ವಂ ವರದೋ ಭವ ॥ ೧೨ ॥

---

೬. ಅವನು ನಿರಾಹಾರನೂ, ಉದಕಪಾನಮಾಡದವನೂ ಆಗಿ ನೂರು ಯೋಜನ ಪ್ರಯಾಣಮಾಡಿಬರಲು ಸೂರ್ಯನು ಸ್ವಪ್ನದಲ್ಲಿ ಅವನನ್ನು ತಡೆದನು.

೭. "ಅತ್ಯಂತ ಬಲಶಾಲಿಯಾದ ಎಲೈ ಮುನಿಯೆ! ನಿನ್ನ ಈ ವ್ರತವನ್ನು ಸಾಕುಮಾಡು. ಸ್ಥಾವರ ಜಂಗಮಾತ್ಮಕಪ್ರಪಂಚವನ್ನು ವ್ಯಾಪಿಸಿರುವ ನನ್ನನ್ನು ನೋಡು.

೮-೯. ನಾನು ತಪಿಸುವೆನು. ಮಳೆಯನ್ನು ಸುರಿಸುವೆನು. ಅದನ್ನು ತಡೆಯುವನೂ, ಅಮೃತನೂ, ಮೃತ್ಯುವೂ ಆಗಿರುವ ನನ್ನನ್ನು ತಿಳಿದವನು ಜ್ಞಾನಿಯು. ಇಂಥ ನಾನು ನಿನ್ನಲ್ಲಿ ಸುಪ್ರಸನ್ನನಾಗಿರುವೆನು. ನಿನಗಿಷ್ಟವಾದ ವರವನ್ನು ಕೇಳಿಕೊ.

೧೦. ಬ್ರಾಹ್ಮಣನು ಹೇಳುತ್ತಾನೆ:—ಸ್ವಾಮಿ! ನೀನು ಸಂತುಷ್ಟನಾಗಿ ನನಗೆ ವರವನ್ನು ಕೊಡುವುದಾದರೆ ನರ್ಮದಾನದಿಯ ಉತ್ತರತೀರದಲ್ಲಿ ಯಾವಾಗಲೂ ಸನ್ನಿಹಿತನಾಗಿರು.

೧೧. ಸ್ವಾಮಿಯೆ! ನೀನು ನೂರು ಯೋಜನಗಳ ದೂರದಲ್ಲಿ ಅತಿಶಯಭಕ್ತಿಯಿಂದ ಸ್ಮರಿಸುವ ಜಿತೇಂದ್ರಿಯರಿಗೆ ವರವನ್ನು ಕೊಡುವವನಾಗು.

೧೨. ನಿನ್ನ ಪಾದಗಳನ್ನು ವಂದಿಸುವ ಕುಬ್ಜರು, ಕುರುಡರು, ಕಿವುಡರು, ಮೂಕರು, ವಿಕಲೇಂದ್ರಿಯರು ಇವರೆಲ್ಲರಿಗೂ ವರವನ್ನು ಕೊಡುವವನಾಗು.

ಶೀರ್ಣಘ್ರಾಣಾ ಗತಧಿಯೋ ಹ್ಯಸ್ಥಿಚರ್ಮಾಽವಶೇಷಿತಾಃ ।
ತೇಷಾಂ ತ್ವಂ ಕರುಣಾಂ ದೇವ ಹ್ಯಚಿರೇಣ ಕುರುಷ್ವಹ ॥ ೧೩ ॥
ಯೇಽಪಿ ತ್ವಾಂ ನರ್ಮದಾತೋಯೇ ಸ್ನಾತ್ವಾ ತತ್ರ ದಿನೇ ದಿನೇ ।
ಅರ್ಚಯಂತಿ ಜಗನ್ನಾಥ ತೇಷಾಂ ತ್ವಂ ವರದೋಭವ ॥ ೧೪ ॥
ಪ್ರಭಾತೇ ಯೇ ಸ್ತುವಿಷ್ಯಂತಿ ಸ್ತವೈರ್ವೈದಿಕಲೌಕಿಕೈಃ ।
ಅಭಿಪ್ರೇತಂ ವರಂ ದೇವ ತೇಷಾಂ ತ್ವಂ ದದ ಭೋಽಚ್ಯುತ ॥ ೧೫ ॥
ತವಾಽಗ್ರೇ ವಪನಂ ದೇವ ಕಾರಯಂತಿ ನರಾ ಭುವಿ ।
ಸ್ವಾಮಿಂಸ್ತೇಷಾಂ ವರೋ ದೇಯ ಯೇಷ ಮೇ ಪರಮೋ ವರಃ ॥ ೧೬ ॥
ಏವಮಸ್ತ್ವಿತಿ ತಂ ಚೋಕ್ತ್ವಾ ಮುನಿಂ ಕರುಣಯಾ ಪುನಃ ।
ಶತಭಾಗೇನ ರಾಜೇಂದ್ರ ಸ್ಥಿತ್ವಾ ಚಾಽದರ್ಶನಂಗತಃ ॥ ೧೭ ॥
ತತ್ರ ತೀರ್ಥೇ ನರೋ ಭಕ್ತ್ಯಾ ಗತ್ವಾ ಸ್ನಾನಂ ಸಮಾಚರೇತ್ ।
ತರ್ಪಯೇತ್ಪಿತೃದೇವಾಂಶ್ಚ ಸೋಽಗ್ನಿಷ್ಟೋಮಫಲಂ ಲಭೇತ್ ॥ ೧೮ ॥
ಅಗ್ನಿಪ್ರವೇಶಂ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ದ್ಯೋತಯನ್ಸರ್ವಾ ದಿಶಃ ಸರ್ವಾ ಅಗ್ನಿಲೋಕಂ ಸ ಗಚ್ಛತಿ ॥ ೧೯ ॥
ಯಸ್ತತ್ತೀರ್ಥಂ ಸಮಾಸಾದ್ಯ ತ್ಯಜತೀಹ ಕಲೇವರಂ ।
ಸಗತೋ ವಾರುಣಂ ಲೋಕಮಿತ್ಯೇವಂ ಶಂಕರೋಽಬ್ರವೀತ್ ॥ ೨೦ ॥

---

೧೩. ಸೀಳಿದ ಮೂಗುಳ್ಳವರೂ, ಬುದ್ಧಿಯಿಲ್ಲದವರೂ, ಅಸ್ಥಿ, ಚರ್ಮಗಳು ಮಾತ್ರ ಉಳಿದವರೂ ಆದವರ ವಿಷಯದಲ್ಲಿ ಬೇಗನೆ ದಯೆತೋರು.

೧೪. ನರ್ಮದಾನದಿಯ ನೀರಿನಲ್ಲಿ ಪ್ರತಿದಿನವೂ ಮಿಂದು ನಿನ್ನನ್ನು ಪೂಜಿಸುವವರಿಗೆ ವರವನ್ನು ಕೊಡು.

೧೫. ಅಚ್ಯುತ! ಬೆಳಗ್ಗೆ ವೈದಿಕ ಭೌತಿಕ ಸ್ತೋತ್ರಗಳಿಂದ ನಿನ್ನನ್ನು ಸ್ತುತಿಸುವವರಿಗೆ ಇಷ್ಟವಾದ ವರವನ್ನು ಕೊಡು.

೧೬. ಸ್ವಾಮಿ! ನಿನ್ನ ಮುಂದೆ ವಪನವನ್ನು ಮಾಡಿಸುವವರಿಗೆ ವರವನ್ನು ಕೊಡು. ಇದೇ ನನಗೆ ಉತ್ತಮವಾದ ವರವು.

೧೭. ಸೂರ್ಯನು ಹಾಗೆಯೇ ಆಗಲೆಂದು ಆ ಮುನಿಗೆ ಹೇಳಿ ದಯೆತೋರಿ ನೂರುಭಾಗದಿಂದಲೂ ಅಲ್ಲಿದ್ದು ಅದೃಶ್ಯನಾದನು.

೧೮. ಆ ತೀರ್ಥಕ್ಕೆ ಹೋಗಿ ಭಕ್ತಿಯಿಂದ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣಮಾಡುವವನಿಗೆ ಅಗ್ನಿಷ್ಟೋಮದ ಫಲವು ದೊರೆಯುವುದು.

೧೯. ದೊರೆಯೆ! ಆ ತೀರ್ಥದಲ್ಲಿ ಅಗ್ನಿಪ್ರವೇಶಮಾಡಿದವನು ಸಕಲ ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತ ಅಗ್ನಿಲೋಕವನ್ನು ಸೇರುವನು.

೨೦. ಆ ತೀರ್ಥಕ್ಕೆ ಬಂದು ಶರೀರವನ್ನು ತೊರೆದವನು ವರುಣಲೋಕಕ್ಕೆ ಹೋಗುವನೆಂದು ಶಂಕರನು ಹೇಳಿದನು.

ತತ್ರ ತೀರ್ಥೇ ತು ಯಃಕಶ್ಚಿತ್ಸನ್ಯಾಸೇನ ತನುಂ ತ್ಯಜೇತ್ ।
ಷಷ್ಟಿರ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೨೧ ॥
ಅಪ್ಸರೋಗಣಸಂಕೀರ್ಣೇ ದಿವ್ಯಶಬ್ದಾಽನುನಾದಿತೇ ।
ಉಷಿತ್ವಾಯಾತಿ ಮರ್ತ್ಯೇ ವೈ ವೇದವೇದಾಂಗವಿದ್ಭವೇತ್ ॥ ೨೨ ॥
ವ್ಯಾಧಿಶೋಕವಿನಿರ್ಮುಕ್ತೋ ಧನಕೋಟಿಪತಿರ್ಭವೇತ್ ।
ಪುತ್ರದಾರಸಮೋಪೇತೋ ಜೀವೇಚ್ಚ ಶರದಃ ಶತಂ ॥ ೨೩ ॥
ಪ್ರಾತರುತ್ಥಾಯ ಯಸ್ತತ್ರ ಸ್ಮರತೇ ಭಾಸ್ಕರಂ ತದಾ ।
ಆಜನ್ಮಜನಿತಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೨೪ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ರವಿತೀರ್ಥವರ್ಣನಂ" ನಾಮ ಚತುಸ್ತ್ರಿಂಶೋಽಧ್ಯಾಯಃ**

---

೨೧. ಆ ತೀರ್ಥದಲ್ಲಿ ಸನ್ಯಾಸಿಯಾಗಿ ಶರೀರವನ್ನು ತ್ಯಜಿಸಿದ ನರನು ಅರುವತ್ತುಸಾವಿರ ವರ್ಷಗಳಕಾಲ ದೇವಲೋಕದಲ್ಲಿ ಪೂಜ್ಯನಾಗುವನು.

೨೨–೨೩. ಅವನು ಅಪ್ಸರೆಯರ ಸಮೂಹದಿಂದ ತುಂಬಿರುವುದೂ, ದಿವ್ಯ ಶಬ್ದವುಳ್ಳದೂ ಆದ ಆ ಸ್ವರ್ಗಲೋಕದಲ್ಲಿ ವಾಸಮಾಡಿ ಭೂಲೋಕಕ್ಕೆ ಬಂದು ವೇದವೇದಾಂಗವಿಶಾರದನೂ, ವ್ಯಾಧಿಶೋಕ ರಹಿತನೂ, ಕೋಟಿಧನಾಧಿಪತಿಯೂ ಪತ್ನೀಪುತ್ರಸಹಿತನೂ ಆಗಿ ನೂರು ವರ್ಷಗಳಕಾಲ ಜೀವಿಸುವನು.

೨೪. ಅಲ್ಲಿ ಬೆಳಗ್ಗೆ ಎದ್ದು ಸೂರ್ಯನನ್ನು ಸ್ಮರಿಸುವವನು ಹುಟ್ಟಿದ ಮೊದಲ್ಗೊಂಡು ಮಾಡಿದ ಎಲ್ಲ ಪಾಪಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ರವಿತೀರ್ಥವರ್ಣನ"ವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚತ್ರಿಂಶೋಽಧ್ಯಾಯಃ

## ಮೇಘನಾದತೀರ್ಥಮಾಹಾತ್ಮ್ಯವರ್ಣನಂ

ಯುಧಿಷ್ಠಿರ ಉವಾಚ :—

ಜಲಮಧ್ಯೇ ಮಹಾದೇವಃ ಕೇನ ತಿಷ್ಠತಿ ಹೇತುನಾ ।
ಉತ್ತರಂ ದಕ್ಷಿಣಂ ಕೂಲಂ ವರ್ಜಯಿತ್ವಾ ದ್ವಿಜೋತ್ತಮ ॥ ೧ ॥

ಶ್ರೀ ಮಾರ್ಕಂಡೇಯ ಉವಾಚ :—

ಏತದಾಖ್ಯಾನಮತುಲಂ ಪುಣ್ಯಂ ಶ್ರುತಿಸುಖಾವಹಂ ।
ಪುರಾಣೇ ಯಚ್ಛ್ರುತಂ ತಾತ ತತ್ತೇ ವಕ್ಷ್ಯಾಮ್ಯಶೇಷತಃ ॥ ೨ ॥
ತ್ರೇತಾಯುಗೇ ಮಹಾಭಾಗ ರಾವಣೋ ದೇವಕಂಟಕಃ ।
ತ್ರೈಲೋಕ್ಯವಿಜಯೀ ರೌದ್ರಃ ಸುರಾಸುರಭಯಂಕರಃ ॥ ೩ ॥
ದೇವದಾನವಗಂಧರ್ವೈರ್ಋಷಿಭಿಶ್ಚ ತಪೋಧನೈಃ ।
ಅವಧ್ಯೋಽಥ ವಿಮಾನೇನ ಯಾವತ್ಪರ್ಯಟತೇ ಮಹೀಂ ॥ ೪ ॥
ತಾವದ್ವಿಂಧ್ಯಗಿರೇರ್ಮಧ್ಯೇ ದಾನವೋ ಬಲದರ್ಪಿತಃ ।
ಮಯೋ ನಾಮಾತಿವಿಖ್ಯಾತೋ ಗುಹಾವಾಸೀ ತಪಶ್ಚರನ್ ॥ ೫ ॥

---

## ಕನ್ನಡದ ಅನುವಾದ

### ಮೇಘನಾದತೀರ್ಥಮಹಾತ್ಮ್ಯವರ್ಣನ

೧. ಯುಧಿಷ್ಠಿರನು ಹೇಳುತ್ತಾನೆ :—ದ್ವಿಜವರ್ಯನೆ! ಮಹಾದೇವನು ದಕ್ಷಿಣೋತ್ತರತೀರಗಳನ್ನು ಬಿಟ್ಟು ನೀರಿನ ನಡುವೆ ಏತಕ್ಕೆ ನೆಲಸಿರುವನು ?

೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಪುರಾಣದಲ್ಲಿ ಕೇಳಿರುವುದೂ, ಪುಣ್ಯಕರವೂ, ಕಿವಿಗಳಿಗೆ ಸುಖವನ್ನುಂಟುಮಾಡುವುದೂ ಆದ ಈ ಆಖ್ಯಾನವನ್ನು ಸಂಪೂರ್ಣವಾಗಿ ಹೇಳುವೆನು.

೩–೫. ಅಯ್ಯಾ ಮಹಾಭಾಗ್ಯವಂತನೆ! ತ್ರೇತಾಯುಗದಲ್ಲಿ ದೇವಕಂಟಕನೂ, ತ್ರೈಲೋಕ್ಯವನ್ನು ಜಯಿಸಿದವನೂ, ದೇವಾಸುರರಿಗೆ ಭಯಂಕರನೂ, ದೇವತೆಗಳು, ದಾನವರು, ಗಂಧರ್ವರು, ಋಷಿಗಳು, ಮುನಿಗಳು ಮೊದಲಾದವರಿಗೆ ವಧಿಸಲಶಕ್ಯನೂ ಆದ ರಾವಣನು ವಿಮಾನದಲ್ಲಿ ಕುಳಿತು ಭೂಮಿಯಲ್ಲೆಲ್ಲ ಸಂಚರಿಸುತ್ತಿದ್ದನು. ಅದೇ ಸಮಯದಲ್ಲಿ ಇತ್ತ ವಿಂಧ್ಯಪರ್ವತದ ನಡುವೆ ಬಲಗರ್ವಿತನಾದ ಮಯನೆಂಬ ದಾನವನು ಗುಹೆಯಲ್ಲಿ ವಾಸಿಸುತ್ತ ತಪವನ್ನಾಚರಿಸುತ್ತಿದ್ದನು.

ತಸ್ಯ ಪಾರ್ಶ್ವಗತೋ ರಕ್ಷೋ ವಿನಯಾದವನಿಂಗತಃ ।
ಪೂಜಿತೋ ದಾನಸನ್ಮಾನೈರಿದಂ ವಚನಮಬ್ರವೀತ್ ॥ ೬ ॥
ಕಸ್ಯೇಯಂ ಪದ್ಮಪತ್ರಾಕ್ಷೀ ಪೂರ್ಣಚಂದ್ರನಿಭಾನನಾ ।
ಕಿನ್ನಾಮಧೇಯಾ ತಪತಿ ತಪ ಉಗ್ರಂ ಕಥಂ ವಿಭೋ ॥ ೭ ॥

ಮಯ ಉವಾಚ :—

ದಾನವಾನಾಂ ಪತಿಃ ಶ್ರೇಷ್ಠೋ ಮಯೋಽಹಂ ನಾಮ ನಾಮತಃ ।
ಭಾರ್ಯಾ ತೇಜೋವತೀನಾಮ ತಸ್ಯಾಸ್ತು ತನಯಾ ಶುಭಾ ॥ ೮ ॥
ಮಂದೋದರೀತಿ ವಿಖ್ಯಾತಾ ತಪತೇ ಭರ್ತೃಕಾರಣಾತ್ ।
ಆರಾಧಯಂತೀ ಭರ್ತಾರಮುಮಾಯಾ ದಯಿತಂ ಶುಭಂ ॥ ೯ ॥
ತಚ್ಛ್ರುತ್ವಾ ವಚನಂ ತಸ್ಯ ರಾವಣೋ ಮದನೋಹಿತಃ ।
ಪ್ರಸೃತಃ ಪ್ರಣತೋ ಭೂತ್ವಾ ಮಯಂ ವಚನಮಬ್ರವೀತ್ ॥ ೧೦ ॥
ಪೌಲಸ್ತ್ಯಾನ್ವಯಸಂಜಾತೋ ದೇವದಾನವದರ್ಪಹಾ ।
ಪ್ರಾರ್ಥಯಾಮಿ ಮಹಾಭಾಗ ಸುತಾಂ ತ್ವಂ ದಾತುಮರ್ಹಸಿ ॥ ೧೧ ॥
ಜ್ಞಾತ್ವಾ ಪೈತಾಮಹಂ ವೃತ್ತಂ ಮಯೇನಾಽಪಿ ಮಹಾತ್ಮನಾ ।
ರಾವಣಾಯ ಸುತಾ ದತ್ತಾ ಪೂಜಯಿತ್ವಾ ವಿಧಾನತಃ ॥ ೧೨ ॥

---

೬. ಆ ರಾವಣನು ಭೂಮಿಗೆ ಬಂದು ಮಯನ ಹತ್ತಿರಹೋಗಿ ದಾನಾದಿಗಳಿಂದ ಪೂಜಿತನಾಗಿ ಇಂತೆಂದನು.

೭. "ಕಮಲನಯನಳೂ, ಪೂರ್ಣಚಂದ್ರನಂತೆ ಮುಖವುಳ್ಳವಳೂ ಆದ ಈ ಕನ್ಯೆಯು ಯಾರ ಮಗಳು? ಇವಳ ಹೆಸರೇನು? ಹೀಗೇಕೆ ಉಗ್ರತಪಸ್ಸನ್ನಾಚರಿಸುತ್ತಿರುವಳು?"

೮–೯. ಮಯನು ಹೇಳುತ್ತಾನೆ:—ನಾನು ದಾನವರಾಜನಾದ ಮಯನು. ಇವಳು ತೇಜೋವತಿಯೆಂಬ ನನ್ನ ಹೆಂಡತಿಯಲ್ಲಿ ಜನಿಸಿದ ಮಗಳು. ಈ ಮಂಗಳಾಂಗಿಗೆ ಮಂಡೋದರಿಯೆಂದು ಹೆಸರು ಈ ಕನ್ಯೆಯು ಉಮಾಪ್ರಿಯನಾದ ಶಂಕರನನ್ನು ಕುರಿತು ಪತಿಗಾಗಿ ತಪಸ್ಸನ್ನು ಮಾಡುತ್ತಿರುವಳು.

೧೦. ಮಯನ ಆ ಮಾತನ್ನು ಕೇಳಿ ಮತ್ತನಾದ ರಾವಣನು ಅವನನ್ನು ವಂದಿಸಿ ಹೀಗೆಂದನು.

೧೧. ಮಹಾಭಾಗನೆ! ಪುಲಸ್ತ್ಯವಂಶಸಂಜಾತನೂ, ದೇವದಾನವರ ಅಹಂಕಾರಕನ್ನು ಮುರಿಯುವವನೂ ಆದ ನಾನು ನಿನ್ನ ಮಗಳನ್ನು ಪ್ರಾರ್ಥಿಸುವೆನು. ಅವಳನ್ನು ನನಗೆ ಕೊಡಲರ್ಹನಾಗಿರುವೆ.

೧೨. ಮಯನೂ ಅವನ ಪಿತಾಮಹನ ವೃತ್ತಾಂತವನ್ನು ತಿಳಿದು ರಾವಣನನ್ನು ವಿಧಿವತ್ತಾಗಿ ಪೂಜಿಸಿ ಅವನಿಗೆ ಕನ್ಯೆಯನ್ನಿತ್ತನು.

ಗೃಹೀತ್ವಾ ತಾಂ ತದಾ ರಕ್ಷೋಽಭ್ಯರ್ಚ್ಯಮಾನೋ ನಿಶಾಚರೈಃ ।
ದೇವೋದ್ಯಾನೇ ವಿಮಾನೈಶ್ಚ ಕ್ರೀಡತೇ ಸ ತಯಾ ಸಹ ॥ ೧೩ ॥
ಕೇನಚಿತ್ತ್ವಥ ಕಾಲೇನ ರಾವಣೋ ಲೋಕರಾವಣಃ ।
ಪುತ್ರಂ ಪುತ್ರವತಾಂ ಶ್ರೇಷ್ಠೋ ಜನಯಾಮಾಸ ಭಾರತ ॥ ೧೪ ॥
ತೇನೈವ ಜಾತಮಾತ್ರೇಣ ರಾವೋ ಮುಕ್ತೋ ಮಹಾತ್ಮನಾ ।
ಸಂವರ್ತಕಸ್ಯ ಮೇಘಸ್ಯ ತೇನ ಲೋಕಾ ಜಡೀಕೃತಾಃ ॥ ೧೫ ॥
ಶ್ರುತ್ವಾ ತನ್ನರ್ದಿತಂ ಘೋರಂ ಬ್ರಹ್ಮಾ ಲೋಕಪಿತಾಮಹಃ ।
ನಾಮ ಚಕ್ರೇ ತದಾ ತಸ್ಯ ಮೇಘನಾದೋ ಭವಿಷ್ಯತಿ ॥ ೧೬ ॥
ಏವಂ ನಾಮ್ನಾ ಕೃತಃ ಸೋಽಪಿ ಪರಮಂ ವ್ರತಮಾಸ್ಥಿತಃ ।
ತೋಷಯಾಮಾಸ ದೇವೇಶಮುಮಯಾ ಸಹ ಶಂಕರಂ ॥ ೧೭ ॥
ವ್ರತೈರ್ನಿಯಮದಾನೈಶ್ಚ ಹೋಮಜಾಪ್ಯವಿಧಾನತಃ ।
ಕೃಚ್ಛ್ರಚಾಂದ್ರಾಯಣೈರ್ನಿತ್ಯಂ ಕೃಶಂ ಕುರ್ವನ್ಕಲೇವರಂ ॥ ೧೮ ॥
ಏವಮನ್ಯದ್ದಿನೇ ತಾತ ಕೈಲಾಸಂ ಧರಣೀಧರಂ ।
ಗತ್ವಾ ಲಿಂಗದ್ವಯಂ ಗೃಹ್ಯ ಪ್ರಸ್ಥಿತೋ ದಕ್ಷಿಣಾಮುಖಃ ॥ ೧೯ ॥
ನರ್ಮದಾತಟಮಾಶ್ರಿತ್ಯ ಸ್ನಾತುಕಾಮೋ ಮಹಾಬಲಃ ।
ನಿಕ್ಷಿಪ್ಯ ಪೂಜಯಂದೇವಂ ಕೃತಜಾಪ್ಯೋ ನರೇಶ್ವರ ॥ ೨೦ ॥

---

೧೩. ರಾವಣನು ಅವಳನ್ನು ಕರೆದುಕೊಂಡು ರಾಕ್ಷಸರಿಂದ ಪೂಜಿಸಲ್ಪಡುವವನಾಗಿ ಅವಳೊಡನೆ ನಂದನವನದಲ್ಲಿ ವಿಮಾನಗಳಿಂದ ವಿಹರಿಸುತ್ತಿದ್ದನು.

೧೪. ಕೆಲವು ಕಾಲದಮೇಲೆ ಪುತ್ರವಂತರಲ್ಲಿ ಶ್ರೇಷ್ಠನಾದ ರಾವಣನಿಗೆ ಓರ್ವ ಪುತ್ರನು ಜನಿಸಿದನು.

೧೫. ಆ ಪುತ್ರನು ಹುಟ್ಟಿದ ಕೂಡಲೆ ಪ್ರಳಯಕಾಲದ ಮೇಘದಂತೆ ಕೂಗಿದನು. ಅದರಿಂದ ಜನರು ಜಡರಾದರು.

೧೬. ಲೋಕಪಿತಾಮಹನಾದ ಬ್ರಹ್ಮನು ಆ ಘೋರನಾದವನ್ನು ಕೇಳಿ ಅವನಿಗೆ ಮೇಘನಾದನೆಂದು ಹೆಸರನ್ನಿಟ್ಟನು.

೧೭–೧೮. ಹೀಗೆ ನಾಮವನ್ನು ಪಡೆದ ಆ ಮೇಘನಾದನು ಅತಿಶಯವ್ರತವನ್ನಾಚರಿಸಿ ನಿಯಮಗಳಿಂದಲೂ ದಾನಗಳಿಂದಲೂ, ಹೋಮಜಪಗಳಿಂದಲೂ, ಕೃಚ್ಛ್ರಚಾಂದ್ರಾಯಣಗಳಿಂದಲೂ ನಿತ್ಯವೂ ಶರೀರವನ್ನು ಕೃಶಗೊಳಿಸುತ್ತ ಉಮೆಯೊಡಗೂಡಿದ ಶಂಕರನನ್ನು ಸಂತೋಷಗೊಳಿಸಿದನು.

೧೯. ಹೀಗೆ ಅವನು ಇನ್ನೊಂದು ದಿನ ಕೈಲಾಸಶೈಲಕ್ಕೆ ಹೋಗಿ ಎರಡು ಲಿಂಗಗಳನ್ನು ತೆಗೆದುಕೊಂಡು ದಕ್ಷಿಣಾಭಿಮುಖವಾಗಿ ಹೊರಟನು.

೨೦–೨೫. ಅವನು ನರ್ಮದಾನದಿಯ ದಡದಲ್ಲಿ ಸ್ನಾನಮಾಡಲಿಚ್ಛಿಸಿ ಲಿಂಗವನ್ನಿಟ್ಟು ಮಿಂದು ಪೂಜಿಸಿ, ಜಪಮಾಡಿ ಹೋಮವನ್ನಾಚರಿಸಿ ಧನ್ಯನಾದೆ

ತತ್ರಾಯುತನವಾಸೇನ ಸ್ನಾತೋ ಹುತಹುತಾಶನಃ ।
ಕೃತಕೃತ್ಯಮಿವಾತ್ಮಾನಂ ಮಾನಯಿತ್ವಾ ನಿಶಾಚರಃ ॥ ೨೧ ॥
ಗಂತುಕಾಮಃ ಪರಂ ಮಾರ್ಗಂ ಲಂಕಾಯಾಂ ನೃಪಸತ್ತಮ ।
ಏಕಮುದ್ಧರತೋ ಲಿಂಗಂ ಪ್ರಣತಃ ಸವ್ಯಪಾಣಿನಾ ॥ ೨೨ ॥
ದ್ವಿತೀಯಂತು ದ್ವಿತೀಯೇನ ಭಕ್ತ್ಯಾ ಪೌಲಸ್ತ್ಯನಂದನಃ ।
ತಾವದೇವ ಮಹಾಲಿಂಗಂ ಪತಿತಂ ನರ್ಮದಾಂಭಸಿ ॥ ೨೩ ॥
ಯಾಹಿ ಯಾಹೀತಿ ಚೇತ್ಯುಕ್ತ್ವಾ ಜಲಮಧ್ಯೇ ಪ್ರತಿಷ್ಠಿತಃ ।
ನಮಿತ್ವಾ ರಾವಣಿಸ್ತಸ್ಯ ದೇವಸ್ಯ ಪರಮೇಷ್ಠಿನಃ ॥ ೨೪ ॥
ಜಗಾಮಾಕಾಶಮಾಸಿಶ್ಯ ಪೂಜ್ಯಮಾನೋ ನಿಶಾಚರೈಃ ।
ತದಾಪ್ರಭೃತಿ ತತ್ತೀರ್ಥಂ ಮೇಘನಾದೇತಿ ವಿಶ್ರುತಂ ॥ ೨೫ ॥
ಪೂರ್ವಂ ತು ಗರ್ಜನಂ ನಾಮ ಸರ್ವಪಾಪಕ್ಷಯಂಕರಂ ।
ತಸ್ಮಿಂಸ್ತೀರ್ಥೇತು ರಾಜೇಂದ್ರ ಯಸ್ತು ಸ್ನಾನಂ ಸಮಾಚರೇತ್ ॥ ೨೬ ॥
ಅಹೋರಾತ್ರೋಷಿತೋ ಭೂತ್ವಾ ಅಶ್ವಮೇಧಫಲಂ ಲಭೇತ್ ।
ಪಿಂಡದಾನಂತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥ ೨೭ ॥
ಯತ್ಫಲಂ ಸತ್ರಯಜ್ಞೇನ ತದ್ಭವೇನ್ನಾತ್ರ ಸಂಶಯಃ ।
ತೇನ ದ್ವಾದಶವರ್ಷಾಣಿ ಪಿತರಃ ಸಂಪ್ರತರ್ಪಿತಾಃ ॥ ೨೮ ॥
ಯಸ್ತು ಭೋಜಯತೇ ವಿಪ್ರಂ ಷಡ್ರಸಾನ್ನೇನ ಭಾರತ ।
ಅಕ್ಷಯಂ ಪುಣ್ಯಮಾಪ್ನೋತಿ ತತ್ರ ತೀರ್ಥೇ ನರೋತ್ತಮ ॥ ೨೯ ॥

---

ನೆಂದರಿತು ಲಂಕಾಮಾರ್ಗವಲ್ಲಿ ಹೋಗಲಿಚ್ಛಿಸಿ ಲಿಂಗವನ್ನು ನಮಸ್ಕರಿಸಿ ಬಲಗೈಯಿಂದ ಒಂದು ಲಿಂಗವನ್ನೂ, ಎಡಗೈಯಿಂದ ಇನ್ನೊಂದನ್ನೂ ಕೀಳಲುದ್ಯುಕ್ತನಾಗಲು ಅದು ಹೋಗು ಹೋಗು ಎಂದು ನರ್ಮದಾನದಿಯಲ್ಲಿ ಬಿದ್ದು ಸ್ಥಿರಗೊಂಡಿತು. ಮೇಘನಾದನು ಆ ಲಿಂಗಕ್ಕೆ ವಂದಿಸಿ ರಾಕ್ಷಸರಿಂದ ಪೂಜಿಸಲ್ಪಡುತ್ತ ಆಕಾಶಮಾರ್ಗದಿಂದ ಹೊರಟುಹೋದನು. ಅದು ಮೊದಲ್ಗೊಂಡು ಆ ತೀರ್ಥವು ಮೇಘನಾದವೆಂದು ವಿಖ್ಯಾತವಾಯಿತು

೨೬—೨೮. ಹಿಂದೆ ಅದು ಸಕಲ ಪಾಪಗಳನ್ನೂ ಪರಿಹರಿಸುವ ಗರ್ಜನವೆಂಬ ತೀರ್ಥವಾಗಿದ್ದಿತು. ಆ ತೀರ್ಥದಲ್ಲಿ ಮಿಂದು ಒಂದು ದಿನ ವಾಸಮಾಡುವವನು ಅಶ್ವಮೇಧಯಾಗದ ಫಲವನ್ನು ಪಡೆಯುವನು. ಅಲ್ಲಿ ಪಿಂಡಪ್ರದಾನ ಮಾಡಿದವನು ಸತ್ರಯಜ್ಞದ ಫಲವನ್ನು ನಿಶ್ಚಯವಾಗಿಯೂ ಹೊಂದುವನು. ಮತ್ತು ಅವನ ಪಿತೃಗಳು ಹನ್ನೆರಡುವರ್ಷಕಾಲ ತೃಪ್ತಿಗೊಳ್ಳುವರು.

೨೯. ಅಲ್ಲಿ ಬ್ರಾಹ್ಮಣನನ್ನು ಷಡ್ರಸಾನ್ನವನ್ನಿತ್ತು ಭೋಜನಮಾಡಿಸುವವನು ಅಕ್ಷಯ ಪುಣ್ಯವನ್ನು ಪಡೆಯುವನು.

ಪ್ರಾಣತ್ಯಾಗಂತು ಯಃ ಕುರ್ಯಾದ್ಭಾವಿತೋ ಭಾವಿತಾತ್ಮನಾ ।
ಸ ವಸೇಚ್ಛಾಂಕರೇ ಲೋಕೇ ಯಾವದಾಭೂತಸಂಪ್ಲವಂ ॥ ೩೦ ॥
ಏಷಾ ತೇ ನರಶಾರ್ದೂಲ ಗರ್ಜನೋತ್ಪತ್ತಿರುತ್ತಮಾ ।
ಕಥಿತಾ ಸ್ನೇಹಬಂಧೇನ ಸರ್ವಪಾಪಕ್ಷಯಂಕರೀ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
ಮೇಘನಾದತೀರ್ಥಮಾಹಾತ್ಮ್ಯವರ್ಣನಂ" ನಾಮ ಪಂಚತ್ರಿಂಶೋಽಧ್ಯಾಯಃ

---

೩೦. ಭಕ್ತಿಯಿಂದ ಪ್ರಾಣವನ್ನು ತ್ಯಜಿಸುವವನು ಪ್ರಳಯಕಾಲದವರೆಗೆ ಶಿವಲೋಕದಲ್ಲಿ ವಾಸಮಾಡುವನು.

೩೧. ನರೇಂದ್ರನೆ! ಸಮಸ್ತ ಪಾಪಗಳನ್ನು ನೀಗಿಸುವ ಉತ್ತಮವಾದ ಗರ್ಜನ ತೀರ್ಥೋತ್ಪತ್ತಿಯನ್ನು ನಿನಗೆ ಪ್ರೀತಿಯಿಂದ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಮೇಘನಾದತೀರ್ಥಮಹಾತ್ಮ್ಯವರ್ಣನ"ವೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ತ್ರಿಂಶೋಽಧ್ಯಾಯಃ

### ದಾರುಕತೀರ್ಥಮಾಹಾತ್ಮ್ಯವರ್ಣನಂ

ಮಾರ್ಕಂಡೇಯ ಉವಾಚ :—

ತತೋ ಗಚ್ಛೇಚ್ಚ ರಾಜೇಂದ್ರ ದಾರುತೀರ್ಥಮನುತ್ತಮಂ ।
ದಾರುಕೋ ಯತ್ರ ಸಂಸಿದ್ಧ ಇಂದ್ರಸ್ಯ ದಯಿತಃ ಪುರಾ ॥ ೧ ॥

ಯುಧಿಷ್ಠಿರ ಉವಾಚ :—

ದಾರುಕೇಣ ಕಥಂ ತಾತ ತಪಶ್ಚೀರ್ಣಂ ಪುರಾಽನಘ ।
ವಿಧಾನಂ ಶ್ರೋತುಮಿಚ್ಛಾಮಿ ತ್ವತ್ಸಕಾಶಾದ್ದ್ವಿಜೋತ್ತಮ ॥ ೨ ॥

ಶ್ರೀ ಮಾರ್ಕಂಡೇಯ ಉವಾಚ :—

ಹಂತ ತೇ ಕಥಯಿಷ್ಯಾಮಿ ವಿಚಿತ್ರಂ ಯತ್ಪುರಾತನಂ ।
ವೃತ್ತಂ ಸ್ವರ್ಗಸಭಾಮಧ್ಯೇ ಋಷೀಣಾಂ ಭವಿತಾತ್ಮನಾಂ ॥ ೩ ॥
ಸೂತೋ ವಜ್ರಧರಸ್ಯೇಷ್ಟೇ ಮಾತಲಿರ್ನಾಮ ನಾಮತಃ ।
ಸ ಪುತ್ರಂ ಶಪ್ತವಾನ್ಪೂರ್ವಂ ಕಸ್ಮಿಂಶ್ಚಿತ್ಕಾರಣಾಂತರೇ ॥ ೪ ॥
ಶಾಪಾಹತೋ ವೇಪಮಾನ ಇಂದ್ರಸ್ಯ ಚರಣೌ ಶುಭೌ ।
ಪ್ರಪೀಡ್ಯ ಮೂರ್ಧ್ನಾ ದೇವೇಶಂ ವಿಜ್ಞಾಪಯತಿ ಭಾರತ ॥ ೫ ॥

---

### ಕನ್ನಡದ ಅನುವಾದ

#### ದಾರುಕತೀರ್ಥಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಇಂದ್ರನಿಗೆ ಪ್ರಿಯನಾದ ದಾರುಕನು ಹಿಂದೆ ಸಿದ್ಧಿಯನ್ನು ಪಡೆದಿರುವ ಉತ್ತಮವಾದ ದಾರುಕತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ದೋಷರಹಿತನಾದ ಮುನಿಯೆ! ಹಿಂದೆ ದಾರುಕನು ಹೇಗೆ ತಪಸ್ಸನ್ನಾಚರಿಸಿದನು? ನಿನ್ನಿಂದ ಅದರ ವಿಧಿಯನ್ನು ಕೇಳಲಿಚ್ಛಿಸುವೆನು.

೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಜ್ಞಾನಿಗಳಾದ ಮುನಿಗಳ ಸ್ವರ್ಗ ಸಭೆಯಲ್ಲಿ ಹಿಂದೆ ನಡೆದ ವಿಷಯವನ್ನು ನಿನಗೆ ಹೇಳುವೆನು.

೪. ಹಿಂದೆ ಇಂದ್ರನಿಗೆ ಪ್ರಿಯನಾದ ಮಾತಲಿಯೆಂಬ ಸೂತನು ಯಾವುದೊ ಒಂದು ಕಾರಣದಿಂದ ತನ್ನ ಮಗನನ್ನು ಶಪಿಸಿದನು.

೫. ಆ ಮಾತಲಿಪುತ್ರನು ಶಾಪಪೀಡಿತನಾಗಿ ನಡುಗುತ್ತ ಇಂದ್ರನ ಎರಡು ಪಾದಗಳನ್ನೂ ವಂದಿಸಿ ವಿಜ್ಞಾಪಿಸಿಕೊಂಡನು.

**ತಮುವಾಚಾಽಭಿಶಪ್ತಂ ಚಾಽಪ್ಯನಾಥಂ ಚ ಸುರೇಶ್ವರಃ ।**
**ಕರ್ಮಣಾ ಕೇನ ಶಾಪಸ್ಯ ಘೋರಸ್ಯಾಂತೋ ಭವಿಷ್ಯತಿ ॥ ೬ ॥**
**ನರ್ಮದಾತಟಮಾಶ್ರಿತ್ಯ ತೋಷಯನ್ವೈ ಮಹೇಶ್ವರಂ ।**
**ತಿಷ್ಠ ಯಾವದ್ಯುಗಸ್ಯಾಂತಂ ಪುನರ್ಜನ್ಮ ಹ್ಯವಾಪ್ಸ್ಯಸಿ ॥ ೭ ॥**
**ಪುನರ್ಭೂತ್ವಾ ತು ಭೂತಸ್ತ್ವಂ ದಾರುಕೋನಾಮ ವಿಶ್ರುತಃ ।**
**ಸಂಸೇವ್ಯ ಪರಮಂ ದೇವಂ ಶಂಖಚಕ್ರಗದಾಧರಂ ॥ ೮ ॥**
**ಮಾನುಷಂ ಭಾವಮಾಪನ್ನಸ್ತತಃ ಸಿದ್ಧಿಮವಾಪ್ಸ್ಯಸಿ ।**
**ಏವಮುಕ್ತಸ್ತು ದೇವೇನ ಸಹಸ್ರಾಕ್ಷೇಣ ಧೀಮತಾ ॥ ೯ ॥**
**ಪ್ರಣಮ್ಯ ಶಿರಸಾ ಭೂಮಿಮಾಗತೋಽಸೌ ಹ್ಯಚೇತನಃ ।**
**ನರ್ಮದಾತಟಮಾಶ್ರಿತ್ಯ ಕರ್ಷಯನ್ನಿಜವಿಗ್ರಹಂ ॥ ೧೦ ॥**
**ವ್ರತೋಪವಾಸಸಂಖಿನ್ನೋ ಜಪಹೋಮರತಃ ಸದಾ ।**
**ಮಹಾದೇವಂ ಮಹಾತ್ಮಾನಂ ವರದಂ ಶೂಲಪಾಣಿನಂ ॥ ೧೧ ॥**
**ಭಕ್ತ್ಯಾ ತು ಪರಯಾ ರಾಜನ್ಯಾವದಾಭೂತಸಂಪ್ಲವಂ ।**
**ಅಂಶಾವತರಣಾದ್ವಿಷ್ಣೋಃ ಸೂತೋ ಭೂತ್ವಾ ಮಹಾಮತಿಃ ॥ ೧೨ ॥**
**ತೋಷಯನ್ವೈ ಜಗನ್ನಾಥಂ ತತೋ ಯಾತೋ ಹಿ ಸದ್ಗತಿಂ ॥ ೧೩ ॥**
**ಏಷ ತತ್ಸಂಭವಸ್ತಾತ ದಾರುತೀರ್ಥಸ್ಯ ಸುವ್ರತ ।**
**ಕಥಿತೋಽಯಂ ಮಯಾ ಪೂರ್ವಂ ಯಥಾ ಮೇ ಶಂಕರೋಽಬ್ರವೀತ್ ॥**

---

೬. ಇಂದ್ರನು ಶಾಪಗ್ರಸ್ತನೂ, ಅನಾಥನೂ ಆದ ಅವನಿಗೆ ಘೋರಶಾಪವು ಹೇಗೆ ಅವಸಾನಗೊಳ್ಳುವುದೆಂಬುದನ್ನು ಈ ರೀತಿ ಹೇಳಿದನು.

೭. "ನೀನು ನರ್ಮದಾತಟದಲ್ಲಿ ಯುಗದ ಅವಸಾನದವರೆಗೆ ಶಂಕರನನ್ನು ಸಂತೋಷಗೊಳಿಸುತ್ತಿರು. ಅದರಿಂದ ಮರಳಿ ಜನ್ಮವನ್ನು ಹೊಂದುವೆ.

೮–೧೩. ಅದರಿಂದ ಪವಿತ್ರನಾದ ನೀನು ಮರಳಿ ಮನುಷ್ಯನಾಗಿ ಜನಿಸಿ ದಾರುಕನೆಂದು ಪ್ರಸಿದ್ಧನಾಗಿ ವಿಷ್ಣುವನ್ನು ಭಜಿಸಿ ಸಿದ್ಧಿಯನ್ನು ಪಡೆಯುವೆ." ಇಂದ್ರನು ಹೀಗೆ ಹೇಳಲು ಈ ಮಾತಲಿಪುತ್ರನು ಅವನನ್ನು ನಮಸ್ಕರಿಸಿ ಭೂಮಿಗೆ ಬಂದು ನರ್ಮದಾತಟದಲ್ಲಿ ನೆಲೆಸಿ ವ್ರತೋಪವಾಸಗಳಿಂದ ಖಿನ್ನನೂ, ಜಪಹೋಮಾಸಕ್ತನೂ ಆಗಿ ತನ್ನ ಶರೀರವನ್ನು ಕೃಶಗೊಳಿಸುತ್ತ ಮಹಾತ್ಮನಾದ ಶಂಕರನನ್ನು ಅತಿಭಕ್ತಿಯಿಂದ ಕಲ್ಪಾಂತ್ಯದವರೆಗೆ ಪೂಜಿಸಿ ವಿಷ್ಣುವಿನ ಅವತಾರವಾದ ಕೃಷ್ಣನಿಗೆ ಸೂತನಾಗಿ ಅವನನ್ನು ಸಂತೋಷಗೊಳಿಸುತ್ತ ಸದ್ಗತಿಯನ್ನು ಹೊಂದಿದನು.

೧೪. ಸುವ್ರತನೆ! ಶಂಕರನು ನನಗೆ ಹೇಳಿದಂತೆ ನಿನಗೆ ದಾರುತೀರ್ಥದ ಉತ್ಪತ್ತಿಯನ್ನು ಹೇಳಿರುವೆನು.

ತತೋ ಯುಧಿಷ್ಠಿರಃ ಶ್ರುತ್ವಾ ವಿಸ್ಮಯಂ ಪರಮಂ ಗತಃ ।
ಭ್ರಾತ್ರೂನ್ನಿಲೋಕಯಾಮಾಸ ಹೃಷ್ಟರೋಮಾ ಮುಹುರ್ಮುಹುಃ ॥೧೫॥

ಶ್ರೀ ಮಾರ್ಕಂಡೇಯ ಉವಾಚ :—

ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ವಿಧಿಪೂರ್ವಂ ನರೇಶ್ವರ ।
ಉಪಾಸ್ಯ ಸಂಧ್ಯಾಂ ದೇವೇಶಮರ್ಚಯೇದ್ಯಶ್ಚ ಶಂಕರಂ ॥ ೧೬ ॥
ವೇದಾಭ್ಯಾಸಂ ತು ತತ್ರೈವ ಯಃ ಕರೋತಿ ಸಮಾಹಿತಃ ।
ಸೋಽಶ್ವಮೇಧಫಲಂ ರಾಜನ್ ಲಭತೇ ನಾಽತ್ರ ಸಂಶಯಃ ॥ ೧೭ ॥
ತಸ್ಮಿಂಸ್ತೀರ್ಥೇತು ಯೋ ಭಕ್ತ್ಯಾ ಭೋಜಯೇದ್ಬ್ರಾಹ್ಮಣಾಂಛುಚಿಃ ।
ಸ ತು ವಿಪ್ರಸಹಸ್ರಸ್ಯ ಲಭತೇ ಫಲಮುತ್ತಮಂ ॥ ೧೮ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ।
ಯತ್ಕೃತಂ ಶುದ್ಧಭಾವೇನ ತತ್ಸರ್ವಂ ಸಫಲಂ ಭವೇತ್ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
“ದಾರುಕತೀರ್ಥಮಾಹಾತ್ಮ್ಯವರ್ಣನಂ” ನಾಮ ಷಟ್ತ್ರಿಂಶೋಽಧ್ಯಾಯಃ

---

೧೫. ಯುಧಿಷ್ಠಿರನು ಅದನ್ನು ಕೇಳಿ ಆಶ್ಚರ್ಯದಿಂದ ರೋಮಾಂಚಗೊಂಡು ಸಹೋದರರನ್ನು ನೋಡಿದನು.

೧೬–೧೭. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ಮಾನವನು ವಿಧಿಯಂತೆ ಆ ತೀರ್ಥದಲ್ಲಿ ಮಿಂದು ಸಂಧ್ಯಾವಂದನೆಮಾಡಿ ಶಂಕರನನ್ನು ಪೂಜಿಸಿ ವೇದಾಧ್ಯಯನವನ್ನು ಸಾವಧಾನ ಮನಸ್ಸಿನಿಂದ ಮಾಡಿದರೆ ನಿಜವಾಗಿಯೂ ಅಶ್ವಮೇಧಯಾಗದ ಫಲವನ್ನು ಹೊಂದುವನು.

೧೮. ಅಲ್ಲಿ ಶುದ್ಧನಾಗಿ ಭಕ್ತಿಯಿಂದ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಿದವನು ಸಾವಿರ ಜನರಿಗೆ ಭೋಜನಮಾಡಿಸಿದ ಫಲವನ್ನು ಪಡೆಯುವನು.

೧೯. ಅಲ್ಲಿ ಶುದ್ಧಮನಸ್ಸಿನಿಂದ ಮಾಡಿದ ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ದೇವಪೂಜೆ ಇವುಗಳು ಸಫಲವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
“ದಾರುಕತೀರ್ಥಮಾಹಾತ್ಮ್ಯವರ್ಣನ”ವೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತತ್ರಿಂಶೋಽಧ್ಯಾಯಃ

## ದೇವತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ:—

ತತೋ ಗಚ್ಛೇತ ರಾಜೇಂದ್ರ ದೇವತೀರ್ಥಮನುತ್ತಮಂ ।
ಯೇನ ದೇವಾಸ್ತ್ರಯಸ್ತ್ರಿಂಶತ್ಸ್ನಾತ್ವಾ ಸಿದ್ಧಿಂ ಪರಾಂ ಗತಾಃ ॥ ೧ ॥

ಯುಧಿಷ್ಠಿರ ಉವಾಚ:—

ಕಥಂ ತಾತ ಸುರಾಃ ಸರ್ವೇ ದಾನವೈರ್ಬಲವತ್ತರೈಃ ।
ನಿರ್ಜಿತಾಸ್ತತ್ರ ತೀರ್ಥೇ ಚ ಸ್ನಾತ್ವಾ ಸಿದ್ಧಿಂ ಪರಾಂ ಗತಾಃ ॥ ೨ ॥

ಮಾರ್ಕಂಡೇಯ ಉವಾಚ:—

ಪುರಾ ದೈತ್ಯಗಣೈರುಗ್ರೈರ್ಯುದ್ಧೇಽತಿಬಲವತ್ತರೈಃ ।
ಇಂದ್ರೋ ದೇವಗಣೈಃ ಸಾರ್ಧಂ ಸ್ವರಾಜ್ಯಾಚ್ಚ್ಯಾವಿತೋ ನೃಪ ॥ ೩ ॥
ಹಸ್ತ್ಯಶ್ವರಥಯಾನೌಘೈರ್ಮರ್ದಯಿತ್ವಾ ವರೂಥಿನೀಂ ।
ವಿಧ್ವಸ್ತಾ ಭೇಜಿರೇ ಮಾರ್ಗಂ ಪ್ರಹಾರೈರ್ಜರ್ಜರೀಕೃತಾಃ ॥ ೪ ॥
ಜಂಭಶುಂಭನಿಶುಂಭೈಶ್ಚ ಕೂಷ್ಮಾಂಡಕುಹಕಾದಿಭಿಃ ।
ವೇಪಮಾನಾರ್ದಿತಾಃ ಸರ್ವೇ ಬ್ರಹ್ಮಾಣಮುಪತಸ್ಥಿರೇ ॥ ೫ ॥

---

## ಕನ್ನಡದ ಅನುವಾದ

### ದೇವತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅನಂತರ ಮೂವತ್ತಮೂರು ದೇವತೆಗಳು ಸ್ನಾನಮಾಡಿ ಸಿದ್ಧಿಯನ್ನು ಹೊಂದಿರುವ ಉತ್ತಮವಾದ ದೇವ ತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ಪಾಪ! ಬಲಿಷ್ಠರಾದ ದಾನವರಿಂದ ಸೋತ ದಿವಿಜರು ಆ ತೀರ್ಥದಲ್ಲಿ ಮಿಂದು ಹೇಗೆ ಸಿದ್ಧರಾದರು?

೩. ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ಕಠಿನರೂ, ಬಲಿಷ್ಠರೂ ಆದ ದೈತ್ಯರು ಯುದ್ಧದಲ್ಲಿ ಇಂದ್ರನನ್ನು ದೇವತೆಗಳೊಡನೆ ದೇವರಾಜ್ಯದಿಂದ ಓಡಿಸಿದರು.

೪. ಆ ದೈತ್ಯರು ಆನೆ, ಕುದುರೆ, ರಥ ಮೊದಲಾದ ವಾಹನಗಳೊಡನೆ ದೇವಸೇನೆಯನ್ನು ಧ್ವಂಸಮಾಡಲು ಆ ದೈತ್ಯರ ಪೆಟ್ಟಿನಿಂದ ಶಿಥಿಲರಾಗಿ ದೇವತೆಗಳೆಲ್ಲರೂ ಬೇರೆ ಮಾರ್ಗವನ್ನು ಹಿಡಿದರು.

೫–೬. ಜಂಭ, ಶುಂಭ, ನಿಶುಂಭ, ಕೂಷ್ಮಾಂಡ, ಕುಹಕ ಮೊದಲಾದವ

**ಪ್ರಣಮ್ಯ ಶಿರಸಾ ದೇವಂ ಬ್ರಹ್ಮಾಣಂ ಪರಮೇಷ್ಠಿನಂ ।**
**ತತೋ ವಿಜ್ಞಾಪಯಾಮಾಸುರ್ದೇವಾ ವಹ್ನಿಪುರೋಗಮಾಃ ॥ ೬ ॥**
**ಪಶ್ಯ ಪಶ್ಯ ಮಹಾಭಾಗ ದಾನವೈಃ ಶಕಲೀಕೃತಾಃ ।**
**ವಿಯೋಜಿತಾಃ ಪುತ್ರದಾರೈಸ್ತ್ವಾಮೇವ ಶರಣಂ ಗತಾಃ ॥ ೭ ॥**
**ಪರಿತ್ರಾಯಸ್ವ ದೇವೇಶ ಸರ್ವಲೋಕಪಿತಾಮಹ ।**
**ನಾಽನ್ಯಾ ಗತಿಃ ಸುರೇಶಾನ ತ್ವಾಂ ಮುಕ್ತ್ವಾ ಪರಮೇಶ್ವರ ॥ ೮ ॥**
**ದಾನವಾನಾಂ ವಿಘಾತಾರ್ಥಂ ನರ್ಮದಾತಟಮಾಸ್ಥಿತಾಃ ।**
**ತಪಃ ಕುರುಧ್ವಂ ಸ್ವಸ್ಥಾಃಸ್ಥ ತಪೋಹಿ ಪರಮಂ ಬಲಂ ॥ ೯ ॥**
**ನಾಽನ್ಯೋಪಾಯೋ ನವೈ ಮಂತ್ರೋ ವಿದ್ಯತೇ ನ ಚ ಮೇ ಕ್ರಿಯಾ ।**
**ವಿನಾ ರೇವಾಜಲಂ ಪುಣ್ಯಂ ಸರ್ವಲೋಕಕ್ಷಯಂಕರಂ ॥ ೧೦ ॥**
**ದಾರಿದ್ರ್ಯವ್ಯಾಧಿಮರಣಬಂಧನವ್ಯಸನಾನಿ ಚ ।**
**ಏತಾನಿ ಚೈವ ಪಾಪಸ್ಯ ಫಲಾನೀತಿ ಮತಿರ್ಮಮ ॥ ೧೧ ॥**
**ಏವಂ ಜ್ಞಾತ್ವಾ ತತಶ್ಚೈವ ತಪಃ ಕುರುತ ದುಷ್ಕರಂ ।**
**ತಥಾ ಚೈವ ಸುರಾಃ ಸರ್ವೇ ದೇವಾ ಹ್ಯಗ್ನಿಪುರೋಗಮಾಃ ॥ ೧೨ ॥**

---

ರಿಂದ ಪೀಡಿತರಾದ ಅಗ್ನಿಯೆ ಮೊದಲಾದ ದಿವಿಜರು ಬ್ರಹ್ಮನೆಡೆಗೆ ಹೋಗಿ ಅವನನ್ನು ತಲೆಬಾಗಿ ನಮಸ್ಕರಿಸಿ ಹೀಗೆ ವಿಜ್ಞಾಪಿಸಿಕೊಂಡರು.

೭. "ಮಹಾಭಾಗ್ಯವಂತನೆ! ದಾನವರು ನಮ್ಮನ್ನು ನುಚ್ಚುನುರಿ ಮಾಡಿ ಪುತ್ರಪತ್ನೀರಿಂದ ಅಗಲಿಸಿರುವರು. ಈಗ ನಿನ್ನನ್ನು ಮರೆಹೊಕ್ಕ ನಮ್ಮನ್ನು ನೋಡು.

೮. ಸುರೇಶ್ವರ! ನಮ್ಮನ್ನು ಕಾಪಾಡು. ನಿನ್ನನ್ನು ಬಿಟ್ಟು ನಮಗೆ ಬೇರೆ ಗತಿಯಿಲ್ಲ."

೯. ಬ್ರಹ್ಮನು ಹೇಳುತ್ತಾನೆ:—ಎಲೈ ದೇವತೆಗಳಿರಾ! ದಾನವರ ನಾಶಕ್ಕಾಗಿ ನರ್ಮದಾ ತಟದಲ್ಲಿ ತಪವನ್ನು ಮಾಡಿರಿ. ಅದರಿಂದ ಸುಖಗೊಳ್ಳುವಿರಿ. ತಪಸ್ಸೇ ಉತ್ತಮ ಬಲವು.

೧೦. ಸಕಲ ಪಾಪಗಳನ್ನು ನೀಗಿಸುವುದೂ, ಪುಣ್ಯಕರವೂ ಆದ ನರ್ಮದಾ ನದಿಯ ನೀರನ್ನು ಬಿಟ್ಟು ಬೇರೆ ಉಪಾಯವೂ, ಮಂತ್ರವೂ, ನನ್ನ ಸಹಾಯವೂ ಇರುವುದಿಲ್ಲ.

೧೧. ಬಡತನ, ರೋಗ, ಮರಣ, ಬಂಧನ, ವ್ಯಸನ ಇವುಗಳು ಪಾಪದ ಫಲಗಳೆಂದು ನನಗೆ ತೋರುವುದು.

೧೨–೧೭. ಇದನ್ನರಿತು ನೀವು ದುಷ್ಕರತಪವನ್ನಾಚರಿಸಿರಿ. ಅಗ್ನಿ ಮೊದಲಾದ ಸಮಸ್ತ ಸುರರು ಬ್ರಹ್ಮನ ನಿಜವಾದ ಆ ಮಾತನ್ನು ಕೇಳಿ ನರ್ಮದೆಗೆ

ತಚ್ಛ್ರುತ್ವಾ ವಚನಂ ತಥ್ಯಂ ಬ್ರಹ್ಮಣಃ ಪರಮೇಷ್ಠಿನಃ ।
ನರ್ಮದಾಮಾಗತಾಃ ಸರ್ವೇ ದೇವಾ ಹ್ಯಗ್ನಿಪುರೋಗಮಾಃ ॥ ೧೩ ॥
ಚೇರುರ್ವೈ ತತ್ರ ವಿಪುಲಂ ತಪಃಸಿದ್ಧಿಮವಾಪ್ನುವನ್ ।
ತದಾಪ್ರಭೃತಿ ತತ್ತೀರ್ಥಂ ದೇವತೀರ್ಥಮನುತ್ತಮಂ ॥ ೧೪ ॥
ಗೀಯತೇ ತ್ರಿಷು ಲೋಕೇಷು ಸರ್ವಪಾಪಕ್ಷಯಂಕರಂ ।
ತತ್ರ ಗತ್ವಾಚ ಯೋ ಮರ್ತ್ಯೋ ವಿಧಿನಾ ಸಂಯತೇಂದ್ರಿಯಃ ॥ ೧೫ ॥
ಸ್ನಾನಂ ಸಮಾಚರೇದ್ಭಕ್ತ್ಯಾ ಸಲಭೇನ್ಮೌಕ್ತಿಕಂ ಫಲಂ ।
ಯಸ್ತು ಭೋಜಯತೇ ವಿಪ್ರಾಂಸ್ತಸ್ಮಿಂಸ್ತೀರ್ಥೇ ನರಾಧಿಪ ॥ ೧೬ ॥
ಸ ಲಭೇನ್ಮುಖ್ಯವಿಪ್ರಾಣಾಂ ಫಲಂ ಸಾಹಸ್ರಿಕಂ ನೃಪ ।
ತತ್ರ ದೇವಶಿಲಾ ರಮ್ಯಾ ಮಹಾಪುಣ್ಯವಿವರ್ಧಿನೀ ॥ ೧೭ ॥
ಸನ್ಯಾಸೇನ ಮೃತಾ ಯೇತು ತೇಷಾಂ ಸ್ಯಾದಕ್ಷಯಾ ಗತಿಃ ।
ಅಗ್ನಿಪ್ರವೇಶಂ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥ ೧೮ ॥
ರುದ್ರಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ।
ಏವಂ ಸ್ನಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ॥ ೧೯ ॥
ಸುಕೃತಂ ದುಷ್ಕೃತಂ ವಾಽಪಿ ತತ್ರ ತೀರ್ಥೇಽಕ್ಷಯಂ ಭವೇತ್ ।
ಏಷ ತೇ ವಿಧಿರುದ್ದಿಷ್ಟ ಉತ್ಪತ್ತಿಶ್ಚೈವ ಭಾರತ ॥ ೨೦ ॥
ದೇವತೀರ್ಥಸ್ಯ ನಿಖಿಲಾ ಯಥಾ ವೈ ಶಂಕರಾಚ್ಛ್ರುತಾ ।
ಪಠಂತಿ ಯೇ ಪಾಪಹರಂ ಸರ್ವದುಃಖವಿಮೋಚನಂ ॥ ೨೧ ॥

---

ಬಂದು ಅತಿಶಯ ತಪಸ್ಸನ್ನು ಮಾಡಿ ಸಿದ್ಧಿಯನ್ನು ಹೊಂದಿದರು. ಅದು ಮೊದಲ್ಗೊಂಡು ಉತ್ತಮವಾದ ದೇವತೀರ್ಥವು ಮೂರು ಲೋಕಗಳಲ್ಲಿಯೂ ಸಕಲ ಪಾಪ ಪರಿಹಾರಕವೆಂದು ಹೇಳಲ್ಪಡುವುದು. ಅಲ್ಲಿಗೆ ಹೋಗಿ ವಿಧಿಯಿಂದ ಜಿತೇಂದ್ರಿಯನಾಗಿ ಭಕ್ತಿಯಿಂದ ಮಿಂದವನು ಮುಕ್ತಿಯನ್ನು ಪಡೆಯುವನು. ದೊರೆಯೆ! ಆ ತೀರ್ಥದಲ್ಲಿ ಬ್ರಾಹ್ಮಣರಿಗೆ ಭೋಜನವನ್ನಿತ್ತವನು ಸಾವಿರಮಂದಿ ಶ್ರೇಷ್ಠ ಬ್ರಾಹ್ಮಣರನ್ನು ಭೋಜನಮಾಡಿಸಿದ ಫಲವನ್ನು ಪಡೆಯುವನು. ಅಲ್ಲಿ ಅತಿಶಯ ಪುಣ್ಯವನ್ನು ಹೆಚ್ಚಿಸುವ ಮನೋಹರವಾದ ದೇವಶಿಲೆಯಿರುವುದು.

೧೮–೨೨. ಅಲ್ಲಿ ಸನ್ಯಾಸವನ್ನುತಾಳಿ ಮೃತರಾದವರಿಗೆ ಅಕ್ಷಯಗತಿಯುಂಟಾಗುವುದು. ಆ ತೀರ್ಥದಲ್ಲಿ ಅಗ್ನಿಪ್ರವೇಶಮಾಡಿದವನು ಪ್ರಳಯಕಾಲದವರೆಗೆ ರುದ್ರಲೋಕದಲ್ಲಿ ವಾಸಿಸುವನು. ಸ್ನಾನ. ಜಪ, ಹೋಮ, ವೇದಾಧ್ಯಯನ, ದೇವತಾರ್ಚನ, ಪುಣ್ಯ ಪಾಪ ಇವುಗಳು ಆ ತೀರ್ಥದಲ್ಲಿ ಅಕ್ಷಯವಾಗುವುವು. ಯುಧಿಷ್ಠಿರ! ನಾನು ಶಂಕರನಿಂದ ಕೇಳಿದಂತೆ ದೇವತೀರ್ಥದ ಉತ್ಪತ್ತಿಕ್ರಮವನ್ನು ಸಂಪೂರ್ಣವಾಗಿ ನಿನಗೆ ಹೇಳಿರುವೆನು. ಪಾಪನಿವಾರಕವೂ, ಸಮಸ್ತ

**ದೇವತೀರ್ಥಸ್ಯ ಚರಿತಂ ದೇವಲೋಕಂ ವ್ರಜಂತಿ ತೇ ॥ ೨೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೋ ಆವಂತ್ಯಖಂಡೇ ತೃತೀಯೋ ರೇವಾಖಂಡೇ "ದೇವತೀರ್ಥಮಾಹಾತ್ಮ್ಯವರ್ಣನಂ"ನಾಮ ಸಪ್ತತ್ರಿಂಶೋಽಧ್ಯಾಯಃ**

---

ದುಃಖಗಳನ್ನು ಪರಿಹರಿಸುವುದೂ ಆದ ದೇವತೀರ್ಥದ ಚರಿತೆಯನ್ನು ಪಠಿಸುವವರು ದೇವಲೋಕಕ್ಕೆ ತೆರಳುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ದೇವತೀರ್ಥಮಾಹಾತ್ಮ್ಯವರ್ಣನ"ವೆಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಷ್ಟತ್ರಿಂಶೋಽಧ್ಯಾಯಃ

## ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ ರಾಜೇಂದ್ರ ಗುಹಾಽಽವಾಸೀತಿ ಚೋತ್ತಮಂ ।
ಯತ್ರ ಸಿದ್ಧೋ ಮಹಾದೇವೋ ಗುಹಾವಾಸೀ ಸಮಾರ್ಬುದಂ ॥ ೧ ॥

ಯುಧಿಷ್ಠಿರ ಉವಾಚ :—

ಕೇನ ಕಾರ್ಯೇಣ ಭೋ ತಾತ ಮಹಾದೇವೋ ಜಗದ್ಗುರುಃ ।
ಗುಹಾಯಾಮನಯತ್ಕಾಲಂ ಸುದೀರ್ಘಂ ದ್ವಿಜಸತ್ತಮ ॥ ೨ ॥
ಏತದ್ವಿಸ್ತರತಃ ಸರ್ವಂ ಕಥಯಸ್ವ ಮಮಾಽನಘ ।
ಶ್ರೋತುಮಿಚ್ಛಾಮ್ಯಹಂ ಸರ್ವಂ ಪರಂ ಕೌತೂಹಲಂ ಹಿ ಮೇ ॥ ೩ ॥

ಮಾರ್ಕಂಡೇಯ ಉವಾಚ :—

ಸಾಧುಪ್ರಶ್ನೋ ಮಹಾರಾಜ ಪ್ರಷ್ಟೋ ಯೋ ವೈ ತ್ವಯೋತ್ತಮಃ ।
ಪುರಾಣೇ ವಿಸ್ತರೋಹ್ಯಸ್ಯ ನ ಶಕ್ಯೋ ಹಿ ಮಯಾಽಧುನಾ ॥ ೪ ॥
ಕಥಿತುಂ ವೃದ್ಧಭಾವತ್ವಾದತೀತೋ ಬಹುಕಾಲಿಕಃ ।
ಸಂಕ್ಷೇಪಾತ್ತೇನ ತೇ ತಾತ ಕಥಯಾಮಿ ನಿಬೋಧ ಮೇ ॥ ೫ ॥

---

## ಕನ್ನಡದ ಅನುವಾದ

### ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಮಹೇಶ್ವರನು ಅರ್ಬುದ ಸಂವತ್ಸರಗಳಕಾಲ ಗುಹೆಯಲ್ಲಿ ವಾಸಿಸುತ್ತ ಸಿದ್ಧಿಯನ್ನು ಪಡೆದ ಗುಹಾವಾಸಿತೀರ್ಥಕ್ಕೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ಮುನಿವರ್ಯನೆ! ಜಗದ್ಗುರುವಾದ ಮಹಾದೇವನು ಯಾವ ಕೆಲಸಕ್ಕಾಗಿ ಬಹಳ ಕಾಲ ಗುಹೆಯಲ್ಲಿ ಕಾಲವನ್ನು ಕಳೆದನು ?

೩. ಪಾಪರಹಿತನೆ! ಇದೆಲ್ಲವನ್ನೂ ವಿಸ್ತಾರವಾಗಿ ಹೇಳು. ನಾನು ಕೇಳ ಬಯಸುವೆನು. ನನಗೆ ಅತ್ಯಂತ ಕುತೂಹಲವುಂಟಾಗಿದೆ.

೪–೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ನೀನು ಉತ್ತಮವಾದ ಪ್ರಶ್ನೆಯನ್ನು ಚೆನ್ನಾಗಿ ಕೇಳಿರುವೆ. ಈಗ ನಾನು ವೃದ್ಧನಾದ್ದರಿದದಲೂ, ಬಹುಕಾಲ ಕಳೆದುಹೋದುದರಿಂದಲೂ ಈ ಪುರಾಣವನ್ನು ವಿಸ್ತಾರ

ಪುರಾ ಕೃತಯುಗೇ ರಾಜನ್ನಾಸೀದ್ದಾರುವನಂ ಮಹತ್ ।
ನಾನಾದ್ರುಮಲತಾಕೀರ್ಣಂ ನಾನಾವಲ್ಯುಪಶೋಭಿತಂ ॥ ೬ ॥
ಸಿಂಹವ್ಯಾಘ್ರವರಾಹೈಶ್ಚ ಗಜೈಃ ಖಡ್ಗೈರ್ನಿಷೇವಿತಂ ।
ಬಹುಪಕ್ಷಿಯುತಂ ದಿವ್ಯಂ ಯಥಾ ಚೈತ್ರರಥಂ ವನಂ ॥ ೭ ॥
ತತ್ರ ಕೇಚಿನ್ಮಹಾಪ್ರಾಜ್ಞಾ ವಸಂತಿ ಸಂಶಿತವ್ರತಾಃ ।
ವಸಂತಿ ಪರಯಾ ಭಕ್ತ್ಯಾ ಚತುರಾಶ್ರಮಭಾವಿತಾಃ ॥ ೮ ॥
ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।
ಸ್ವಧರ್ಮನಿರತಾಃ ಸರ್ವೇ ವಾಂಛಂತಃ ಪರಮಂ ಪದಂ ॥ ೯ ॥
ತಾವದ್ವಸಂತಸಮಯೇ ಕಸ್ಮಿಂಶ್ಚಿತ್ಕಾರಣಾಂತರೇ ।
ವಿಮಾನಸ್ಥೋ ಮಹಾದೇವೋ ಗಚ್ಛನ್ವೈ ಹ್ಯುಮಯಾ ಸಹ ॥ ೧೦ ॥
ದದರ್ಶ ತೋಯ ಆವಾಸ ಋಕ್ಸಾಮ ಯಜುರ್ನಾದಿತಂ ।
ಅಲಕ್ಷ್ಯಾಗತನಿರ್ಗಮ್ಯಂ ಸರ್ವಪಾಪಕ್ಷಯಂಕರಂ ॥ ೧೧ ॥
ತಂ ದೃಷ್ಟ್ವಾ ಮುದಿತಾ ದೇವೀ ಹರ್ಷಗದ್ಗದಯಾ ಗಿರಾ ।
ಪಪ್ರಚ್ಛ ದೇವದೇವೇಶಂ ಶಶಾಂಕಕೃತಭೂಷಣಂ ॥ ೧೨ ॥

---

ವಾಗಿ ಹೇಳಲು ಶಕ್ಯವಲ್ಲ. ಆದ್ದರಿಂದ ನಿನಗೆ ಸಂಕ್ಷೇಪವಾಗಿ ಹೇಳುವೆನು. ಅದನ್ನು ಕೇಳಿ ತಿಳಿದುಕೊ.

೬–೭. ದೊರೆಯೆ! ಹಿಂದೆ ಕೃತಯುಗದಲ್ಲಿ ನಾನಾವೃಕ್ಷಗಳಿಂದ ತುಂಬಿರುವುದೂ, ನಾನಾ ಲತೆಗಳಿಂದ ಅಲಂಕಾರಗೊಂಡುದೂ, ಸಿಂಹ, ವ್ಯಾಘ್ರ ಹಂದಿ, ಆನೆ, ಖಡ್ಗಮೃಗಗಳು ಇವುಗಳುಳ್ಳುದೂ, ಅನೇಕಪಕ್ಷಿಗಳಿಂದ ಕೂಡಿರುವುದೂ ಆದ ಚೈತ್ರರಥವನದಂತಿರುವ ಮಹಾದಾರುವನವೊಂದಿದ್ದಿತು.

೮–೯. ಅಲ್ಲಿ ಕೆಲವು ಮಂದಿ ಅತಿ ಪ್ರಾಜ್ಞರೂ, ಶ್ಲಾಘ್ಯವ್ರತರೂ, ಸ್ವಧರ್ಮಾಸಕ್ತರೂ ಆದ ಬ್ರಹ್ಮಚಾರಿಗಳು, ಗೃಹಸ್ಥರು, ವಾನಪ್ರಸ್ಥರು, ಯತಿಗಳು ಇವರು ಉತ್ತಮ ಸ್ಥಾನವನ್ನು ಬಯಸುತ್ತ ವಾಸಿಸುತ್ತಿದ್ದರು.

೧೦–೧೧. ಒಂದಾನೊಂದು ವಸಂತಕಾಲದಲ್ಲಿ ಯಾವುದೋ ಒಂದು ಕಾರಣದಿಂದ ಮಹಾದೇವನು ಪಾರ್ವತಿಯೊಡನೆ ವಿಮಾನದಲ್ಲಿ ಕುಳಿತು ಋಗ್ಯಜುಸ್ಸಾಮವೇದಗಳ ಧ್ವನಿಯುಳ್ಳುದೂ, ತಿಳಿಯದಿರುವ ಗಮನಾಗಮನ ಮಾರ್ಗವುಳ್ಳುದೂ, ಸಕಲ ಪಾಪಗಳನ್ನು ಪರಿಹರಿಸುವುದೂ ಆದ ಆ ವನವನ್ನು ಕಂಡನು.

೧೨. ಪಾರ್ವತಿಯು ಅದನ್ನು ಕಂಡು ಸಂತೋಷಗೊಂಡು ಗದ್ಗದ ವಾಣಿಯಿಂದ ಆ ಚಂದ್ರಮೌಳೀಶ್ವರನನ್ನು ಹೀಗೆ ಪ್ರಶ್ನಿಸಿದಳು.

ದೇವ್ಯುವಾಚ :—

ಕಸ್ಯಾಽಯಮಾಶ್ರಮೋ ದೇವ ವೇದಧ್ವನಿನಿನಾದಿತಃ ।
ಯಂ ದೃಷ್ಟ್ವಾ ಕ್ಷುತ್ಪಿಪಾಸಾದ್ಯೈಃ ಶ್ರಮೈಶ್ಚ ಪರಿಹೀಯತೇ ॥ ೧೩ ॥

ಮಹೇಶ್ವರ ಉವಾಚ :—

ಕಿಂ ತ್ವಯಾ ನಶ್ರುತಂ ದೇವಿ ಮಹಾದಾರುವನಂ ಮಹತ್ ।
ಬಹುವಿಪ್ರಜನೋ ಯತ್ರ ಗೃಹಧರ್ಮೇಣ ವರ್ತತೇ ॥ ೧೪ ॥
ಅತ್ರ ಯಃ ಸ್ತ್ರೀಜನಃ ಕಶ್ಚಿದ್ಭರ್ತೃಶುಶ್ರೂಷಣೇ ರತಃ ।
ನಾಽನ್ಯೋ ದೇವೋ ನಸ್ಯೈಧರ್ಮೋ ಜ್ಞಾಯತೇ ಶೈಲನಂದಿನಿ ॥ ೧೫ ॥
ಏತಚ್ಛ್ರುತ್ವಾ ಪರಂ ವಾಕ್ಯಂ ದೇವದೇವೇನ ಭಾಷಿತಂ ।
ಕೌತೂಹಲಸಮಾವಿಷ್ಟಾ ಶಂಕರಂ ಪುನರಬ್ರವೀತ್ ॥ ೧೬ ॥
ಯತ್ತ್ವಯೋಕ್ತಂ ಮಹಾದೇವ ಪತಿಧರ್ಮರತಾಃ ಸ್ತ್ರಿಯಃ ।
ತಾಸಾಂ ತ್ವಂ ಮದನೋ ಭೂತ್ವಾ ಚಾರಿತ್ರಂ ಕ್ಷೋಭಯ ಪ್ರಭೋ॥ ೧೭ ॥

ಈಶ್ವರ ಉವಾಚ :—

ಯತ್ತ್ವಯೋಕ್ತಂ ಚ ವಚನಂ ನಹಿ ಮೇ ರೋಚತೇ ಪ್ರಿಯೇ ।
ಬ್ರಾಹ್ಮಣಾಹಿ ಮಹದ್ಭೂತಂ ನ ಚೈಷಾಂ ವಿಪ್ರಿಯಂ ಚರೇತ್ ॥ ೧೮ ॥
ಮನ್ಯುಪ್ರಹರಣಾ ವಿಪ್ರಾಶ್ಚಕ್ರಪ್ರಹರಣೋ ಹರಿಃ ।
ಚಕ್ರಾತ್ತೀಕ್ಷ್ಣತರೋ ಮನ್ಯುಸ್ತಸ್ಮಾದ್ವಿಪ್ರಂ ನ ಕೋಪಯೇತ್ ॥ ೧೯ ॥

---

೧೩. ದೇವಿಯು ಹೇಳುತ್ತಾಳೆ :—ನಾಥ! ವೇದಧ್ವನಿಯುಳ್ಳ ಈ ಆಶ್ರಮವು ಯಾರದು ? ಇದನ್ನು ನೋಡುವುದರಿಂದ ಹಸಿವು, ಬಾಯಾರಿಕೆ, ಆಯಾಸಗಳು ಪರಿಹಾರವಾಗುತ್ತಿರುವುವಲ್ಲ !

೧೪. ಶಂಕರನು ಹೇಳುತ್ತಾನೆ:—ದೇವಿ! ನೀನು ಅನೇಕ ಬ್ರಾಹ್ಮಣರು ಗೃಹಸ್ಥಾಶ್ರಮಧರ್ಮದಿಂದಿರುವ ಮಹಾದಾರುವನವನ್ನು ಕೇಳಿಲ್ಲವೆ? ಅದೇ ಇದು.

೧೫. ಇಲ್ಲಿ ಸಕಲ ಸ್ತ್ರೀಯರೂ ಪತಿಸೇವೆಯಲ್ಲಿ ನಿರತರಾಗಿರುವರು. ಅವರು ಇತರ ದೇವತೆಯನ್ನೂ, ಧರ್ಮವನ್ನೂ ಅರಿಯರು.

೧೬. ದೇವಿಯು ಶಂಕರನು ಹೇಳಿದ ಈ ಮಾತನ್ನು ಕೇಳಿ ಕುತೂಹಲ ಗೊಂಡು ಅವನನ್ನು ಕುರಿತು ಮರಳಿ ಹೀಗೆ ಹೇಳಿದಳು.

೧೭. "ನಾಥ! ನೀನು ಇಲ್ಲಿರುವ ಹೆಂಗಸರು ಪಾತಿವ್ರತ್ಯದಲ್ಲಿ ನಿರತರಾಗಿ ರುವರೆಂದು ಹೇಳಿರುವೆ. ನೀನು ಮನ್ಮಥನಾಗಿ ಅವರ ನಡತೆಯನ್ನು ಕೆಡಿಸು."

೧೮. ಶಂಕರನು ಹೇಳುತ್ತಾನೆ:—"ಪ್ರಿಯಳೆ! ನೀನು ಹೇಳಿದ ಮಾತು ನನಗೆ ರುಚಿಸುವುದಿಲ್ಲ. ಬ್ರಾಹ್ಮಣರು ಪೂಜ್ಯರು. ಅವರಿಗೆ ಅಹಿತವನ್ನಾಚರಿಸ ಬಾರದು.

೧೯. ಬ್ರಾಹ್ಮಣರು ಕೋಪವೇ ಆಯುಧವಾಗುಳ್ಳವರು. ಹರಿಯು

ನತೇ ದೇವಾ ನತೇ ಲೋಕಾ ನತೇ ನಾಗಾ ನಚಾಽಸುರಾಃ ।
ದೃಶ್ಯಂತೇ ತ್ರಿಷು ಲೋಕೇಷು ಯೇ ತೈರ್ದೃಷ್ಟೈರ್ನ ನಾಶಿತಾಃ ॥ ೨೦ ॥
ತೇಷಾಂ ಮೋಕ್ಷಸ್ತಥಾ ಸ್ವರ್ಗೋ ಭೂಮಿರ್ಮರ್ತ್ಯೇ ಫಲಾನಿ ಚ ।
ಯೇಷಾಂ ತುಷ್ಟಾ ಮಹಾಭಾಗಾ ಬ್ರಾಹ್ಮಣಾಃ ಕ್ಷಿತಿದೇವತಾಃ ॥ ೨೧ ॥
ಏವಂ ಜ್ಞಾತ್ವಾ ಮಹಾಭಾಗೇ ಅಸದ್ಗ್ರಹಂ ಪರಿತ್ಯಜ ।
ತತ್ರ ಲೋಕೇ ವಿರುದ್ಧಂ ವೈ ಕುಪ್ಯಂತೇ ಯೇನ ವೈ ದ್ವಿಜಾಃ ॥ ೨೨ ॥

ದೇವ್ಯುವಾಚ :—

ನಾಽಹಂ ತೇ ದಯಿತಾ ದೇವ ನಾಽಹಂ ತೇ ವಶವರ್ತಿನೀ ।
ಅಕೃತ್ವಾಽಥಶ್ಚ ವೈ ತಾಸಾಂ ಮಾನಂ ಸುರಸುಪೂಜಿತಂ ॥ ೨೩ ॥
ಲೋಕಾಲೋಕೇ ಮಹಾದೇವ ಅಶಕ್ಯಂ ನಾಽಸ್ತಿ ತೇ ಪ್ರಭೋ ।
ಕ್ರಿಯತಾಂ ಮಮ ಚೈವೈಕಮೇತತ್ಕಾರ್ಯಂ ಸುರೋತ್ತಮ ॥ ೨೪ ॥
ಏವಮುಕ್ತೋ ಮಹಾದೇವೋ ದೇವ್ಯಾ ವಾಕ್ಯಹಿತೇ ರತಃ ।
ಕೃತ್ವಾ ಕಾಪಾಲಿಕಂ ರೂಪಂ ಯಯೌ ದಾರುವನಂ ಪ್ರತಿ ॥ ೨೫ ॥

---

ಚಕ್ರವೇ ಆಯುಧವಾಗುಳ್ಳವನು. ಕೋಪವು ಚಕ್ರಕ್ಕಿಂತಲೂ ಕಠಿನವಾದುದು. ಆದ್ದರಿಂದ ಬ್ರಾಹ್ಮಣನನ್ನು ಕೋಪಗೊಳಿಸಬಾರದು.

೨೦. ಬ್ರಾಹ್ಮಣರ ದೃಷ್ಟಿಯಿಂದ ನಾಶವಾಗದ ದೇವತೆಗಳೂ, ಲೋಕಗಳೂ, ನಾಗರೂ, ಅಸುರರೂ ಮೂರು ಲೋಕಗಳಲ್ಲಿಯೂ ಕಾಣಿಸುವುದಿಲ್ಲ.

೨೧. ಮಹಾ ಭಾಗ್ಯವಂತರಾದ ಭೂಸುರರು ಯಾರಲ್ಲಿ ಸಂತುಷ್ಟರಾಗುವರೋ ಅವರಿಗೆ ಮೋಕ್ಷವೂ, ಸ್ವರ್ಗವೂ, ಭೂಮಿಯೂ, ಮನುಷ್ಯಲೋಕದ ಫಲಗಳೂ ಉಂಟಾಗುವುವು.

೨೨. ಮಹಾಭಾಗ್ಯವಂತಳೆ! ಇದನ್ನರಿತು ನೀನು ದುಷ್ಟವಾದ ಈ ಆಗ್ರಹವನ್ನು ತ್ಯಜಿಸು. ಬ್ರಾಹ್ಮಣರು ಕುಪಿತರಾದರೆ ಲೋಕದಲ್ಲಿ ಎಲ್ಲರೂ ವಿರುದ್ಧರಾಗುವರು.

೨೩. ದೇವಿಯು ಹೇಳುತ್ತಾಳೆ:—ನಾಥ! ಆ ಪತಿವ್ರತೆಯರ ಸುರಪೂಜ್ಯವಾದ ಮಾನವನ್ನು ನೀನು ಕೆಡಿಸದಿದ್ದರೆ ನಾನು ನಿನ್ನ ದಯಿತೆಯೂ ಅಲ್ಲ, ನಿನಗೆ ಸ್ವಾಧೀನಳೂ ಅಲ್ಲ.

೨೪. ಪ್ರಭುವೆ! ಸಕಲ ಲೋಕಗಳಲ್ಲಿ ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲ. ನನ್ನ ಇದೊಂದು ಕಾರ್ಯವನ್ನು ನೀನು ಮಾಡು.

೨೫. ದೇವಿಯು ಹೀಗೆನ್ನಲು ಮಹಾದೇವನು ಅವಳಿಗೆ ಹಿತವನ್ನುಂಟುಮಾಡಲು ಕಾಪಾಲಿಕ ವೇಷವನ್ನು ಧರಿಸಿ ದಾರುವನಕ್ಕೆ ಹೋದನು.

**ಮಹಾಹಿತಜಟಾಜೂಟಂ ನಿಯಮ್ಯ ಶಶಿಭೂಷಣಂ ।**
**ಕಂಠತ್ರಾಣಂ ಪರಂ ಕೃತ್ವಾ ಧಾರಯನ್ಕರ್ಣಕುಂಡಲೇ ॥ ೨೬ ॥**
**ವ್ಯಾಘ್ರಚರ್ಮಪರೀಧಾನೋ ಮೇಖಲಾಹಾರಭೂಷಿತಃ ।**
**ನೂಪುರಧ್ವನಿ ನಿರ್ಘೋಷೈಃ ಕಂಪಯನ್ವೈ ವಸುಂಧರಾಂ ॥ ೨೭ ॥**
**ಮಹಾನೂರ್ಧ್ವಜಟಾಮಾಲೀ ಕೃತ್ತಿಭಸ್ಮಾನುಲೇಪನಃ ।**
**ಕೃತ್ವಾ ಹಸ್ತೇ ಕಪಾಲಂ ತು ಬ್ರಹ್ಮಣಶ್ಚ ಮಹಾತ್ಮನಃ ॥ ೨೮ ॥**
**ಮಹಾಡಮರುಘೋಷೇಣ ಕಂಪಯನ್ವೈ ವಸುಂಧರಾಂ ।**
**ಪ್ರಭಾತಸಮಯೇ ಪ್ರಾಪ್ತೇ ಮಹಾದಾರುವನಂ ಪ್ರತಿ ॥ ೨೯ ॥**
**ತಾವತ್ಪುಣ್ಯಜನಃ ಸರ್ವ ಪುಷ್ಪಪತ್ರಫಲಾರ್ಥಿಕಃ ।**
**ನಿರ್ಗತೋ ಬಹುಭಿಃಸಾರ್ಧಂ ಪವಮಾನಃ ಸಮಂತತಃ ॥ ೩೦ ॥**
**ತದ್ದೃಷ್ಟ್ವಾ ಮಹದಾಶ್ಚರ್ಯಂ ರೂಪಂ ದೇವಸ್ಯ ಭಾರತ ।**
**ಯುವತೀನಾಂ ಮನಸ್ತಾಸಾಂ ಕಾಮೇನ ಕಲುಷೀಕೃತಂ ॥ ೩೧ ॥**
**ಶೋಭನಂ ಪುರುಷಂ ದೃಷ್ಟ್ವಾ ಸರ್ವಾ ಅಪಿ ವರಾಂಗನಾಃ ।**
**ಕ್ಲೇದಭಾವಂ ತತೋ ಜಗ್ಮುರ್ಮುದಾ ದಾರುವನಸ್ತ್ರಿಯಃ ॥ ೩೨ ॥**

---

೨೬–೨೯. ಅವನು ಚಂದ್ರನಿಂದಲಂಕಾರಗೊಂಡ ಜಟೆಗೆ ಸರ್ಪವನ್ನು ಬಿಗಿದವನೂ, ಕಂಠತ್ರಾಣ, ಕುಂಡಲಗಳನ್ನು ಧರಿಸಿದವನೂ, ಹುಲಿಯ ಚರ್ಮವನ್ನು ಹೊದ್ದವನೂ, ಮೇಖಲೆ ಹಾರಗಳಿಂದ ಅಲಂಕಾರಗೊಂಡವನೂ, ಕಾಲ್ಗೆಜ್ಜೆಯ ಧ್ವನಿಯಿಂದ ಭೂಮಿಯನ್ನು ನಡುಗಿಸುವವನೂ, ಊರ್ಧ್ವಜಟೆಯುಳ್ಳವನೂ, ಆನೆಚರ್ಮ ಭಸ್ಮಗಳನ್ನು ಧರಿಸಿದವನೂ, ಮಹಾತ್ಮನಾದ ಬ್ರಹ್ಮನ ಕಪಾಲವನ್ನು ಕೈಯಲ್ಲಿ ಹಿಡಿದವನೂ, ಮಹಾ ಡಮರುವಿನ ಶಬ್ದದಿಂದ ಭೂಮಿಯನ್ನು ನಡುಗಿಸುವವನೂ ಆಗಿ ಪ್ರಾತಃಕಾಲದಲ್ಲಿ ಆ ಮಹಾ ದಾರುವನಕ್ಕೆ ಬಂದನು.

೩೦. ಅಷ್ಟರಲ್ಲಿ ಪುಷ್ಪ, ಪತ್ರ, ಫಲಗಳನ್ನು ಅಪೇಕ್ಷಿಸುವ ಸಾಧ್ವೀಜನರು ಸಕಲರೂ ಅನೇಕರೊಡನೆ ಹೊರಗೆ ಹೊರಟರು. ಗಾಳಿಯು ಎಲ್ಲೆಡೆಯಲ್ಲಿಯೂ ಬೀಸುತ್ತಿದ್ದಿತು.

೩೧. ಯುಧಿಷ್ಠಿರ! ಮಹೇಶ್ವರನ ಆಶ್ಚರ್ಯಕರವಾದ ಆ ರೂಪವನ್ನು ನೋಡಿ ಆ ಯುವತಿಯರ ಮನಸ್ಸು ಕಾಮದಿಂದ ಕಾಲುಷ್ಯವನ್ನು ಹೊಂದಿತು.

೩೨. ದಾರುವನದ ಅಂಗನೆಯರೆಲ್ಲರೂ ಸುಂದರನಾದ ಆ ಮಹೇಶ್ವರನನ್ನು ಕಂಡು ಸಂತೋಷದಿಂದ ಕ್ಲಿನ್ನಯೋನಿಗಳಾದರು.

**ವಿಕಾರಾ ಬಹವಸ್ತಾಸಾಂ ದೇವಂ ದೃಷ್ಟ್ವಾ ಮಹಾದ್ಭುತಂ ।**
**ಸಂಜಾತಾ ವಿಪ್ರಪತ್ನೀನಾಂ ತದಾ ತಾಸು ನರೋತ್ತಮ ॥ ೩೩ ॥**
**ಪರಿಧಾನಂ ನ ಜಾನಂತಿ ಕಾಶ್ಚಿದ್ದೃಷ್ಟ್ವಾ ವರಾಂಗನಾಃ ।**
**ಉತ್ತರೀಯಂ ತಥಾ ಚಾನ್ಯಾ ಮಹಾಮೋಹಸಮನ್ವಿತಾ ॥ ೩೪ ॥**
**ಕೇಶಭಾರಪರಿಭ್ರಷ್ಟಾ ಕಾಚಿದೇವಾಸನೋತ್ಥಿತಾ ।**
**ದಾತುಕಾಮಾ ತದಾ ಭೈಕ್ಷ್ಯಂ ಚೇಷ್ಟಿತುಂ ನೈವ ಚಾಶಕತ್ ॥ ೩೫ ॥**
**ಕಾಚಿದ್ದೃಷ್ಟ್ವಾ ಮಹಾದೇವಂ ರೂಪಯೌವನಗರ್ವಿತಾ ।**
**ಉತ್ಸಂಗೇ ಸಂಸ್ಥಿತಂ ಬಾಲಂ ವಿಸ್ಮೃತಾ ಪಾಯಿತುಂ ಸ್ತನಂ ॥ ೩೬ ॥**
**ಕಾಮಬಾಣಹತಾ ಚಾನ್ಯಾ ಬಾಹುಭ್ಯಾಂ ಪೀಡ್ಯ ಸುಸ್ತನೌ ।**
**ನಿಃಶ್ವಸಂತೀ ತದಾ ಚೋಷ್ಣಂ ನ ಕಿಂಚಿತ್ಪ್ರತಿಜಲ್ಪತಿ ॥ ೩೭ ॥**
**ಏವಂ ಸಂಕ್ಷೋಭ್ಯ ತಂ ಸರ್ವಂ ಸ್ತ್ರೀಜನಂ ಪರಮೇಶ್ವರಃ ।**
**ಜಗಾಮ ತತ್ರ ವೈ ತಾಸಾಂ ಕ್ಷೋಭಂ ಕೃತ್ವಾ ಮಹಾದ್ಭುತಂ ॥ ೩೮ ॥**
**ತಾವತ್ತೇ ಬ್ರಾಹ್ಮಣಾಃ ಸರ್ವೇ ಭ್ರಮಿತ್ವಾ ಕಾನನಂ ಮಹತ್ ।**
**ಆಗತಾಃ ಸ್ವಗೃಹೇ ದಾರಾಂ ದದೃಶುಶ್ಚ ಹತೌಜಸಃ ॥ ೩೯ ॥**

---

೩೩. ನರೇಂದ್ರ ! ಆ ಬ್ರಾಹ್ಮಣಸ್ತ್ರೀಯರಿಗೆ ಅದ್ಭುತರೂಪನಾದ ಶಂಕರನನ್ನು ಈಕ್ಷಿಸಿ ಹೀಗೆ ಬಹಳ ವಿಕಾರಗಳುಂಟಾದುವು.

೩೪. ಕೆಲವರು ಹೆಂಗಸರು ಅವನನ್ನು ನೋಡಿ ಬಟ್ಟೆಯನ್ನೇ ಮರೆತರು. ಕೆಲವರು ಅತ್ಯಂತ ಮೋಹಗೊಂಡು ಹೊದ್ದಿಕೆಯನ್ನು ತಿಳಿಯಲಿಲ್ಲ.

೩೫. ಮತ್ತೊಬ್ಬಳು ಬಿಚ್ಚಿದ್ದ ತಲೆಗಂಟುಳ್ಳವಳಾಗಿ ಆಸನದಿಂದೆದ್ದು ಬಿಕ್ಷೆಯನ್ನು ಕೊಡಲಿಚ್ಛಿಸಿ ಚಲಿಸಲೂ ಸಮರ್ಥಳಾಗಲಿಲ್ಲ.

೩೬. ರೂಪಯೌವನಗಳಿಂದ ಗರ್ವಿತಳಾದ ಇನ್ನೊಬ್ಬಳು ಶಂಕರನನ್ನು ಕಂಡು ತೊಡೆಯಲ್ಲಿರುವ ಶಿಶುವಿಗೆ ಸ್ತನ್ಯವನ್ನು ಕೊಡಲು ಮರೆತಳು.

೩೭. ಮತ್ತೊಬ್ಬಳು ಕಾಮಬಾಣದಿಂದ ತಾಡಿತಳಾಗಿ ತೋಳುಗಳಿಂದ ಸುಂದರವಾದ ತನ್ನ ಸ್ತನಗಳನ್ನು ಒತ್ತಿಕೊಂಡು ಬಿಸಿಯಾಗಿ ಉಸಿರಾಡುತ್ತ ಏನೂ ಮಾತಾಡಲಿಲ್ಲ.

೩೮. ಪರಮೇಶ್ವರನು ಹೀಗೆ ಆ ಸ್ತ್ರೀಯರನ್ನೆಲ್ಲ ಚಪಲಚಿತ್ತರನ್ನಾಗಿ ಮಾಡಿ ಹೊರಟುಹೋದನು.

೩೯. ಅಷ್ಟರಲ್ಲಿ ಆ ಬ್ರಾಹ್ಮಣರೆಲ್ಲ ಕಾಡಿನಲ್ಲಿ ಸಂಚರಿಸಿ ತಮ್ಮ ಮನೆಗೆ ಬಂದು ನಷ್ಟ ತೇಜಸ್ಸುಳ್ಳ ಪತ್ನಿಯರನ್ನು ಕಂಡರು.

ಯಾಸಾಂ ಪೂರ್ವತರಾ ಭಕ್ತಿಃ ಪಾತಿವ್ರತ್ಯೇ ಪತೀನ್ಪ್ರತಿ ।
ಚಲಿತಾಸ್ತಾ ವಿದಿತ್ವಾಶು ನಿರ್ಜಗ್ಮುರ್ದ್ವಿಜಸತ್ತಮಾಃ ॥ ೪೦ ॥
ಸಂವಿದಂ ಪರಮಾಂ ಕೃತ್ವಾ ಜ್ಞಾತ್ವಾ ದೇವಂ ಮಹೇಶ್ವರಂ ।
ಕ್ಷೋಭಯಿತ್ವಾ ಮನಸ್ತಾಸಾಂ ತತಶ್ಚಾದರ್ಶನಂ ಗತಂ ॥ ೪೧ ॥
ಕ್ರೋಧಾವಿಷ್ಟೋ ದ್ವಿಜಃ ಕಶ್ಚಿದ್ದಂಡಮುದ್ಯಮ್ಯ ಧಾವತಿ ।
ಕಲ್ಮಾಷಯಷ್ಟಿಮನ್ಯೇ ಚ ತಥಾಽನ್ಯೇ ದರ್ಭಮುಷ್ಟಿಕಾಂ ॥ ೪೨ ॥
ಇತಶ್ಚೇತಶ್ಚ ತೇ ಸರ್ವೇ ಭ್ರಮಿತ್ವಾ ಕಾನನಂ ನೃಪ ।
ಏಕೀಭೂತ್ವಾ ಮಹಾತ್ಮಾನೋ ವ್ಯಾಜಹ್ರುಶ್ಚ ರುಷಾ ಗಿರಂ ॥ ೪೩ ॥
ಯದಿದಂ ಚ ಹುತಂ ಕಿಂಚಿದ್ಗುರವಸ್ತೋಷಿತಾ ಯದಿ ।
ತೇನ ಸತ್ಯೇನ ದೇವಸ್ಯ ಲಿಂಗಂ ಪತತು ಚೋತ್ತಮಂ ॥ ೪೪ ॥
ಆಶ್ರಮಾದಾಶ್ರಮಂ ಸರ್ವೇ ನ ತ್ಯಜಾಮೋ ವಿಧಿಕ್ರಮಾತ್ ।
ತೇನ ಸತ್ಯೇನ ದೇವಸ್ಯ ಲಿಂಗಂ ಪತತು ಭೂತಲೇ ॥ ೪೫ ॥
ಏವಂ ಸತ್ಯಪ್ರಭಾವೇನ ತ್ರಿರುಕ್ತೇನ ದ್ವಿಜನ್ಮನಾಂ ।
ಶಿವಸ್ಯ ಪಶ್ಯತೋ ಲಿಂಗಂ ಪತಿತಂ ಧರಣೀತಲೇ ॥ ೪೬ ॥

---

೪೦. ಅವರು ತಮ್ಮ ಸತಿಯರಿಗೆ ಹಿಂದಿದ್ದ ಪತಿಭಕ್ತಿಯು ನಷ್ಟವಾಗಿರುವುದನ್ನರಿತು ಮನೆಯಿಂದ ಹೊರಟರು.

೪೧. ಆ ಬ್ರಾಹ್ಮಣರು ಜ್ಞಾನದೃಷ್ಟಿಯಿಂದ ಮಹೇಶ್ವರನು ತಮ್ಮ ಪತ್ನಿಯರ ಮನಸ್ಸನ್ನು ಕೆಡಿಸಿ ಅದೃಶ್ಯನಾಗಿರುವೆನೆಂದರಿತರು.

೪೨. ಕುಪಿತನಾದ ಓರ್ವ ಬ್ರಾಹ್ಮಣನು ದೊಣ್ಣೆಯನ್ನು ಎತ್ತಿಕೊಂಡು ಓಡಿದನು. ಮತ್ತೊಬ್ಬನು ಕಲ್ಮಾಷಯಷ್ಟಿಯನ್ನು ತೆಗೆದುಕೊಂಡೂ, ಇನ್ನೊಬ್ಬನು ದರ್ಭೆಮುಷ್ಟಿಯನ್ನು ಹಿಡಿದುಕೊಂಡೂ ಓಡಿದರು.

೪೩. ಅವರು ಕಾಡಿನಲ್ಲಿ ಇಲ್ಲಿ ಅಲ್ಲಿ ಅಲೆದು ಒಟ್ಟಿಗೆ ಸೇರಿ ಕೋಪದಿಂದ ಹೀಗೆಂದರು.

೪೪. "ನಾವು ಸ್ವಲ್ಪವಾದರೂ ಹೋಮಮಾಡಿದ್ದರೆ, ಗುರುಗಳನ್ನು ಸಂತೋಷಗೊಳಿಸಿದ್ದರೆ ಆ ಸತ್ಯದಿಂದ ಶಂಕರನ ಲಿಂಗವು ನೆಲಕ್ಕೆ ಬೀಳಲಿ.

೪೫. ನಾವು ವಿಧಿಯನ್ನು ತ್ಯಜಿಸದೆ ಆಶ್ರಮದಿಂದ ಆಶ್ರಮವನ್ನು ಆಶ್ರಯಿಸದಿದ್ದರೆ ಆ ಸತ್ಯದಿಂದ ಶಂಕರನ ಲಿಂಗವು ನೆಲದಲ್ಲಿ ಬೀಳಲಿ.

೪೬. ಹೀಗೆ ಬ್ರಾಹ್ಮಣರು ಮೂರು ಸಾರಿ ಹೇಳಿದ ಸತ್ಯದ ಪ್ರಭಾವದಿಂದ ಶಿವನ ಲಿಂಗವು ಭೂಮಿಯ ಮೇಲೆ ಬಿದ್ದಿತು.

ಹಾಹಾಕಾರೋ ಮಹಾನಾಸೀಲ್ಲೋಕಾಲೋಕೇಽಪಿ ಭಾರತ ।
ದೇವಸ್ಯ ಪತಿತೇ ಲಿಂಗೇ ಜಗತಶ್ಚ ಮಹಾಕ್ಷಯೇ ॥ ೪೭ ॥
ಪತಮಾನಸ್ಯ ಲಿಂಗಸ್ಯ ಶಬ್ದೋಽಭೂಚ್ಚ ಸುದಾರುಣಃ ।
ಉಲ್ಕಾಪಾತಾ ದಿಶಾಂ ಹಾಹಾ ಭೂಮಿಕಂಪಾಶ್ಚ ದಾರುಣಾಃ ॥ ೪೮ ॥
ಪತಂತಿ ಪರ್ವತಾಗ್ರಾಣಿ ಶೋಷಂ ಯಾಂತಿ ಚ ಸಾಗರಾಃ ।
ದೇವಸ್ಯ ಪತಿತೇ ಲಿಂಗೇ ದೇವಾ ವಿಮನಸೋಽಭವನ್ ॥ ೪೯ ॥
ಸಮೇತ್ಯ ಸಹಿತಾಃ ಸರ್ವೇ ಬ್ರಹ್ಮಾಣಂ ಪರಮೇಷ್ಠಿನಂ ।
ಕೃತಾಂಜಲಿಪುಟಾಃ ಸರ್ವೇ ಸ್ತುವಂತಿ ವಿವಿಧೈಃ ಸ್ತವೈಃ ॥ ೫೦ ॥
ತತಸ್ತುಷ್ಟೋ ಮಹಾದೇವಶ್ಚತುರ್ವದನಪಂಕಜಃ ।
ಆರ್ತಾನ್ಪ್ರಾಹ ಸುರಾನ್ ಸರ್ವಾನ್ಮಾ ವಿಷಾದಂ ಗಮಿಷ್ಯಥ ॥ ೫೧ ॥
ಬ್ರಹ್ಮಶಾಪಾಽಭಿಭೂತೋಽಸೌ ದೇವದೇವಸ್ತ್ರಿಲೋಚನಃ ।
ತುಷ್ಟೈಸ್ತೈಸ್ತಪಸಾ ಯುಕ್ತೈಃ ಪುನರ್ಮೋಕ್ಷಂ ಗಮಿಷ್ಯತಿ ॥ ೫೨ ॥
ಏತಚ್ಛ್ರುತ್ವಾ ಯಯುರ್ದೇವಾ ಯಥಾಽಽಗತಮರಿಂದಮ ।
ಭಾವಯಿತ್ವಾ ತತಃ ಸರ್ವೇ ಮುನಯಶ್ಚೈವ ಭಾರತ ॥ ೫೩ ॥
ವಿಶ್ವಾಮಿತ್ರವಸಿಷ್ಠಾದ್ಯಾ ಜಾಬಾಲಿರಥ ಕಶ್ಯಪಃ ।
ಸಮೇತ್ಯ ಸಹಿತಾಃ ಸರ್ವೇ ತಮೂಚುಸ್ತ್ರಿಪುರಾಂತಕಂ ॥ ೫೪ ॥

---

೪೭. ಜಗತ್ತಿಗೆ ನಾಶವನ್ನುಂಟುಮಾಡುವ ಶಿವನ ಲಿಂಗವು ಭೂಮಿಯಲ್ಲಿ ಬೀಳಲು ಸಕಲ ಲೋಕಗಳಲ್ಲಿಯೂ ಅತ್ಯಂತ ಹಾಹಾಕಾರವುಂಟಾಯಿತು.

೪೮. ಲಿಂಗವು ಬೀಳುತ್ತಿರಲು ಭಯಂಕರ ಶಬ್ದವಾಯಿತು. ದಿಕ್ಕುಗಳಲ್ಲಿ ಉಲ್ಕಾಪಾತಗಳಾದುವು. ದಾರುಣವಾದ ಭೂಕಂಪವಾಯಿತು.

೪೯. ಪರ್ವತದ ಶಿಖರಗಳು ಉರುಳಿ ಬಿದ್ದುವು. ಸಾಗರಗಳು ಬತ್ತಿದುವು. ದೇವತೆಗಳು ವೈಮನಸ್ಯವನ್ನು ಹೊಂದಿದರು.

೫೦–೫೧. ಎಲ್ಲರೂ ಒಟ್ಟಿಗೆ ಸೇರಿ ಕೈಮುಗಿದುಕೊಂಡು ವಿವಿಧಸ್ತೋತ್ರಗಳಿಂದ ಸ್ತುತಿಸಿದರು. ಬಳಿಕ ಸಂತುಷ್ಟನಾದ ಚತುರ್ಮುಖನು ದುಃಖಗೊಂಡ ಸಕಲದೇವತೆಗಳನ್ನೂ ಕುರಿತು ಇಂತೆಂದನು. "ವ್ಯಥೆಗೊಳ್ಳಬೇಡಿರಿ.

೫೨. ಬ್ರಾಹ್ಮಣರಿಂದ ಶಾಪಗ್ರಸ್ತನಾದ ಈ ಶಿವನು ಸಂತುಷ್ಟರಾದ ಆ ತಪಸ್ವಿಗಳಿಂದ ಮರಳಿ ಶಾಪಮುಕ್ತನಾಗುವನು."

೫೩–೫೪. ಶತ್ರುನಾಶಕನಾದ ಯುಧಿಷ್ಠಿರನೆ! ದೇವತೆಗಳು ಇದನ್ನು ಕೇಳಿ ಬಂದಂತೆಯೇ ಹೊರಟುಹೋದರು. ಬಳಿಕ ವಿಶ್ವಾಮಿತ್ರ, ವಸಿಷ್ಠ, ಜಾಬಾಲಿ, ಕಶ್ಯಪ ಮೊದಲಾದ ಮುನಿಗಳು ಒಟ್ಟಿಗೆ ಸೇರಿ ಧ್ಯಾನಿಸಿ ಶಂಕರನ್ನು ಕುರಿತು ಇಂತೆಂದರು.

ಬ್ರಹ್ಮತೇಜೋ ಹಿ ಬಲವದ್ದ್ವಿಜಾನಾಂ ಹಿ ಸುರೇಶ್ವರ ।
ಕ್ಷಾಂತಿಯುಕ್ತಸ್ತಪಸ್ತಪ್ತ್ವಾ ಭವಿಷ್ಯಸಿ ಗತಕ್ಲಮಃ ॥ ೫೫ ॥
ಯತಃ ಕ್ಷೋಭಾದೃಷೀಣಾಂ ಚ ತದೇವಂ ಲಿಂಗಮುತ್ತಮಂ ।
ಪತಿತಂ ತೇ ಮಹಾದೇವ ನ ತತ್ಪೂಜ್ಯಂ ಭವಿಷ್ಯತಿ ॥ ೫೬ ॥
ನ ತಚ್ಛ್ರೇಯೋಽಗ್ನಿಹೋತ್ರೇಣ ನಾಽಗ್ನಿಷ್ಟೋಮೇನ ಲಭ್ಯತೇ ।
ಪ್ರಾಪ್ನುವಂತಿ ಚ ಯಚ್ಛ್ರೇಯೋ ಮಾನವಾ ಲಿಂಗಪೂಜನೇ ॥ ೫೭ ॥
ದೇವದಾನವಯಕ್ಷಾಣಾಂ ಗಂಧರ್ವೋರಗರಕ್ಷಸಾಂ ।
ವಚನೇನ ತು ವಿಪ್ರಾಣಾಮೇತತ್ಪೂಜ್ಯಂ ಭವಿಷ್ಯತಿ ॥ ೫೮ ॥
ಬ್ರಹ್ಮವಿಷ್ಣ್ವಿಂದ್ರಚಂದ್ರಾಣಾಮೇತತ್ಪೂಜ್ಯಂ ಭವಿಷ್ಯತಿ ।
ಯತ್ಫಲಂ ತವ ಲಿಂಗಸ್ಯ ಇಹಲೋಕೇ ಪರತ್ರ ಚ ॥ ೫೯ ॥
ಏವಮುಕ್ತೋ ಜಗನ್ನಾಥಃ ಪ್ರಣಿಪತ್ಯ ದ್ವಿಜೋತ್ತಮಾನ್ ।
ಮುದಾ ಪರಮಯಾ ಯುಕ್ತಃ ಕೃತಾಂಜಲಿರಭಾಷತ ॥ ೬೦ ॥
ಬ್ರಾಹ್ಮಣಾ ಜಂಗಮಂ ತೀರ್ಥಂ ನಿರ್ಜಲಂ ಸಾರ್ವಕಾಮಿಕಂ ।
ಯೇಷಾಂ ವಾಕ್ಯೋದಕೇನೈವ ಶುಧ್ಯಂತಿ ಮಲಿನೋ ಜನಾಃ ॥ ೬೧ ॥

---

೫೫. "ಮಹೇಶ್ವರ! ಬ್ರಾಹ್ಮಣರ ಬ್ರಹ್ಮತೇಜಸ್ಸು ಬಲಿಷ್ಠವಾದುದು. ನೀನು ಸಹನೆಯಿಂದ ತಪಸ್ಸನ್ನು ಮಾಡಿ ವ್ಯಥೆಯಿಲ್ಲದವನಾಗುವೆ.

೫೬. ಋಷಿಗಳ ಕ್ಷೋಭೆಯಿಂದ ಭೂಮಿಯಲ್ಲಿ ಬಿದ್ದ ನಿನ್ನೀ ಉತ್ತಮ ಲಿಂಗವು ಪೂಜ್ಯವಾಗುವುದಿಲ್ಲ.

೫೭. ಮಾನವನು ಲಿಂಗಪೂಜೆಯಿಂದ ಪಡೆಯುವ ಫಲವನ್ನು ಅಗ್ನಿಹೋತ್ರದಿಂದಲೂ, ಅಗ್ನಿಷ್ಟೋಮದಿಂದಲೂ ಹೊಂದುವುದಿಲ್ಲ.

೫೮. ಬ್ರಾಹ್ಮಣರ ಮಾತಿನಿಂದ ಈ ಲಿಂಗವು ದೇವ, ದಾನವ, ಯಕ್ಷ, ಗಂಧರ್ವ, ನಾಗ, ರಾಕ್ಷಸರಿಗೆ ಪೂಜ್ಯವಾಗುವುದು.

೫೯. ಮತ್ತು ಬ್ರಹ್ಮ, ವಿಷ್ಣು, ಇಂದ್ರ, ಚಂದ್ರರಿಗೂ ಪೂಜ್ಯವಾಗುವುದು. ಈ ನಿನ್ನ ಲಿಂಗಪೂಜೆಯಿಂದ ಇಹಲೋಕಗಳಲ್ಲಿ ಉತ್ತಮ ಫಲವು ಲಭಿಸುವುದು."

೬೦. ದ್ವಿಜೋತ್ತಮರು ಹೀಗೆ ಹೇಳಲು ಜಗನ್ನಾಥನಾದ ಶಂಕರನು ಅವರನ್ನು ವಂದಿಸಿ ಅತಿಸಂತೋಷದಿಂದ ಕೈಮುಗಿದುಕೊಂಡು ಹೀಗೆಂದನು.

೬೧. "ಬ್ರಾಹ್ಮಣರು ನೀರಿಲ್ಲದ ಸಕಲೇಷ್ಟಾರ್ಥಗಳನ್ನು ಕೊಡುವ ಸಂಚರಿಸುವ ತೀರ್ಥಗಳಾಗಿರುವರು. ಇವರ ಮಾತೆಂಬ ಜಲದಿಂದಲೇ ಮಲಿನರಾದ ಜನರು ಶುದ್ಧರಾಗುವರು.

ನ ತತ್ಕ್ಷೇತ್ರಂ ನ ತತ್ತೀರ್ಥಮೂಷರಂ ಪುಷ್ಕರಾಣಿ ಚ ।
ಬ್ರಾಹ್ಮಣೇ ಮನ್ಯುಮುತ್ಪಾದ್ಯ ಯತ್ರ ಗತ್ವಾ ಸ ಶುದ್ಧ್ಯತಿ ॥ ೬೨ ॥
ನ ತಚ್ಛಾಸ್ತ್ರಂ ಯನ್ನ ವಿಪ್ರಪ್ರಣೀತಂ
ನ ತದ್ದಾನಂ ಯನ್ನ ವಿಪ್ರಪ್ರದೇಯಂ ।
ನ ತತ್ಸೌಖ್ಯಂ ಯನ್ನ ವಿಪ್ರ ಪ್ರಸಾದಾ
ನ್ನ ತದ್ದುಃಖಂ ಯನ್ನ ವಿಪ್ರಪ್ರಕೋಪಾತ್ ॥ ೬೩ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ಏಕಸ್ಯ ವಿಪ್ರವಾಕ್ಯಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೬೪ ॥
ಅಭಿನಂದ್ಯ ದ್ವಿಜಾನ್ ಸರ್ವಾನನುಜ್ಞಾತೋ ಮಹರ್ಷಿಭಿಃ ।
ತತೋಽಗಮತ್ತದಾ ದೇವೋ ನರ್ಮದಾತಟಮುತ್ತಮಂ ॥ ೬೫ ॥
ಪರಮಂ ವ್ರತಮಾಸ್ಥಾಯ ಗುಹಾವಾಸೀ ಸಮಾರ್ಬುದಂ ।
ತಪಶ್ಚಚಾರ ಭಗವಾಂಜಪಸ್ನಾನರತಃ ಸದಾ ॥ ೬೬ ॥
ಸಮಾಪ್ತೇ ನಿಯಮೇ ತಾತ ಸ್ಥಾಪಯಿತ್ವಾ ಮಹೇಶ್ವರಂ ।
ವಂದ್ಯಮಾನಃ ಸುರೈಃ ಸಾರ್ಧಂ ಕೈಲಾಸಮಗಮತ್ಪ್ರಭುಃ ॥ ೬೭ ॥
ನರ್ಮದಾಯಾಸ್ತಟೇ ತೇನ ಸ್ಥಾಪಿತಃ ಪರಮೇಶ್ವರಃ ।
ತೇನೈವ ಕಾರಣೇನಾಽಸೌ ನರ್ಮದೇಶ್ವರ ಉಚ್ಯತೇ ॥ ೬೮ ॥

---

೬೨. ಬ್ರಾಹ್ಮಣರಿಗೆ ಕೋಪವನ್ನುಂಟುಮಾಡಿ ಶುದ್ಧರಾಗಲು ಯಾವ ತೀರ್ಥ, ಕ್ಷೇತ್ರ, ಊಷರ, ಪುಷ್ಕರಗಳೂ ಇರುವುದಿಲ್ಲ.

೬೩. ಬ್ರಾಹ್ಮಣರು ರಚಿಸದಿರುವ ಶಾಸ್ತ್ರವೂ, ಬ್ರಾಹ್ಮಣರಿಗೆ ಕೊಡಲನರ್ಹವಾದ ದಾನವೂ, ಅವರ ಅನುಗ್ರಹವಿಲ್ಲದ ಸೌಖ್ಯವೂ, ಅವರ ಕೋಪವಿಲ್ಲದ ದುಃಖವೂ ಇಲ್ಲ.

೬೪. ಭೂಮಿಯಲ್ಲಿರುವ ತೀರ್ಥಗಳೂ, ಗಂಗಾದಿ ನದಿಗಳೂ, ಬ್ರಾಹ್ಮಣನ ಒಂದು ಮಾತಿನ ಹದಿನಾರನೆಯ ಒಂದು ಕಲೆಗೂ ಸಮಾನವಾಗಿಲ್ಲ.''

೬೫–೬೬. ಆಗ ಮಹೇಶ್ವರನು ಸಕಲ ಬ್ರಾಹ್ಮಣರನ್ನೂ ಸಂತೋಷಗೊಳಿಸಿ ಮಹರ್ಷಿಗಳ ಅನುಮತಿಯನ್ನು ಪಡೆದು ಉತ್ತಮವಾದ ನರ್ಮದಾನದಿಯ ದಡಕ್ಕೆ ಹೋದನು. ಅಲ್ಲಿ ಅವನು ಅರ್ಬುದಸಂಖ್ಯೆಯ ಸಂವತ್ಸರಗಳಕಾಲ ವ್ರತವನ್ನಾಚರಿಸುತ್ತ ಜಪಸ್ನಾನನಿರತನಾಗಿ ಗುಹೆಯಲ್ಲಿ ತಪಸನ್ನು ಮಾಡಿದನು.

೬೭. ನಿಯಮವು ಮುಗಿಯಲು ಈಶ್ವರನನ್ನು ಪ್ರತಿಷ್ಠೆಮಾಡಿ ದೇವತೆಗಳಿಂದ ವಂದಿತನಾಗಿ ಅವರೊಡನೆ ಕೈಲಾಸಕ್ಕೆ ಹೋದನು.

೬೮. ಆ ಪರಮೇಶ್ವರನು ನರ್ಮದಾತಟದಲ್ಲಿ ಈಶ್ವರನನ್ನು ಪ್ರತಿಷ್ಠೆ ಮಾಡಿರುವುದರಿಂದ ನರ್ಮದೇಶ್ವರನೆಂದು ಪ್ರಸಿದ್ಧನಾಗಿರುವನು.

ಯೋಽರ್ಚಯೇನ್ನರ್ಮದೇಶಾನಂ ಯತಿರ್ವೈ ಸಜಿತೇಂದ್ರಿಯಃ ।
ಸ್ನಾತ್ವಾ ಚೈವ ಮಹಾದೇವಮಶ್ವಮೇಧಫಲಂ ಲಭೇತ್ ॥ ೧೯ ॥
ದದಾತಿ ಯಃ ಪಿತೃಭ್ಯಸ್ತು ತಿಲಪುಷ್ಪಕುಶೋದಕಂ ।
ತ್ರಿಃಸಪ್ತಪೂರ್ವಜಾಸ್ತಸ್ಯ ಸ್ವರ್ಗೇ ಮೋದಂತಿ ಪಾಂಡವ ॥ ೨೦ ॥
ಯಸ್ತು ಭೋಜಯತೇ ವಿಪ್ರಾಂಸ್ತಸ್ಮಿಂಸ್ತೀರ್ಥೇ ನರಾಧಿಪ ।
ಪಾಯಸಂ ಘೃತಮಿಶ್ರಂ ತು ಸ ಲಭೇತ್ಕೋಟಿಜಂ ಫಲಂ ॥ ೨೧ ॥
ಸುವರ್ಣಂ ರಜತಂ ವಾಽಪಿ ಬ್ರಾಹ್ಮಣೇಭ್ಯೋ ಯುಧಿಷ್ಠಿರ ।
ದದಾತಿ ತೋಯಮಧ್ಯಸ್ಥಃ ಸೋಽಗ್ನಿಷ್ಟೋಮಫಲಂ ಲಭೇತ್ ॥ ೨೨ ॥
ಅಷ್ಟಮ್ಯಾಂ ವಾ ಚತುರ್ದಶ್ಯಾಂ ನಿರಾಹಾರೋ ವಸೇತ್ತುಯಃ ।
ನರ್ಮದೇಶ್ವರಮಾಸಾದ್ಯ ಪ್ರಾಪ್ನುಯಾಜ್ಜನ್ಮನಃ ಫಲಂ ॥ ೨೩ ॥
ಅಗ್ನಿಪ್ರವೇಶಂ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ತಸ್ಯ ವ್ಯಾಧಿಭಯಂ ನಸ್ಯಾತ್ಸಪ್ತಜನ್ಮಸು ಭಾರತ ॥ ೨೪ ॥
ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕೇ ಭವಿಷ್ಯತಿ ॥ ೨೫ ॥

---

೧೯. ಯತಿಯು ಜಿತೇಂದ್ರಿಯನಾಗಿ ಇಲ್ಲಿ ಮಿಂದು ನರ್ಮದೇಶ್ವರನನ್ನು ಪೂಜಿಸಿದರೆ ಅಶ್ವಮೇಧಯಾಗದ ಫಲವನ್ನು ಪಡೆಯುವನು.

೨೦. ಯುಧಿಷ್ಠಿರ! ಅಲ್ಲಿ ಪಿತೃಗಳಿಗೆ ಎಳ್ಳು, ಪುಷ್ಪ, ದರ್ಭೋದಕಗಳನ್ನು ಅರ್ಪಿಸುವವನ ಇಪ್ಪತ್ತೊಂದು ಮಂದಿ ಪಿತೃಗಳು ಸ್ವರ್ಗದಲ್ಲಿ ಆನಂದಪಡುವರು.

೨೧. ಆ ತೀರ್ಥದಲ್ಲಿ ಬ್ರಾಹ್ಮಣರಿಗೆ ಘೃತಮಿಶ್ರವಾದ ಪಾಯಸ ಮೊದಲಾದುವುಗಳಿಂದ ಭೋಜನಮಾಡಿಸಿದವನು ಕೋಟಿ ಫಲವನ್ನು ಹೊಂದುವನು.

೨೨. ಜಲದಲ್ಲಿ ನಿಂತು ಬ್ರಾಹ್ಮಣರಿಗೆ ಚಿನ್ನ ಅಥವಾ ಬೆಳ್ಳಿಯನ್ನು ದಾನ ಮಾಡುವವನು ಅಗ್ನಿಷ್ಟೋಮಯಾಗದ ಫಲವನ್ನು ಪಡೆಯುವನು.

೨೩. ನರ್ಮದೇಶ್ವರನ ಹತ್ತಿರ ಅಷ್ಟಮೀ ಅಥವಾ ಚತುರ್ದಶೀದಿನ ನಿರಾಹಾರವಾಗಿ ವಾಸಮಾಡುವವನು ಜನ್ಮಸಾಫಲ್ಯವನ್ನು ಹೊಂದುವನು.

೨೪. ಆ ತೀರ್ಥದಲ್ಲಿ ಅಗ್ನಿಪ್ರವೇಶಮಾಡಿದವನಿಗೆ ಏಳು ಜನ್ಮಗಳಲ್ಲಿ ರೋಗಭಯವಿರುವುದಿಲ್ಲ.

೨೫. ಅನಾಶಕವ್ರತವನ್ನಾಚರಿಸಿದವನಿಗೆ ರುದ್ರಲೋಕದಲ್ಲಿ ಪುನರಾವೃತ್ತಿ ಯಿಲ್ಲದ ಗತಿಯುಂಟಾಗುವುದು.

ಏಷತೇ ವಿಧಿರುದ್ದಿಷ್ಟಸ್ತಸ್ಯೋತ್ಪತ್ತಿರ್ನರೋತ್ತಮ ।
ಪುರಾಣೇ ವಿಹಿತಾ ತಾತ ಸಂಜ್ಞಾ ತಸ್ಯ ತು ವಿಸ್ತರಾತ್ ॥ ೭೬ ॥
ಏತಂ ಕೀರ್ತಯತೇ ಯಸ್ತು ನರ್ಮದೇಶ್ವರಸಂಭವಂ ।
ಭಕ್ತ್ಯಾ ಶೃಣೋತಿ ಚ ನರಃ ಸೋಽಪಿ ಸ್ನಾನಫಲಂ ಲಭೇತ್ ॥ ೭೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮಾಷ್ಟತ್ರಿಂಶೋಽಧ್ಯಾಯಃ

---

೭೬. ಅರಸ! ನಿನಗೆ ನರ್ಮದೇಶ್ವರನ ಉತ್ಪತ್ತಿಯರೀತಿಯನ್ನೂ, ಪುರಾಣಸಹಿತವಾದ ಸಂಜ್ಞೆಯನ್ನೂ ವಿಸ್ತಾರವಾಗಿ ಹೇಳಿರುವೆನು.

೭೭. ಈ ನರ್ಮದೇಶ್ವರನ ಉತ್ಪತ್ತಿಯನ್ನು ಹೇಳುವವನೂ, ಭಕ್ತಿಯಿಂದ ಕೇಳುವವನೂ ಅಲ್ಲಿ ಸ್ನಾನಮಾಡಿದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ನರ್ಮದೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

# ಅಷ್ಟೈಕೋನಚತ್ವಾರಿಂಶೋಽಧ್ಯಾಯಃ

## ಕಪಿಲಾತೀರ್ಥಮಾಹಾತ್ಮ್ಯವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ತತೋ ಗಚ್ಛೇಚ್ಚ ರಾಜೇಂದ್ರ ಕಪಿಲಾತೀರ್ಥಮುತ್ತಮಂ ।**
**ಸ್ನಾನಮಾತ್ರಾನ್ನರೋ ಭಕ್ತ್ಯಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೧ ॥**

**ಯುಧಿಷ್ಠಿರ ಉವಾಚ :—**

**ಆಶ್ಚರ್ಯಭೂತಂ ಲೋಕೇಷು ಕಥಿತಂ ದ್ವಿಜಸತ್ತಮ ।**
**ನರ್ಮದೇಶ್ವರಮಾಹಾತ್ಮ್ಯಂ ಕಾಪಿಲಂ ಕಥಯಸ್ವ ಮೇ ॥ ೨ ॥**
**ಯಸ್ಮಿನ್ಕಾಲೇಽಥ ಸಂಬಂಧೇ ಉತ್ಪನ್ನಂ ತೀರ್ಥಮುತ್ತಮಂ ।**
**ಸರ್ವಪಾಪಹರಂ ಪುಣ್ಯಂ ತೀರ್ಥಂ ಜಾತಂ ಕಥಂ ಪ್ರಭೋ ॥ ೩ ॥**

**ಮಾರ್ಕಂಡೇಯ ಉವಾಚ :—**

**ಶೃಣು ವಕ್ಷ್ಯೇಽದ್ಯ ತೇ ರಾಜನ್ಕಪಿಲಾತೀರ್ಥಮುತ್ತಮಂ ।**
**ಯೇನ ತೇ ವಿಸ್ಮಯಃ ಸರ್ವಃ ಶ್ರುತ್ವಾ ಗಚ್ಛತಿ ಭಾರತ ॥ ೪ ॥**
**ಪುರಾ ಕೃತಯುಗಸ್ಯಾದೌ ಬ್ರಹ್ಮಾ ಲೋಕಪಿತಾಮಹಃ ।**
**ಉತ್ಪಾದಯಿತ್ವಾ ಸಕಲಂ ಭೂತಗ್ರಾಮಂ ಚತುರ್ವಿಧಂ ॥ ೫ ॥**

---

## ಕನ್ನಡದ ಅನುವಾದ

### ಕಪಿಲಾತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ರಾಜೇಂದ್ರ! ಬಳಿಕ ಉತ್ತಮವಾದ ಕಪಿಲಾತೀರ್ಥಕ್ಕೆ ಹೋಗಬೇಕು. ನರನು ಅಲ್ಲಿ ಭಕ್ತಿಯಿಂದ ಸ್ನಾನಮಾಡುವುದರಿಂದಲೇ ಸಮಸ್ತಪಾಪಗಳಿಂದ ಮುಕ್ತನಾಗುವನು.

೨. ಯುಧಿಷ್ಠಿರನು ಹೇಳುತ್ತಾನೆ:—ದ್ವಿಜವರ್ಯನೆ! ಲೋಕದಲ್ಲಿ ಆಶ್ಚರ್ಯವನ್ನುಂಟುಮಾಡುವ ನರ್ಮದೇಶ್ವರನ ಮಾಹಾತ್ಮ್ಯವನ್ನು ಹೇಳಿರುವೆ. ಈಗ ಕಪಿಲಾತೀರ್ಥದ ಮಾಹಾತ್ಮ್ಯವನ್ನು ಹೇಳು.

೩. ಪುಣ್ಯಕರವೂ, ಸಕಲ ಪಾಪಗಳನ್ನು ನೀಗಿಸುವುದೂ ಆದ ಆ ಕಪಿಲಾ ತೀರ್ಥವು ಯಾವಾಗ ಹೇಗುಂಟಾಯಿತು?

೪. ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ಈಗ ನಿನಗೆ ಉತ್ತಮವಾದ ಕಪಿಲಾತೀರ್ಥದ ವಿಷಯವನ್ನು ಹೇಳುವೆನು. ಅದರಿಂದ ನಿನ್ನ ಆಶ್ಚರ್ಯವೆಲ್ಲ ನೀಗುವುದು.

೫–೬. ಹಿಂದೆ ಕೃತಯುಗದ ಆದಿಯಲ್ಲಿ ಚತುರ್ಮುಖ ಬ್ರಹ್ಮನು ನಾಲ್ಕು ವಿಧವಾದ ಪ್ರಾಣಿಗಳ ಸಮಸ್ತ ಸಮೂಹವನ್ನು ಸೃಜಿಸಿ ಜಪ ಹೋಮ ನಿರತ

ಜಪಹೋಮಪರೋ ಭಕ್ತ್ಯಾ ಕ್ಷಣಂ ಧ್ಯಾತ್ವಾ ಚ ತಿಷ್ಠತಿ ।
ಜ್ವಲಮಾನಾತ್ತು ಕಪಿಲಾ ತಾವತ್ಕುಂಡಾತ್ಸಮುತ್ಥಿತಾ ॥ ೬ ॥
ಅಗ್ನಿಜ್ವಾಲೋಜ್ಜ್ವಲೈಃ ಶೃಂಗೈಸ್ತ್ರಿನೇತ್ರಾ ಸುಪಯಸ್ವಿನೀ ।
ಅಗ್ನಿಪೂರ್ಣಾಹ್ಯಗ್ನಿಮುಖಾ ಅಗ್ನಿಘ್ರಾಣಾಗ್ನಿಲೋಚನಾ ॥ ೭ ॥
ಅಗ್ನಿಖುರಾಹ್ಯಗ್ನಿಪೃಷ್ಠಾ ಹ್ಯಗ್ನಿಸರ್ವಾಂಗಸಂಸ್ಥಿತಾ ।
ಸರ್ವಲಕ್ಷಣಸಂಪೂರ್ಣಾ ಘಂಟಾಲಲಿತನಿಃಸ್ವನಾ ॥ ೮ ॥
ದೃಷ್ಟ್ವಾ ತು ತಾಂ ಮಹಾಭಾಗಾಂ ಕಪಿಲಾಂ ಕುಂಡಮಧ್ಯಗಾಂ ।
ಬ್ರಹ್ಮಾಲೋಕಗುರುಸ್ತಾತ ಪ್ರಣಮ್ಯೇದಮುವಾಚ ಹ ॥ ೯ ॥
ನಮಸ್ತೇ ಕಪಿಲೇ ಪುಣ್ಯೇ ಸರ್ವಲೋಕನಮಸ್ಕೃತೇ ।
ಮಾಂಗಲ್ಯಂ ಮಂಗಲಂ ದೇವಿ ತ್ರಿಷು ಲೋಕೇಷ್ವನೂಪಮೇ ॥ ೧೦ ॥
ತ್ವಂ ಲಕ್ಷ್ಮೀಸ್ತ್ವಂ ಸ್ಮೃತಿರ್ಮೇಧಾ ತ್ವಂ ಧೃತಿ ಸ್ತ್ವಂ ವರಾನನೇ ।
ಉಮಾದೇವೀತಿ ವಿಖ್ಯಾತಾ ತ್ವಂ ಸತೀ ನಾಽತ್ರ ಸಂಶಯಃ ॥ ೧೧ ॥
ವೈಷ್ಣವೀ ತ್ವಂ ಮಹಾದೇವೀ ಬ್ರಹ್ಮಾಣೀ ತ್ವಂ ವರಾನನೇ ।
ಕುಮಾರೀ ತ್ವಂ ಮಹಾಭಾಗೇ ಭಕ್ತಿಃ ಶ್ರದ್ಧಾ ತಥೈವ ಚ ॥ ೧೨ ॥
ಕಾಲರಾತ್ರಿಸ್ತು ಭೂತಾನಾಂ ಕುಮಾರೀ ಪರಮೇಶ್ವರೀ ।
ತ್ವಂ ಲವಸ್ತ್ವಂ ತ್ರುಟಿಶ್ಚೈವ ಮುಹೂರ್ತಂ ಲಕ್ಷ್ಮಮೇವ ಚ ॥ ೧೩ ॥

---

ನಾಗಿ ಕ್ಷಣಕಾಲ ಭಕ್ತಿಯಿಂದ ಧ್ಯಾನಿಸುತ್ತಿರಲು ಉರಿಯುತ್ತಿರುವ ಅಗ್ನಿಕುಂಡದಿಂದ ಕಪಿಲಾಗೋವು ಮೇಲಕ್ಕೆದ್ದಿತು.

೭–೯. ಅಗ್ನಿಜ್ವಾಲೆಯಿಂದ ಉಜ್ಜ್ವಲವಾದ ಕೊಂಬುಗಳಿಂದ ಕೂಡಿರುವುದೂ, ಮೂರು ಕಣ್ಣುಗಳುಳ್ಳುದೂ, ಹಾಲನ್ನು ಕರೆಯುವುದೂ, ಅಗ್ನಿಯೇ ಮುಖ, ಮೂಗು, ಕಣ್ಣು, ಗೊರಸು, ಬೆನ್ನು ಇವುಗಳುಳ್ಳುದೂ, ಸಕಲಾವಯವಗಳೂ ಅಗ್ನಿಯಾಗಿರುವುದೂ, ಸಮಸ್ತ ಲಕ್ಷಣಗಳಿಂದ ತುಂಬಿರುವುದೂ, ಘಂಟೆಯಿಂದ ಮನೋಹರವಾದ ಧ್ವನಿಯುಳ್ಳುದೂ ಆಗಿ ಕುಂಡದ ನಡುವೆ ಇರುವ ಆ ಕಪಿಲೆಯನ್ನು ನೋಡಿ ಬ್ರಹ್ಮನು ನಮಸ್ಕರಿಸಿ ಹೀಗೆಂದನು.

೧೦. "ಪುಣ್ಯಕರಳೂ, ಸಮಸ್ತಲೋಕವಂದಿತಳೂ, ಮಂಗಳಕರಳೂ, ಮೂರು ಲೋಕಗಳಲ್ಲಿ ಉತ್ತಮಳೂ ಆದ ಕಪಿಲೆಯೆ! ನಿನಗೆ ನಮಸ್ಕಾರವು.

೧೧. ನೀನು ಲಕ್ಷ್ಮಿಯೂ, ಸ್ಮೃತಿಯೂ, ಮೇಧೆಯೂ, ಧೃತಿಯೂ, ಉಮಾದೇವಿಯೂ, ಸತಿಯೂ ಆಗಿರುವೆ.

೧೨–೧೩. ಮಹಾಭಾಗ್ಯವಂತಳೆ! ವೈಷ್ಣವಿಯೂ, ಮಹಾದೇವಿಯೂ, ಸರಸ್ವತಿಯೂ, ಕುಮಾರಿಯೂ, ಭಕ್ತಿಯೂ, ಶ್ರದ್ಧೆಯೂ, ಭೂತಗಳಿಗೆ ಪ್ರಳಯಕಾಲದ ರಾತ್ರಿಯೂ, ಪರಮೇಶ್ವರಿಯೂ, ಕುಮಾರಿಯೂ, ಲವ, ತ್ರುಟಿ,

ಸಂವತ್ಸರಸ್ತ್ವಂ ಮಾಸಸ್ತ್ವಂ ಕಾಲಸ್ತ್ವಂ ಚ ಕ್ಷಣಸ್ತಥಾ ।
ನಾಽಸ್ತಿ ಕಿಂಚಿತ್ತ್ವಯಾ ಹೀನಂ ತ್ರೈಲೋಕ್ಯೇ ಸಚರಾಚರೇ ॥ ೧೪ ॥
ಏವಂ ಸ್ತುತಾತು ಮಾನೇನ ಕಪಿಲಾ ಪರಮೇಷ್ಠಿನಾ ।
ತಮುವಾಚ ಮಹಾಭಾಗಂ ಪ್ರಹೃಷ್ಯ ಪದ್ಮಸಂಭವಂ ॥ ೧೫ ॥
ಪ್ರಸನ್ನಾ ತವ ವಾಕ್ಯೇನ ದೇವದೇವ ಜಗದ್ಗುರೋ ।
ಕಿಂಕರೋಮಿ ಪ್ರಿಯಂ ತೇಹಿ ಬ್ರೂಹಿ ಸರ್ವಂ ಪಿತಾಮಹ ॥ ೧೬ ॥

ಬ್ರಹ್ಮೋವಾಚ :—

ಜಗದ್ಧಿತಾಯ ಜನಿತಾ ಮಯಾ ತ್ವಂ ಪರಮೇಶ್ವರಿ ।
ಸ್ವರ್ಗಾನ್ಮರ್ತ್ಯಂ ತತೋ ಯಾಹಿ ಲೋಕಾನಾಂ ಹಿತಕಾಮ್ಯಯಾ ॥ ೧೭ ॥
ಸರ್ವದೇವಮಯೀ ತ್ವಂ ತು ಸರ್ವಲೋಕಮಯೀ ತಥಾ ।
ವಿಧಿನಾ ಯೇ ಪ್ರದಾಸ್ಯಂತಿ ತೇಷಾಂ ವಾಸಸ್ತ್ರಿವಿಷ್ಟಪೇ ॥ ೧೮ ॥
ಏವಮುಕ್ತ್ವಾ ತತೋ ದೇವಂ ಬ್ರಹ್ಮಾಣಂ ಪರಮೇಶ್ವರೀ ।
ವಂದ್ಯಮಾನಾ ಸುರೈಃ ಸಿದ್ಧೈರಾಜಗಾಮ ಧರಾತಲಂ ॥ ೧೯ ॥

ಯುಧಿಷ್ಠಿರ ಉವಾಚ :—

ಯದಾಯಾತೇಹ ಸಾತಾತ ಬ್ರಹ್ಮಣೋ ವಚನಾಚ್ಛುಭಾ ।
ತದಾ ದೇವಾಶ್ಚ ಲೋಕಾಶ್ಚ ಕಥಮಂಗೇಷು ಸಂಸ್ಥಿತಾಃ ॥ ೨೦ ॥

---

ಮುಹೂರ್ತ, ಸಂವತ್ಸರ, ಮಾಸ, ಕಾಲ, ಕ್ಷಣಗಳೂ ನೀನೆ ಆಗಿರುವೆ. ಚರಾಚರಾತ್ಮಕವಾದ ತ್ರಿಭುವನದಲ್ಲಿ ನೀನಿಲ್ಲದಿರುವುದು ಯಾವುದೂ ಇಲ್ಲ.''

೧೫. ಪರಮೇಷ್ಠಿಯು ಹೀಗೆ ಕಪಿಲೆಯನ್ನು ಸ್ತುತಿಸಲು ಅವಳು ಸಂತೋಷಗೊಂಡು ಅವನನ್ನು ಕುರಿತು ಹೀಗೆಂದಳು.

೧೬. '' ಪಿತಾಮಹ! ನಿನ್ನ ವಾಕ್ಯದಿಂದ ನಾನು ಪ್ರಸನ್ನಳಾಗಿರುವೆನು. ಈಗ ನಿನಗೆ ಹಿತವಾದ ಯಾವಕಾರ್ಯವನ್ನು ಮಾಡಲಿ.''

೧೭–೧೮. ಬ್ರಹ್ಮನು ಹೇಳುತ್ತಾನೆ:–ಪರಮೇಶ್ವರಿ! ನಾನು ನಿನ್ನನ್ನು ಜಗತ್ತಿನ ಹಿತಕ್ಕಾಗಿ ಸೃಜಿಸಿರುವೆನು. ಆದ್ದರಿಂದ ನೀನು ಜನರಹಿತವಾದ ಸ್ವರ್ಗದಿಂದ ಭೂಲೋಕಕ್ಕೆ ಹೋಗು. ಸಕಲ ದೇವಮಯಿಯೂ, ಸಕಲ ಲೋಕರೂಪಳೂ ಆದ ನಿನ್ನನ್ನು ವಿಧಿಯಿಂದ ದಾನಮಾಡುವವರು ಸ್ವರ್ಗದಲ್ಲಿ ವಾಸಿಸುವರು.

೧೯. ಬಳಿಕ ಪರಮೇಶ್ವರಿಯು ಬ್ರಹ್ಮನನ್ನು ಕುರಿತು ಹಾಗೆಯೇ ಆಗಲೆಂದು ಹೇಳಿ ದೇವತೆಗಳಿಂದ ನಮಸ್ಕರಿಸಲ್ಪಡುತ್ತ ಸುರಸಿದ್ಧರೊಡನೆ ಭೂಮಿಗೆ ಬಂದಳು.

೨೦. ಯುಧಿಷ್ಠಿರನು ಹೇಳುತ್ತಾನೆ:—ಪಾಪ! ಆ ಕಪಿಲೆಯು ಬ್ರಹ್ಮನ ಮಾತಿನಿಂದ ಭೂಮಿಗೆ ಬಂದಾಗ ದೇವತೆಗಳೂ, ಲೋಕಗಳೂ ಅವಳ ಅವಯವಗಳಲ್ಲಿ ಹೇಗಿದ್ದುವು?

ಕಥಂ ವಾಸಂ ಸ್ಥಿತಾಗತ್ಯ ಕಪಿಲಾ ಸಾ ದ್ವಿಜೋತ್ತಮ ।
ತೀರ್ಥೇ ವಾಹ್ಯೂಷರೇ ಕ್ಷೇತ್ರ ಏತನ್ಮೇ ಕಥಯ ದ್ವಿಜ ॥ ೨೧ ॥

ಮಾರ್ಕಂಡೇಯ ಉವಾಚ :—

ಸಾ ತದಾ ಬ್ರಹ್ಮಣಾ ಚೋಕ್ತಾ ಧಾತ್ರಾ ಲೋಕಸ್ಯ ಭಾರತ ।
ಬ್ರಹ್ಮಲೋಕಾದ್ಗತಾ ಪುಣ್ಯಾಂ ನರ್ಮದಾಂ ಲೋಕಪಾವನೀಂ ॥ ೨೨ ॥
ತಪಃ ಕೃತ್ವಾ ಸುವಿಪುಲಂ ನರ್ಮದಾತಟಮಾಶ್ರಿತಾ ।
ಚಚಾರ ಪೃಥಿವೀಂ ಸರ್ವಾಂ ಸಶೈಲವನಕಾನನಾಂ ॥ ೨೩ ॥
ತದಾಪ್ರಭೃತಿ ರಾಜೇಂದ್ರ ಕಪಿಲಾತೀರ್ಥಮುತ್ತಮಂ ।
ಸರ್ವಪಾಪಹರಂ ಖ್ಯಾತಮೃಷಿಸಂಘೈರ್ನಿಷೇವಿತಂ ॥ ೨೪ ॥
ತತ್ತೀರ್ಥೇ ವಿಧಿವತ್ ಸ್ನಾತ್ವಾ ಕಪಿಲಾಂ ಯಃ ಪ್ರಯಚ್ಛತಿ ।
ಪೃಥ್ವೀ ತೇನ ಭವೇದ್ದತ್ತಾ ಸಶೈಲವನಕಾನನಾ ॥ ೨೫ ॥
ತಾಂ ತು ಪಶ್ಯತಿ ಯೋ ಭಕ್ತ್ಯಾ ದೀಯಮಾನಾಂ ದ್ವಿಜೋತ್ತಮೇ ।
ತಸ್ಯ ವರ್ಷಶತಂ ಪಾಪಂ ನಶ್ಯತೇ ನಾಽತ್ರ ಸಂಶಯಃ ॥ ೨೬ ॥

---

೨೧. ಅವಳು ಇಲ್ಲಿಗೆ ಬಂದು ತೀರ್ಥದಲ್ಲಾಗಲಿ, ಊಷರ ಕ್ಷೇತ್ರದಲ್ಲಾಗಲಿ ಹೇಗೆ ನೆಲಸಿದಳು? ಇದನ್ನು ನನಗೆ ಹೇಳು.

೨೨. ಮಾರ್ಕಂಡೇಯನು ಹೇಳುತ್ತಾನೆ:—ಆ ಕಪಿಲೆಯು ಲೋಕಸೃಷ್ಟಿ ವಿಧಾಯಕನಾದ ಬ್ರಹ್ಮನ ಮಾತಿನಂತೆ ಬ್ರಹ್ಮಲೋಕದಿಂದ ಪುಣ್ಯಕರವೂ, ಲೋಕಪಾವನವೂ ಆದ ನರ್ಮದಾನದಿಗೆ ಹೋದಳು.

೨೩. ಅವಳು ನರ್ಮದಾನದಿಯ ದಡವನ್ನಾಶ್ರಯಿಸಿ ಬಹಳ ತಪವನ್ನಾಚರಿಸಿ ಪರ್ವತ, ವನಗಳಿಂದ ಕೂಡಿರುವ ಸಮಗ್ರ ಭೂಮಿಯಲ್ಲಿಯೂ ಸಂಚರಿಸಿದಳು.

೨೪. ದೊರೆಯೆ! ಅದು ಮೊದಲ್ಗೊಂಡು ಉತ್ತಮವೂ, ಸಕಲ ಪಾಪಗಳನ್ನು ಪರಿಹರಿಸುವುದೂ, ಮುನಿಗಳ ಸಮೂಹಗಳಿಂದ ಸೇವಿಸಲ್ಪಟ್ಟುದೂ ಆದ ಕಪಿಲಾತೀರ್ಥವು ಪ್ರಸಿದ್ಧವಾಯಿತು.

೨೫. ಆ ತೀರ್ಥದಲ್ಲಿ ವಿಧಿಯಂತೆ ಮಿಂದು ಕಪಿಲಗೋವನ್ನು ದಾನಮಾಡಿದವನು ಶೈಲವನಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದವನಾಗುವನು.

೨೬. ಬ್ರಾಹ್ಮಣೋತ್ತಮನಿಗೆ ದಾನಮಾಡುತ್ತಿರುವ ಈ ಕಪಿಲೆಯನ್ನು ಕಂಡವನು ನೂರು ವರ್ಷಗಳಕಾಲ ಮಾಡಿದ ಪಾಪವು ನಿಶ್ಚಯವಾಗಿಯೂ ಪರಿಹಾರವಾಗುವುದು.

ಭೂರ್ಭುವಸ್ಸ್ವರ್ಮಹಶ್ಚೈವ ಜನಃ ಸತ್ಯಂ ತಪಸ್ತಥಾ ।
ತೇ ತತ್ಪೃಷ್ಠಂ ಸಮಾಶ್ರಿತ್ಯ ಸ್ಥಿತಾ ಲೋಕಾ ನೃಪೋತ್ತಮ ॥ ೨೭ ॥
ಮುಖೇ ಹ್ಯಗ್ನಿಃ ಸ್ಥಿತೋ ದೇವೋ ದಂತೇಷು ಚ ಭುಜಂಗಮಾಃ ।
ಧಾತಾ ವಿಧಾತಾ ಹ್ಯೋಷ್ಠೌ ಚ ಜಿಹ್ವಾಯಾಂ ತು ಸರಸ್ವತೀ ॥ ೨೮ ॥
ಸಹಸ್ರಕಿರಣೌ ದೇವೌ ಚಂದ್ರಾದಿತ್ಯೌ ಸುಲೋಚನೌ ।
ನಾಸಿಕಾಮಧ್ಯಗಶ್ಚೈವ ಮಾರುತೋ ನೃಪಸತ್ತಮ ॥ ೨೯ ॥
ಲಲಾಟೇ ತು ಮಹಾದೇವೋ ಹ್ಯಶ್ವಿನೌ ಕರ್ಣಸಂಸ್ಥಿತೌ ।
ನರನಾರಾಯಣೌ ಶೃಂಗೇ ಶೃಂಗಮಧ್ಯೇ ಪಿತಾಮಹಃ ॥ ೩೦ ॥
ಕಂಬಲೇಽಧಿಗತಸ್ತತ್ರ ಪಾಶಧೃಗ್ವರುಣಸ್ತಥಾ ।
ಯಮಶ್ಚ ಭಗವಾನ್ದೇವ ಆಶ್ರಿತ್ಯ ಚೋದರಂ ಶ್ರಿತಃ ॥ ೩೧ ॥
ಖುರೇಷು ಪನ್ನಗಾಶ್ಚೈವಂ ಪುಚ್ಛಾಗ್ರೇ ಸೂರ್ಯರಶ್ಮಯಃ ।
ಏವಂ ಭೂತಾಂ ಹಿ ಕಪಿಲಾಂ ಸರ್ವದೇವಮಯೀಂ ನೃಪ ॥ ೩೨ ॥
ಯೇ ಧಾರಯಂತಿ ಚ ಗೃಹೇ ಧನ್ಯಾಸ್ತೇ ನಾತ್ರ ಸಂಶಯಃ ।
ಪ್ರಾತರುತ್ಥಾಯ ಯಸ್ತಸ್ಯಾಃ ಕುರುತೇ ತು ಪ್ರದಕ್ಷಿಣಾಂ ॥ ೩೩ ॥
ಪ್ರದಕ್ಷಿಣಾ ಕೃತಾ ತೇನ ಸಶೈಲವನಕಾನನಾ ।
ಕಪಿಲಾಪಂಚಗವ್ಯೇನ ಯಃ ಸ್ನಾಪಯತಿ ಶಂಕರಂ ॥ ೩೪ ॥
ಉಪವಾಸಪರೋ ಯಸ್ತು ತಸ್ಮಿಂಸ್ತೀರ್ಥೇ ನರಾಧಿಪ ।
ಸ್ನಾತ್ವಾ ಹ್ಯುಕ್ತವಿಧಾನೇನ ತರ್ಪಯೇತ್ಪಿತೃದೇವತಾಃ ॥ ೩೫ ॥

---

೨೭. ಭೂಃ, ಭುವಃ, ಸ್ವಃ, ಮಹಃ, ಜನ, ಸತ್ಯ ತಪ ಈ ಲೋಕಗಳು ಅವಳ ಬೆನ್ನನ್ನು ಆಶ್ರಯಿಸಿರುವುವು.

೨೮–೩೬. ಅವಳ ಮುಖದಲ್ಲಿ ಅಗ್ನಿಯೂ, ದಂತಗಳಲ್ಲಿ ಸರ್ಪಗಳೂ, ತುಟಿಗಳಲ್ಲಿ ಧಾತೃವಿಧಾತೃಗಳೂ, ನಾಲಿಗೆಯಲ್ಲಿ ಸರಸ್ವತಿಯೂ, ಕಣ್ಣುಗಳಲ್ಲಿ ಸಹಸ್ರ ಕಿರಣರಾದ ಚಂದ್ರಸೂರ್ಯರೂ. ಮೂಗಿನ ನಡುವೆ ವಾಯುವೂ, ಹಣೆಯಲ್ಲಿ ಮಹೇಶ್ವರನೂ, ಕಿವಿಯಲ್ಲಿ ಅಶ್ವಿನೀ ದೇವತೆಗಳೂ, ಕೊಂಬುಗಳಲ್ಲಿ ನರನಾರಾಯಣರೂ, ಕೊಂಬುಗಳ ನಡುವೆ ಪಿತಾಮಹನೂ, ಕಂಬಳದಲ್ಲಿ ಪಾಶಧಾರಿಯಾದ ವರುಣನೂ, ಹೊಟ್ಟೆಯಲ್ಲಿ ಪೂಜ್ಯನಾದ ಯಮದೇವನೂ, ಗೊರಸುಗಳಲ್ಲಿ ಸರ್ಪಗಳೂ, ಬಾಲದ ಕೊನೆಯಲ್ಲಿ ಸೂರ್ಯನ ಕಿರಣಗಳೂ ನೆಲೆಸಿರುವುವು. ಇಂತಹ ಸಕಲ ದೇವತಾರೂಪವಾದ ಕಪಿಲೆಯನ್ನು ಮನೆಯಲ್ಲಿಟ್ಟುಕೊಳ್ಳುವವರು ನಿಶ್ಚಯವಾಗಿಯೂ ಧನ್ಯರು. ಬೆಳಗ್ಗೆ ಎದ್ದು ಅವಳಿಗೆ ಪ್ರದಕ್ಷಿಣೆಯನ್ನು ಮಾಡುವವನು ಶೈಲವನಗಳಿಂದ ಸಹಿತವಾದ ಭೂಮಿಯನ್ನು ಪ್ರದಕ್ಷಿಣೆ ಮಾಡಿದವನಂತಾಗುವನು. ಕಪಿಲೆಯ ಪಂಚಗವ್ಯದಿಂದ ಶಂಕರನಿಗೆ

**ತಸ್ಯ ತೇ ವಂಶಜಾಃ ಸರ್ವೇ ದಶಪೂರ್ವೇ ದಶಾಽಪರೇ ।**
**ತೃಪ್ತಾ ರೋಹಂತಿ ವೈ ಸ್ವರ್ಗೇ ಧ್ಯಾಯಂತೋಽಸ್ಯ ಮನೋರಥಾನ್ ॥ ೩೬ ॥**
**ಏಷ ತೇ ವಿಧಿರುದ್ದಿಷ್ಟಃ ಸಂಭವೋ ನೃಪಸತ್ತಮ ।**
**ತೀರ್ಥಸ್ಯ ಚ ಮಹತ್ಪುಣ್ಯಂ ಕಿಮನ್ಯತ್ಪರಿಪೃಚ್ಛಸಿ ॥ ೩೭ ॥**
**ಧನ್ಯಂ ಯಶಸ್ಯಮಾಯುಷ್ಯಂ ಸರ್ವದುಃಖಘ್ನಮುತ್ತಮಂ ।**
**ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾಽತ್ರ ಸಂಶಯಃ ॥ ೩೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಕಪಿಲಾತೀರ್ಥಮಾಹಾತ್ಮ್ಯವರ್ಣನಂ" ನಾಮ್ನೈಕೋನಚತ್ವಾರಿಂಶೋಽಧ್ಯಾಯಃ**

---

ಅಭಿಷೇಕಮಾಡುವವನ, ಮತ್ತು ಆ ತೀರ್ಥದಲ್ಲಿ ಉಪವಾಸಮಾಡಿ ವಿಂದು ವಿಧಿಯಂತೆ ಪಿತೃದೇವತೆಗಳಿಗೆ ತರ್ಪಣಮಾಡುವವನ ವಂಶದ ಹಿಂದಿನ ಮತ್ತು ಮುಂದಿನ ಹತ್ತು ತಲೆಯ ಪಿತೃಗಳು ತೃಪ್ತರಾಗಿ ಸ್ವರ್ಗದಲ್ಲಿ ಇವನ ಮನೋರಥಗಳನ್ನು ಚಿಂತಿಸುತ್ತಿರುವರು.

೩೭. ನರೇಂದ್ರನೆ! ನಿನಗೆ ಕಪಿಲಾತೀರ್ಥದ ಉತ್ಪತ್ತಿಯನ್ನೂ ಫಲವನ್ನೂ ಹೇಳಿರುವೆನು. ಬೇರೆ ಏನನ್ನು ಕೇಳುವೆ?

೩೮. ಪುಣ್ಯಕರವೂ, ಕೀರ್ತಿಯನ್ನುಂಟುಮಾಡುವುದೂ, ಆಯುಸ್ಸನ್ನು ಹೆಚ್ಚಿಸುವುದೂ, ಸಮಸ್ತ ದುಃಖಗಳನ್ನು ಪರಿಹರಿಸುವುದೂ, ಉತ್ತಮವೂ ಆದ ಈ ಆಖ್ಯಾನವನ್ನು ಕೇಳಿದವನು ಸಕಲ ಪಾಪಗಳಿಂದ ನಿಜವಾಗಿಯೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕಪಿಲಾತೀರ್ಥಮಾಹಾತ್ಮ್ಯವರ್ಣನ" ವೆಂಬ
ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತ್ವಾರಿಂಶೋಽಧ್ಯಾಯಃ

## ಕರಂಜೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ಕರಂಜೇಶ್ವರಮುತ್ತಮಂ ।
ಯತ್ರ ಸಿದ್ಧೋ ಮಹಾಭಾಗೋ ದೈತ್ಯೋ ಲೋಕೇಷು ವಿಶ್ರುತಃ ॥ ೧ ॥

ಯುಧಿಷ್ಠಿರ ಉವಾಚ :—

ಯೋಽಸೌ ಸಿದ್ಧೋ ಮಹಾಭಾಗ ತತ್ರತೀರ್ಥೇ ಮಹಾತಪಾಃ ।
ಕಸ್ಯ ಪುತ್ರಃ ಕಥಂ ಸಿದ್ಧಃ ಕಸ್ಮಿನ್ಕಾಲೇ ವದ ದ್ವಿಜ ॥ ೨ ॥

ಮಾರ್ಕಂಡೇಯ ಉವಾಚ :—

ಪುರಾ ಕೃತಯುಗೇ ರಾಜನ್ಮಾನಸೋ ಬ್ರಹ್ಮಣಃ ಸುತಃ ।
ವೇದವೇದಾಂಗತತ್ತ್ವಜ್ಞೋ ಮರೀಚಿರ್ನಾಮ ನಾಮತಃ ॥ ೩ ॥
ತಸ್ಯಾಽಪಿ ತಪಸೋ ರಾಶೇಃ ಕಾಲೇನ ಮಹತಾಽನಘ ।
ಪುತ್ರೋಽಥ ಮಾನಸೋ ಜಾತಃ ಸಾಕ್ಷಾದ್ಬ್ರಹ್ಮೇವ ಚಾಽಪರಃ ॥ ೪ ॥
ಕ್ಷಮಾ ದಮೋ ದಯಾ ದಾನಂ ಸತ್ಯಂ ಶೌಚಮಥಾರ್ಜವಂ ।
ಮರೀಚೇಶ್ಚ ಗುಣಾಹ್ಯೇತೇ ಸಂತಿ ತಸ್ಯ ಚ ಭಾರತ ॥ ೫ ॥

---

## ಕನ್ನಡದ ಅನುವಾದ

### ಕರಂಜೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಅರಸ! ಅನಂತರ ಲೋಕ ಪ್ರಸಿದ್ಧನಾದ ಕರಂಜನು ಸಿದ್ಧಿಯನ್ನು ಹೊಂದಿರುವ ಕರಂಜೇಶ್ವರಕ್ಕೆ ಹೋಗ ಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ಮಹಾಭಾಗನೆ! ಆ ತೀರ್ಥದಲ್ಲಿ ಸಿದ್ಧಿಯನ್ನು ಹೊಂದಿದ ಆ ಮಹಾತಪಸ್ವಿ ಯಾರು? ಅವನು ಯಾರ ಮಗನು? ಸಿದ್ಧಿಯನ್ನು ಹೇಗೆ ಹೊಂದಿದನು? ಯಾವಾಗ ಹೊಂದಿದನು? ಅದನ್ನು ಹೇಳು.

೩. ಮಾರ್ಕಂಡೇಯನು ಹೇಳುತ್ತಾನೆ:—ಹಿಂದೆ ಕೃತಯುಗದಲ್ಲಿ ಬ್ರಹ್ಮನ ಮಾನಸಪುತ್ರನೂ ವೇದವೇದಾಂಗವನ್ನರಿತವನೂ ಆದ ಮರೀಚಿಯೆಂಬ ಮುನಿ ಯಿದ್ದನು.

೪. ತಪೋನಿಧಿಯಾದ ಅವನಿಗೆ ಬಹುಕಾಲದಮೇಲೆ ಸಾಕ್ಷಾತ್ ಬ್ರಹ್ಮ ನಂತಿರುವ ಮಾನಸಪುತ್ರನೋರ್ವನು ಜನಿಸಿದನು.

೫. ಮರೀಚಿಯಲ್ಲಿರುವ ಕ್ಷಮಾ, ದಮ, ದಯೆ, ದಾನ, ಸತ್ಯ, ಶೌಚ, ಋಜುತ್ವ ಮೊದಲಾದ ಗುಣಗಳು ಆ ಪುತ್ರನಲ್ಲಿಯೂ ಇದ್ದುವು.

ಏವಂ ಗುಣಗಣಾಕೀರ್ಣಂ ಕಶ್ಯಪಂ ದ್ವಿಜಸತ್ತಮಂ ।
ಜ್ಞಾತ್ವಾ ಪ್ರಜಾಪತಿರ್ದಕ್ಷೋ ಭಾರ್ಯಾರ್ಥೇ ಸ್ವಸುತಾಂ ದದೌ ॥ ೬ ॥
ಅದಿತಿರ್ದಿತಿರ್ದನುಶ್ಚೈವ ತಥಾಸ್ಯೇವಂ ದಶಾಪರಾಃ ।
ಯಾಸಾಂ ಪುತ್ರಾಶ್ಚ ಸಂಜಾತಾಃ ಪೌತ್ರಾಶ್ಚ ಭರತರ್ಷಭ ॥ ೭ ॥
ಅದಿತಿರ್ಜನಯಾಮಾಸ ಪುತ್ರಾನಿಂದ್ರಪುರೋಗಮಾನ್ ।
ಜಾತಾಸ್ತಸ್ಯ ಮಹಾಬಾಹೋ ಕಶ್ಯಪಸ್ಯ ಪ್ರಜಾಪತೇಃ ॥ ೮ ॥
ಯೈಸ್ತು ಲೋಕತ್ರಯಂ ವ್ಯಾಪ್ತಂ ಸ್ಥಾವರಂ ಜಂಗಮಂ ಮಹತ್ ।
ತಥಾಽನ್ಯಸ್ಯ ಮಹಾಭಾಗೋ ದನೋಃ ಪುತ್ರೋ ವ್ಯಜಾಯತ ॥ ೯ ॥
ಸರ್ವಲಕ್ಷಣಸಂಪನ್ನಃ ಕರಂಜೋ ನಾಮನಾಮತಃ ।
ಬಾಲ ಏವ ಮಹಾಭಾಗ ಚಚಾರ ಸ ಮಹತ್ತಪಃ ॥ ೧೦ ॥
ನರ್ಮದಾತಟಮಾಶ್ರಿತ್ಯ ಚಾಽತಿಘೋರಮನುತ್ತಮಂ ।
ದಿವ್ಯಂ ವರ್ಷಸಹಸ್ರಂ ಚ ಕೃಚ್ಛ್ರಚಾಂದ್ರಾಯಣಂ ನೃಪ ॥ ೧೧ ॥
ಶಾಕಮೂಲಫಲಾಹಾರಃ ಸ್ನಾನಹೋಮಪರಾಯಣಃ ।
ತತಸ್ತುಷ್ಟೋ ಮಹಾದೇವ ಉಮಯಾ ಸಹಿತಃ ಕಿಲ ॥ ೧೨ ॥
ವರೇಣ ಛಂದಯಾಮಾಸ ತ್ರಿಪುರಾಂತಕರಃ ಪ್ರಭುಃ ।
ಭೋಃ ಕರಂಜ ಮಹಾಸತ್ತ್ವ ಪರಿತುಷ್ಟೋಽಸ್ಮಿ ತೇಽನಘ ॥ ೧೩ ॥
ವರಂ ವೃಣೀಷ್ವ ತೇ ದದ್ಮಿ ಹ್ಯಮರತ್ವಮೃತೇ ಮಮ ॥ ೧೪ ॥

---

೬–೭. ದಕ್ಷಪ್ರಜಾಪತಿಯು ಹೀಗೆ ಅನೇಕ ಗುಣಗಳಿಂದ ಕೂಡಿರುವ ಕಶ್ಯಪನೆಂಬ ಆ ದ್ವಿಜವರ್ಯನನ್ನು ತಿಳಿದು ಪತ್ನಿಗಾಗಿ ಅವನಿಗೆ ತನ್ನ ಮಕ್ಕಳಾದ ಅದಿತಿ, ದಿತಿ, ದನು ಹೀಗೆಯೇ ಒಟ್ಟಿಗೆ ಹತ್ತುಮಂದಿಯನ್ನು ಕೊಟ್ಟು ಮದುವೆ ಮಾಡಿದನು. ಅವರಿಗೆ ಪುತ್ರರೂ, ಪೌತ್ರರೂ ಹುಟ್ಟಿದರು.

೮. ಆ ಕಶ್ಯಪಪ್ರಜಾಪತಿಗೆ ಅದಿತಿಯಲ್ಲಿ ಇಂದ್ರನೇ ಮೊದಲಾದವರು ಹುಟ್ಟಿದರು.

೯–೧೪. ಅವರು ಸ್ಥಾವರ ಜಂಗಮಾತ್ಮಕನಾದ ಮೂರು ಲೋಕಗಳನ್ನೂ ವ್ಯಾಪಿಸಿದರು. ಹಾಗೆಯೇ ದನುವಿನಲ್ಲಿ ಸಮಸ್ತಲಕ್ಷಣಗಳಿಂದ ಕೂಡಿದ ಕರಂಜನೆಂಬ ಪುತ್ರನು ಹುಟ್ಟಿದನು. ಅವನು ಬಾಲಕನಾಗಿರುವಾಗಲೆ ನರ್ಮದಾ ತೀರದಲ್ಲಿ ಅತಿಘೋರತಪವನ್ನಾಚರಿಸಿದನು. ಒಂದು ಸಾವಿರ ವರ್ಷಕಾಲ ಶಾಕ, ಗೆಣಸು, ಹಣ್ಣುಗಳನ್ನು ತಿನ್ನುತ್ತ ಸ್ನಾನಹೋಮಗಳಲ್ಲಿ ನಿರತನಾಗಿ ಕೃಚ್ಛ್ರಚಾಂದ್ರಾಯಣಗಳನ್ನು ಮಾಡಿದನು. ಬಳಿಕ ತ್ರಿಪುರಾಂತಕನಾದ ಪಾರ್ವತಿಯೊಡಗೂಡಿದ ಮಹಾದೇವನು ಸಂತುಷ್ಟನಾಗಿ "ಎಲೈ ಕರಂಜನೆ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ದೇವತ್ವವೊಂದನ್ನು ಬಿಟ್ಟು ಯಾವ ವರವನ್ನಾದರೂ ಕೇಳು; ಕೊಡುವೆನು" ಎಂದನು.

**ಕರಂಜ ಉವಾಚ :—**

**ಯದಿ ತುಷ್ಟೋ ಮಹಾದೇವ ಯದಿ ದೇಯೋ ವರೋ ಮಮ ।**
**ತರ್ಹಿ ಪುತ್ರಾಶ್ಚ ಪೌತ್ರಾಶ್ಚ ಸಂತು ಮೇ ಧರ್ಮವತ್ಸಲಾಃ ॥ ೧೫ ॥**
**ತಥೇತ್ಯುಕ್ತ್ವಾ ಮಹಾದೇವ ಉಮಯಾ ಸಹಿತಸ್ತದಾ ।**
**ವೃಷಾರೂಢೋ ಗಣೈಃ ಸಾರ್ಧಂ ತತ್ರೈವಾಂತರಧೀಯತ ॥ ೧೬ ॥**
**ಗತೇ ಚಾಽದರ್ಶನಂ ದೇವೇ ಸೋಽಪಿ ದೈತ್ಯೋ ಮುದಾನ್ವಿತಃ ।**
**ಸ್ವನಾಮ್ನಾಽತ್ರ ಮಹಾದೇವಂ ಸ್ಥಾಪಯಿತ್ವಾ ಯಯೌ ಗೃಹಂ ॥ ೧೭ ॥**
**ತದಾ ಪ್ರಭೃತಿ ತತ್ತೀರ್ಥಂ ಸರ್ವತೀರ್ಥೇಷ್ವನುತ್ತಮಂ ।**
**ಸ್ನಾನಮಾತ್ರಾನ್ನರಸ್ತತ್ರ ಮುಚ್ಯತೇ ಸರ್ವಪಾತಕೈಃ ॥ ೧೮ ॥**
**ತತ್ರ ತೀರ್ಥೇ ತು ಯಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ।**
**ಸೋಽಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೧೯ ॥**
**ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।**
**ಅನಿವರ್ತ್ಯಾ ಗತಿಸ್ತಸ್ಯ ರುದ್ರಲೋಕಂ ಸ ಗಚ್ಛತಿ ॥ ೨೦ ॥**
**ಅಥವಾಗ್ನಿಜಲೇ ಪ್ರಾಣಾನ್ಪಸ್ತ್ಯಜೇದ್ಧರ್ಮನಂದನ ।**
**ಅಯುತದ್ವಿತಯಂ ವಸ್ತೇ ವರ್ಷಾಣಾಂ ಶಿವಮಂದಿರೇ ॥ ೨೧ ॥**

---

೧೫. "ಮಹಾದೇವ! ನೀನು ಸಂತುಷ್ಟನಾಗಿದ್ದರೆ, ವರವನ್ನು ಕೊಡುವುದಾದರೆ ನನಗೆ ಧರ್ಮಪ್ರಿಯರಾದ ಪುಪ್ರ ಪೌತ್ರರು ಹುಟ್ಟಲಿ."

೧೬. ಪಾರ್ವತೀಸಹಿತನಾದ ಮಹಾದೇವನು ಹಾಗೆಯೇ ಆಗಲೆಂದು ಹೇಳಿ ವೃಷಭವನ್ನೇರಿ ಗಣಗಳೊಡನೆ ಅಲ್ಲಿಯೇ ಅದೃಶ್ಯನಾದನು.

೧೭. ಶಂಕರನು ಅದೃಶ್ಯನಾಗಲು ಆ ಕರಂಜನು ಸಂತೋಷದಿಂದ ಅಲ್ಲಿ ತನ್ನ ಹೆಸರಿನಿಂದ ಮಹಾದೇವನನ್ನು ಸ್ಥಾಪಿಸಿ ಮನೆಗೆ ಹೋದನು.

೧೮. ಅದು ಮೊದಲ್ಗೊಂಡು ಆ ತೀರ್ಥವು ಸಮಸ್ತ ತೀರ್ಥಗಳಲ್ಲಿಯೂ ಉತ್ತಮವಾಯಿತು. ನರನು ಅಲ್ಲಿ ಸ್ನಾನಮಾಡುವುದರಿಂದಲೇ ಸಕಲಪಾಪ ಮುಕ್ತನಾಗುವನು.

೧೯. ಆ ತೀರ್ಥದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿದವನು ಅಗ್ನಿಷ್ಟೋಮಯಾಗದ ಫಲವನ್ನು ನಿಶ್ಚಯವಾಗಿಯೂ ಹೊಂದುವನು.

೨೦. ನರೇಂದ್ರ! ಆ ತೀರ್ಥದಲ್ಲಿ ಅನಾಶಕವ್ರತವನ್ನಾಚರಿಸುವವನು ರುದ್ರಲೋಕವನ್ನು ಸೇರಿ ಪುನರಾವೃತ್ತಿಯಿಲ್ಲದ ಗತಿಯನ್ನು ಪಡೆಯುವನು.

೨೧. ಅಲ್ಲಿ ಅಗ್ನಿ, ಅಥವಾ ನೀರಿನಲ್ಲಿ ಪ್ರಾಣವನ್ನು ತ್ಯಜಿಸುವವನು ಇಪ್ಪತ್ತುಸಾವಿರವರ್ಷಕಾಲ ಶಿವಮಂದಿರದಲ್ಲಿ ವಾಸಿಸುವನು.

ತತಶ್ಚೈವ ಕ್ಷಯೇ ಜಾತೇ ಜಾಯತೇ ವಿಮಲೇ ಕುಲೇ ।
ವೇದವೇದಾಂಗತತ್ತ್ವಜ್ಞಃ ಸರ್ವಶಾಸ್ತ್ರವಿಶಾರದಃ ॥ ೨೨ ॥
ರಾಜಾ ವಾ ರಾಜತುಲ್ಯೋ ವಾ ಜೀವೇಚ್ಚ ಶರದಃ ಶತಂ ।
ಪುತ್ರಪೌತ್ರಸಮೋಪೇತಃ ಸರ್ವವ್ಯಾಧಿವಿವರ್ಜಿತಃ ॥ ೨೩ ॥
ಏವಂ ತೇ ಸರ್ವಮಾಖ್ಯಾತಂ ಪೃಷ್ಟಂ ಯದ್ಯತ್ತ್ವಯಾಽನಘ ।
ತೀರ್ಥಸ್ಯ ತು ಫಲಂ ತಸ್ಯ ಸ್ನಾನದಾನೇಷು ಭಾರತ ॥ ೨೪ ॥
ಏತತ್ಪುಣ್ಯಂ ಪಾಪಹರಂ ಧನ್ಯಂ ದುಃಸ್ವಪ್ನನಾಶನಂ ।
ಪಠತಾಂ ಶೃಣ್ವತಾಂ ಚೈವ ತೀರ್ಥಮಾಹಾತ್ಮ್ಯಮುತ್ತಮಂ ॥ ೨೫ ॥
ಯಸ್ತು ಶ್ರಾವಯತೇ ಶ್ರಾದ್ಧೇ ಪಠೇತ್ಪಿತೃಪರಾಯಣಃ ।
ಅಕ್ಷಯಂ ಜಾಯತೇ ಪುಣ್ಯಮಿತ್ಯೇವಂ ಶಂಕರೋಽಬ್ರವೀತ್ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕರಂಜೇಶ್ವರತೀರ್ಥಮಾಹಾತ್ಮ್ಯವರ್ಣನಂ"ನಾಮ ಚತ್ವಾರಿಂಶೋಽಧ್ಯಾಯಃ

---

೨೨–೨೩. ಪುಣ್ಯವು ಮುಗಿದ ಬಳಿಕ ಶುದ್ಧವಾದ ವಂಶದಲ್ಲಿ ಹುಟ್ಟಿ ವೇದ ವೇದಾಂಗಗಳ ತತ್ತ್ವವನ್ನರಿತವನೂ, ಸಕಲಶಾಸ್ತ್ರಕುಶಲನೂ, ರಾಜ ಅಥವಾ ರಾಜನಿಗೆ ಸಮಾನನೂ, ಪುತ್ರಪೌತ್ರರಿಂದ ಕೂಡಿದವನೂ, ಸಮಸ್ತವ್ಯಾಧಿ ರಹಿತನೂ ಆಗಿ ನೂರುವರ್ಷಕಾಲ ಬದುಕುವನು.

೨೪. ದೊರೆಯೆ! ನೀನು ಕೇಳಿದ ಆ ತೀರ್ಥದಲ್ಲಿ ಸ್ನಾನದಾನಗಳನ್ನು ಮಾಡುವುದರಿಂದಾಗುವ ಫಲವನ್ನು ಹೇಳಿದ್ದೇನೆ.

೨೫. ಪುಣ್ಯಕರವೂ, ಪಾಪನಾಶಕವೂ ಆದ ಈ ಉತ್ತಮತೀರ್ಥದ ಮಾಹಾತ್ಮ್ಯವನ್ನು ಪಠಿಸುವವರಿಗೂ, ಕೇಳುವವರಿಗೂ ದುಸ್ಸ್ವಪ್ನವು ಪರಿಹಾರವಾಗುವುದು.

೨೬. ಇದನ್ನು ಶ್ರಾದ್ಧದಲ್ಲಿ ಪಿತೃಭಕ್ತಿಯುಳ್ಳವನಾಗಿ ಪಠಿಸುವವನ ಪುಣ್ಯವು ಅಕ್ಷಯವಾಗುವುದೆಂದು ಶಂಕರನು ಹೇಳಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕರಂಜೇಶ್ವರತೀರ್ಥಮಾಹಾತ್ಮ್ಯವರ್ಣನ"ವೆಂಬ
ನಲವತ್ತನೆ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಚತ್ವಾರಿಂಶೋಽಧ್ಯಾಯಃ

### ಕುಂಡಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇಚ್ಚ ರಾಜೇಂದ್ರ ಕುಂಡಲೇಶ್ವರಮುತ್ತಮಂ ।
ಯತ್ರ ಸಿದ್ಧೋ ಮಹಾಯಕ್ಷಃ ಕುಂಡಧಾರೋ ನೃಪೋತ್ತಮ ॥ ೧ ॥
ತಪಃಕೃತ್ವಾ ಸುವಿಪುಲಂ ಸುರಾಸುರಭಯಂಕರಂ ।
ಪೌಲಸ್ತ್ಯಮಂದಿರೇ ಚೈವ ಚಿಕ್ರೀಡ ನೃಪಸತ್ತಮ ॥ ೨ ॥

ಯುಧಿಷ್ಠಿರ ಉವಾಚ :—

ಕಸ್ಮಿನ್ಯುಗೇ ಸಮುತ್ಪನ್ನಃ ಕಸ್ಯ ಪುತ್ರೋ ಮಹಾಮತಿಃ ।
ತಪಸ್ತಪ್ತ್ವಾ ಸುವಿಪುಲಂ ತೋಷಿತೋ ಯೇನ ಶಂಕರಃ ॥ ೩ ॥
ಏತದ್ವಿಸ್ತರತಸ್ತಾತ ಕಥಯಸ್ವ ಮಮಾಽನಘ ।
ಶೃಣ್ವತಶ್ಚ ನ ತೃಪ್ತಿರ್ಮೇ ಕಥಾಽಮೃತಮನುತ್ತಮಂ ॥ ೪ ॥

ಶ್ರೀ ಮಾರ್ಕಂಡೇಯ ಉವಾಚ :—

ತ್ರೇತಾಯುಗೇ ಬ್ರಹ್ಮಸಮಃ ಪೌಲಸ್ತ್ಯೋ ನಾಮ ವಿಶ್ರವಾಃ ।
ತಪಃ ಕೃತ್ವಾ ಸುವಿಪುಲಂ ಭರದ್ವಾಜಸುತೋದ್ಭವಃ ॥ ೫ ॥

---

## ಕನ್ನಡದ ಅನುವಾದ

### ಕುಂಡಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ರಾಜನೆ! ತರುವಾಯ ಉತ್ತಮವಾದ ಕುಂಡಲೇಶ್ವರಕ್ಕೆ ಹೋಗಬೇಕು. ಅಲ್ಲಿ ಕುಂಡಧಾರನೆಂಬ ಯಕ್ಷನು ಸಿದ್ಧಿಯನ್ನು ಹೊಂದಿರುವನು.

೨. ಅವನು ಸುರಾಸುರಭಯಂಕರವಾದ ವಿಪುಲತಪಸ್ಸನ್ನು ಮಾಡಿ ಕುಬೇರನ ಮನೆಯಲ್ಲಿ ವಿನೋದಪಟ್ಟನು.

೩. ಯುಧಿಷ್ಠಿರನು ಹೇಳುತ್ತಾನೆ:—ವಿಪುಲತಪಸ್ಸನ್ನುಮಾಡಿ ಶಂಕರನನ್ನು ಸಂತೋಷಗೊಳಿಸಿದ ಆ ಪ್ರಾಜ್ಞನು ಯಾವ ಯುಗದಲ್ಲಿ ಜನಿಸಿದನು?

೪. ನಿರ್ದುಷ್ಟನಾದ ಮುನಿಯೆ! ಇದನ್ನು ವಿಸ್ತಾರವಾಗಿ ಹೇಳು. ಈ ಉತ್ತಮಕಥಾಮೃತವನ್ನು ಕೇಳುತ್ತಿರುವ ನನಗೆ ತೃಪ್ತಿಯಿಲ್ಲ.

೫–೬. ತ್ರೇತಾಯುಗದಲ್ಲಿ ಬ್ರಹ್ಮನಿಗೆ ಸಮನೂ, ಭರದ್ವಾಜಸುತನ ಪುತ್ರನೂ, ಪತ್ನಿಯಿಂದ ಭಕ್ತಿಯಿಂದ ಸಂತೋಷಗೊಳಿಸಲ್ಪಟ್ಟವನೂ ಆದ ಪೌಲಸ್ತ್ಯನೆಂಬ ವಿಶ್ರವಸ್ಸು ಬಹುತಪಸ್ಸನ್ನುಮಾಡಿ ಸರ್ವಲಕ್ಷಣಗಳಿಂದ

ಪುತ್ರಂ ಪೌತ್ರಗಣೈರ್ಯುಕ್ತಂ ಪತ್ನ್ಯಾ ಭಕ್ತ್ಯಾ ಸುತೋಷಿತಃ ।
ಧನದಂ ಜನಯಾಮಾಸ ಸರ್ವಲಕ್ಷಣಲಕ್ಷಿತಂ ॥ ೬ ॥
ಜಾತಮಾತ್ರಂ ತು ತಂ ಜ್ಞಾತ್ವಾ ಬ್ರಹ್ಮಾ ಲೋಕಪಿತಾಮಹಃ ।
ಚಕಾರ ನಾಮ ಸುಪ್ರೀತ ಋಷಿದೇವಸಮನ್ವಿತಃ ॥ ೭ ॥
ಯಸ್ಮಾದ್ವಿಶ್ರವಸೋ ಜಾತೋ ಮಮ ಪೌತ್ರತ್ವಮಾಗತಃ ।
ತಸ್ಮಾದ್ವೈಶ್ರವಣಂ ನಾಮ ತವ ದತ್ತಂ ಮಯಾಽನಘ ॥ ೮ ॥
ತಥಾ ತ್ವಂ ಸರ್ವದೇವಾನಾಂ ಧನಗೋಪ್ತಾ ಭವಿಷ್ಯಸಿ ।
ಚತುರ್ಥೋ ಲೋಕಪಾಲಾನಾಮಕ್ಷಯಶ್ಚಾಽವ್ಯಯೋ ಭುವಿ ॥ ೯ ॥
ತಸ್ಯ ಭಾರ್ಯಾ ಮಹಾರಾಜ ಈಶ್ವರೀತಿ ಚ ವಿಶ್ರುತಾ ।
ಯಕ್ಷೋ ಯಕ್ಷಾಧಿಪಃ ಶ್ರೇಷ್ಠಸ್ತಸ್ಯ ಕುಂಡೋಽಭವತ್ಸುತಃ ॥ ೧೦ ॥
ಸ ಚ ರೂಪಂ ಪರಂ ಪ್ರಾಪ್ಯ ಮಾತಾಪಿತ್ರೋರನುಜ್ಞಯಾ ।
ತಪಶ್ಚಚಾರ ವಿಪುಲಂ ನರ್ಮದಾತಟಮಾಶ್ರಿತಃ ॥ ೧೧ ॥
ಗ್ರೀಷ್ಮೇ ಪಂಚಾಗ್ನಿಸಂತಪ್ತೋ ವರ್ಷಾಸು ಸ್ಥಂಡಿಲೇಶಯಃ ।
ಹೇಮಂತೇ ಜಲಮಧ್ಯಸ್ಥೋ ವಾಯುಭಕ್ಷಃ ಶತಂ ಸಮಾಃ ॥ ೧೨ ॥

---

ಕೂಡಿದ ಪೌತ್ರರ ಸಮೂಹಗಳಿಂದ ಸಹಿತನಾದ ಧನದನೆಂಬ ಪುತ್ರನನ್ನು ಪಡೆದನು.

೭. ಲೋಕಪಿತಾಮಹನಾದ ಬ್ರಹ್ಮನು ಅವನು ಹುಟ್ಟಿರುವುದನ್ನು ಅರಿತು ಸಂತೋಷಗೊಂಡವನಾಗಿ ಋಷಿದೇವತೆಗಳೊಡನೆ ಅವನಿಗೆ ನಾಮಕರಣಮಾಡಿದನು.

೮. "ಮಗು ! ನೀನು ವಿಶ್ರವಸ್ಸಿನಿಂದ ಹುಟ್ಟಿ ನನಗೆ ಪೌತ್ರನಾದುದರಿಂದ ನಿನಗೆ ವೈಶ್ರವಣನೆಂದು ನಾಮಕರಣಮಾಡಿರುವೆನು.

೯. ಹಾಗೆಯೇ ನೀನು ಸಮಸ್ತದೇವತೆಗಳ ಧನವನ್ನು ರಕ್ಷಿಸುವವನೂ, ಲೋಕಪಾಲಕರಲ್ಲಿ ನಾಲ್ಕನೆಯವನೂ, ನಾಶರಹಿತನೂ, ವಿಕಾರವಿಲ್ಲದವನೂ ಆಗುವೆ" ಎಂದನು.

೧೦. ಅವನಿಗೆ ಈಶ್ವರಿಯೆಂಬ ಪತ್ನಿಯೂ, ಯಕ್ಷರಾಜನಾದ ಕುಂಡನೆಂಬ ಮಗನೂ ಇರುವರು.

೧೧–೧೨. ಅವನು ಉತ್ತಮ ರೂಪವನ್ನು ಹೊಂದಿ ತಾಯಿ ತಂದೆಗಳ ಅನುಜ್ಞೆಯಿಂದ ನರ್ಮದಾತಟದಲ್ಲಿ ಗ್ರೀಷ್ಮಕಾಲದಲ್ಲಿ ಪಂಚಾಗ್ನಿಮಧ್ಯದಲ್ಲಿ ಸಂತಾಪಗೊಂಡವನೂ, ಮಳೆಗಾಲದಲ್ಲಿ ನೆಲದಲ್ಲಿ ಮಲಗುವವನೂ, ಚಳಿಗಾಲದಲ್ಲಿ ನೀರಿನನಡುವೆ ಇರುವವನೂ, ವಾಯುಭಕ್ಷನೂ ಆಗಿ ನೂರುವರ್ಷಕಾಲ ಅಧಿಕತಪಸ್ಸನ್ನಾಚರಿಸಿದನು.

ಏವಂ ವರ್ಷಶತೇ ಪೂರ್ಣೇ ಏಕಾಂಗುಷ್ಠೋಽಭವನ್ನೃಪ ।
ಅಸ್ಥಿಭೂತಃ ಪರಂ ತಾತ ಊರ್ಧ್ವಬಾಹುಸ್ತತಃ ಪರಂ ॥ ೧೩ ॥
ಅತಪಚ್ಚ ಧೃತಶ್ವಾಸಃ ಕುಂಡಲೋ ಭರತರ್ಷಭ ।
ಚತುರ್ಥೇ ವರ್ಷಶತಕೇ ತುತೋಷ ವೃಷವಾಹನಃ ॥ ೧೪ ॥
ವರಂ ವೃಣೀಷ್ವ ಭೋ ವತ್ಸ ಯತ್ತೇ ಮನಸಿ ರೋಚತೇ ।
ದದಾಮಿ ತೇ ನ ಸಂದೇಹಸ್ತಪಸಾ ತೋಷಿತೋಽಹ್ಯಹಂ ॥ ೧೫ ॥
ಕುಂಡಲ ಉವಾಚ:—
ಯಕ್ಷಾಧಿಪಪ್ರಸಾದೇನ ತಸ್ಯೈವಾನುಚರಃ ಪುರೇ ।
ವಿಚರಾಮಿ ಯಥಾಕಾಮಮವಧ್ಯಃ ಸರ್ವಶತ್ರುಷು ॥ ೧೬ ॥
ತಥೇತ್ಯುಕ್ತ್ವಾ ಮಹಾದೇವಃ ಸರ್ವಲೋಕ ನಮಸ್ಕೃತಃ ।
ಜಗಾಮಾಕಾಶಮಾವಿಶ್ಯ ಕೈಲಾಸಂ ಧರಣೀಧರಂ ॥ ೧೭ ॥
ಗತೇ ಚಾದರ್ಶನಂ ದೇವೇ ಸೋಽಪಿ ಯಕ್ಷೋ ಮುದಾನ್ವಿತಃ ।
ಸ್ಥಾಪಯಾಮಾಸ ದೇವೇಶಂ ಕುಂಡಲೇಶ್ವರಮುತ್ತಮಂ ॥ ೧೮ ॥
ಅಲಂಕೃತ್ವಾ ಜಗನ್ನಾಥಂ ಪುಷ್ಪಧೂಪಾನುಲೇಪನೈಃ ।
ವಿಮಾನೈಶ್ಚಾಮರೈಶ್ಛತ್ರೈಸ್ತಥಾ ವೈ ಲಿಂಗಪೂರಣೈಃ ॥ ೧೯ ॥

---

೧೩–೧೪. ದೊರೆಯೆ! ಹೀಗೆ ನೂರು ವರ್ಷಗಳು ಕಳೆಯಲು ಆ ಕುಂಡಲನು ಅಂಗುಷ್ಠದಮೇಲೆ ನಿಂತನು. ಅನಂತರ ಅಸ್ಥಿಯಾಗಿ ತೋಳುಗಳನ್ನು ಮೇಲಕ್ಕೆತ್ತಿದನು. ಬಳಿಕ ಶ್ವಾಸವನ್ನು ತಡೆದು ತಪಸ್ಸನ್ನು ಮಾಡಿದನು. ಹೀಗೆ ತಪಸ್ಸನ್ನೆಸಗಲು ನಾನ್ನೂರನೆಯ ವರ್ಷದಲ್ಲಿ ಮಹೇಶ್ವರನು ಸಂತುಷ್ಟನಾದನು.

೧೫. "ಮಗು! ನಿನಗಿಷ್ಟವಾದ ವರವನ್ನು ಕೇಳಿಕೊ, ತಪಸ್ಸಿನಿಂದ ಸಂತೋಷಗೊಂಡ ನಾನು ಅದನ್ನು ಕೊಡುವೆನು. ಸಂದೇಹವಿಲ್ಲ" ಎಂದನು.

೧೬. ಕುಂಡಲನು ಹೇಳುತ್ತಾನೆ:—ನಾನು ಯಕ್ಷರಾಜನ ಅನುಗ್ರಹದಿಂದ ಅವನ ನಗರದಲ್ಲಿ ಸೇವಕನೂ, ಶತ್ರುಗಳಿಗೆ ಅವಧ್ಯನೂ ಆಗಿ ಸ್ವೇಚ್ಛೆಯಾಗಿ ಸಂಚರಿಸುವೆನು.

೧೭. ಸಕಲಜನರಿಂದ ವಂದಿತನಾದ ಮಹಾದೇವನು ಹಾಗೆಯೇ ವರವನ್ನಿತ್ತು ಆಕಾಶವನ್ನಾಶ್ರಯಿಸಿ ಕೈಲಾಸಪರ್ವತಕ್ಕೆ ಹೋದನು.

೧೮. ಈಶ್ವರನು ಅದೃಶ್ಯನಾಗಲು ಆ ಯಕ್ಷನು ಸಂತೋಷದಿಂದ ಕುಂಡಲೇಶ್ವರದೇವನನ್ನು ಪ್ರತಿಷ್ಠೆಮಾಡಿದನು.

೧೯–೨೦. ಜಗನ್ನಾಥನಾದ ಆ ಮಹಾದೇವನನ್ನು ಪುಷ್ಪ, ಧೂಪ, ಅನುಲೇಪನ, ವಿಮಾನ, ಚಾಮರ, ಛತ್ರಗಳಿಂದ ಅಲಂಕಾರಮಾಡಿ ಸಂತೋಷ

ತರ್ಪಯಿತ್ವಾ ದ್ವಿಜಾನ್ ಸರ್ವಾನನ್ನಪಾನಾದಿಭೂಷಣೈಃ ।
ಪ್ರೀಣಯಿತ್ವಾ ಮಹಾದೇವಂ ತತಃ ಸ್ವಭವನಂ ಯಯೌ ॥ ೨೦ ॥
ತದಾ ಪ್ರಭೃತಿ ತತ್ತೀರ್ಥಂ ತ್ರಿಷು ಲೋಕೇಷು ವಿಶ್ರುತಂ ।
ಉತ್ತಮಂ ಪರಮಂ ಪುಣ್ಯಂ ಕುಂಡಲೇಶ್ವರನಾಮತಃ ॥ ೨೧ ॥
ತತ್ರ ತೀರ್ಥೇ ತು ಯಃ ಕಶ್ಚಿದುಪವಾಸಪರಾಯಣಃ ।
ಅರ್ಚಯೇದ್ದೇವಮೀಶಾನಂ ಸರ್ವಪಾಪೈಃ ಪ್ರಮುಚ್ಯತೇ ॥ ೨೨ ॥
ಸುವರ್ಣಂ ರಜತಂ ವಾಽಪಿ ಮಣಿಂಮೌಕ್ತಿಕಮೇವ ಚ ।
ದದ್ಯಾದ್ಭೋಜ್ಯಂ ಬ್ರಾಹ್ಮಣೇಭ್ಯಃ ಸ ಸುಖೀ ಮೋದತೇ ದಿವಿ ॥ ೨೩ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ಋಗ್ಯಜುಃಸಾಮಗೋಽಪಿವಾ ।
ಋಚಮೇಕಾಂ ಜಪಿತ್ವಾ ತು ಸಕಲಂ ಫಲಮಶ್ನುತೇ ॥ ೨೪ ॥
ಗಾಂ ಪ್ರಯಚ್ಛತಿ ವಿಪ್ರೇಭ್ಯಸ್ತತ್ಫಲಂ ಶೃಣು ಪಾಂಡವ ।
ಯಾವಂತಿ ತಸ್ಯಾ ರೋಮಾಣಿ ತತ್ಪ್ರಸೂತಿಕುಲೇಷು ಚ ॥ ೨೫ ॥
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಸ್ವರ್ಗೇ ವಾಸೋ ಭವೇತ್ತಸ್ಯ ಪುತ್ರಪೌತ್ರೈಃ ಸಮನ್ವಿತಃ ॥ ೨೬ ॥
ತಾವಂತಿ ವರ್ಷಾಣಿ ಮಹಾನುಭಾವಃ
ಸ್ವರ್ಗೇ ವಸೇತ್ಪುತ್ರಪೌತ್ರೈಶ್ಚ ಸಾರ್ಧಂ ।
ತತ್ರಾಽನ್ನದೋ ಯಾತಿ ಮಹೇಶಲೋಕ
ಮಸಂಖ್ಯವರ್ಷಾಣಿ ನ ಸಂಶಯೋಽತ್ರ ॥ ೨೭ ॥

---

ಗೊಳಿಸಿ ಅನ್ನ, ಪಾನ, ಭೂಷಣಗಳಿಂದ ಬ್ರಾಹ್ಮಣರನ್ನು ತೃಪ್ತಿಗೊಳಿಸಿ ತನ್ನ ಮನೆಗೆ ಹೋದನು.

೨೧. ಅದು ಮೊದಲ್ಗೊಂಡು ಉತ್ತಮವೂ, ಪುಣ್ಯಕರವೂ ಆದ ಆ ತೀರ್ಥವು ಮೂರುಲೋಕಗಳಲ್ಲಿಯೂ ಕುಂಡಲೇಶ್ವರನಾಮದಿಂದ ಪ್ರಸಿದ್ಧವಾಯಿತು.

೨೨. ಆ ತೀರ್ಥದಲ್ಲಿ ಉಪವಾಸಮಾಡಿ ಈಶ್ವರನನ್ನು ಪೂಜಿಸಿದವನು ಸಕಲಪಾಪಗಳಿಂದಲೂ ಮುಕ್ತನಾಗುವನು.

೨೩. ಬ್ರಾಹ್ಮಣರಿಗೆ ಚಿನ್ನ, ಬೆಳ್ಳಿ, ರತ್ನ, ಮುತ್ತು, ಭೋಜ್ಯಗಳನ್ನು ದಾನಮಾಡಿದವನು ಸುಖದಿಂದ ಸಂತೋಷಗೊಳ್ಳುವನು.

೨೪. ಆ ತೀರ್ಥದಲ್ಲಿ ಮಿಂದು ಋಗ್ಯಜುಸ್ಸಾಮವೇದಗಳ ಒಂದು ಋಕ್ಕನ್ನು ಜಪಿಸಿದವನು, ಸಮಸ್ತ ಫಲವನ್ನೂ ಪಡೆಯುವನು.

೨೫–೨೭. ಅಲ್ಲಿ ಬ್ರಾಹ್ಮಣರಿಗೆ ಗೋವನ್ನು ದಾನಮಾಡಿದವನಿಗೆ ಉಂಟಾಗುವ ಫಲವನ್ನು ಕೇಳು. ಆ ಗೋವಿನ ಮತ್ತು ಅದರ ಸಂತತಿಯ ರೋಮಗಳಷ್ಟು ಕಾಲ ಸ್ವರ್ಗಲೋಕದಲ್ಲಿ ಪೂಜ್ಯನಾಗುವನು. ಮತ್ತು ಪುತ್ರಪೌತ್ರರೊಡನೆ ಸ್ವರ್ಗದಲ್ಲಿ ವಾಸಮಾಡುವನು. ಅಲ್ಲಿ ಅನ್ನದಾನಮಾಡು

ಸರ್ವೈ ಸುಖೀ ಮೋದತೇ ಸ್ವರ್ಗಲೋಕೇ
ಗಂಧರ್ವಸಿದ್ಧಾಽಪ್ಸರಃಸಂಪ್ರಗೀತೇ ।
ಏವಂ ತು ತೇ ಧರ್ಮಸುತಪ್ರಭಾವ
ಸ್ತೀರ್ಥಶ್ಚ ಸರ್ವಃ ಕಥಿತಶ್ಚ ಪಾರ್ಥ ॥ ೨೮ ॥
ಶ್ರುತ್ವಾ ಸ್ತುವನ್ಮುಚ್ಯತೇ ಸರ್ವಪಾಪೈಃ ।
ಪುನಸ್ತ್ರಿಲೋಕೀಮಿಹ ತತ್ಪ್ರಭಾವಾತ್ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಕುಂಡಲೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮೈಕಚತ್ವಾರಿಂಶೋಽಧ್ಯಾಯಃ

---

ವವನು ನಿಜವಾಗಿಯೂ ಈಶ್ವರಲೋಕವನ್ನು ಸೇರುವನು. ಅವನು ಲೆಕ್ಕವಿಲ್ಲದಷ್ಟು ವರ್ಷಗಳಕಾಲ ಗಂಧರ್ವರು, ಸಿದ್ಧರು, ಅಪ್ಸರರು, ಇವರು ಗಾನ ಮಾಡುತ್ತಿರುವ ಸ್ವರ್ಗಲೋಕದಲ್ಲಿ ಸುಖವುಳ್ಳವನಾಗಿ ಸಂತೋಷಗೊಳ್ಳುವನು. ಯುಧಿಷ್ಠಿರ! ಹೀಗೆ ನಿನಗೆ ಆ ತೀರ್ಥದ ಸಮಗ್ರ ಪ್ರಭಾವವನ್ನು ಹೇಳಿರುವೆನು.

೨೯. ಇದನ್ನು ಕೇಳಿ ಸ್ತುತಿಸುವವನು ಸಕಲ ಪಾಪಮುಕ್ತನಾಗಿ ಇದರ ಪ್ರಭಾವದಿಂದ ತ್ರಿಲೋಕದಲ್ಲಿ ಸಂಚರಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಕುಂಡಲೇಶ್ವರತೀರ್ಥಮಹಾತ್ಮ್ಯವರ್ಣನ"ವೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಚತ್ವಾರಿಂಶೋಽಧ್ಯಾಯಃ

## ಪಿಪ್ಪಲಾದತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

**ತತೋ ಗಚ್ಛೇತ್ತು ರಾಜೇಂದ್ರ ಪಿಪ್ಪಲೇಶ್ವರಮುತ್ತಮಂ ।**
**ಯತ್ರ ಸಿದ್ಧೋ ಮಹಾಯೋಗೀ ಪಿಪ್ಪಲಾದೋ ಮಹಾತಪಾಃ ॥ ೧ ॥**

ಯುಧಿಷ್ಠಿರ ಉವಾಚ :—

**ಪಿಪ್ಪಲಾದಸ್ಯ ಚರಿತಂ ಶ್ರೋತುಮಿಚ್ಛಾಮ್ಯಹಂ ವಿಭೋ ।**
**ಮಾಹಾತ್ಮ್ಯಂ ತಸ್ಯ ತೀರ್ಥಸ್ಯ ಯತ್ರ ಸಿದ್ಧೋ ಮಹಾತಪಾಃ ॥ ೨ ॥**
**ಕಸ್ಯ ಪುತ್ರೋ ಮಹಾಭಾಗ ಕಿಮರ್ಥಂ ಕೃತವಾಂಸ್ತಪಃ ।**
**ಏತದ್ವಿಸ್ತರತಃ ಸರ್ವಂ ಕಥಯಸ್ವ ಮಮಾಽನಘ ॥ ೩ ॥**

ಮಾರ್ಕಂಡೇಯ ಉವಾಚ :—

**ಮಿಥಿಲಾಸ್ಥೋ ಮಹಾಭಾಗೋ ವೇದವೇದಾಂಗಪಾರಗಃ ।**
**ಯಾಜ್ಞ್ಯವಲ್ಕ್ಯಃ ಪುರಾ ತಾತ ಚಚಾರ ವಿಪುಲಂ ತಪಃ ॥ ೪ ॥**
**ತಾಪಸೀ ತಸ್ಯ ಭಗಿನೀ ಯಾಜ್ಞವಲ್ಕ್ಯಸ್ಯಧೀಮತಃ ।**
**ಸಾ ಸಪ್ತಮೇಽಪಿ ಚ ವರ್ಷೇ ಚ ವೈಧವ್ಯಂ ಪ್ರಾಪ ದೈವತಃ ॥ ೫ ॥**

---

## ಕನ್ನಡದ ಅನುವಾದ

### ಪಿಪ್ಪಲಾದತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಮಹಾರಾಜ! ಬಳಿಕ ಮಹಾತಪಸ್ವಿಯಾದ ಪಿಪ್ಪಲಾದನು ಸಿದ್ಧಿಯನ್ನು ಹೊಂದಿರುವ ಪಿಪ್ಪಲೇಶ್ವರ ನೆಡೆಗೆ ಹೋಗಬೇಕು.

೨. ಯುಧಿಷ್ಠಿರನು ಹೇಳುತ್ತಾನೆ:—ಮಹರ್ಷಿಯೆ! ಪಿಪ್ಪಲಾದನ ಚರಿತ್ರೆಯನ್ನೂ, ಮಹಾತಪಸ್ವಿಯಾದ ಆತನು ಸಿದ್ಧಿಯನ್ನು ಹೊಂದಿದ ಆ ತೀರ್ಥದ ಮಾಹಾತ್ಮ್ಯವನ್ನೂ ಕೇಳಬಯಸುವೆನು.

೩. ಮಹಾಭಾಗ್ಯವಂತನೆ! ಪಿಪ್ಪಲಾದನು ಯಾರ ಮಗನು? ಏಕೆ ತಪಸ್ಸನ್ನುಮಾಡಿದನು? ಇದನ್ನು ನನಗೆ ವಿಸ್ತಾರವಾಗಿ ಹೇಳು.

೪–೫. ಮಾರ್ಕಂಡೇಯನು ಹೇಳುತ್ತಾನೆ:—ಮಿಥಿಲಾವಾಸಿಯೂ, ಅತಿ ಭಾಗ್ಯವಂತನೂ, ವೇದವೇದಾಂಗಪಾರಂಗತನೂ ಆದ ಯಜ್ಞವಲ್ಕ್ಯನು ಹಿಂದೆ ಅತಿಶಯವಾದ ತಪವನ್ನಾಚರಿಸಿದನು. ಆ ಯಾಜ್ಞವಲ್ಕ್ಯನ ಸಹೋದರಿಯು ಏಳನೆಯ ವಯಸ್ಸಿನಲ್ಲಿಯೆ ದುರದೃಷ್ಟವಶದಿಂದ ವೈಧವ್ಯವನ್ನು ಹೊಂದಿದಳು.

ಪೂರ್ವಕರ್ಮವಿಪಾಕೇನ ಹೀನಾಽಭೂತ್ಪಿತೃಮಾತೃತಃ ।
ನಾಽಭೂತ್ತತ್ಪತಿಪಕ್ಷೇಽಪಿ ಕೋಽಪೀತ್ಯೇಕಾಕಿನೀಸ್ಥಿತಾ ॥ ೬ ॥
ಭೂಮೌ ಭ್ರಮಂತೀ ಭ್ರಾತುಃ ಸಾ ಸಮೀಪಮಗಮಚ್ಛನೈಃ ।
ಚಚಾರ ಚ ತಪಃ ಸೋಽಪಿ ಪರಲೋಕಸುಖೇಪ್ಸಯಾ ॥ ೭ ॥
ಚಕಾರ ಸಾಽಪಿ ತತ್ರಸ್ಥಾ ಶುಶ್ರೂಷಂತೀ ಮಹತ್ತಪಃ ।
ಕಸ್ಮಿಂಶ್ಚಿತ್ಸಮಯೇ ಸಾಽಥ ಸ್ನಾತಾಽಹನಿ ರಜಸ್ವಲಾ ॥ ೮ ॥
ಅಂತರ್ವಾಸೋ ಧೃತವತೀ ದೃಷ್ಟ್ವಾ ಕರ್ಪಟಿಕಂ ರಹಃ ।
ಯಾಜ್ಞ್ಯವಲ್ಕ್ಯೋಽಪಿ ತದ್ರಾತ್ರೌ ಸುಪ್ತೋ ಯತ್ರ ಸುಸಂವೃತಃ ॥ ೯ ॥
ಸ್ವಪ್ನಂ ದೃಷ್ಟ್ವಾಽತ್ಯಜಚ್ಛುಕ್ರಂ ಕೌಪೀನೇ ರಕ್ತಬಿಂದುವತ್ ।
ವಿರಾಜಿತೇನ ತಪಸಾ ಸಿದ್ಧಂ ತದನಲಪ್ರಭಂ ॥ ೧೦ ॥
ಯಾವತ್ಪ್ರಬುದ್ಧೋ ವಿಪ್ರೋಽಸೌ ವೀಕ್ಷ್ಯೋಚ್ಛಿಷ್ಟಂ ತದಂಶುಕಂ ।
ಚಿಕ್ಷೇಪ ದೂರತೋಽಸ್ಪೃಶ್ಯಂ ಶೌಚಂ ಕೃತ್ವಾ ವಿಧಾನತಃ ॥ ೧೧ ॥
ನಿಷಿದ್ಧಂ ತು ನಿಶಿ ಸ್ನಾನಮಿತಿ ಸುಷ್ವಾಪ ಸದ್ವಿಜಃ ।
ನಿಶೀಥೇ ಸಾಽಪಿ ತದ್ವಸ್ತ್ರಂ ಭಗಸ್ಯಾವರಣಂ ವ್ಯಧಾತ್ ॥ ೧೨ ॥

---

೬. ಅವಳು ಪೂರ್ವಕರ್ಮವಿಪಾಕದಿಂದ ತಾಯಿತಂದೆಗಳಿಲ್ಲದವಳಾದಳು. ಪತಿಪಕ್ಷದಲ್ಲಿಯೂ ಯಾರೂ ಇಲ್ಲದಿರುವುದರಿಂದ ಅವಳೊಬ್ಬಳೇ ಇದ್ದಳು.

೭. ಅವಳು ಭೂಮಿಯಲ್ಲಿ ಸಂಚರಿಸುತ್ತ ಅಣ್ಣನ ಬಳಿಗೇ ಹೋದಳು. ಆ ಯಾಜ್ಞವಲ್ಕ್ಯನೂ ಪರಲೋಕದ ಸುಖಾಶೆಯಿಂದ ತಪಸ್ಸನ್ನು ಆಚರಿಸಿದನು.

೮–೧೦. ಅವಳೂ ಅಣ್ಣನನ್ನು ಸೇವಿಸುತ್ತ ಮಹಾ ತಪಸ್ಸನ್ನಾಚರಿಸಿದಳು. ಒಂದಾನೊಂದು ಸಮಯದಲ್ಲಿ ರಜಸ್ವಲೆಯಾದ ಅವಳು ಮಿಂದು ರಹಸ್ಯದಲ್ಲಿ ಬಿದ್ದಿರುವ ಬಟ್ಟೆಯ ತುಂಡನ್ನು ತೆಗೆದುಕೊಂಡು ಅಂತರ್ವಸ್ತ್ರವನ್ನಾಗಿ ಮಾಡಿಕೊಂಡಳು. ಯಜ್ಞವಾಲ್ಕ್ಯನೂ ಆ ರಾತ್ರಿ ಮಲಗಿ ಸ್ವಪ್ನವನ್ನು ಕಂಡು ಕೌಪೀನದಲ್ಲಿ ರಕ್ತಬಿಂದುವಿನಂತೆ ವೀರ್ಯವನ್ನು ತ್ಯಜಿಸಿದನು. ಅದು ವಿರಾಜಿಸುವ ತಪಸ್ಸಿನಿಂದ ಬೆಂಕಿಯಂತೆ ಕಾಂತಿಯುಳ್ಳದ್ದಾಯಿತು.

೧೧–೧೨. ಯಾಜ್ಞವಲ್ಕ್ಯನು ಎಚ್ಚರಗೊಂಡು ಉಚ್ಛಿಷ್ಟವಾದ ಆ ಬಟ್ಟೆಯನ್ನು ಕಂಡು ಅದು ಅಸ್ಪೃಶ್ಯವೆಂದು ದೂರ ಎಸೆದು ವಿಧಿಯಂತೆ ಶೌಚವನ್ನು ಮಾಡಿ ರಾತ್ರಿ ಸ್ನಾನವು ನಿಷಿದ್ಧವೆಂದರಿತು ಮರಳಿ ನಿದ್ರಿಸಿದನು. ಅರ್ಧರಾತ್ರಿ ಸಮಯದಲ್ಲಿ ಅವನ ಸಹೋದರಿಯು ಆ ಬಟ್ಟೆಯನ್ನು ಗುಹ್ಯೇಂದ್ರಿಯಕ್ಕೆ ಆವರಣವಾಗುವಂತೆ ಉಟ್ಟುಕೊಂಡಳು.

ಪ್ರಾತರನ್ವೇಷಯಾಮಾಸ ಮುನಿರ್ವಸ್ತ್ರಮಿತಸ್ತತಃ ।
ತತಃ ಸಾ ಬ್ರಾಹ್ಮಣೀ ಪ್ರಾಹ ಕಿಮನ್ವೇಷಯಸೇ ಪ್ರಭೋ ।
ಕೇನ ಕಾರ್ಯಂ ತವ ತಥಾ ವದಸ್ವ ಮಮ ತತ್ತ್ವತಃ ॥ ೧೩ ॥

ಯಾಜ್ಞವಲ್ಕ್ಯ ಉವಾಚ:—

ಅಪವಿತ್ರೋ ಮಯಾ ಭದ್ರೇ ಸ್ವಪ್ನೋ ದೃಷ್ಟೋಽದ್ಯ ವೈನಿಶಿ ।
ಸಕ್ಲೇದಂ ತತ್ರ ಮೇ ವಸ್ತ್ರಂ ನಿಕ್ಷಿಪ್ತಂ ತನ್ನ ದೃಶ್ಯತೇ ॥ ೧೪ ॥
ತಚ್ಛ್ರುತ್ವಾ ಬ್ರಾಹ್ಮಣೀ ವಾಕ್ಯಂ ಭೀತಭೀತಾಽವದನ್ನೃಪ ।
ತದ್ವಸ್ತ್ರಂ ತು ಮಯಾ ವಿಪ್ರ ಸ್ನಾತ್ವಾ ಹ್ಯಂತಃ ಕೃತಂ ಮಹತ್ ॥ ೧೫ ॥
ತಸ್ಯಾಸ್ತದ್ವಚನಂ ಶ್ರುತ್ವಾ ಹಾಹೇತ್ಯುಕ್ತ್ವಾ ಮಹಾಮುನಿಃ ।
ನಿಪಪಾತ ತದಾ ಭೂಮೌ ಛಿನ್ನಮೂಲ ಇವ ದ್ರುಮಃ ॥ ೧೬ ॥
ಕಿಮೇತದಿತಿ ಚೇತ್ಯುಕ್ತ್ವಾ ಹ್ಯಾಕಾಶಮಿವ ನಿರ್ಮಲಾ ।
ಆಶ್ವಾಸಯಂತೀ ತಂ ವಿಪ್ರಂ ಪ್ರೋವಾಚ ವಚನಂ ತದಾ ॥ ೧೭ ॥
ವದಸ್ವ ಕಾರಣಂ ತಾತ ಗುಹ್ಯಾದ್ಗುಹ್ಯತರಂ ಯದಿ ।
ಪ್ರತೀಕಾರೋಽಸ್ಯ ಯೇನೈವ ವಿಮೃಶ್ಯ ಕ್ರಿಯತೇ ತ್ವರಾ ॥ ೧೮ ॥
ತತಃ ಸ ಸುಚಿರಂ ಧ್ಯಾತ್ವಾ ಲಬ್ಧವಾಗ್ಭ್ಯ ತತಃ ಕ್ಷಣಂ ।
ಪ್ರೋವಾಚ ಸಾಧ್ವಸಮನಾ ಯತ್ತಚ್ಛೃಣು ನರೇಶ್ವರ ॥ ೧೯ ॥

---

೧೩. ಮುನಿಯು ಬೆಳಗ್ಗೆ ಆ ವಸ್ತ್ರವನ್ನು ಇಲ್ಲಿ ಅಲ್ಲಿ ಹುಡುಕಿದನು. ಬಳಿಕ ಆ ತಂಗಿಯು, "ಅಣ್ಣಾ! ಏನನ್ನು ಹುಡುಕುವೆ? ಯಾವುದರಿಂದ ನಿನ್ನ ಕಾರ್ಯವಾಗಬೇಕು? ನಿಜವಾಗಿ ನನಗೆ ಹೇಳು."

೧೪. ಯಾಜ್ಞವಲ್ಕ್ಯನು ಹೇಳುತ್ತಾನೆ:—ಮಂಗಳಕರಳೆ! ನಾನು ಈ ದಿನ ರಾತ್ರಿ ಅಶುದ್ಧವಾದ ಒಂದು ಸ್ವಪ್ನವನ್ನು ಕಂಡೆನು. ಅದರಿಂದ ವೀರ್ಯಕ್ಲಿನ್ನವಾದ ನನ್ನ ಕೌಪೀನವನ್ನು ಅಲ್ಲಿ ಎಸೆದಿದ್ದೆನು. ಅದೀಗ ಕಾಣಿಸುವುದಿಲ್ಲ.

೧೫. ಬ್ರಾಹ್ಮಣಿಯು ಆ ಮಾತನ್ನು ಕೇಳಿ ಅತಿ ಭಯಗೊಂಡವಳಾಗಿ "ಅಣ್ಣಾ! ನಾನು ಆ ವಸ್ತ್ರವನ್ನು ಅಂತರ್ವಸ್ತ್ರವನ್ನಾಗಿ ಮಾಡಿಕೊಂಡೆನು" ಎಂದಳು.

೧೬. ಅವಳ ಆ ಮಾತನ್ನು ಕೇಳಿ ಯಾಜ್ಞವಲ್ಕ್ಯನು "ಅಯ್ಯೋ!" ಎಂದು ಕಡಿದ ಮರದಂತೆ ನೆಲದ ಮೇಲೆ ಬಿದ್ದನು.

೧೭. ಆಕಾಶದಂತೆ ನಿರ್ಮಲಳಾದ ಅವಳು ಇದೇನೆಂದು ಹೇಳಿ ಆ ಮುನಿಯನ್ನು ಸಮಾಧಾನಗೊಳಿಸುತ್ತ ಇಂತೆಂದಳು.

೧೮. "ಅಣ್ಣಾ! ಕಾರಣವು ಅತಿ ಗುಟ್ಟಾಗಿದ್ದರೂ ಅದನ್ನು ನನಗೆ ಹೇಳು. ಆಲೋಚಿಸಿ ಅದಕ್ಕೆ ಪ್ರತೀಕಾರವನ್ನು ಮಾಡುವೆನು.

೧೯. ಬಳಿಕ ಆ ಮುನಿಯು ಬಹಳ ಹೊತ್ತು ಆಲೋಚಿಸಿ ಮಾತನಾಡಲು ಶಕ್ತನಾಗಿ ಭಯಗೊಂಡ ಮನಸ್ಸುಳ್ಳವನಾಗಿ ಏನನ್ನು ಹೇಳಿದನೆಂಬುದನ್ನು ಕೇಳು.

ನಾಽಸ್ತಿ ದೋಷೋಽಸ್ತಿ ತೇ ಕಶ್ಚಿನ್ಮಮ ಚೈವ ಶುಭವ್ರತೇ ।
ತವೋದರೇತು ಗರ್ಭೋ ಯಸ್ತತ್ರ ದೈವಂ ಪರಾಯಣಂ ॥ ೨೦ ॥
ತಸ್ಯ ತತ್ತ್ವೇನ ರಕ್ಷಾ ಚ ತ್ವಯಾ ಕಾರ್ಯಾ ಸದೈವ ಹಿ ।
ವಿನಾಶೀ ನೈವ ಕರ್ತವ್ಯೋ ಯಾವತ್ಕಾಲಸ್ಯ ಪರ್ಯಯಃ ॥ ೨೧ ॥
ತಥೇತಿ ವ್ರೀಡಿತಾ ಸಾಧ್ವೀ ದೂಯಮಾನೇನ ಚೇತಸಾ ।
ಅಪಾಲಯಚ್ಚ ತಂ ಗರ್ಭಂ ಯಾವತ್ಪುತ್ರೋ ಹ್ಯಜಾಯತ ॥ ೨೨ ॥
ಜಾತಮಾತ್ರಂ ಚ ತಂ ಗರ್ಭಂ ಗೃಹೀತ್ವಾ ಬ್ರಾಹ್ಮಣೀ ಚ ಸಾ ।
ಅಶ್ವತ್ಥಚ್ಛಾಯಾಮಾಶ್ರಿತ್ಯ ತಮುತ್ಸೃಜ್ಯ ವಚೋಽಬ್ರವೀತ್ ॥ ೨೩ ॥
ಯಾನಿ ಸತ್ವಾನಿ ಲೋಕೇಷು ಸ್ಥಾವರಾಣಿ ಚರಾಣಿ ಚ ।
ತಾನಿ ಸರ್ವಾಣಿ ರಕ್ಷಂತು ತ್ಯಕ್ತಂ ವೈ ಬಾಲಕಂ ಮಯಾ ॥ ೨೪ ॥
ಏವಮುಕ್ತ್ವಾ ಗತಾ ಸಾತು ಬ್ರಾಹ್ಮಣೀ ನೃಪಸತ್ತಮ ।
ತಥಾಗತಃ ಸ ತು ಶಿಶುಸ್ತತ್ರ ಸ್ಥಿತ್ವಾ ಮುಹೂರ್ತಕಂ ॥ ೨೫ ॥
ಪಾಣಿಪಾದೌ ವಿನಿಕ್ಷಿಪ್ಯ ನಿಕುಂಚ್ಯ ನಯನೇ ಶುಭೇ ।
ಆಸ್ಯಂ ತು ವಿವೃತಂ ಕೃತ್ವಾ ರುರೋದ ವಿಕೃತೈಃ ಸ್ವರೈಃ ॥ ೨೬ ॥
ತೇನ ಶಬ್ದೇನ ವಿತ್ರಸ್ತಾಃ ಸ್ಥಾವರಾ ಜಂಗಮಾಶ್ಚ ಯೇ ।
ಆಕಂಪಿತಾ ಮಹೋತ್ಪಾತೈಃ ಸಶೈಲವನಕಾನನಾ ॥ ೨೭ ॥

---

೨೦. "ಮಂಗಳವ್ರತಳೆ! ಈ ವಿಷಯದಲ್ಲಿ ನಿನ್ನ ತಪ್ಪಿಲ್ಲ. ನಿನ್ನ ಉದರದಲ್ಲಿರುವ ಗರ್ಭಕ್ಕೆ ಅದೃಷ್ಟವೇ ಕಾರಣವಾಗಿರುವುದು.

೨೧. ನೀನು ನಿಜವಾಗಿಯೂ ಅದನ್ನು ಯಾವಾಗಲೂ ಕಾಪಾಡು. ಕಾಲವ್ಯತ್ಯಾಸವಾಗುವವರೆಗೆ ಅದನ್ನು ಹಾಳುಮಾಡಬೇಡ."

೨೨. ಪತಿವ್ರತೆಯಾದ ಅವಳು ಹಾಗೆಯೇ ಆಗಲೆಂದು ಲಜ್ಜಿತಳಾಗಿ ವ್ಯಥೆಗೊಂಡ ಮನಸ್ಸಿನಿಂದ ಪುತ್ರನು ಜನಿಸುವವರೆಗೆ ಆ ಗರ್ಭವನ್ನು ಕಾಪಾಡಿದಳು.

೨೩. ಆ ಬ್ರಾಹ್ಮಣಿಯು ಪ್ರಸವವಾದ ಕೂಡಲೆ ಅಶ್ವತ್ಥದ ನೆರಳಿನಲ್ಲಿ ಆ ಶಿಶುವನ್ನು ತ್ಯಜಿಸಿ ಹೀಗೆಂದಳು.

೨೪. "ನಾನು ತ್ಯಜಿಸಿರುವ ಈ ಬಾಲಕನನ್ನು ಪ್ರಪಂಚದಲ್ಲಿರುವ ಸ್ಥಾವರಜಂಗಮ ವಸ್ತುಗಳು ಕಾಪಾಡಲಿ."

೨೫–೨೬. ಆ ಬ್ರಾಹ್ಮಣಿಯು ಹೀಗೆಂದು ಹೊರಟುಹೋದಳು. ಆ ಶಿಶುವು ಹಾಗೆಯೇ ಸ್ವಲ್ಪ ಹೊತ್ತು ಇದ್ದು ಅನಂತರ ಕೈಕಾಲುಗಳನ್ನು ಚಾಚಿ, ಕಣ್ಣುಗಳನ್ನು ಮುಚ್ಚಿಕೊಂಡು ಬಾಯಿಯನ್ನು ತೆರೆದು ವಿಕಾರ ಸ್ವರದಿಂದ ಅತ್ತಿತು.

೨೭. ಆ ಶಬ್ದದಿಂದ ಸ್ಥಾವರಜಂಗಮಗಳು ಭಯಗೊಂಡುವು. ಮಹೋತ್ಪಾತಗಳಿಂದ ಪರ್ವತ ಕಾಡುಗಳಿಂದ ಸಹಿತವಾದ ಭೂಮಿಯು ಅದರಿತು.

ತತೋ ಜ್ಞಾತ್ವಾ ಮಹದ್ಭೂತಂ ಕ್ಷುಧಾವಿಷ್ಟಂ ದ್ವಿಜರ್ಷಭಂ ।
ನ ಜಹಾತಿ ನಗಚ್ಛಾಯಾಂ ಪಾನಾರ್ಥಾಯ ತತಃ ಪರಂ ।
ಅಪಿಬಚ್ಚ ಸ್ರುತಂ ತಸ್ಮಾದಮೃತಂ ಚೈವ ಭಾರತ ॥ ೨೮ ॥
ಏವಂ ಸ ವರ್ಧಿತಸ್ತತ್ರ ಕುಮಾರೋ ನಿಜಚೇತಸಿ ।
ಚಿಂತಯಾಮಾಸ ವಿಸ್ರಬ್ಧಃ ಕಿಂ ಮಮ ಗ್ರಹಗೋಚರಂ ॥ ೨೯ ॥
ತತಃ ಕ್ರೂರಸಮಾಚಾರಃ ಕ್ರೂರಂ ದೃಷ್ಟ್ವಾ ನಿರೀಕ್ಷಿತಃ ।
ಪಪಾತ ಸಹಸಾ ಭೂಮೌ ಶನೈಶ್ಚಾರೀ ಶನೈಶ್ಚರಃ ॥ ೩೦ ॥
ಉವಾಚ ಚ ಭಯತ್ರಸ್ತಃ ಕೃತಾಂಜಲಿಪುಟಸ್ತದಾ ।
ಕಿಂ ಮಯಾಽಪಕೃತಂ ವಿಪ್ರ ಪಿಪ್ಪಲಾದ ಮಹಾಮುನೇ ॥ ೩೧ ॥
ಚರನ್ವ್ಯೈ ಗಗನಾದ್ಯೇನ ಪಾತಿತೋ ಧರಣೀತಲೇ ।
ಸೌರಿಣಾ ಹ್ಯೇವಮುಕ್ತಸ್ತು ಪಿಪ್ಪಲಾದೋ ಮಹಾಮುನಿಃ ॥ ೩೨ ॥
ಕ್ರೋಧರೂಪೋಽಬ್ರವೀದ್ವಾಕ್ಯಂ ತಚ್ಛೃಣುಷ್ವ ನರಾಧಿಪ ।
ಪಿತೃಮಾತೃವಿಹೀನಸ್ಯ ಮಮ ಬಾಲಸ್ಯ ದುರ್ಮತೇ ।
ಪೀಡಾಂ ಕರೋಷಿ ಕಸ್ಮಾತ್ತ್ವಂ ಸೌರೇ ಬ್ರೂಹಿ ಹ್ಯಶೇಷತಃ ॥ ೩೩ ॥

---

೨೮. ಬಳಿಕ ಆ ಬ್ರಾಹ್ಮಣ ಶಿಶುವು ಹಸಿವುಗೊಂಡಿರುವುದನ್ನರಿತು ಅಶ್ವತ್ಥ ವೃಕ್ಷವು ತನ್ನ ನೆರಳನ್ನು ಅವನ ಮೇಲಿನಿಂದ ತೆಗೆಯಲಿಲ್ಲ. ಕುಡಿಯುವುದಕ್ಕಾಗಿ ತನ್ನ ರಸವನ್ನು ಸುರಿಸಿತು. ಆ ಶಿಶುವು ಅದನ್ನು ಕುಡಿಯಿತು.

೨೯. ಅಲ್ಲಿ ಹೀಗೆ ಬೆಳೆದ ಆ ಕುಮಾರನು ತನ್ನ ಮನಸ್ಸಿನಲ್ಲಿನ ಧೈರ್ಯದಿಂದ ನನಗೆ ಈಗ ಗೋಚರವಾದ ಗ್ರಹವು ಯಾವುದೆಂದು ಆಲೋಚಿಸಿದನು.

೩೦. ಬಳಿಕ ಅವನು ಮೆಲ್ಲನೆ ಸಂಚರಿಸುವ ಶನಿಗ್ರಹವನ್ನು ಕಠಿನವಾಗಿ ನೋಡಲು ಕ್ರೂರನಾದ ಶನಿಯು ಭೂಮಿಯ ಮೇಲೆ ಬಿದ್ದನು.

೩೧. ಭಯಗೊಂಡ ಆ ಶನಿಯು ಕೈಮುಗಿದುಕೊಂಡು, "ಅಯ್ಯಾ ವಿಪ್ರನಾದ ಪಿಪ್ಪಲಾದನೆ! ನಾನು ನಿನಗೆ ಏನು ಅಪಕಾರಮಾಡಿದೆನು?

೩೨–೩೩. ಆಕಾಶದಲ್ಲಿ ಸಂಚರಿಸುವ ನನ್ನನ್ನು ಏಕೆ ನೆಲದಲ್ಲಿ ಬೀಳಿಸಿರುವೆ?" ಎಂದು ಕೇಳಿದನು. ಅರಸ! ಶನಿಯು ಹೀಗೆ ಹೇಳಲು ಕ್ರುದ್ಧನಾದ ಪಿಪ್ಪಲಾದ ಮುನಿಯು ಹೇಳಿದ ವಾಕ್ಯವನ್ನು ಕೇಳು. "ಮೂಢ! ಶನಿಯೆ! ತಂದೆತಾಯಿಗಳಿಲ್ಲದ ಬಾಲಕನಾದ ನನಗೆ ಏಕೆ ಪೀಡೆಯನ್ನುಂಟುಮಾಡುವೆ? ಸಮಗ್ರವಾಗಿ ಹೇಳು."

**ಶನೈಶ್ಚರ ಉವಾಚ :—**

**ಕ್ರೂರಸ್ಸ್ವಭಾವಃ ಸಹಜೋ ಮಮ ದೃಷ್ಟಿಸ್ತಥೇದೃಶೀ ।**
**ಮುಂಚಸ್ವ ಮಾಂ ತಥಾ ಕರ್ತಾ ಯದ್ಬ್ರವೀಷಿ ನ ಸಂಶಯಃ ॥ ೩೪ ॥**

**ಪಿಪ್ಪಲಾದ ಉವಾಚ :—**

**ಅದ್ಯಪ್ರಭೃತಿ ಬಾಲಾನಾಂ ವರ್ಷಾದಾಷೋಡಶಾದ್ಗ್ರಹ ।**
**ಪೀಡಾ ತ್ವಯಾ ನ ಕರ್ತವ್ಯಾ ಏಷ ತೇ ಸಮಯಃ ಕೃತಃ ॥ ೩೫ ॥**
**ಏವಮಸ್ತ್ವಿತಿ ಚೋಕ್ತ್ವಾ ಸ ಜಗಾಮ ಪುನರಾಗತಃ ।**
**ದೇವಮಾರ್ಗಂ ಶನೈಶ್ಚಾರೀ ಪ್ರಣಮ್ಯ ಋಷಿಸತ್ತಮಂ ॥ ೩೬ ॥**
**ಗತೇ ಚಾದರ್ಶನಂ ತತ್ರ ಸೋಽಪಿ ಬಾಲೋ ಮಹಾಗ್ರಹಃ ।**
**ವಿಚಿಂತಯನ್ಪಿತರಂ ಕ್ರೋಧೇನ ಕಲುಷೀಕೃತಃ ॥ ೩೭ ॥**
**ಆಗ್ನೇಯೀಂ ಧಾರಣಾಂ ಧ್ಯಾತ್ವಾ ಜನಯಾಮಾಸ ಪಾವಕಂ ।**
**ಕೃತ್ಯಾಮಂತ್ರೈರ್ಜುಹಾವಾಗ್ನೌ ಕೃತ್ಯಾ ವೈ ಸಂಭವತ್ವಿತಿ ॥ ೩೮ ॥**
**ತಾವಜ್ಝಟಿತಿ ಸಾ ಕನ್ಯಾ ಜ್ವಾಲಾಮಾಲಾವಿಭೂಷಿತಾ ।**
**ಹುತಭುಕ್ಸದೃಶಾಕಾರಾ ಕಿಂಕರೋಮೀತಿ ಚಾಽಬ್ರವೀತ್ ॥ ೩೯ ॥**
**ಶೋಷಯಾಮಿ ಸಮುದ್ರಾನ್ಕಿಂ ಚೂರ್ಣಯಾಮಿ ಚ ಪರ್ವತಾನ್ ।**
**ಅವನಿಂ ವೇಷ್ಟಯಾಮೀತಿ ಪಾತಯೇ ಕಿಂ ನಭಸ್ತಲಂ ॥ ೪೦ ॥**

---

೩೪. ಶನೈಶ್ಚರನು ಹೇಳುತ್ತಾನೆ:— ಕ್ರೂರಸ್ವಭಾವವು ನನಗೆ ಸ್ವಾಭಾವಿಕವಾದುದು. ನನ್ನ ದೃಷ್ಟಿಯು ಇಂಥಾದ್ದೇ. ನನ್ನನ್ನು ಬಿಡು. ನಿಜವಾಗಿಯೂ ನೀನು ಹೇಳಿದ್ದನ್ನು ಮಾಡುವೆನು.

೩೫. ಪಿಪ್ಪಿಲಾದನು ಹೇಳುತ್ತಾನೆ:—ಇದು ಮೊದಲ್ಗೊಂಡು ನೀನು ಬಾಲಕರಿಗೆ ಹದಿನಾರು ವರ್ಷತುಂಬುವವರೆಗೆ ಪೀಡೆಯನ್ನುಂಟುಮಾಡಬಾರದು. ಹೀಗೆ ನಿನಗೆ ಕಟ್ಟುಮಾಡಿರುವೆನು.

೩೬. ಆ ಶನೈಶ್ಚರನು ಹೀಗೆಯೇ ಆಗಲೆಂದು ಹೇಳಿ ಅವನನ್ನು ವಂದಿಸಿ ದೇವಮಾರ್ಗಕ್ಕೆ ಬಂದನು.

೩೭. ಆ ಶನಿಯು ಕಣ್ಮರೆಯಾಗಲು ಅತ್ಯಂತಾಗ್ರಹವುಳ್ಳ ಆ ಬಾಲಕನು ತಂದೆಯನ್ನು ಚಿಂತಿಸುತ್ತ ಕುಪಿತನಾದನು.

೩೮. ಆಗ್ನೇಯಧಾರಣೆಯಿಂದ ಚಿಂತಿಸಿ ಅಗ್ನಿಯನ್ನುಂಟುಮಾಡಿ ಅದರಲ್ಲಿ ಕೃತ್ಯಾಮಂತ್ರಗಳಿಂದ ಕೃತ್ಯೆಯು ಹುಟ್ಟಲೆಂದು ಹೋಮಿಸಿದನು.

೩೯–೪೧. ಅಷ್ಟರಲ್ಲಿ ಕೂಡಲೆ ಅಗ್ನಿಜ್ವಾಲೆಯಿಂದ ಅಲಂಕಾರಗೊಂಡವಳೂ, ಬೆಂಕಿಗೆ ಸಮಾನಾಕಾರಳೂ ಆದ ಕನ್ಯೆಯು ಉದ್ಭವಿಸಿ, "ಸಮುದ್ರಗಳನ್ನು ಬತ್ತಿಸಲೊ? ಪರ್ವತಗಳನ್ನು ಪುಡಿಮಾಡಲೊ? ಭೂಮಿಯನ್ನು

ಕಸ್ಯ ಮೂರ್ಧ್ನಿ ಪತಿಷ್ಯಾಮಿ ಘಾತಯಾಮಿ ಚ ಕಂ ದ್ವಿಜ ।
ಶೀಘ್ರಮಾದಿಶ್ಯತಾಂ ಕಾರ್ಯಂ ಮಾ ಮೇ ಕಾಲಾತ್ಯಯೋ ಭವೇತ್॥೪೧॥
ತಸ್ಯಾಸ್ತದ್ವಚನಂ ಶ್ರುತ್ವಾ ಪಿಪ್ಪಲಾದೋ ಮಹಾತಪಾಃ ।
ಕ್ರೋಧಸಂರಕ್ತನಯನ ಇದಂ ವಚನಮಬ್ರವೀತ್ ॥ ೪೨ ॥
ಮಹತಾ ಕ್ರೋಧವೇಗೇನ ಮಯಾ ತ್ವಂ ಚಿಂತಿತಾ ಶುಭೇ ।
ಪಿತಾ ಮೇ ಯಾಜ್ಞ್ಯವಲ್ಕ್ಯಶ್ಚ ತಸ್ಯ ತ್ವಂ ಪತ ಮಾಚಿರಂ ॥ ೪೩ ॥
ಏವಮುಕ್ತ್ವಾಽಗಮಚ್ಛೀಘ್ರಂ ಸ್ಫೋಟಯಂತೀ ನಭಸ್ತಲಂ ।
ಮಿಥಿಲಾಸ್ಥೋ ಮಹಾಪ್ರಾಜ್ಞಸ್ತಪಸ್ತೇಪೇ ಮಹಾಮನಾಃ ॥ ೪೪ ॥
ಯಾವತ್ಪಶ್ಯತಿ ದಿಗ್ಭಾಗಂ ಜ್ವಲನಾರ್ಕಸಮಪ್ರಭಂ ।
ಯಾಜ್ಞ್ಯವಲ್ಕ್ಯೋ ಮಹಾತೇಜಾ ಮಹದ್ಭೂತಮುಪಸ್ಥಿತಂ ॥ ೪೫ ॥
ತದ್ದೃಷ್ಟ್ವಾ ಸಹಸಾಯಾಂತಂ ಭೀತಭೀತೋ ಮಹಾಮುನಿಃ ।
ಅನುಯುಕ್ತೋಽಥ ಭೂತೇನ ಜನಕಂ ನೃಪತಿಂ ಯಯೌ ॥ ೪೬ ॥
ಶರಣ್ಯಂ ಮಾಮನುಪ್ರಾಪ್ತಂ ವಿದ್ಧಿ ತ್ವಂ ನೃಪಸತ್ತಮ ।
ಮಹದ್ಭೂತಭಯಾದ್ರಕ್ಷ ಯದಿ ಶಕ್ತೋಽಸಿ ಪಾರ್ಥಿವ ॥ ೪೭ ॥

---

ಸುತ್ತಲೊ? ಆಕಾಶವನ್ನು ಕೆಡವಲೊ? ಯಾರ ತಲೆಯಲ್ಲಿ ಬೀಳಲಿ? ಯಾರನ್ನು ಕೊಲ್ಲಲಿ? ಏನನ್ನು ಮಾಡಲಿ? ಶೀಘ್ರವಾಗಿ ಅಪ್ಪಣೆಮಾಡು. ಕಾಲಾತಿಕ್ರಮವಾಗಬಾರದು'' ಎಂದು ಕೇಳಿದಳು.

೪೨. ಅತಿ ತಪಸ್ವಿಯಾದ ಪಿಪ್ಪಲಾದ ಮುನಿಯು ಅವಳ ಆ ಮಾತನ್ನು ಕೇಳಿ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಇಂತೆಂದನು.

೪೩. '' ಮಂಗಳಕರಳೆ! ನಾನು ಅತಿ ಕೋಪದಿಂದ ನಿನ್ನನ್ನು ಚಿಂತಿಸಿದೆನು. ನೀನು ನನ್ನ ತಂದೆಯಾದ ಯಾಜ್ಞವಲ್ಕ್ಯನ ಮೇಲೆ ಬೇಗನೆ ಬೀಳು.''

೪೪–೪೫. ಪಿಪ್ಪಲಾದನು ಹೀಗೆನ್ನಲು ಆ ಕೃತ್ಯಾಕನ್ಯೆಯು ಆಕಾಶದಲ್ಲಿ ಆರ್ಭಟಿಸುತ್ತ ಹೋದಳು. ಮಿಥಿಲಾನಗರದಲ್ಲಿ ತಪಸ್ಸನ್ನು ಮಾಡುತ್ತಿರುವ ಯಾಜ್ಞವಲ್ಕ್ಯನು ಅಗ್ನಿಸೂರ್ಯರಿಗೆ ಸಮಾನಕಾಂತಿಯುಳ್ಳ ದಿಕ್ಕನ್ನು ನೋಡಲು ಅಲ್ಲಿ ಮಹಾ ಭೂತವು ಸಮೀಪಿಸಿತು.

೪೬. ಯಾಜ್ಞವಲ್ಕ್ಯನು ಅಕಸ್ಮಾತ್ತಾಗಿ ಬರುತ್ತಿರುವ ಆ ಭೂತವನ್ನು ಕಂಡು ಅತಿ ಭೀತಿಗೊಂಡು ಅದರಿಂದ ಹಿಂಬಾಲಿಸಲ್ಪಟ್ಟವನಾಗಿ ಜನಕರಾಜನೆಡೆಗೆ ಹೋದನು.

೪೭. '' ದೊರೆಯೆ! ನಾನು ನಿನ್ನನ್ನು ಮರೆಹೋಗಲು ಬಂದಿರುವೆನೆಂದು ತಿಳಿ. ನೀನು ಸಮರ್ಥನಾಗಿದ್ದರೆ ಈ ಮಹಾಭೂತದ ಭಯದಿಂದ ನನ್ನನ್ನು ಕಾಪಾಡು'' ಎಂದನು.

ಬ್ರಹ್ಮತೇಜೋಭವಂ ಭೂತಮನಿವಾರ್ಯಂ ದುರಾಸದಂ ।
ನ ಚ ಶಕ್ನೋಮ್ಯಹಂ ತ್ರಾತುಂ ರಾಜಾ ವಚನಮಬ್ರವೀತ್ ॥ ೪೮ ॥
ತತಶ್ಚಾಽನ್ಯಂ ನೃಪಶ್ರೇಷ್ಠಂ ಶರಣಾರ್ಥೀ ಮಹಾತಪಾಃ ।
ಜಗಾಮ ತೇನ ಮುಕ್ತೋಽಸೌ ಚೇಂದ್ರಸ್ಯ ಸದನಂ ಭಯಾತ್ ॥ ೪೯ ॥
ದೇವರಾಜ ನಮಸ್ತೇಽಸ್ತು ಮಹಾಭೂತ ಭಯಾನ್ನೃಪ ।
ಕಂಪಮಾನೋಽಬ್ರವೀದ್ವಿಪ್ರೋ ರಕ್ಷಸ್ವೇತಿ ಪುನಃ ಪುನಃ ॥ ೫೦ ॥
ತಸ್ಯ ತದ್ವಚನಂ ಶ್ರುತ್ವಾ ದೇವರಾಜೋಽಬ್ರವೀದಿದಂ ।
ನ ಶಕ್ನೋಮಿ ಪರಿತ್ರಾತುಂ ಬ್ರಹ್ಮಕೋಪಾದಹಂ ಮುನೇ ॥ ೫೧ ॥
ತತಃ ಸ ಬ್ರಹ್ಮಭವನಂ ಬ್ರಾಹ್ಮಣೋ ಬ್ರಹ್ಮವಿತ್ತಮಃ ।
ಜಗಾಮ ವಿಷ್ಣುಲೋಕಂ ಚ ತೇನಾಽಪೀತ್ಯುಕ್ತ ಏವ ಸಃ ॥ ೫೨ ॥
ತತಃ ಸ ಮುನಿರುದ್ವಿಗ್ನೋ ನಿರಾಶೋ ಜೀವಿತೇ ನೃಪ ।
ಅನುಗಮ್ಯಮಾನೋ ಭೂತೇನ ಅಗಚ್ಛಚ್ಛಂಕರಾಲಯಂ ॥ ೫೩ ॥
ತಸ್ಯ ಯೋಗಬಲೋಪೇತೋ ಮಹಾದೇವಸ್ಯ ಪಾಂಡವ ।
ನಖಮಾಂಸಾಂತರೇ ಗುಪ್ತೋ ಯಥಾ ದೇವೋ ನ ಪಶ್ಯತಿ ॥ ೫೪ ॥

---

೪೮. ಆ ದೊರೆಯು, "ಈ ಭೂತವು ಬ್ರಹ್ಮತೇಜಸ್ಸಿನಿಂದ ಹುಟ್ಟಿ ತಡೆಯಲ ಸಾಧ್ಯವಾಗಿರುವುದರಿಂದ ನಿನ್ನನ್ನು ಕಾಪಾಡಲು ನಾನು ಸಮರ್ಥನಲ್ಲ" ಎಂದನು.

೪೯. ಬಳಿಕ ಮಹಾ ತಪಸ್ವಿಯಾದ ಆ ಮುನಿಯು ಶರಣಾರ್ಥಿಯಾಗಿ ಮತ್ತೊಬ್ಬ ರಾಜನೆಡೆಗೆ ಹೋಗಿ ಅವನಿಂದಲೂ ಮುಕ್ತನಾಗಿ ಭಯದಿಂದ ಇಂದ್ರನ ಮನೆಗೆ ಹೋದನು.

೫೦. ನಡುಗುತ್ತಿರುವ ಆ ಮುನಿಯು, "ದೇವೇಂದ್ರ! ನಿನಗೆ ನಮಸ್ಕಾರವು. ನನ್ನನ್ನು ಈ ಮಹಾ ಭೂತದ ಭಯದಿಂದ ರಕ್ಷಿಸು" ಎಂದು ಪುನಃ ಪುನಃ ಹೇಳಿದನು.

೫೧. ದೇವೇಂದ್ರನು ಅವನ ಆ ಮಾತನ್ನು ಕೇಳಿ, "ಮುನಿಯೆ! ನಾನು ಬ್ರಾಹ್ಮಣನ ಕೋಪದಿಂದ ನಿನ್ನನ್ನು ಕಾಪಾಡಲು ಶಕ್ತನಲ್ಲ" ಎಂದನು.

೫೨. ಬಳಿಕ ಬ್ರಹ್ಮಜ್ಞಾನಿಯಾದ ಅವನು ಬ್ರಹ್ಮನ ಮನೆಗೂ, ವಿಷ್ಣು ಲೋಕಕ್ಕೂ ಹೋಗಿ ಅವರಿಂದಲೂ ಹೀಗೆಯೇ ಹೇಳಲ್ಪಟ್ಟನು.

೫೩. ತರುವಾಯ ಆ ಮುನಿಯು ವ್ಯಥೆಗೊಂಡು ಬದುಕಿನಲ್ಲಿ ಆಶೆಯಿಲ್ಲ ದವನಾಗಿ ಭೂತದಿಂದ ಹಿಂಬಾಲಿಸಲ್ಪಟ್ಟವನಾಗಿ ಶಂಕರನ ಮನೆಗೆ ಹೋದನು.

೫೪. ಯುಧಿಷ್ಠಿರ! ಅವನು ಯೋಗಬಲದಿಂದ ಶಂಕರನು ನೋಡದಂತೆ ಅವನ ಉಗುರು ಮಾಂಸಗಳ ನಡುವೆ ಅಡಗಿಕೊಂಡನು.

ತದಂತೇ ಚಾಽಽಗಮುದ್ಭೂತಂ ಜ್ವಲನಾರ್ಕಸಮಪ್ರಭಂ ।
ಮುಂಚ ಮುಂಚೇತಿ ಪುರುಷಂ ದೇವದೇವಂ ಮಹೇಶ್ವರಂ ॥ ೫೫ ॥
ಏವಮುಕ್ತೋ ಮಹಾದೇವಸ್ತೇನ ಭೂತೇನ ಭಾರತ ।
ಯೋಗೀಂದ್ರಂ ದರ್ಶಯಾಮಾಸ ನಖಮಾಂಸಾಂತರೇ ತದಾ ॥ ೫೬ ॥
ಸಂಸ್ಥಾಪ್ಯ ಭೂತಂ ಭೂತೇಶಃ ಪರಮಾಪದ್ಗತಂ ಮುನಿಂ ।
ಉವಾಚ ಮಾಭೈಸ್ತ್ವಂ ವಿಪ್ರ ನಿರ್ಗಚ್ಛಸ್ವ ಮಹಾಮುನೇ ॥ ೫೭ ॥
ತತಃ ಸುಸೂಕ್ಷ್ಮದೇಹಸ್ಥಂ ಭೂತಂ ದೃಷ್ಟ್ವಾಽಬ್ರವೀದಿದಂ ।
ಕಿಮಸ್ಯ ತ್ವಂ ಮಹಾಭೂತ ಕರಿಷ್ಯಸಿ ವದಸ್ವ ಮೇ ॥ ೫೮ ॥

ಕೃತ್ಯೋವಾಚ :—

ಕ್ರೋಧಾವಿಷ್ಟೇನ ದೇವೇಶ ಪಿಪ್ಪಲಾದೇನ ಚಿಂತಿತಾ ।
ಅಸ್ಯ ದೇಹಂ ಹನಿಷ್ಯಾಮಿ ಹಿಂಸಾರ್ಥಂ ವಿದ್ಧಿ ಮಾಂ ಪ್ರಭೋ ॥ ೫೯ ॥
ಏತಚ್ಛ್ರುತ್ವಾ ಮಹಾದೇವೋ ಭೂತಸ್ಯ ವದನಾಚ್ಚ್ಯುತಂ ।
ಕಟಿಸ್ಥಂ ಯಾಜ್ಞ್ಯವಲ್ಕ್ಯಂ ಚ ಮಂತ್ರಯಾಮಾಸ ಮಂತ್ರವಿತ್ ॥ ೬೦ ॥
ಯೋಗೀಶ್ವರೇತಿ ವಿಪ್ರಸ್ಯ ಕೃತ್ವಾ ನಾಮ ಯುಧಿಷ್ಠಿರ ।
ವಿಸರ್ಜಯಿತ್ವಾ ದೇವೇಶಸ್ತತ್ರೈವಾಂತರಧೀಯತ ॥ ೬೧ ॥

---

೫೫. ಬೆಂಕಿ, ಸೂರ್ಯರಂತೆ ಕಾಂತಿಯುಳ್ಳ ಆ ಭೂತವು ಮಹೇಶ್ವರನನ್ನು ಕುರಿತು ಈ ಪುರುಷನನ್ನು "ಬಿಡು ಬಿಡು" ಎಂದಿತು.

೫೬. ಆ ಭೂತವು ಹೀಗೆನ್ನಲು ಮಹಾದೇವನು ನಖಮಾಂಸಗಳ ನಡುವೆ ಆ ಯೋಗೀಂದ್ರನನ್ನು ತೋರಿಸಿದನು.

೫೭. ಶಂಕರನು ಆ ಭೂತವನ್ನು ತಡೆದು ಆಪದ್ಗ್ರಸ್ತನಾದ ಮುನಿಯನ್ನು ಕುರಿತು, "ಮುನಿಯೆ! ನೀನು ಹೆದರಬೇಡ ಹೊರಡು" ಎಂದನು.

೫೮. ಬಳಿಕ ಶಂಕರನು ಸೂಕ್ಷ್ಮದೇಹಸ್ಥವಾದ ಭೂತವನ್ನು ನೋಡಿ "ಮಹಾಭೂತವೆ! ನೀನು ಇವನನ್ನು ಏನನ್ನು ಮಾಡುವೆ? ಹೇಳು" ಎಂದನು.

೫೯. ಕೃತ್ಯೆಯು ಹೇಳುತ್ತಾಳೆ:—ದೇವೇಶ! ಪಿಪ್ಪಲಾದನು ಕುಪಿತನಾಗಿ ನನ್ನನ್ನು ಚಿಂತಿಸಿದನು. ಇವನನ್ನು ಕೊಲ್ಲುವೆನು. ನಾನು ಹಿಂಸೆಗಾಗಿ ಬಂದಿರುವೆನೆಂದು ತಿಳಿ.

೬೦. ಇದನ್ನು ಕೇಳಿ ಮಂತ್ರಜ್ಞನಾದ ಮಹಾದೇವನು ಭೂತದ ಬಾಯಿಯಿಂದ ಬಿದ್ದು ಸೊಂಟದಲ್ಲಿರುವ ಯಾಜ್ಞವಲ್ಕ್ಯನನ್ನು ಮಂತ್ರಿಸಿದನು.

೬೧. ಯುಧಿಷ್ಠಿರ! ಶಂಕರನು ಆ ಯಾಜ್ಞವಲ್ಕ್ಯನಿಗೆ ಯೋಗೀಶ್ವರ ಎಂದು ಹೆಸರನ್ನಿಟ್ಟು ಕಳುಹಿಸಿ ಅಲ್ಲಿಯೇ ಅದೃಶ್ಯನಾದನು.

ಪ್ರೇಷಯಿತ್ವಾಽಪಿ ತಂ ಭೂತಂ ಪಿಪ್ಪಲಾದೋಽಪಿ ದುರ್ಮನಾಃ ।
ಪಿತೃಮಾತೃ ಸಮುದ್ವಿಗ್ನೋ ನರ್ಮದಾತಟಮಾಶ್ರಿತಃ ॥ ೬೨ ॥
ಏಕಾಂಗುಷ್ಠೋ ನಿರಾಹಾರೋ ವರ್ಷಾದ್ದಾಷೋಡಶಾನ್ನೃಪ ।
ತೋಷಯಾಮಾಸ ದೇವೇಶಮುಮಯಾ ಸಹ ಶಂಕರಂ ॥ ೬೩ ॥
ತತಸ್ತತ್ತಪಸಾ ತುಷ್ಟಃ ಶಂಕರೋ ವಾಕ್ಯಮಬ್ರವೀತ್ ॥ ೬೪ ॥

ಈಶ್ವರ ಉವಾಚ :—

ಪರಿತುಷ್ಟೋಽಸ್ಮಿ ತೇ ವಿಪ್ರ ತಪಸಾಽನೇನ ಸುವ್ರತ ।
ವರಂ ವೃಣೀಷ್ವ ತೇ ದದ್ಮಿ ಮನಸಾ ಚೇಪ್ಸಿತಂ ಶುಭಂ ॥ ೬೫ ॥

ಪಿಪ್ಪಲಾದ ಉವಾಚ :—

ಯದಿ ಮೇ ಭಗವಾಂಸ್ತುಷ್ಟೋ ಯದಿ ದೇಯೋ ವರೋ ಮಮ ।
ಅತ್ರ ಸನ್ನಿಹಿತೋ ದೇವ ತೀರ್ಥೇ ಭವ ಮಹೇಶ್ವರ ॥ ೬೬ ॥
ಏವಮುಕ್ತಸ್ತಥೇತ್ಯುಕ್ತ್ವಾ ಪಿಪ್ಪಲಾದಂ ಮಹಾಮುನಿಂ ।
ಜಗಾಮಾದರ್ಶನಂ ದೇವೋ ಭೂತಸಂಘಸಮನ್ವಿತಃ ॥ ೬೭ ॥
ಪಿಪ್ಪಲಾದೋ ಗತೇ ದೇವೇ ಸ್ನಾತ್ವಾ ತತ್ರ ಮಹಾಂಭಸಿ ।
ಸ್ಥಾಪಯಿತ್ವಾ ಮಹಾದೇವಂ ಜಗಾಮೋತ್ತರಪರ್ವತಂ ॥ ೬೮ ॥
ತತ್ರ ತೀರ್ಥೇ ನರೋ ಭಕ್ತ್ಯಾ ಸ್ನಾತ್ವಾ ಮಂತ್ರಯುತಂ ನೃಪ ।
ತರ್ಪಯಿತ್ವಾ ಪಿತೄನ್ದೇವಾನ್ಪೂಜಯೇಚ್ಚ ಮಹೇಶ್ವರಂ ॥ ೬೯ ॥

---

೬೨. ಪಿಪ್ಪಲಾದನು ಆ ಭೂತವನ್ನು ಕಳುಹಿಸಿ ತಂದೆತಾಯಿಗಳಿಲ್ಲದಿರುವುದರಿಂದ ವ್ಯಥೆಗೊಂಡು ನರ್ಮದಾ ನದಿಯ ದಡವನ್ನಾಶ್ರಯಿಸಿದನು.

೬೩. ಅಲ್ಲಿ ಅವನು ಹದಿನಾರನೆಯ ವರ್ಷದಿಂದ ಅಂಗುಷ್ಠದ ಮೇಲೆ ನಿಂತು ನಿರಾಹಾರನಾಗಿ ಪಾರ್ವತಿಯೊಡನೆ ಶಂಕರನನ್ನು ಸಂತೋಷಗೊಳಿಸಿದನು.

೬೪. ಬಳಿಕ ಸಂತುಷ್ಟನಾದ ಶಂಕರನು ಹೇಗೆಂದನು.

೬೫–೬೬. ಈಶ್ವರನು ಹೇಳುತ್ತಾನೆ:—ಮುನಿಯೆ! ನಾನು ನಿನ್ನೀ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ. ಮನಸ್ಸಿಗೆ ಅಭಿಲಷಿತವಾದ ವರವನ್ನು ಕೇಳು ಅದನ್ನು ಕೊಡುತ್ತೇನೆ. ಪಿಪ್ಪಲಾದನು ಹೇಳುತ್ತಾನೆ:—ಮಹೇಶ್ವರ! ನೀನು ಸಂತುಷ್ಟನಾಗಿದ್ದರೆ ವರವನ್ನು ಕೊಡುವುದಾದರೆ ಈ ತೀರ್ಥದಲ್ಲಿ ಸನ್ನಿಹಿತನಾಗು.

೬೭. ಪಿಪ್ಪಲಾದನು ಹೀಗೆ ಹೇಳಲು ಶಂಕರನು ಹಾಗೆಯೇ ಆಗಲೆಂದು ಹೇಳಿ ಭೂತಸಮೂಹದೊಡನೆ ಅದೃಶ್ಯನಾದನು.

೬೮. ಶಂಕರನು ಹೊರಟುಹೋಗಲು ಪಿಪ್ಪಲಾದನು ಆ ನೀರಿನಲ್ಲಿ ಮಿಂದು ಮಹಾದೇವನನ್ನು ಸ್ಥಾಪಿಸಿ ಉತ್ತರ ಪರ್ವತಕ್ಕೆ ಹೋದನು.

೬೯–೭೦. ಆ ತೀರ್ಥದಲ್ಲಿ ಭಕ್ತಿಯಿಂದ ಮಂತ್ರಸಹಿತವಾಗಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿ ಪೂಜಿಸಿದ ಮಾನವನು ಅಶ್ವಮೇಧಯಾಗ

**ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಂ ।**
**ಮೃತೋ ರುದ್ರಪುರಂ ಯಾತಿ ನಾಽತ್ರ ಕಾರ್ಯಾ ವಿಚಾರಣಾ ॥ ೨೦ ॥**
**ಅಥ ಯೋ ಭೋಜಯೇದ್ವಿಪ್ರಾನ್ಪಿತ್ರೂನುದ್ದಿಶ್ಯ ಭಾರತ ।**
**ತಸ್ಯ ತೇ ದ್ವಾದಶಾಬ್ದಾನಿ ಮೋದಂತೇ ದಿವಿ ತರ್ಪಿತಾಃ ॥ ೨೧ ॥**
**ಸನ್ಯಾಸೇನ ತು ಯಃ ಕಶ್ಚಿತ್ತತ್ರ ತೀರ್ಥೇ ತನುಂ ತ್ಯಜೇತ್ ।**
**ಅನಿವರ್ತಿಕಾ ಗತಿಸ್ತಸ್ಯ ರುದ್ರಲೋಕಾತ್ಕದಾಚನ ॥ ೨೨ ॥**
**ಏತತ್ಸರ್ವಂ ಸಮಾಖ್ಯಾತಂ ಯತ್ಪೃಷ್ಟಂ ಹಿ ತ್ವಯಾಽನಘ ।**
**ಮಾಹಾತ್ಮ್ಯಂ ಪಿಪ್ಪಲಾದಸ್ಯ ತೀರ್ಥಸ್ಯೋತ್ಪತ್ತಿರೇವ ಚ ॥ ೨೩ ॥**
**ಏತತ್ಪುಣ್ಯಂ ಪಾಪಹರಂ ಧನ್ಯಂ ದುಃಸ್ವಪ್ನನಾಶನಂ ।**
**ಪಠತಾಂ ಶೃಣ್ವತಾಂ ಚೈವ ಸರ್ವಪಾಪಕ್ಷಯೋ ಭವೇತ್ ॥ ೨೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಪಿಪ್ಪಲಾದತೀರ್ಥಮಾಹಾತ್ಮ್ಯವರ್ಣನಂ" ನಾಮ ದ್ವಿಚತ್ವಾರಿಂಶೋಽಧ್ಯಾಯಃ**

---

ಫಲವನ್ನು ಪಡೆಯುವನು. ಮಡಿದ ತರುವಾಯ ರುದ್ರಪುರಕ್ಕೆ ಹೋಗುವನು. ಈ ವಿಷಯದಲ್ಲಿ ವಿಚಾರಮಾಡಕೂಡದು.

೨೧. ಯುಧಿಷ್ಠಿರ! ಅಲ್ಲಿ ಪಿತೃಗಳನ್ನುದ್ದೇಶಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದವನ ಪಿತೃಗಳು ಹನ್ನೆರಡು ವರ್ಷಕಾಲ ತೃಪ್ತಿಗೊಂಡು ದೇವಲೋಕ ದಲ್ಲಿ ಆನಂದಪಡುವರು.

೨೨. ಆ ತೀರ್ಥದಲ್ಲಿ ಸನ್ಯಾಸದಿಂದ ಶರೀರವನ್ನು ತ್ಯಜಿಸಿದವನು ರುದ್ರ ಲೋಕದಲ್ಲಿ ಶಾಶ್ವತವಾಗಿ ವಾಸಮಾಡುವನು.

೨೩. ನಿರ್ದುಷ್ಟನೆ! ನೀನು ಕೇಳಿದ ಪಿಪ್ಪಲಾದನ ಮಾಹಾತ್ಮ್ಯವನ್ನೂ, ತೀರ್ಥದ ಉತ್ಪತ್ತಿಯನ್ನೂ ಹೇಳಿರುವೆನು.

೨೪. ಪುಣ್ಯಕರವೂ, ಪಾಪವನ್ನು ಪರಿಹರಿಸುವುದೂ, ದುಃಸ್ವಪ್ನವನ್ನು ನಿವಾರಿಸುವುದೂ ಆದ ಈ ಮಾಹಾತ್ಮ್ಯವನ್ನು ಕೇಳುವವರ ಮತ್ತು ಪಠಿಸು ವವರ ಸಮಸ್ತ ಪಾಪಗಳೂ ಪರಿಹಾರವಾಗುವುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಪಿಪ್ಪಲಾದತೀರ್ಥಮಾಹಾತ್ಮ್ಯವರ್ಣನ"ವೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಚತ್ವಾರಿಂಶೋಽಧ್ಯಾಯಃ

## ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತತೋ ಗಚ್ಛೇತ್ತು ರಾಜೇಂದ್ರ ವಿಮಲೇಶ್ವರಮುತ್ತಮಂ ।
ತತ್ರ ದೇವಶಿಲಾ ರಮ್ಯಾ ಸ್ವಯಂ ದೇವೈರ್ವಿನಿರ್ಮಿತಾ ॥ ೧ ॥
ತತ್ರ ಸ್ನಾತ್ವಾ ತು ಯೋ ಭಕ್ತ್ಯಾ ಬ್ರಾಹ್ಮಣಾನ್ಪೂಜಯೇನ್ನೃಪ ।
ಸ್ವಲ್ಪೇನಾಽಪಿ ಹಿ ದಾನೇನ ತಸ್ಯ ಚಾಂತೋ ನ ವಿದ್ಯತೇ ॥ ೨ ॥

ಯುಧಿಷ್ಠಿರ ಉವಾಚ :—

ಕಾನಿ ದಾನಾನಿ ವಿಪ್ರೇಂದ್ರ ಶಸ್ತಾನಿ ಧರಣೀತಲೇ ।
ಯಾನಿ ದತ್ವಾ ನರೋ ಭಕ್ತ್ಯಾ ಮುಚ್ಯತೇ ಸರ್ವಪಾತಕೈಃ ॥ ೩ ॥

ಶ್ರೀ ಮಾರ್ಕಂಡೇಯ ಉವಾಚ :—

ಸುವರ್ಣಂ ರಜತಂ ತಾಮ್ರಂ ಮಣಿಮೌಕ್ತಿಕಮೇವ ಚ ।
ಭೂಮಿದಾನಂ ಚ ಗೋದಾನಂ ಮೋಚಯತ್ಯಶುಭಾನ್ನರಂ ॥ ೪ ॥
ತತ್ರ ತೀರ್ಥೇ ತು ಯಃ ಕಶ್ಚಿತ್ಕುರುತೇ ಪ್ರಾಣಸಂಕ್ಷಯಂ ।
ರುದ್ರಲೋಕೇ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೫ ॥

---

## ಕನ್ನಡದ ಅನುವಾದ

### ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ರಾಜೇಂದ್ರ! ಬಳಿಕ ಉತ್ತಮವಾದ ವಿಮಲೇಶ್ವರತೀರ್ಥಕ್ಕೆ ಹೋಗಬೇಕು. ಅಲ್ಲಿ ದೇವತೆಗಳು ಮನೋಹರವಾದ ದೇವಶಿಲೆಯನ್ನು ನಿರ್ಮಿಸಿರುವರು.

೨. ಅಲ್ಲಿ ಮಿಂದು ಭಕ್ತಿಯಿಂದ ಬ್ರಾಹ್ಮಣರನ್ನು ಸ್ವಲ್ಪ ದಾನದಿಂದಲಾದರೂ ಪೂಜಿಸಿದವನ ಪುಣ್ಯವು ಕೊನೆಗೊಳ್ಳುವುದಿಲ್ಲ.

೩. ಯುಧಿಷ್ಠಿರನು ಹೇಳುತ್ತಾನೆ:—ಮುನಿವರ್ಯನೆ! ಭೂಮಿಯಲ್ಲಿ ಯಾವ ದಾನಗಳು ಉತ್ತಮವಾದುವು? ಯಾವ ದಾನಗಳನ್ನು ಕೊಟ್ಟ ಮಾನವನು ಸಕಲ ಪಾಪಗಳಿಂದ ಮುಕ್ತನಾಗುವನು?

೪–೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಚಿನ್ನ, ಬೆಳ್ಳಿ, ತಾಮ್ರ, ರತ್ನ, ಮುತ್ತು, ಭೂಮಿ, ಗೋವು ಇವುಗಳ ದಾನಗಳು ಮನುಷ್ಯನನ್ನು ಅಶುಭದಿಂದ ಬಿಡಿಸುವುದು. ಆ ತೀರ್ಥದಲ್ಲಿ ಪ್ರಾಣವನ್ನು ತ್ಯಜಿಸಿದವನು ಪ್ರಳಯಕಾಲದವರೆಗೆ ರುದ್ರಲೋಕದಲ್ಲಿ ವಾಸಮಾಡುವನು.

ತತಃ ಪುಷ್ಕರಿಣೀಂ ಗಚ್ಛೇತ್ಸರ್ವಪಾಪಕ್ಷಯಂಕರೀಂ ।
ತತ್ರ ಸ್ನಾತ್ವಾಽರ್ಚಯೇದ್ದೇವಂ ತೇಜೋರಾಶಿಂ ದಿವಾಕರಂ ॥ ೬ ॥
ಋಚಾಮೇಕಾಂ ಜಪೇತ್ಸಮ್ಯಕ್ ಸಾಮವೇದಫಲಂ ಲಭೇತ್ ।
ಯಜುರ್ವೇದಸ್ಯ ಜಪನಾದೃಗ್ವೇದಸ್ಯ ತಥೈವ ಚ ॥ ೭ ॥
ಅಕ್ಷರಂ ವಾ ಜಪೇನ್ಮಂತ್ರಂ ಧ್ಯಾಯಮಾನೋ ದಿವಾಕರಂ ।
ಆದಿತ್ಯಹೃದಯಂ ಜಪ್ತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ॥ ೮ ॥
ತತ್ರ ತೀರ್ಥೇ ತು ಯಃ ಸ್ನಾತ್ವಾ ವಿಧಿನಾ ಯಾಜಯೇದ್ದ್ವಿಜಾನ್ ।
ತಸ್ಯ ಕೋಟಿಗುಣಂ ಪುಣ್ಯಂ ಜಾಯತೇ ನಾಽತ್ರ ಸಂಶಯಃ ॥ ೯ ॥
ಅನಾಶಕೇನಾಗ್ನಿಗತ್ಯಾ ಜಲೇ ವಾ ದೇಹಪಾತನಾತ್ ।
ತಸ್ಮಿಂಸ್ತೀರ್ಥೇ ಮೃತೋ ಯಸ್ತು ಸ ಯಾತಿ ಪರಮಾಂ ಗತಿಂ ॥ ೧೦ ॥
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ನೃಪಸತ್ತಮ ।
ವಿಹಿತಂ ಕರ್ಮ ಕುರ್ವಾಣಃ ಸ ಗಚ್ಛೇತ್ಪರಮಾಂ ಗತಿಂ ॥ ೧೧ ॥

ಯುಧಿಷ್ಠಿರ ಉವಾಚ :—

ವ್ಯಾಧಿಂ ಸತ್ತ್ವಕ್ಷಯಂ ಮೋಹಂ ಜ್ಞಾತ್ವಾ ವರ್ಣಾ ದ್ವಿಜೋತ್ತಮ ।
ಪಾಪೇಭ್ಯೋ ವಿಪ್ರಮುಚ್ಯಂತೇ ಕೇನ ತತ್ಸಾಧನಂ ವದ ॥ ೧೨ ॥

---

೬. ಅನಂತರ ಸಕಲ ಪಾಪಗಳನ್ನೂ ನಾಶಗೊಳಿಸುವ ಪುಷ್ಕರಿಣಿಗೆ ಹೋಗಿ ತೇಜೋನಿಧಿಯಾದ ಸೂರ್ಯನನ್ನು ಅರ್ಚಿಸಬೇಕು.

೭. ಋಗ್ಯಜುಸ್ಸಾಮವೇದಗಳ ಒಂದೊಂದು ಋಕ್ಕನ್ನು ಜಪಿಸಿದರೂ ಸಂಪೂರ್ಣ ವೇದಗಳನ್ನು ಪಠಿಸಿದ ಫಲವು ದೊರೆಯುವುದು.

೮. ಸೂರ್ಯನನ್ನು ಧ್ಯಾನಿಸುತ್ತ ವೇದಗಳ ಒಂದಕ್ಷರವನ್ನಾಗಲಿ ಜಪಿಸಬೇಕು. ಆದಿತ್ಯಹೃದಯವನ್ನು ಜಪಿಸಿದವನು ಸಕಲ ಪಾಪಗಳಿಂದ ಮುಕ್ತನಾಗುವನು.

೯. ಆ ತೀರ್ಥದಲ್ಲಿ ವಿಧಿಯಂತೆ ಮಿಂದು ಬ್ರಾಹ್ಮಣರನ್ನು ಭೋಜನ ಮಾಡಿಸಿದವನಿಗೆ ನಿಶ್ಚಯವಾಗಿಯೂ ಕೋಟಿಮಡಿ ಪುಣ್ಯವು ಉಂಟಾಗುವುದು.

೧೦. ಆ ತೀರ್ಥದಲ್ಲಿ ಉಪವಾಸದಿಂದಲೂ, ಬೆಂಕಿ ನೀರುಗಳಲ್ಲಿ ಬೀಳುವುದರಿಂದಲೂ ಮೃತನಾದವನು ಉತ್ತಮ ಗತಿಯನ್ನು ಹೊಂದುವನು.

೧೧. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ತನಗೆ ವಿಹಿತವಾದ ಕರ್ಮವನ್ನು ಮಾಡಿದರೆ ಉತ್ತಮ ಗತಿಯನ್ನು ಹೊಂದುವನು.

೧೨. ಯುಧಿಷ್ಠಿರನು ಹೇಳುತ್ತಾನೆ:—ಮುನಿಯೆ! ಜನರು ವ್ಯಾಧಿ, ಸತ್ವನಾಶ, ಮೋಹ, ಪಾಪ ಇವುಗಳಿಂದ ಮುಕ್ತರಾಗಲು ಸಾಧನವನ್ನು ಹೇಳು.

ಶ್ರೀ ಮಾರ್ಕಂಡೇಯ ಉವಾಚ :—

ತಿಲೋದಕೀ ತಿಲಸ್ನಾಯೀ ಕಾಮಕ್ರೋಧವಿವರ್ಜಿತಃ ।
ಬ್ರಾಹ್ಮಣೋಽನಶನೈಃ ಪ್ರಾಣಾಂಸ್ತ್ಯಜಂಲ್ಲಭತಿ ಸದ್ಗತಿಂ ॥ ೧೩ ॥
ಸಂಗ್ರಾಮೇ ಸದ್ಗತಿಂ ತಾತ ಕ್ಷತ್ರಿಯೋ ನಿಧನೇ ಲಭೇತ್ ।
ತದಭಾವಾನ್ಮಹಾಪ್ರಾಜ್ಞ ಸೇವಮಾನೋ ಲಭೇದಿತಿ ॥ ೧೪ ॥
ವ್ಯಾಧಿಗ್ರಹಗೃಹೀತೋ ವಾ ವೃದ್ಧೋ ವಾ ವಿಕಲೇಂದ್ರಿಯಃ ।
ಆತ್ಮಾನಂ ದಾಹಯಿತ್ವಾಽಗ್ನೌ ವಿಧಿನಾ ಸದ್ಗತಿಂ ಲಭೇತ್ ॥ ೧೫ ॥
ವೈಶ್ಯೋಽಪಿ ಹಿ ತ್ಯಜನ್ಪ್ರಾಣಾನೇವಂ ವೈ ಶುಭಭಾಗ್ಭವೇತ್ ।
ಜಲೇ ವಾ ಶುದ್ಧಭಾವೇನ ತ್ಯಕ್ತ್ವಾ ಪ್ರಾಣಾಂಛಿವೋ ಭವೇತ್ ॥ ೧೬ ॥
ಶೂದ್ರೋಽಪಿ ದ್ವಿಜಶುಶ್ರೂಷುಸ್ತೋಷಯಿತ್ವಾ ಮಹೇಶ್ವರಂ ।
ವಿಮುಚ್ಯ ನಾಽನ್ಯಥಾ ಪಾಪಃ ಪತತೇ ನರಕೇ ಧ್ರುವಂ ॥ ೧೭ ॥
ಅಥವಾ ಪ್ರಣವಾಽಶಕ್ತೋ ದ್ವಿಜೇಭ್ಯೋ ಗುರವೇ ತಥಾ ।
ಪಂಚಾಽಗ್ನೌ ಶೋಷಯೇದ್ದೇಹಮಾಪೃಚ್ಛ್ಯ ದ್ವಿಜಸತ್ತಮಾನ್ ॥ ೧೮ ॥
ಶಾಂತದಾಂತಜಿತಕ್ರೋಧಾಂಛಾಸ್ತ್ರಯುಕ್ತಾನ್ವಿಚಕ್ಷಣಾನ್ ।
ತೇಷಾಂ ಚೈವೋಪದೇಶೇನ ಕರೀಷಾಗ್ನಿಂ ಪ್ರಸಾಧಯೇತ್ ॥ ೧೯ ॥

---

೧೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬ್ರಾಹ್ಮಣನು ತಿಲದಿಂದ ತರ್ಪಣಮಾಡುವವನೂ, ಸ್ನಾನಮಾಡುವವನೂ ಕಾಮಕ್ರೋಧರಹಿತನೂ ಆಗಿ ಉಪವಾಸದಿಂದ ಇಲ್ಲಿ ಪ್ರಾಣವನ್ನು ತ್ಯಜಿಸಿದರೆ ಸದ್ಗತಿಯನ್ನು ಪಡೆಯುವನು.

೧೪. ಕ್ಷತ್ರಿಯನು ಸಮರದಲ್ಲಿ ಮಡಿದು ಸದ್ಗತಿಯನ್ನು ಹೊಂದುವನು. ಇಲ್ಲಿ ಅದಿಲ್ಲದೆ ತೀರ್ಥಸೇವನೆಯಿಂದಲೇ ಉತ್ತಮ ಗತಿಯನ್ನು ಪಡೆಯುವನು.

೧೫. ರೋಗಿಯಾಗಲಿ, ವೃದ್ಧನಾಗಲಿ, ಅಂಗವಿಕಲನಾಗಲಿ ಇಲ್ಲಿ ಅಗ್ನಿಯಲ್ಲಿ ದೇಹವನ್ನು ಭಸ್ಮಗೊಳಿಸಿದರೆ ಸದ್ಗತಿಯನ್ನು ಹೊಂದುವನು.

೧೬. ವೈಶ್ಯನೂ ಇಲ್ಲಿ ಮಡಿದು ಶುಭವನ್ನು ಹೊಂದುವನು. ಅಥವಾ ಶುದ್ಧ ಮನಸ್ಸಿನಿಂದ ನೀರಿನಲ್ಲಿ ಬಿದ್ದು ಮೃತನಾದರೆ ಶಿವನಾಗುವನು.

೧೭. ಶೂದ್ರನೂ ಬ್ರಾಹ್ಮಣಸೇವಾನಿರತನಾಗಿ ಮಹೇಶ್ವರನನ್ನು ಸಂತೋಷಗೊಳಿಸಿದರೆ ಪಾಪಮುಕ್ತನಾಗುವನು. ಹಾಗಿಲ್ಲದಿದ್ದರೆ ನಿಜವಾಗಿಯೂ ನರಕದಲ್ಲಿ ಬೀಳುವನು.

೧೮. ಅಥವಾ ಪ್ರಣವಾಶಕ್ತನಾದ ಶೂದ್ರನು ಬ್ರಾಹ್ಮಣರಿಗೂ, ಗುರುಗಳಿಗೂ ತಿಳಿಸಿ ಪಂಚಾಗ್ನಿಯಲ್ಲಿ ದೇಹವನ್ನು ಶೋಷಿಸಬೇಕು.

೧೯. ಶಾಂತರೂ, ಇಂದ್ರಿಯನಿಗ್ರಹವುಳ್ಳವರೂ, ಕೋಪವನ್ನು ಜಯಿಸಿದವರೂ, ಶಾಸ್ತ್ರವನ್ನರಿತವರೂ, ಕುಶಲರೂ ಆದ ಬ್ರಾಹ್ಮಣರ ಉಪದೇಶದಿಂದ ಬೆರಣಿಯ ಬೆಂಕಿಯನ್ನು ಪ್ರವೇಶಿಸಿ ಮಡಿಯಬೇಕು.

ಏವಂ ವರ್ಣಾ ಯಥಾತ್ವೇನ ಮೂಢಾಃ ಹಂಕಾರಮೋಹಿತಾಃ ।
ಪತಂತಿ ನರಕೇ ಘೋರೇ ಯಥಾಂಧೋ ಗಿರಿಗಹ್ವರೇ ॥ ೨೦ ॥
ಯೇ ಶಾಸ್ತ್ರವಿಧಿಮುತ್ಸೃಜ್ಯ ವರ್ತಂತೇ ಕಾಮಚಾರತಃ ।
ಕೃಮಿಯೋನಿಂ ಪ್ರಪದ್ಯಂತೇ ತೇಷಾಂ ಪಿಂಡೋ ನಚ ಕ್ರಿಯಾ ॥ ೨೧ ॥
ಶ್ರುತಿಸ್ಮೃತ್ಯುದಿತಂ ಧರ್ಮಂ ತ್ಯಕ್ತ್ವಾ ಯಥೇಚ್ಛಾಚಾರಸೇವಿನಃ ।
ಅಷ್ಟಾವಿಂಶತಿರ್ವೈ ಕೋಟ್ಯೋ ನರಕಾಣಾಂ ಯುಧಿಷ್ಠಿರ ॥ ೨೨ ॥
ಪ್ರತ್ಯೇಕಂ ವಾ ಪತಂತ್ಯೇತೇ ಮಗ್ನಾ ನರಕಸಾಗರೇ ।
ದುರ್ಲಭಂ ಮಾನುಷಂ ಜನ್ಮ ಬಹುಧರ್ಮಾರ್ಜಿತಂ ನೃಪ ॥ ೨೩ ॥
ತಲ್ಲಬ್ಧ್ವಾ ಮದಮಾತ್ಸರ್ಯಂ ಯೋ ವೈ ತ್ಯಜತಿ ಮಾನವಃ ।
ಸನ್ನಿಯಮ್ಯ ಸದಾತ್ಮಾನಂ ಜ್ಞಾನಚಕ್ಷುರ್ನರೋ ಹಿ ಸಃ ॥ ೨೪ ॥
ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ॥ ೨೫ ॥
ಯಸ್ಯ ನೋನ್ಮೀಲಿತಂ ಚಕ್ಷುರ್ಜ್ಞೇಯೋ ಜಾತ್ಯಂಧ ಏವ ಸಃ ।
ಏತತ್ತೇ ಕಥಿತಂ ಸರ್ವಂ ಯತ್ಪೃಷ್ಟಂ ನೃಪಸತ್ತಮ ॥ ೨೬ ॥
ತಥಾನಿಷ್ಟತರಾಣಾಂ ಹಿ ರುದ್ರಸ್ಯ ವಚನಂ ಯಥಾ ।
ನರ್ಮದಾ ಸರಿತಾಂ ಶ್ರೇಷ್ಠಾ ರುದ್ರದೇಹಾದ್ವಿನಿಃಸೃತಾ ॥ ೨೭ ॥

---

೨೦–೨೧. ಹೀಗೆ ವರ್ಣಧರ್ಮವನ್ನಾಚರಿಸದೆ ಮೂಢರೂ, ಅಹಂಕಾರಿಗಳೂ ಆದವರು ಕುರುಡನು ಪರ್ವತದ ಗುಹೆಯಲ್ಲಿ ಬೀಳುವಂತೆ ಘೋರ ನರಕದಲ್ಲಿ ಬೀಳುವರು. ಶಾಸ್ತ್ರಕ್ರಮವನ್ನು ತ್ಯಜಿಸಿ ಸ್ವೇಚ್ಛೆಯಾಗಿ ವರ್ತಿಸುವವರು ಕ್ರಿಮಿ ಜನ್ಮವನ್ನು ಹೊಂದುವರು. ಅವರಿಗೆ ಪಿಂಡೋದಕಕ್ರಿಯೆಯಿಲ್ಲ.

೨೨–೨೪. ಶ್ರುತಿಸ್ಮೃತ್ಯುದಿತವಾದ ಧರ್ಮವನ್ನು ತ್ಯಜಿಸಿ ಸ್ವೇಚ್ಛಾಚಾರಿಗಳಾಗಿರುವವರು ಇಪ್ಪತ್ತೆಂಟುಕೋಟಿ ನರಕಗಳಲ್ಲಿ ಒಟ್ಟಿಗೆ ಅಥವಾ ಪ್ರತ್ಯೇಕವಾಗಿ ಬೀಳುವರು. ಬಹು ಧರ್ಮದಿಂದ ಸಂಪಾದಿಸಿದ ದುರ್ಲಭವಾದ ಮನುಷ್ಯ ಧರ್ಮವನ್ನು ಪಡೆದು ಮನಸ್ಸನ್ನು ನಿರೋಧಿಸಿ ಮದಮಾತ್ಸರ್ಯಗಳನ್ನು ತ್ಯಜಿಸುವ ಮಾನವನು ಜ್ಞಾನನೇತ್ರವುಳ್ಳವನು.

೨೫–೨೭. ಅಜ್ಞಾನವೆಂಬ ತಿಮಿರ ರೋಗದಿಂದ ಕುರುಡನಾದ ಯಾವ ಕಣ್ಣನ್ನು ಜ್ಞಾನವೆಂಬ ಅಂಜನದ ಕಡ್ಡಿಯಿಂದ ಬಿಡಿಸಿಕೊಳ್ಳಲಿಲ್ಲವೋ ಅವನು ಹುಟ್ಟುಕುರುಡನು. ನರೇಂದ್ರನೆ! ನೀನು ಕೇಳಿದ್ದೆಲ್ಲವನ್ನೂ ಅಲ್ಲದೆ, ಅನಿಷ್ಟಗಳನ್ನೂ ಅವುಗಳನ್ನು ಹೋಗಲಾಡಿಸಿಕೊಳ್ಳುವ ಕ್ರಮಗಳನ್ನೂ ಶಿವನು ಹೇಳಿದಂತೆ ನಿನಗೆ ಹೇಳಿದ್ದೇನೆ. ರುದ್ರನ ಶರೀರದಿಂದ ಹೊರಟ ನದಿಗಳಲ್ಲಿ ಉತ್ತಮವಾದ ನರ್ಮದಾನದಿಯು ಸಕಲ ಸ್ಥಾವರ ಜಂಗಮಗಳನ್ನು ಉದ್ಧರಿಸುವುದು. ಮಹಾ ಪುಣ್ಯಕರವಾದ ಈ ನದಿಯನ್ನು ಸಕಲ ದೇವಾಧಿಪನೂ

ತಾರಯೇತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ।
ಸರ್ವದೇವಾಧಿದೇವೇನ ಈಶ್ವರೇಣ ಮಹಾತ್ಮನಾ ॥ ೨೮ ॥
ಲೋಕಾನಾಂ ಚ ಹಿತಾರ್ಥಾಯ ಸರ್ವಪುಣ್ಯಾಽವತಾರಿತಾ ।
ಮಾನಸಂ ವಾಚಿಕಂ ಪಾಪಂ ಸ್ನಾನಾನ್ನಶ್ಯತಿ ಕರ್ಮಜಂ ॥ ೨೯ ॥
ರುದ್ರದೇಹಾದ್ವಿನಿಷ್ಕ್ರಾಂತಾ ತೇನ ಪುಣ್ಯತಮಾ ಹಿ ಸಾ ।
ಪ್ರಾತರುತ್ಥಾಯ ಯೋ ನಿತ್ಯಂ ಭೂಮಿಮಾಕ್ರಮ್ಯ ಭಕ್ತಿತಃ ॥ ೩೦ ॥
ಏತನ್ಮಂತ್ರಂ ಜಪೇತ್ತಾತ ಸ್ನಾನಸ್ಯ ಲಭತೇ ಫಲಂ ।
ನಮಃ ಪುಣ್ಯಜಲೇ ದೇವಿ ನಮಃ ಸಾಗರಗಾಮಿನಿ ॥ ೩೧ ॥
ನಮೋಽಸ್ತು ಪಾಪನಿರ್ಮೋಚೇ ನಮೋ ದೇವಿ ವರಾನನೇ ॥ ೩೨ ॥
ನಮೋಽಸ್ತು ತೇ ಋಷಿವರಸಂಘಸೇವಿತೇ
ನಮೋಽಸ್ತು ತೇ ತ್ರಿನಯನದೇಹನಿಃಸೃತೇ ।
ನಮೋಽಸ್ತು ತೇ ಸುಕೃತವತಾಂ ಸದಾ ವರೇ
ನಮೋಽಸ್ತು ತೇ ಸತತಪವಿತ್ರಪಾವನಿ ॥ ೩೩ ॥

**ಇತೀ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನಂ" ನಾಮ ತ್ರಿಚತ್ವಾರಿಂಶೋಽಧ್ಯಾಯಃ**

---

ಮಹಾತ್ಮನೂ ಆದ ಈಶ್ವರನು ಜನಗಳ ಹಿತಕ್ಕಾಗಿ ಉಂಟುಮಾಡಿದನು. ಇದರಲ್ಲಿ ಸ್ನಾನಮಾಡುವುದರಿಂದ ಮಾನಸ, ವಾಚಿಕ, ಕರ್ಮಜಗಳಾದ ಪಾಪಗಳು ನಾಶವಾಗುವುವು.

೩೦–೩೨. ಆ ನದಿಯು ರುದ್ರನ ಶರೀರದಿಂದ ಹೊರಟ ಕಾರಣ ಅತ್ಯಂತ ಪುಣ್ಯಕರವಾಗಿರುವುದು. ನಿತ್ಯವೂ ಬೆಳಗ್ಗೆ ಎದ್ದು ಭೂಮಿಯಲ್ಲಿ ನಿಂತು ಈ ಮಂತ್ರವನ್ನು ಜಪಿಸಿದವನು ಮಿಂದ ಫಲವನ್ನು ಪಡೆಯುವನು. ಪುಣ್ಯಕರವಾದ ಜಲವುಳ್ಳವಳೂ, ಸಮುದ್ರವನ್ನು ಸೇರುವವಳೂ, ಪಾಪವನ್ನು ನಿವಾರಿಸುವವಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೩೩. ಋಷಿಶ್ರೇಷ್ಠರಿಂದ ಸೇವಿತಳೂ, ಶಿವನ ಶರೀರದಿಂದ ಹೊರಟವಳೂ, ಪುಣ್ಯವಂತರಲ್ಲಿ ಉತ್ತಮಳೂ, ಸತತವೂ ಪವಿತ್ರಳೂ ಆದ ದೇವಿಯೆ! ನಿನಗೆ ನಮಸ್ಕಾರವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ವಿಮಲೇಶ್ವರತೀರ್ಥಮಾಹಾತ್ಮ್ಯವರ್ಣನ" ವೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ಶೂಲಭೇದಪ್ರಶಂಸಾವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ತೀರ್ಥಾನಾಂ ಪರಮಂ ತೀರ್ಥಂ ತಚ್ಛೃಣುಷ್ವ ನರಾಧಿಪ ।
ರೇವಾಯಾ ದಕ್ಷಿಣೇ ಕೂಲೇ ನಿರ್ಮಿತಂ ಶೂಲಪಾಣಿನಾ ।
ಮೋಕ್ಷಾರ್ಥಂ ಮಾನವೇಂದ್ರಾಣಾಂ ನಿರ್ಮಿತಂ ನೃಪಸತ್ತಮ ॥ ೧ ॥

ಯುಧಿಷ್ಠಿರ ಉವಾಚ :—

ಶ್ರುತಾ ಮೇ ವಿವಿಧಾ ಧರ್ಮಾಸ್ತೀರ್ಥಾನಿ ವಿವಿಧಾನಿ ಚ ।
ದಾನಧರ್ಮಾಃ ಸಮಸ್ತಾಶ್ಚ ತ್ವತ್ಪ್ರಸಾದಾದ್ದ್ವಿಜೋತ್ತಮ ॥ ೨ ॥
ಅನ್ಯಚ್ಚ ಶ್ರೋತುಮಿಚ್ಛಾಮಿ ಸಂಸಾರಚ್ಛಿದ್ಯತೇ ಯಥಾ ।
ಪುನರಾಗಮನಂ ನಾಸ್ತಿ ಮೋಕ್ಷಪ್ರಾಪ್ತಿರ್ಭವೇದ್ಯಥಾ ॥ ೩ ॥
ಏತದಾಖ್ಯಾಹಿ ಮೇ ಸರ್ವಂ ಪ್ರಸಾದಾದ್ದ್ವಿಜಸತ್ತಮ ॥ ೪ ॥

ಮಾರ್ಕಂಡೇಯ ಉವಾಚ :—

ಶೃಣುಷ್ವೈಕಮನಾ ಭೂತ್ವಾ ತೀರ್ಥಾತ್ತೀರ್ಥತರಂ ಮಹತ್ ।
ಶ್ರುತೇ ಯಸ್ಯ ಪ್ರಭಾವೇತು ಮುಚ್ಯತೇ ಚಾಬ್ದಿಕಾದಘಾತ್ ॥ ೫ ॥

---

## ಕನ್ನಡದ ಅನುವಾದ

### ಶೂಲಭೇದಪ್ರಶಂಸಾವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಅರಸ! ಶಂಕರನು ನರ್ಮದಾನದಿಯ ದಕ್ಷಿಣತೀರದಲ್ಲಿ ಮಾನವರ ಮೋಕ್ಷಕ್ಕಾಗಿ ನಿರ್ಮಿಸಿರುವ ತೀರ್ಥಗಳಲ್ಲಿ ಉತ್ತಮವಾದ ತೀರ್ಥವನ್ನು ಕೇಳು.

೨–೩. ಯುಧಿಷ್ಠಿರನು ಹೇಳುತ್ತಾನೆ:—ಮುನಿಯೆ! ನಿನ್ನ ಅನುಗ್ರಹದಿಂದ ನಾನು ವಿವಿಧ ಧರ್ಮಗಳನ್ನೂ, ತೀರ್ಥಗಳನ್ನೂ, ಸಮಸ್ತ ದಾನಧರ್ಮಗಳನ್ನೂ ಕೇಳಿರುವೆನು. ಈಗ ಸಂಸಾರನಾಶಕವೂ, ಪುನರಾವೃತ್ತಿಯಿಲ್ಲದ ಮೋಕ್ಷದಾಯಕವೂ ಆದ ಇನ್ನೊಂದು ಧರ್ಮವನ್ನು ಕೇಳಬಯಸುವೆನು.

೪. ಇದನ್ನೆಲ್ಲ ನನಗೆ ಅನುಗ್ರಹಮಾಡಿ ಹೇಳು.

೫. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಸಕಲ ತೀರ್ಥಗಳಿಗಿಂತ ಉತ್ತಮವಾದ ತೀರ್ಥವನ್ನು ಒಮ್ಮನಸ್ಸಿನಿಂದ ಕೇಳು. ನರನು ಇದರ ಪ್ರಭಾವವನ್ನು ಕೇಳುವುದರಿಂದ ಒಂದು ವರ್ಷದ ಪಾಪದಿಂದ ಮುಕ್ತನಾಗುವನು.

ವಾಚಿಕೈರ್ಮಾನಸೈರ್ವಾಽಪಿ ಶಾರೀರೈಶ್ಚ ವಿಶೇಷತಃ ।
ಕೀರ್ತನಾತ್ತಸ್ಯ ತೀರ್ಥಸ್ಯ ಮುಚ್ಯತೇ ಸರ್ವಪಾತಕೈಃ ॥ ೬ ॥
ಪಂಚಕ್ರೋಶಪ್ರಮಾಣಂ ತು ತಚ್ಚ ತೀರ್ಥಂ ಮಹೀಪತೇ ।
ಭುಕ್ತಿಮುಕ್ತಿಪ್ರದಂ ದಿವ್ಯಂ ಪ್ರಾಣಿನಾಂ ಪಾಪಕರ್ಮಿಣಾಂ ॥ ೭ ॥
ರೇವಾಯಾ ದಕ್ಷಿಣೇ ಕೂಲೇ ಪರ್ವತೋ ಭೃಗುಸಂಜ್ಞಿತಃ ।
ತಸ್ಯ ಮೂರ್ಧ್ನಿ ಚ ತತ್ತೀರ್ಥಂ ಸ್ಥಾಪಿತಂ ಚೈವ ಶಂಭುನಾ ॥ ೮ ॥
ಶೂಲಭೇದೇತಿ ವಿಖ್ಯಾತಂ ತ್ರಿಷುಲೋಕೇಷು ಭೂಪತೇ ।
ತತ್ರ ಸ್ಥಿತಾಶ್ಚ ಯೇ ವೃಕ್ಷಾಸ್ತೀರ್ಥಾಚ್ಚೈವ ಚತುರ್ದಿಶಂ ॥ ೯ ॥
ಪತಿತಾ ನಿಲಯಂ ಯಾಂತಿ ರುದ್ರಸ್ಯ ನಾಽತ್ರ ಸಂಶಯಃ ।
ಮೃತಾಸ್ತತ್ರೈವ ಯೇ ಕೇಚಿಜ್ಜಂತವೋ ಭುವಿ ಪಕ್ಷಿಣಃ ॥ ೧೦ ॥
ತೇ ಯಾಂತಿ ಪರಮಂ ಲೋಕಂ ತತ್ರ ತೀರ್ಥೇನ ಸಂಶಯಃ ।
ಪಾತಾಲಾನ್ನಿಃಸೃತಾ ಗಂಗಾ ಭೋಗವತೀತಿ ಸಂಜ್ಞಿತಾ ॥ ೧೧ ॥
ನಿಷ್ಕ್ರಾಂತಾ ಶೂಲಭೇದಾಚ್ಚ ಸರ್ವಪಾಪಕ್ಷಯಂಕರೀ ।
ಯಾ ಸಾ ಗೀರ್ವಾಣನಾಮ್ನ್ಯಸ್ಯಾ ವಹೇತ್ಪುಣ್ಯಾ ಮಹಾನದೀ ॥ ೧೨ ॥
ಪತಿತಾ ಕುಂಡಮಧ್ಯೇ ತು ಯತ್ರ ಭಿನ್ನಂ ತ್ರಿಶೂಲಿನಾ ।
ಶಂಭುನಾ ಚ ಪುರಾ ತಾತ ಉತ್ಪಾದ್ಯ ಚ ಸರಸ್ವತೀ ॥ ೧೩ ॥

---

೬. ಆ ತೀರ್ಥವನ್ನು ಸ್ಮರಿಸುವುದರಿಂದ ವಾಚಿಕ, ಮಾನಸ, ಶಾರೀರಕ ಪಾಪಗಳಿಂದ ಮುಕ್ತನಾಗುವನು.

೭. ದೊರೆಯೆ! ಹತ್ತು ಮೈಲಿ ವಿಸ್ತೀರ್ಣದ ಆ ತೀರ್ಥವು ಪಾಪವನ್ನು ಮಾಡಿರುವ ಪ್ರಾಣಿಗಳಿಗೆ ದಿವ್ಯವಾದ ಭುಕ್ತಿಮುಕ್ತಿಗಳನ್ನು ಕೊಡುವುದು.

೮. ನರ್ಮದಾನದಿಯ ದಕ್ಷಿಣದಡದಲ್ಲಿ ಭೃಗುವೆಂಬ ಪರ್ವತವಿದೆ. ಅದರ ಶಿಖರದಲ್ಲಿ ಶಿವನು ಆ ತೀರ್ಥವನ್ನು ಸ್ಥಾಪಿಸಿರುವನು.

೯–೧೭. ಅದು ಮೂರು ಲೋಕಗಳಲ್ಲಿ ಶೂಲಭೇದ ಎಂದು ಪ್ರಸಿದ್ಧವಾಯಿತು. ಆ ತೀರ್ಥದ ನಾಲ್ಕು ದಿಕ್ಕುಗಳಲ್ಲಿರುವ ಮರಗಳೂ ಅಲ್ಲಿ ಬಿದ್ದು ಮಹೇಶನ ಆವಾಸಸ್ಥಾನವಾದ ಕೈಲಾಸಕ್ಕೆ ಹೋಗುವುವು. ಆ ತೀರ್ಥದಲ್ಲಿ ಮೃತವಾದ ಪ್ರಾಣಿಗಳೂ, ಪಕ್ಷಿಗಳೂ ಉತ್ತಮ ಲೋಕವನ್ನು ಸೇರುವುವು. ಪಾತಾಳದಿಂದ ಹೊರಟ ಸಕಲ ಪಾಪಗಳನ್ನು ನೀಗಿಸುವ ಗಂಗೆಯು ಭೋಗವತಿಯೆಂದು ಹೆಸರನ್ನಾಂತು ಶೂಲಭೇದದಿಂದ ಹೊರಟಿತು. ಗೀರ್ವಾಣ ಎಂಬ ಪುಣ್ಯಕರವಾದ ಇನ್ನೊಂದು ಮಹಾ ನದಿಯು ಹರಿಯುತ್ತ ಶಿವನು ಅಗೆದಿರುವ ಕುಂಡದ ನಡುವೆ ಬಿದ್ದಿತು. ಹಿಂದೆ ಶಿವನಿಂದ ಹುಟ್ಟಿ, ಪ್ರಾಚೀನ ಪಾಪಗಳನ್ನು ಪರಿಹರಿಸುವ ಸರಸ್ವತೀ ನದಿಯು ಅಲ್ಲಿ ಬಿದ್ದಿತು. ಈ ಮೂರು ನದಿಗಳಿರುವ ಆ ತೀರ್ಥದಲ್ಲಿ ಗೀರ್ವಾಣವೆಂಬ ಶಿಲೆಯೂ ಇರುವುದು. ಅಂತಹ ತೀರ್ಥವು

ಸಾ ತತ್ರ ಪತಿತಾ ರಾಜನ್ಪ್ರಾಚೀನಾಽಘುಪಿನೋಚಿನೀ ।
ಭಾಸ್ವತ್ಯಾ ತ್ರಿತಯಂ ಯತ್ರ ಶಿಲಾ ಗೀರ್ವಾಣಸಂಜ್ಞಿತಾ ॥ ೧೪ ॥
ತತ್ರ ತೀರ್ಥೇ ಚ ತತ್ತೀರ್ಥಂ ನ ಭೂತಂ ನ ಭವಿಷ್ಯತಿ ।
ಕೇದಾರಂ ಚ ಪ್ರಯಾಗಂ ಚ ಕುರುಕ್ಷೇತ್ರಂ ಗಯಾ ತಥಾ ॥ ೧೫ ॥
ಅನ್ಯಾನಿ ಚ ಸುತೀರ್ಥಾನಿ ಕಲಾಂ ನಾರ್ಹಂತಿ ಷೋಡಶೀಂ ।
ಪಂಚಸ್ಥಾನಾನಿ ತೀರ್ಥಾನಿ ಪೃಥಗ್ಭೂತಾನಿ ಯಾನಿ ಚ ॥ ೧೬ ॥
ವಕ್ಷ್ಯಾಮಿ ಚ ಸಮಾಸೇನ ಏಕೈಕಂ ಚ ಪೃಥಕ್ಪೃಥಕ್ ।
ಗಯಾ ನಾಭ್ಯಾಂ ಯಥಾ ಪುಣ್ಯಾ ಚಕ್ರತೀರ್ಥಂ ಚ ತತ್ಸಮಂ ॥ ೧೭ ॥
ಧರ್ಮಾಽರಣ್ಯೇ ಯಥಾ ಕೂಪಂ ಶೂಲಭೇದಂ ಚ ತತ್ಸಮಂ ।
ಬ್ರಹ್ಮಯೂಪಂ ಯಥಾ ಪುಣ್ಯಂ ದೇವನದ್ಯಾಸ್ತಥೈವ ಚ ॥ ೧೮ ॥
ಯಥಾ ಗಯಾಶಿರಃ ಪುಣ್ಯಂ ಸುರಾಣಾಂ ಚ ಯಥಾ ಶಿಲಾ ।
ಯಥಾ ಚ ಪುಷ್ಕರಂ ಸ್ಥಾನಂ ಮಾರ್ಕಂಡಹ್ರದ ಏವ ಚ ॥ ೧೯ ॥
ದತ್ವಾ ಪಿಂಡೋದಕಂ ತತ್ರ ಪಿತೄಣಾಂ ಚ ತಥಾಽಕ್ಷಯಂ ।
ಯಸ್ತತ್ರ ಕುರುತೇ ಶ್ರಾದ್ಧಂ ತೋಯಂ ಪಿಬತಿ ನಿತ್ಯಶಃ ॥
ಮುಚ್ಯತೇ ಸರ್ವಪಾಪೈಸ್ತು ಉರಗಃ ಕಂಚುಕೈರಿವ ।
ಅನಿಂದ್ಯಾನ್ಪೂಜಯೇದ್ವಿಪ್ರಾನ್ದಂಭಕ್ರೋಧವಿವರ್ಜಿತಾನ್ ॥ ೨೦ ॥
ತ್ರಯೋದಶದಿನಂ ದಾನಂ ತ್ರಯೋದಶಗುಣಂ ಭವೇತ್ ।
ಅಭ್ಯರ್ಚಿತಂ ಸುರಂ ದೃಷ್ಟ್ವಾ ಗಣನಾಥಂ ಗಜಾನನಂ ॥ ೨೧ ॥

---

ಹಿಂದೆ ಇರಲಿಲ್ಲ. ಮುಂದೆ ಉಂಟಾಗುವುದಿಲ್ಲ. ಕೇದಾರ, ಪ್ರಯಾಗ, ಕುರುಕ್ಷೇತ್ರ, ಗಯೆ ಮೊದಲಾದ ಇತರ ತೀರ್ಥಗಳು ಇದರ ಹದಿನಾರನೆ ಒಂದು ಕಲೆಗೆ ಸಮಾನಗಳಲ್ಲ. ಪ್ರತ್ಯೇಕವಾಗಿರುವ ಐದು ತೀರ್ಥಸ್ಥಾನಗಳನ್ನು ಸಂಕ್ಷೇಪವಾಗಿ ಹೇಳುವೆನು. ಗಯೆಯು ನಾಭಿಯಲ್ಲಿ ಪುಣ್ಯಕರವಾಗಿರುವಂತೆ ಚಕ್ರತೀರ್ಥವೂ ಹಾಗೆಯೇ ಇದ್ದು ಅದಕ್ಕೆ ಸಮಾನವಾಗಿರುವುದು.

೧೮–೧೯. ಧರ್ಮಾರಣ್ಯದಲ್ಲಿರುವ ಕೂಪದಂತೆ ಶೂಲಭೇದ ತೀರ್ಥವೂ, ಬ್ರಹ್ಮಯೂಪದಂತೆ ಗಂಗೆಯೂ, ಗಯಾಶಿರಸ್ಸಿನಂತೆ ದೇವಶಿಲೆಯೂ, ಪುಷ್ಕರಸ್ಥಾನದಂತೆ ಮಾರ್ಕಂಡಹ್ರದವೂ ಇರುವುದು.

೨೦. ಪಿತೃಗಳಿಗೆ ಅಕ್ಷಯಪಿಂಡೋದಕವನ್ನಿತ್ತು ಶ್ರಾದ್ಧವನ್ನು ಮಾಡಿ ನಿತ್ಯವೂ ಜಲಪಾನಮಾಡುವವನು ಸರ್ಪವು ಪರೆಗಳಿಂದ ಬಿಡಲ್ಪಡುವಂತೆ ಪಾಪಮುಕ್ತನಾಗುವನು. ಅಲ್ಲಿ ಶ್ಲಾಘ್ಯರೂ, ದಂಭ, ಕ್ರೋಧಗಳಿಲ್ಲದವರೂ ಆದ ಬ್ರಾಹ್ಮಣರನ್ನು ಪೂಜಿಸಬೇಕು.

೨೧–೨೩. ಹದಿಮೂರು ದಿನಗಳು ಮಾಡಿದ ದಾನವು ಹದಿಮೂರು ಮಡಿ

ಸರ್ವೇ ವಿಘ್ನಾ ವಿನಶ್ಯಂತಿ ದೃಷ್ಟ್ವಾ ಕಂಬಲಕ್ಷೇತ್ರಪಂ ॥ ೨೨ ॥
ಪೂಜಯೇತ್ಪರಯಾ ಭಕ್ತ್ಯಾ ಶೂಲಪಾಣಿಂ ಮಹೇಶ್ವರಂ ॥ ೨೩ ॥
ದೇವಸ್ಯ ಪೂರ್ವಭಾಗೇ ತು ಉಮಾ ಪೂಜ್ಯಾ ಪ್ರಯತ್ನತಃ ।
ಮಾರ್ಕಂಡೇಶಂ ತತೋ ಭಕ್ತ್ಯಾ ಪೂಜಯೇದ್ಗುಹವಾಸಿನಂ ॥ ೨೪ ॥
ಮುಚ್ಯಂತೇ ಪಾತಕೈಃ ಸರ್ವೈರಜ್ಞಾನಜ್ಞಾನಸಂಚಿತೈಃ ।
ಗುಹಾಮಧ್ಯೇ ಪ್ರವಿಷ್ಟಸ್ತು ಜಪೇತ್ಸೂಕ್ತಂ ತು ತ್ರ್ಯಕ್ಷರಂ ॥ ೨೫ ॥
ನೀಲಪರ್ವತಜಂ ಪುಣ್ಯಂ ಷಷ್ಠಾಂಶೇನ ಲಭೇತ ಸಃ ।
ತ್ರಿನರಾಸ್ತತ್ರ ತಿಷ್ಠಂತಿ ಸಾದಿತ್ಯಮರುತೈಃ ಸಹ ॥ ೨೬ ॥
ಸರ್ವದೇವಮಯಂ ಸ್ಥಾನಂ ಕೋಟಿಲಿಂಗಮನುತ್ತಮಂ ।
ಯಥಾ ನದೀನದಾಃ ಸರ್ವೇ ಸಾಗರೇ ಯಾಂತಿ ಸಂಕ್ಷಯಂ ॥ ೨೭ ॥
ತಥಾ ಪಾಪಾನಿ ನಶ್ಯಂತಿ ಶೂಲಭೇದಸ್ಯ ದರ್ಶನಾತ್ ।
ಪ್ರತ್ಯಕ್ಷೋ ದೃಶ್ಯತೇಽದ್ಯಾಪಿ ಪ್ರತ್ಯಯೋ ಹ್ಯವನೀಪತೇ ॥ ೨೮ ॥
ವಿಸ್ಫುಲಿಂಗಾ ಲಿಂಗಮಧ್ಯೇ ಸ್ಪಂದಂತೇ ಸ್ನಾನಯೋಗತಃ ।
ದ್ವಿತೀಯಃ ಪ್ರತ್ಯಯಸ್ತತ್ರ ತೈಲಬಿಂದುರ್ನಸರ್ಪತಿ ॥ ೨೯ ॥

---

ಯಷ್ಟು ಫಲವನ್ನು ಕೊಡುವುದು. ಪೂಜಿಸಿದ ಗಜಾನನನ್ನು ನೋಡಿದರೆ ಸಕಲ ವಿಘ್ನಗಳೂ ಪರಿಹಾರವಾಗುವುವು. ಕಂಬಲಕ್ಷೇತ್ರಾಧಿಪನಾದ ಮಹೇಶ್ವರನನ್ನು ಅಲ್ಲಿ ದರ್ಶನಮಾಡಿ ಭಕ್ತಿಯಿಂದ ಪೂಜಿಸಬೇಕು.

೨೪. ಆ ಶಂಕರನ ಪೂರ್ವಭಾಗದಲ್ಲಿ ಪಾರ್ವತಿಯನ್ನು ಪೂಜಿಸಬೇಕು. ಅನಂತರ ಗುಹಾವಾಸಿಯಾದ ಮಾರ್ಕಂಡೇಶನನ್ನು ಭಕ್ತಿಯಿಂದ ಅರ್ಚಿಸಬೇಕು.

೨೫–೨೬. ಅದರಿಂದ ಜ್ಞಾನಾಜ್ಞಾನದಿಂದ ಮಾಡಿದ ಪಾಪದಿಂದ ಮುಕ್ತನಾಗುವನು. ಆ ಗುಹೆಯ ನಡುವೆ ಪ್ರವೇಶಿಸಿ ತ್ರ್ಯಕ್ಷರಸೂಕ್ತವನ್ನು ಜಪಿಸಿದವನು ನೀಲಪರ್ವತ ದರ್ಶನದಿಂದಾಗುವ ಪುಣ್ಯದ ಆರನೆಯ ಒಂದು ಭಾಗವನ್ನು ಪಡೆಯುವನು. ಅಲ್ಲಿ ಆದಿತ್ಯ ಮರುತ್ತುಗಳೊಡನೆ ಮೂರು ಮಂದಿ ನರರು (ಬ್ರಹ್ಮ ವಿಷ್ಣು ಮಹೇಶ್ವರರು) ಇರುವರು.

೨೭–೨೮. ಕೋಟಿಲಿಂಗಕ್ಷೇತ್ರವು ಸಕಲ ದೇವತಾರೂಪವಾದುದು. ನದ ನದಿಗಳು ಸಮುದ್ರದಲ್ಲಿ ವಿಲೀನವಾಗುವಂತೆ ಶೂಲಭೇದದ ದರ್ಶನದಿಂದ ಪಾಪಗಳು ಪರಿಹಾರವಾಗುವುವು. ದೊರೆಯೆ ! ಈಗಲೂ ಅಲ್ಲಿ ಪ್ರತ್ಯಕ್ಷವಾಗಿ ನಂಬಿಕೆ ಯುಂಟಾಗುವುದು.

೨೯. ಲಿಂಗದ ಮಧ್ಯದಲ್ಲಿ ಅಭಿಷೇಕಮಾಡುವುದರಿಂದ ಅಗ್ನಿಯಕಿಡಿಗಳು ಚಲಿಸುತ್ತಿರುವುವು. ಅಲ್ಲಿ ಎಣ್ಣೆಯ ಬಿಂದುವು ಚಲಿಸದಿರುವುದು ಇನ್ನೊಂದು ಪ್ರತ್ಯಯವಾಗಿರುವುದು.

ಏವಂ ಹಿ ಪ್ರತ್ಯಯಸ್ತತ್ರ ಶೂಲಭೇದಪ್ರಭಾವಜಃ ।
ಯಃ ಸ್ಮರೇಚ್ಛೂಲಭೇದಂ ತು ತ್ರಿಕಾಲಂ ನಿತ್ಯಮೇವ ಚ ॥ ೩೦ ॥
ಸ ಪೂತಶ್ಚ ಭವೇತ್ಸಾಕ್ಷಾತ್ಸಬಾಹ್ಯಾಽಭ್ಯಂತರೋ ನೃಪ ।
ನ ಕಸ್ಯಚಿನ್ಮಯಾ ಖ್ಯಾತಂ ಪೃಷ್ಟೋಽಹಂ ತ್ರಿದಶೈರಪಿ ॥ ೩೧ ॥
ಗುಹ್ಯಾದ್ಗುಹ್ಯತರಂ ತೀರ್ಥಂ ಸದಾ ಗೋಪ್ಯಂ ಕೃತಂ ಮಯಾ ।
ಸರ್ವಪಾಪಹರಂ ಪುಣ್ಯಂ ಸರ್ವದೋಷಘ್ನಮುತ್ತಮಂ ॥ ೩೨ ॥
ಸರ್ವತೀರ್ಥಮಯಂ ತೀರ್ಥಂ ಶೂಲಭೇದಂ ಜನೇಶ್ವರ ।
ಶ್ರುತೇ ಯಸ್ಯ ಪ್ರಭಾವೇ ತು ಮುಚ್ಯತೇ ಸರ್ವಪಾತಕೈಃ ॥ ೩೩ ॥
ಶೂಲಭೇದಂ ಮಯಾ ತಾತ ಸಂಕ್ಷೇಪಾತ್ಕಥಿತಂ ತವ ।
ಯಃ ಶೃಣೋತಿ ನರೋ ಭಕ್ತ್ಯಾ ಮುಚ್ಯತೇ ಸರ್ವಪಾತಕೈಃ ॥ ೩೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಶೂಲಭೇದಪ್ರಶಂಸಾವರ್ಣನಂ"ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೩೦–೩೧. ಈ ರೀತಿಯಾದ ಪ್ರತ್ಯಯವು ಶೂಲಭೇದತೀರ್ಥದ ಪ್ರಭಾವದಿಂದಾದುದು. ನಿತ್ಯವೂ ತ್ರಿಕಾಲದಲ್ಲಿ ಶೂಲಭೇದತೀರ್ಥವನ್ನು ಸ್ಮರಿಸುವವನು ಬಾಹ್ಯಾಭ್ಯಂತರಗಳಲ್ಲಿ ಪವಿತ್ರನಾಗುವನು. ದೇವತೆಗಳು ಇದನ್ನು ಕೇಳಿದರೂ ನಾನು ಒಬ್ಬನಿಗೂ ಹೇಳಲಿಲ್ಲ.

೩೨–೩೩. ಅರಸ! ನಾನು ಸಮಸ್ತ ಪಾಪಗಳನ್ನು ಪರಿಹರಿಸುವುದೂ, ಸಕಲ ದೋಷಗಳನ್ನು ನಾಶಗೊಳಿಸುವುದೂ, ಸರ್ವ ತೀರ್ಥರೂಪವೂ ಆದ ಶೂಲಭೇದತೀರ್ಥವನ್ನು ಅತಿ ಗುಟ್ಟಾಗಿ ಇರಿಸಿರುವೆನು. ಇದರ ಪ್ರಭಾವವನ್ನು ಕೇಳಿದವನು ಸಮಸ್ತ ಪಾಪಗಳಿಂದ ಮುಕ್ತನಾಗುವನು.

೩೪. ತಾತ! ನಾನು ಶೂಲಭೇದತೀರ್ಥವನ್ನು ಸಂಕ್ಷೇಪವಾಗಿ ಹೇಳಿರುವೆನು. ಇದನ್ನು ಭಕ್ತಿಯಿಂದ ಕೇಳಿದ ಮಾನವನು ಸಕಲ ಪಾಪರಹಿತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶೂಲಭೇದಪ್ರಶಂಸಾವರ್ಣನ"ವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

# ಅಥ ಪಂಚಚತ್ವಾರಿಂಶೋಽಧ್ಯಾಯಃ

## ಅಂಧಕವರಪ್ರದಾನವರ್ಣನಂ

**ಶ್ರೀ ಮಾರ್ಕಂಡೇಯ ಉವಾಚ :—**

**ಏಷ ಏವ ಪುರಾ ಪ್ರಶ್ನಃ ಪರಿಪೃಷ್ಟೋ ಮಹೇಶ್ವರಂ ।**
**ರಾಜ್ಞಾ ಚೋತ್ತಾನಪಾದೇನ ಋಷಿದೇವಸಮಾಗಮೇ ॥ ೧ ॥**

**ಉತ್ತಾನಪಾದ ಉವಾಚ :—**

**ಇದಂ ತೀರ್ಥಂ ಮಹಾಪುಣ್ಯಂ ಸರ್ವದೇವಮಯಂ ಪರಂ ।**
**ಗುಹ್ಯಾದ್ಗುಹ್ಯತರಂ ಸ್ಥಾನಂ ನ ದೃಷ್ಟಂ ನ ಶ್ರುತಂ ಹರ ॥ ೨ ॥**
**ಶೂಲಭೇದಂ ಕಥಂ ಜಾತಂ ಕೇನೈವೋತ್ಪಾದಿತಂ ಪುರಾ ।**
**ಮಾಹಾತ್ಮ್ಯಂ ತಸ್ಯ ತೀರ್ಥಸ್ಯ ವಿಸ್ತರಾಚ್ಛಂಸ ಮೇ ಪ್ರಭೋ ॥ ೩ ॥**

**ಈಶ್ವರ ಉವಾಚ :—**

**ಆಸೀತ್ಪುರಾ ಮಹಾವೀರ್ಯೋ ದಾನವೋ ಬಲದರ್ಪಿತಃ ।**
**ಮರ್ತ್ಯೇ ನ ತಾದೃಶಃ ಕಶ್ಚಿದ್ವಿಕ್ರಮೇಣ ಬಲೇನ ವಾ ॥ ೪ ॥**

---

## ಕನ್ನಡದ ಅನುವಾದ

### ಅಂಧಕವರಪ್ರದಾನವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ಹಿಂದೆ ಉತ್ತಾನಪಾದ ರಾಜನು ಸಮಸ್ತ ಋಷಿಗಳು ನೆರೆದಿರುವ ಸಭೆಯಲ್ಲಿ ಮಹೇಶ್ವರನನ್ನು ಕುರಿತು ಇದೇ ಪ್ರಶ್ನೆಯನ್ನು ಕೇಳಿದ್ದಾನೆ.

೨. ಉತ್ತಾನಪಾದನು ಹೇಳುತ್ತಾನೆ :—ಶಂಕರ! ಮಹಾ ಪುಣ್ಯಕರವೂ, ಸಕಲ ದೇವತಾರೂಪವೂ, ಅತಿ ರಹಸ್ಯವೂ ಆದ ಈ ತೀರ್ಥವನ್ನು ನೋಡಲಿಲ್ಲ ಮತ್ತು ಕೇಳಲಿಲ್ಲ.

೩. ಸ್ವಾಮಿ! ಶೂಲಭೇದವು ಹೇಗುಂಟಾಯಿತು? ಯಾರು ಅದನ್ನು ನಿರ್ಮಿಸಿದರು? ಆ ತೀರ್ಥದ ಮಾಹಾತ್ಮ್ಯವನ್ನು ವಿಸ್ತಾರವಾಗಿ ನನಗೆ ಹೇಳು.

೪. ಈಶ್ವರನು ಹೇಳುತ್ತಾನೆ :—ಹಿಂದೆ ಅತ್ಯಂತ ವೀರನೂ, ಬಲದಿಂದ ಗರ್ವಿತನೂ ಆದ ಅಂಧಕನೆಂಬ ದಾನವನಿದ್ದನು. ವಿಕ್ರಮದಿಂದಲೂ, ಪರಾಕ್ರಮದಿಂದಲೂ ಕೂಡಿದ ಅಂತಹವನು ಮನುಷ್ಯಲೋಕದಲ್ಲಿ ಯಾವನೂ ಇರಲಿಲ್ಲ.

**ಸೂನುರ್ಬ್ರಹ್ಮಸುತಸ್ಯಾಯಮಂಧಕೋ ನಾಮ ದುರ್ಮದಃ ।**
**ನಿಜಸ್ಥಾನೇ ವಸನ್ಪಾಪಃ ಕುರ್ವನ್ರಾಜ್ಯಮಕಂಟಕಂ ॥ ೫ ॥**
**ಹೃಷ್ಟಪುಷ್ಟೋ ವಸನ್ಮರ್ತ್ಯೇ ಸ ಸುರೈರ್ನಾಭಿಭೂಯತೇ ।**
**ಭವನಂ ತಸ್ಯ ಪಾಪಸ್ಯ ವಹ್ನೇರುಪವನಂ ಯಥಾ ॥ ೬ ॥**
**ಏತಸ್ಮಿನ್ನಂಧಕಃ ಕಾಲೇ ಚಿಂತಯಾಮಾಸ ಭಾರತ ।**
**ತೋಷಯಾಮಿ ಮಹಾದೇವಂ ಯೇನ ಸಾನುಗ್ರಹೋ ಭವೇತ್ ॥ ೭ ॥**
**ಪ್ರಾರ್ಥಯಾಮಿ ವರಂ ದಿವ್ಯಂ ಯೋ ಮೇ ಮನಸಿ ವರ್ತತೇ ।**
**ಪರಂ ಸ ನಿಶ್ಚಯಂ ಕೃತ್ವಾ ಸೋಽಂಧಕೋ ನಿರ್ಗತೋ ಗೃಹಾತ್ ॥ ೮ ॥**
**ರೇವಾತಟಂ ಸಮಾಸಾದ್ಯ ದಾನವಸ್ತಪಸಿ ಸ್ಥಿತಃ ।**
**ಉಗ್ರಂ ತಪಶ್ಚಚಾರಾಸೌ ದಾರುಣಂ ಲೋಮಹರ್ಷಣಂ ॥ ೯ ॥**
**ದಿವ್ಯಂ ವರ್ಷಸಹಸ್ರಂ ಸ ನಿರಾಹಾರೋಽಭವತ್ತತಃ ।**
**ದ್ವಿತೀಯಂ ತು ಸಹಸ್ರಂ ಸ ನ್ಯವಸದ್ವಾರಿಭೋಜನಃ ॥ ೧೦ ॥**
**ತೃತೀಯಂ ತು ಸಹಸ್ರಂ ಸ ಧೂಮಪಾನರತೋಽಭವತ್ ।**
**ಚತುರ್ಥಂ ವರ್ಷಸಾಹಸ್ರಂ ಯೋಗಾಭ್ಯಾಸೇನ ಸಂಸ್ಥಿತಃ ॥ ೧೧ ॥**
**ಕೋಪೀಹ ನೇದೃಶಂ ಚಕ್ರೇ ತಪಃ ಪರಮದಾರುಣಂ ।**
**ಅಸ್ಥಿಚರ್ಮಾವಶೇಷೋಽಸೌ ಯಾವತ್ತಿಷ್ಠತಿ ಭಾರತ ॥ ೧೨ ॥**

---

೫–೬. ಬ್ರಹ್ಮನ ಮೊಮ್ಮಗನಾದ ಈ ಅಂಧಕನು ತನ್ನ ಸಂಸ್ಥಾನದಲ್ಲಿ ವಾಸಿಸುತ್ತ ರಾಜ್ಯವನ್ನು ಶತ್ರುಗಳಿಲ್ಲದಂತೆ ಆಳುತ್ತ ಭೂಲೋಕದಲ್ಲಿ ಹೃಷ್ಟಪುಷ್ಟನಾಗಿ ವಾಸಮಾಡುತ್ತಿದ್ದನು. ಅಗ್ನಿಯ ಉದ್ಯಾನದಂತಿರುವ ಇವನ ಅರಮನೆಯನ್ನು ಆಕ್ರಮಿಸಲು ದೇವತೆಗಳಿಗೂ ಆಗುತ್ತಿರಲಿಲ್ಲ.

೭–೮. ಇದೇ ಸಮಯದಲ್ಲಿ ಅಂಧಕನು, "ಮಹಾದೇವನನ್ನು ಸಂತೋಷಗೊಳಿಸುವೆನು. ಅದರಿಂದವನು ಅನುಗ್ರಹಮಾಡುವನು. ನನ್ನ ಮನಸ್ಸಿನಲ್ಲಿರುವ ವರವನ್ನು ಬೇಡಿಕೊಳ್ಳುವೆನು" ಎಂದು ಚಿಂತಿಸಿದನು. ಅವನು ಹೀಗೆ ಆಲೋಚಿಸಿ ಮನೆಯಿಂದ ಹೊರಟನು.

೯. ನರ್ಮದಾತೀರವನ್ನು ಹೊಂದಿ ಭಯಂಕರವೂ, ರೋಮಾಂಚವನ್ನುಂಟುಮಾಡುವುದೂ ಆದ ಕಠಿನ ತಪವನ್ನಾಚರಿಸಿದನು.

೧೦–೧೧. ಅವನು ಒಂದು ದಿವ್ಯ ಸಹಸ್ರ ವರ್ಷಗಳಕಾಲ ನಿರಾಹಾರನೂ, ಎರಡನೆಯ ಸಾವಿರ ವರ್ಷಗಳು ನೀರನ್ನು ಕುಡಿಯುವವನೂ, ಮೂರನೆಯ ಸಾವಿರ ವರ್ಷಗಳು ಹೊಗೆಯನ್ನು ಸೇವಿಸುವವನೂ, ನಾಲ್ಕನೆಯ ಸಾವಿರ ವರ್ಷಗಳು ಯೋಗಾಭ್ಯಾಸ ನಿರತನೂ ಆಗಿದ್ದನು.

೧೨–೧೩. ಈ ಲೋಕದಲ್ಲಿ ಯಾರೂ ಇಂತಹ ದಾರುಣ ತಪಸ್ಸನ್ನು ಮಾಡಲಿಲ್ಲ. ಇವನು ಅಸ್ಥಿ ಚರ್ಮಗಳು ಮಾತ್ರ ಉಳಿದವನಾಗಿರಲು ಇವನ

ತಸ್ಯ ಮೂರ್ಧ್ನಿ ತತೋ ರಾಜನ್ಧೂಮವರ್ತಿರ್ವಿನಿಃಸೃತಾ ।
ದೇವಲೋಕಮತೀತ್ಯಾಽಸೌ ಕೈಲಾಸಂ ವ್ಯಾಪ್ಯ ಸಂಸ್ಥಿತಾ ॥ ೧೩ ॥
ತಾವದ್ದೇವಸಮೀಪಸ್ಥಾ ಉಮಾ ವಚನಮಬ್ರವೀತ್ ।
ಕೋಽಸ್ತ್ಯಯಂ ಮಾನುಷೇ ಲೋಕೇ ತಪಸೋಗ್ರೇಣ ಸಂಸ್ಥಿತಃ ॥ ೧೪ ॥
ಚತುರ್ವರ್ಷಸಹಸ್ರಾಣಿ ವ್ಯತೀಯುಃ ಪರಮೇಶ್ವರ ।
ನ ಕೇನಾಪೀದೃಶಂ ತಪ್ತಂ ತಪೋ ದೃಷ್ಟಂ ಶ್ರುತಂ ತಥಾ ॥ ೧೫ ॥
ಅವಜ್ಞಾಂ ಕುರುಷೇ ದೇವ ಕಿಮತ್ರ ನಿಯಮಾನ್ವಿತೇ ।
ಸರ್ವಸ್ಯ ಧತ್ಸೇ ಶೀಘ್ರಂ ತ್ವಮಲ್ಪೇನ ತಪಸಾ ವಿಭೋ ॥ ೧೬ ॥
ನಾಽಕ್ಷಕ್ರೀಡಾಂ ಕರಿಷ್ಯೇಽದ್ಯ ತ್ವಯಾ ಸಹ ಮಹೇಶ್ವರ ।
ಯಾವನ್ನೋತ್ಥಾಪ್ಯತೇ ಹ್ಯೇಷ ದಾನವೋ ಭಕ್ತವತ್ಸಲ ॥ ೧೭ ॥

ಈಶ್ವರ ಉವಾಚ :—

ಸಾಧು ಸಾಧು ಮಹಾದೇವಿ ಸರ್ವಲಕ್ಷಣಲಕ್ಷಿತೇ ।
ಅಹಂ ತಂ ನ ವಿಜಾನಾಮಿ ಕ್ಲಿಶ್ಯಂತಂ ದಾನವೇಶ್ವರಂ ॥ ೧೮ ॥
ಯೋಗಾಭ್ಯಾಸೇ ಸ್ಥಿತೋ ಭದ್ರೇ ಧ್ಯಾಯಂಸ್ತತ್ಪರಮಂ ಪದಂ ।
ತತ್ರಾಗಚ್ಛ ಮಯಾ ಸಾರ್ಧಂ ಯತ್ರ ತಪತ್ಯಸೌ ತಪಃ ॥ ೧೯ ॥

---

ತಲೆಯಿಂದ ಹೊರಟ ಹೊಗೆಯು ದೇವಲೋಕವನ್ನೂ ಮೀರಿ ಕೈಲಾಸವನ್ನು ವ್ಯಾಪಿಸಿತು.

೧೪. ಆಗ ಶಂಕರನ ಪಾರ್ಶ್ವದಲ್ಲಿದ್ದ ಪಾರ್ವತಿಯು ಹೀಗೆಂದಳು :— "ನಾಥ! ಮನುಷ್ಯಲೋಕದಲ್ಲಿ ಕಠಿನ ತಪಸ್ಸನ್ನು ಮಾಡುತ್ತಿರುವ ಇವನಾರು?

೧೫. ನಾಲ್ಕುಸಾವಿರ ವರ್ಷಗಳು ಕಳೆದುವು. ಯಾರೂ ಇಂತಹ ತಪಸ್ಸನ್ನು ಮಾಡಿರುವುದನ್ನು ನಾನು ನೋಡಲಿಲ್ಲ. ಕೇಳಲೂ ಇಲ್ಲ.

೧೬. ನಿಯಮವನ್ನಾಚರಿಸುವ ಇವನಿಗೆ ಏಕೆ ಅವಮಾನಮಾಡುತ್ತಿರುವೆ. ಎಲ್ಲರಿಗೂ ಅಲ್ಪತಪಸ್ಸಿನಿಂದಲೇ ಸಂತುಷ್ಟನಾಗಿ ನೀನು ವರವನ್ನು ಕೊಡುವೆ.

೧೭. ಭಕ್ತವತ್ಸಲನಾದ ಈ ದಾನವನನ್ನು ನೀನು ತಪಸ್ಸಿನಿಂದ ಎಚ್ಚರಿಸದಿದ್ದರೆ ನಾನು ನಿನ್ನೊಡನೆ ಪಗಡೆಯಾಡುವುದಿಲ್ಲ."

೧೮–೧೯. ಈಶ್ವರನು ಹೇಳುತ್ತಾನೆ:—ಸಮಸ್ತ ಲಕ್ಷಣಗಳಿಂದ ಕೂಡಿದ ಮಹಾದೇವಿಯೆ! ಒಳ್ಳೆಯದು. ಯೋಗಾಭ್ಯಾಸನಿರತನಾಗಿ ಆ ಉತ್ತಮ ಪದವನ್ನು ಧ್ಯಾನಿಸುತ್ತಿರುವ ನಾನು ದುಃಖಿಗೊಳ್ಳುತ್ತಿರುವ ದಾನವನನ್ನು ತಿಳಿಯಲಿಲ್ಲ. ಅವನು ತಪಸ್ಸನ್ನು ಮಾಡುತ್ತಿರುವ ಸ್ಥಳಕ್ಕೆ ನನ್ನೊಡನೆ ಬಾ; ಹೋಗೋಣ.

ಉಮಯಾ ಸಹಿತೋ ದೇವೋ ಗತಸ್ತತ್ರಮಹೇಶ್ವರಃ ।
ಅಸ್ಥಿಚರ್ಮಾಽವಶೇಷಸ್ತು ದೃಷ್ಟೋ ದೇವೇನ ಶಂಭುನಾ ॥ ೨೦ ॥
ಪ್ರತ್ಯುವಾಚ ಪ್ರಸನ್ನೋಽಸೌ ದೇವದೇವೋ ಮಹೇಶ್ವರಃ ।
ಯೋ ಭೋಃ ಕಷ್ಟಂ ಕೃತಂ ಭೀಮಂ ದಾರುಣಂ ಲೋಮಹರ್ಷಣಂ॥೨೧॥
ಈದೃಶಂ ಚ ತಪೋ ಘೋರಂ ಕಸ್ಮಾದ್ವತ್ಸ ತ್ವಯಾ ಕೃತಂ ।
ವರಂ ದಾಸ್ಯಾಮ್ಯಹಂ ವತ್ಸ ಯಸ್ತೇ ಮನಸಿ ವರ್ತತೇ ॥ ೨೨ ॥

ಅಂಧಕ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ವರದೋ ಯದಿ ಶಂಕರ ।
ಸುರಾನ್ಸರ್ವಾನ್ವಿಜೇಷ್ಯಾಮಿ ತ್ವತ್ಪ್ರಸಾದಾನ್ಮಹೇಶ್ವರ ॥ ೨೩ ॥

ಈಶ್ವರ ಉವಾಚ :—

ಸ್ವಪ್ನೇಽಪಿ ತ್ರಿದಶಾಃ ಸರ್ವೇ ನಯೋದ್ಧವ್ಯಾಃ ಕದಾಚನ ।
ಅಸಂಭಾವ್ಯಂ ನವಕ್ತವ್ಯಂ ಮನಸೋ ಯನ್ನ ರೋಚತೇ ॥ ೨೪ ॥
ಅನ್ಯಂ ಕಿಮಪಿ ಯಾಚಸ್ವ ಯಸ್ತೇ ಮನಸಿ ವರ್ತತೇ ।
ಸ್ವರ್ಗೇ ವಾ ಯದಿ ವಾ ಮರ್ತ್ಯೇ ಪಾತಾಲೇಷು ಚ ಸಂಸ್ಥಿತಾನ್ ॥ ೨೫ ॥
ಮರ್ತ್ಯೇಷು ವಿವಿಧಾನ್ಭೋಗಾನ್ಭೋಕ್ಷ್ಯಸಿ ತ್ವಂ ಯಥೇಪ್ಸಿತಾನ್ ।
ಕುರು ನಿಷ್ಕಂಟಕಂ ರಾಜ್ಯಂ ಸ್ವರ್ಗೇ ದೇವಪತಿರ್ಯಥಾ ॥ ೨೬ ॥

---

೨೦–೨೧. ಮಹೇಶ್ವರನು ಪಾರ್ವತಿಯೊಡನೆ ಅಂಧಕನೆಡೆಗೆ ಹೋಗಿ ಅಸ್ಥಿಚರ್ಮಗಳಿಂದ ಮಾತ್ರ ಉಳಿದಿರುವ ಅವನನ್ನು ಕಂಡು ಪ್ರಸನ್ನನಾಗಿ, "ಎಲೈ, ಭಯಂಕರವೂ, ರೋಮಾಂಚವನ್ನುಂಟುಮಾಡುವುದೂ, ಕಷ್ಟಕರವೂ ಆದ ತಪಸ್ಸನ್ನು ಮಾಡಿರುವೆ.

೨೨. ಮಗು ! ನೀನು ಇಂತಹ ಘೋರ ತಪಸ್ಸನ್ನು ಏಕೆ ಮಾಡುತ್ತಿರುವೆ? ನಿನ್ನ ಮನಸ್ಸಿಗೆ ಅಭಿಲಷಿತವಾದ ವರವನ್ನು ಕೇಳು ; ಕೊಡುವೆನು."

೨೩. ಅಂಧಕನು ಹೇಳುತ್ತಾನೆ :—ಮಹೇಶ್ವರ ! ನೀನು ಸಂತುಷ್ಟನಾಗಿ ವರವನ್ನು ಕೊಡುವೆಯಾದರೆ ನಿನ್ನ ಅನುಗ್ರಹದಿಂದ ಸಮಸ್ತ ದೇವತೆಗಳನ್ನೂ ನಾನು ಜಯಿಸಬೇಕು.

೨೪. ಈಶ್ವರನು ಹೇಳುತ್ತಾನೆ :—ಸ್ವಪ್ನದಲ್ಲಿಯೂ ದೇವತೆಗಳೊಡನೆ ಕಾಳಗವಾಡಬಾರದು. ಮನಸ್ಸಿಗೆ ರುಚಿಸದ ಅಸಂಭಾವ್ಯವಾದ ವಿಷಯವನ್ನು ಹೇಳಬಾರದು.

೨೫–೨೬. ನಿನ್ನ ಮನಸ್ಸಿನಲ್ಲಿರುವ ಬೇರೆ ಏನನ್ನಾದರೂ ಕೇಳು. ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳಲ್ಲಿ ಇಷ್ಟವಾದ ವಿವಿಧ ಭೋಗಗಳನ್ನು ಅನುಭವಿಸುವೆ. ಸ್ವರ್ಗದಲ್ಲಿ ಇಂದ್ರನೆಂತೋ ಅಂತು ನಿಷ್ಕಂಟಕವಾಗಿ ನಿನ್ನ ರಾಜ್ಯವನ್ನಾಳು.

ದೇವಸ್ಯ ವಚನಂ ಶ್ರುತ್ವಾ ಸೋಽಂಧಕೋ ವಿಮನಾಃ ಸ್ಥಿತಃ ।
ವೃಥಾ ಕ್ಲೇಶಶ್ಚ ಮೇ ಜಾತೋ ನ ಕಿಂಚಿತ್ಸಾಧಿತಂ ಮಯಾ ॥ ೨೭ ॥
ನಿಃಶ್ವಾಸಂ ಪರಮಂ ಮುಕ್ತ್ವಾ ನಿಪಪಾತ ಧರಾತಲೇ ।
ಮೂಲಚ್ಛಿನ್ನೋ ಯಥಾ ವೃಕ್ಷೋ ನಿರುಚ್ಛ್ವಾಸಸ್ತದಾಽಭವತ್ ॥ ೨೮ ॥
ಮೂರ್ಛಾಪನ್ನಂ ತತೋ ದೃಷ್ಟ್ವಾ ದೇವೀ ವಚನಮಬ್ರವೀತ್ ।
ಯಂ ಕಾಮಂ ಕಾಮಯತ್ಯೇಷ ತಮಸ್ಮೈ ದೇಹಿ ಶಂಕರ ॥ ೨೯ ॥
ಭಕ್ತಾನುಪೇಕ್ಷಮಾಣಸ್ಯ ತವಾಽಕೀರ್ತಿರ್ಭವಿಷ್ಯತಿ ॥ ೩೦ ॥

ಈಶ್ವರ ಉವಾಚ :—

ಯದಿ ದಾಸ್ಯೇ ವರಂ ದೇವಿ ಇಚ್ಛಾಭೂತಂ ಕದಾಚನ ।
ತತೋ ನ ಮಂಸ್ಯತೇ ವಿಷ್ಣುಂ ನ ಬ್ರಹ್ಮಾಣಂ ನ ಮಾಮಪಿ ॥ ೩೧ ॥
ಉಚ್ಚತ್ವಮಾಪ್ತೋ ದೇವೇಶಿ ಅನ್ಯಾನಪಿ ಸುರಾಽಸುರಾನ್ ॥ ೩೨ ॥

ದೇವ್ಯುವಾಚ :—

ಕಮಪ್ಯುಪಾಯಮಾಶ್ರಿತ್ಯ ಉತ್ಥಾಪಯ ಮಹೇಶ್ವರ ।
ವಿಷ್ಣುವರ್ಜಂ ಸುರಾನ್ಸರ್ವಾನ್ ಜಯಸ್ವೇತಿ ವರಂ ವದ ॥ ೩೩ ॥

ಈಶ್ವರ ಉವಾಚ :—

ಉಪಾಯಃ ಶೋಭನೋ ದೇವಿ ಯೋ ಮೇ ಮನಸಿ ವರ್ತತೇ ।
ತಮೇವಾಽಸ್ಮೈ ಪ್ರದಾಸ್ಯಾಮಿ ಯಸ್ತ್ವಯಾ ಕಥಿತೋ ವರಃ ॥ ೩೪ ॥

---

೨೭–೨೮. ಆ ಅಂಧಕನು ಶಂಕರನ ಈ ಮಾತನ್ನು ಕೇಳಿ ವೈಮನಸ್ಯವನ್ನು ಹೊಂದಿ, "ನಾನು ವ್ಯರ್ಥವಾಗಿ ಕಷ್ಟಪಟ್ಟೆನು. ಏನನ್ನೂ ಸಾಧಿಸಲಿಲ್ಲ" ಎಂದು ನಿಟ್ಟುಸಿರನ್ನುಬಿಟ್ಟು ಬುಡಕಡಿದ ಮರದಂತೆ ಭೂಮಿಯಲ್ಲಿಬಿದ್ದು ಉಸಿರಿಲ್ಲದವನಾದನು.

೨೯–೩೦. ಪಾರ್ವತಿಯು ಮೂರ್ಛೆಗೊಂಡ ಅವನನ್ನು ನೋಡಿ, "ಶಂಕರ! ಇವನು ಏನನ್ನು ಬಯಸುವನೊ, ಅದನ್ನು ಕೊಡು. ಭಕ್ತರನ್ನು ಉಪೇಕ್ಷಿಸಿದರೆ ನಿನಗೆ ಅಪಕೀರ್ತಿಯುಂಟಾಗುವುದು" ಎಂದಳು.

೩೧–೩೨. ಈಶ್ವರನು ಹೇಳುತ್ತಾನೆ:—ದೇವಿ! ಇವನು ಅಪೇಕ್ಷಿಸಿದ ವರವನ್ನಿತ್ತರೆ ಉಚ್ಚತ್ವವನ್ನು ಹೊಂದಿ ಇವನು ವಿಷ್ಣುಬ್ರಹ್ಮರನ್ನೂ, ಇತರ ದೇವತೆಗಳನ್ನೂ ಲೆಕ್ಕಿಸುವುದಿಲ್ಲ.

೩೩. ದೇವಿಯು ಹೇಳುತ್ತಾಳೆ:—ಮಹೇಶ್ವರ! ಯಾವುದಾದರೊಂದು ಉಪಾಯವನ್ನು ಅವಲಂಬಿಸಿ ಇವನನ್ನು ಎಬ್ಬಿಸು. ವಿಷ್ಣುವನ್ನುಳಿದು ಸಕಲ ದೇವತೆಗಳನ್ನೂ ಜಯಿಸೆಂದು ವರವನ್ನು ಕೊಡು.

೩೪. ಈಶ್ವರನು ಹೇಳುತ್ತಾನೆ:—ದೇವಿ! ಈ ಉಪಾಯವು ಚೆನ್ನಾಗಿರುವುದು. ನನ್ನ ಮನಸ್ಸಿನಲ್ಲಿ ಇದೇ ಇದೆ. ನೀನು ಹೇಳಿದ ವರವನ್ನೇ ಇವನಿಗೆ ಕೊಡುವೆನು.

ತತೋಽಮೃತೇನ ಸಂಸಿಕ್ತಃ ಸ್ವಸ್ಥೋಽಭೂತ್ತತ್ಕ್ಷಣಾದಯಂ ।
ತಥಾ ಪುನರ್ನವೋ ಜಾತಃ ಸರ್ವಾಽವಯವಶೋಭಿತಃ ॥ ೩೫ ॥
ಶೃಣುಷ್ವೈಕಮನಾ ಭೂತ್ವಾ ಗೃಹಾಣ ವರಮುತ್ತಮಂ ।
ವಿಷ್ಣುವರ್ಜಂ ಪ್ರದಾಸ್ಯಾಮಿ ಯತ್ತವಾಽಭಿಮತಂ ಪ್ರಿಯಂ ॥ ೩೬ ॥
ಸರ್ವಂ ಚ ಸಫಲಂ ತುಭ್ಯಂ ಮಾ ಧರ್ಮಸ್ತೇಽನ್ಯಥಾ ಭವೇತ್ ।
ದದಾಮೀತಿ ವರಂ ತುಭ್ಯಂ ಮನ್ಯಸೇ ಯದಿ ಚಾಽಸುರ ॥ ೩೭ ॥
ವಿಷ್ಣುವರ್ಜಂ ಸುರಾನ್ಸರ್ವಾಂಜೇಷ್ಯಸಿ ತ್ವಂ ಚ ಮಾಂ ವಿನಾ ॥ ೩೮ ॥

ಅಂಧಕ ಉವಾಚ :—

ಭವತ್ವೇವಮಿತಿ ಪ್ರಾಹ ಬಲಮಾಸ್ಥಾಯ ಕೇವಲಂ ।
ವಿಷ್ಣುವರ್ಜಂ ವಿಜೇಷ್ಯೇಽಹಂ ಸ್ವಬಲೇನ ಮಹೇಶ್ವರ ॥ ೩೯ ॥
ಕೃತಾರ್ಥೋಽಹಂ ಹಿ ಸಂಜಾತ ಇತ್ಯುಕ್ತ್ವಾ ಪ್ರಣತಿಂ ಗತಃ ।
ಗಚ್ಛದೇವ್ಯೋಮಯಾಸಾರ್ಧಂ ಕೈಲಾಸಶಿಖರಂ ವರಂ ॥ ೪೦ ॥
ವೃಷಪುಂಗವಮಾರುಹ್ಯ ದೇವ್ಯೋಽಸಾವುಮಯಾ ಸಹ ।
ವರಂ ದತ್ವಾ ಸ ತಸ್ಯೈವಂ ತತ್ರೈವಾಽಂತರಧೀಯತ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಅಂಧಕವರಪ್ರದಾನವರ್ಣನಂ"ನಾಮ ಪಂಚಚತ್ವಾರಿಂಶೋಽಧ್ಯಾಯಃ

---

೩೫. ಬಳಿಕ ಅಮೃತಸಿಕ್ತನಾದ ಅಂಧಕನು ಒಂದು ಕ್ಷಣದಲ್ಲಿಯೇ ಸ್ವಸ್ಥನಾದನು. ಹಾಗೆಯೇ ಎಲ್ಲ ಅವಯವಗಳಿಂದ ಸುಂದರನಾಗಿ ಹೊಸಬನಾದನು.

೩೬. ಶಂಕರನು ಅಂಧಕನನ್ನು ಕುರಿತು, "ಒಮ್ಮನಸ್ಸಿನಿಂದ ವರವನ್ನು ಸ್ವೀಕರಿಸು. ವಿಷ್ಣುವನ್ನುಳಿದು ನಿನಗಿಷ್ಟವಾದ ವರವನ್ನು ಕೊಡುವೆನು.

೩೭–೩೮. ಅದೆಲ್ಲ ನಿನಗೆ ಸಫಲವಾಗಲಿ. ಧರ್ಮವು ವ್ಯತ್ಯಾಸಗೊಳ್ಳದಿರಲಿ. ನಾನು ನಿನಗೆ ವರವನ್ನು ಕೊಡುವೆನೆಂದು ನೀನು ತಿಳಿದಿದ್ದರೆ ವಿಷ್ಣುವನ್ನೂ, ನನ್ನನ್ನೂ ಬಿಟ್ಟು ಸಮಸ್ತ ದೇವತೆಗಳನ್ನೂ ಜಯಿಸು. ಇದು ವರವಾಗಿರುವುದು" ಎಂದನು.

೩೯. ಅಂಧಕನು ಹೇಳುತ್ತಾನೆ:—"ಮಹೇಶ್ವರ! ಹೀಗೆಯೇ ಆಗಲಿ. ವಿಷ್ಣುವನ್ನು ಬಿಟ್ಟು ನಾನು ಎಲ್ಲರನ್ನೂ ಬಲದಿಂದ ಜಯಿಸುವೆನು.

೪೦. ನಾನು ಧನ್ಯನಾದೆನು. ನೀನು ಪಾರ್ವತಿಯೊಡನೆ ಕೈಲಾಸಕ್ಕೆ ತೆರಳು" ಎಂದು ವಂದಿಸಿದನು.

೪೧. ಮಹೇಶ್ವರನು ಅಂಧಕನಿಗೆ ಹೀಗೆ ವರವನ್ನು ಕೊಟ್ಟು ಪಾರ್ವತಿಯೊಡನೆ ವೃಷಭವನ್ನೇರಿ ಅಲ್ಲಿಯೇ ಅದೃಶ್ಯನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಂಧಕವರಪ್ರದಾನವರ್ಣನ"ವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಚತ್ವಾರಿಂಶೋಽಧ್ಯಾಯಃ

### ಶಚೀಹರಣವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಸ ದಾನವೋ ವರಂ ಲಬ್ಧ್ವಾ ಜಗಾಮ ಸ್ವಪುರಂ ಪ್ರತಿ ।
ದದರ್ಶ ಸ್ವಪುರಂ ರಾಜಂಛೋಭಿತಂ ಚಿತ್ರಚತ್ವರೈಃ ॥ ೧ ॥
ಉದ್ಯಾನೈಶ್ಚೈವ ವಿವಿಧೈಃ ಕದಲೀಖಂಡಮಂಡಿತೈಃ ।
ಪನಸೈರ್ಬಕುಲೈಶ್ಚೈವಾಮ್ರಾತಾನ್ಯೈಶ್ಚ ಚಂಪಕೈಃ ॥ ೨ ॥
ಅಶೋಕೈರ್ನಾರಿಕೇರೈಶ್ಚ ಮಾತುಲಿಂಗೈಃ ಸದಾಡಿಮೈಃ ।
ನಾನಾವೃಕ್ಷೈಶ್ಚ ಶೋಭಾಢ್ಯಂ ತಡಾಗೈರುಪಶೋಭಿತಂ ॥ ೩ ॥
ದೇವತಾಯತನೈರ್ದಿವ್ಯೈರ್ಧ್ವಜಮಾಲಾಸುಶೋಭಿತೈಃ ।
ವೇದಾಧ್ಯಯನನಿರ್ಘೋಷೈರ್ಮಂಗಲಾದ್ಯೈರ್ವಿನಾದಿತಂ ॥ ೪ ॥
ಪ್ರಾವಿಶದ್ಭವನೇ ದಿವ್ಯೇ ಕಾಂಚನೇ ರುಕ್ಮಮಾಲಿನಿ ।
ಅಪಶ್ಯತ್ಸ ಸುತಾನ್ಭಾರ್ಯಾಮಮಾತ್ಯಾನ್ಸಭೃತ್ಯಕಾನ್ ॥ ೫ ॥
ತತೋ ಜಯಪ್ರದಾನ್ ಸರ್ವಾನಿತಶ್ಚೇತಶ್ಚ ಧಾವತಃ ।
ಹೃಚ್ಛೋಭಾಂ ಚ ಪ್ರಕುರ್ವಾಣಾನ್ವೈಜಯಂತೀಭಿರುಚ್ಚಕೈಃ ॥ ೬ ॥

---

## ಕನ್ನಡದ ಅನುವಾದ

### ಶಚೀಹರಣವರ್ಣನ

೧–೪. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಆ ಅಂಧಕನು ವರವನ್ನು ಪಡೆದು ಆಶ್ಚರ್ಯಕರವಾದ ಅಂಗಣ, ಉದ್ಯಾನಗಳಿಂದ ಕೂಡಿ, ಬಾಳೆ, ಹಲಸು, ಬಕುಲ, ಅಮಟೆ, ಮಾವು, ಸಂಪಗೆ, ಅಶೋಕ, ತೆಂಗು, ಮಾದಲ, ದಾಡಿಮ ಮೊದಲಾದ ವೃಕ್ಷಗಳಿಂದಲೂ, ಕೆರೆಗಳಿಂದಲೂ, ಧ್ವಜ ಮಾಲೆಗಳಿಂದಲೂ ಅಲಂಕಾರಗೊಂಡು ದಿವ್ಯ ದೇವಾಲಯಗಳಿಂದ ವಿರಾಜಿಸುತ್ತ, ವೇದಾಧ್ಯಯನ ಧ್ವನಿಗಳಿಂದಲೂ, ಮಂಗಳವಾದ್ಯಗಳಿಂದಲೂ ಧ್ವನಿಗೊಳ್ಳುತ್ತಿರುವ ತನ್ನ ಪಟ್ಟಣಕ್ಕೆ ಬಂದನು.

೫–೬. ಅಲ್ಲಿ ಸುವರ್ಣ ಮಾಲೆಯುಳ್ಳ ಚಿನ್ನದ ಮನೆಯಲ್ಲಿ ಜಯಕಾರ ಮಾಡುವವರೂ, ಸಂಭ್ರಮದಿಂದ ಅತ್ತಿತ್ತ ಓಡಾಡುವವರೂ, ಎತ್ತರವಾದ ಪತಾಕೆಗಳಿಂದ ಶೋಭೆಯನ್ನುಂಟುಮಾಡುವವರೂ ಆದ ಪತ್ನಿ, ಪುತ್ರ, ಮಂತ್ರಿ, ಭೃತ್ಯರನ್ನು ನೋಡಿದನು.

ಕೇಚಿತ್ತೋರಣಮಾಬದ್ಧ್ಯ ಕೇಚಿತ್ಪುಷ್ಪಾಣ್ಯವಾಕಿರನ್ ।
ಮಾತುಲಿಂಗಕರಾಶ್ಚಾಽನ್ಯೇ ಧಾವಂತಿ ಹ್ಯಂಧಕಂ ಪ್ರತಿ ॥ ೭ ॥
ಪುರೇ ಜನಾಶ್ಚ ದೃಶ್ಯಂತೇ ಭಾಜನೈರನ್ನಪೂರಿತೈಃ ।
ಪೂರ್ಣಹಸ್ತಾಃ ಪ್ರದೃಶ್ಯಂತೇ ತತ್ರೈವ ಬಹವೋ ಜನಾಃ ॥ ೮ ॥
ಸಾಕ್ಷತೈರ್ಭಾಜನೈಸ್ತತ್ರ ಶತಸಾಹಸ್ರಯೋಷಿತಃ ।
ಮಂತ್ರಾನ್ಪಠಂತಿ ವಿಪ್ರಾಶ್ಚ ಮಂಗಲಾನ್ಯಪಿ ಯೋಷಿತಃ ॥ ೯ ॥
ಅಮಾತ್ಯಾಶ್ಚೈವ ಭೃತ್ಯಾಶ್ಚ ಗಜಾಂಶ್ಚಾಥೌಕಯಂತಿ ಚ ।
ವರ್ಧಾಪಯಂತಿ ತೇ ಸರ್ವೇ ಯೇ ಕೇಚಿತ್ಪುರವಾಸಿನಃ ॥ ೧೦ ॥
ಹೃಷ್ಟಸ್ತುಷ್ಟೋಽವಸತ್ತತ್ರ ಸಚಿವೈಃ ಸಹ ಸೋಽಂಧಕಃ ।
ದದರ್ಶ ಸ ಜಗತ್ಸರ್ವಂ ತುರಂಗಾಂಶ್ಚ ಪದಾತಿಕಾನ್ ॥ ೧೧ ॥
ತಥೈವ ವಿವಿಧಾನ್ಕೋಶಾಂಸ್ತತ್ರ ಕಾಂಚನಪೂರಿತಾನ್ ।
ಮಹಿಷೀರ್ಗಾ ವೃಷಾಂಶ್ಚೈವಾಽಪಶ್ಯಚ್ಛತ್ರಾಣ್ಯನೇಕಧಾ ॥ ೧೨ ॥
ಸ ಏವಮಂಧಕಸ್ತತ್ರ ಕಿಯಂತಂ ಕಾಲಮಾವಸತ್ ।
ಹೃಷ್ಟಸ್ತುಷ್ಟೋ ವಸನ್ಮರ್ತ್ಯೇ ಸ ಸುರೈರ್ನಾಽಭ್ಯಭೂಯತ ॥ ೧೩ ॥

---

೭. ಪಟ್ಟಣದ ಕೆಲವು ಜನರು ತೋರಣವನ್ನು ಕಟ್ಟಿದರು. ಕೆಲವರು ಹೂವುಗಳನ್ನು ಎರಚಿದರು. ಇನ್ನು ಕೆಲವರು ಮಾದಲದಹಣ್ಣನ್ನು ಹಿಡಿದು ಅಂಧಕನೆದುರುಗೊಂಡರು.

೮. ಅನೇಕ ಜನರು ಅನ್ನ ತುಂಬಿದ ಪಾತ್ರೆಗಳನ್ನು ಹಿಡಿದುಕೊಂಡು ಪೂರ್ಣಹಸ್ತರಾಗಿ ಕಾಣುತ್ತಿದ್ದನು.

೯. ಸಾವಿರಾರು ಮಂದಿ ನಾರಿಯರೂ ಅಕ್ಷಯಪಾತ್ರೆಗಳನ್ನು ಹಿಡಿದು ಕೊಂಡಿದ್ದರು. ಬ್ರಾಹ್ಮಣರು ಮಂತ್ರಗಳನ್ನು ಪಠಿಸುತ್ತಿದ್ದರು. ಹೆಂಗಸರು ಮಂಗಳಾಶಂಸನೆಮಾಡುತ್ತಿದ್ದರು.

೧೦. ಅಮಾತ್ಯರೂ, ಭೃತ್ಯರೂ ಆನೆಗಳನ್ನು ನಡೆಯಿಸುತ್ತಿದ್ದರು. ಪೌರ ರೆಲ್ಲ ಜಯಕಾರಗಳನ್ನು ಮಾಡುತ್ತಿದ್ದರು.

೧೧–೧೨. ಆ ಅಂಧಕನು ಅಲ್ಲಿ ಮಂತ್ರಿಗಳೊಡನೆ ಸಂತೋಷವಾಗಿ ವಾಸ ಮಾಡಿದನು. ಸಕಲ ಜಗತ್ತುಗಳನ್ನೂ, ಕುದುರೆ, ಕಾಲಾಳು, ಸುವರ್ಣದಿಂದ ತುಂಬಿದ ಬೊಕ್ಕಸ, ಎಮ್ಮೆ, ಹಸು, ಎತ್ತು, ಕೊಡೆ ಇವುಗಳನ್ನೂ ಕಂಡನು.

೧೩. ಆ ಅಂಧಕನು ಹೀಗೆ ಅಲ್ಲಿ ಎಷ್ಟೋ ಕಾಲ ವಾಸಮಾಡಿದನು. ಸಂತೋಷದಿಂದ ವಾಸಮಾಡುತ್ತಿರುವ ಅವನಿಗೆ ಅಭಿಭವವನ್ನುಂಟುಮಾಡಲು ದೇವತೆಗಳಿಗಾಗಲಿಲ್ಲ.

ವರಂ ಲಬ್ಧಂ ತು ತಂ ಜ್ಞಾತ್ವಾ ಶಂಕಿತಾಃ ಸ್ವರ್ಗವಾಸಿನಃ ।
ಏಕೀಭೂತಾಶ್ಚ ತೇ ಸರ್ವೇ ವಾಸವಂ ಶರಣಂ ಗತಾಃ ॥ ೧೪ ॥
ಶಕ್ರ ಉವಾಚ :—
ಕಥಮಾಗಮನಂ ವೋಽತ್ರ ಸರ್ವೇಷಾಮಪಿ ನಾಕಿನಾಂ ।
ಕಸ್ಮಾದ್ವೋ ಭಯಮುತ್ಪನ್ನಮಾಗತಾಃ ಶರಣಂ ಕಥಂ ॥ ೧೫ ॥
ತತಸ್ತೇ ಹ್ಯಮರಾಃ ಸರ್ವೇ ಶಕ್ರಮೇತದ್ವಚೋಽಬ್ರುವನ್ ॥ ೧೬ ॥
ದೇವಾ ಊಚುಃ :—
ಸುರನಾಥಾಂಧಕೋ ನಾಮ ದೈತ್ಯಃ ಶಂಭುವರೋರ್ಜಿತಃ ।
ಅಜೇಯಃ ಸರ್ವದೇವಾನಾಂ ಕಿಂ ನು ಕಾರ್ಯಮತಃ ಪರಂ ॥ ೧೭ ॥
ತತ್ತ್ವಂ ಚಿಂತಯ ದೇವೇಶ ಕ ಉಪಾಯೋ ವಿಧೀಯತಾಂ ।
ಇತ್ಥಂ ವದಂತಿ ತೇ ದೇವಾಃ ಶಕ್ರಾಗ್ರೇ ಮಂತ್ರಣೋದ್ಯತಾಃ ॥ ೧೮ ॥
ಮಂತ್ರಯಂತಿ ಚ ಯಾವದ್ವೈ ತಾವಚ್ಚಾರಮುಖೇರಿತಂ ।
ಜ್ಞಾತ್ವಾ ತತ್ರ ಸ ದೇವೌಘಂ ದಾನವೋ ನಿರ್ಗತೋ ಗೃಹಾತ್ ॥ ೧೯ ॥
ಏಕಾಕೀ ಸ್ಯಂದನಾರೂಢ ಆಯುಧೈರ್ಬಹುಭಿರ್ವೃತಃ ।
ದುರ್ಗಮಂ ಮೇರುಪೃಷ್ಠಂ ಸ ಲೀಲಯೈವ ಗತೋ ನೃಪ ॥ ೨೦ ॥

---

೧೪. ಸ್ವರ್ಗವಾಸಿಗಳಾದ ದೇವತೆಗಳು, ಆ ಅಂಧಕನು ವರವನ್ನು ಪಡೆದಿರುವನೆಂದು ತಿಳಿದು ಕಳವಳಗೊಂಡು ಒಟ್ಟಿಗೆಸೇರಿ ಇಂದ್ರನನ್ನು ಮರೆಹೊಕ್ಕರು.

೧೫. ಇಂದ್ರನು ಹೇಳುತ್ತಾನೆ:—ಸ್ವರ್ಗವಾಸಿಗಳಾದ ನೀವೆಲ್ಲರೂ ಏಕಕಾಲದಲ್ಲಿ ಇಲ್ಲಿಗೆ ಬರಲು ಕಾರಣವೇನು? ಯಾರಿಂದ ನಿಮಗೆ ಭಯವುಂಟಾಯಿತು. ಏತಕ್ಕೆ ಮರೆಹೊಕ್ಕಿರುವಿರಿ?

೧೬. ಬಳಿಕ ಆ ಅಮರರೆಲ್ಲ ಇಂದ್ರನನ್ನು ಕುರಿತು ಇಂತೆಂದರು.

೧೭. ದೇವತೆಗಳು ಹೇಳುತ್ತಾರೆ:—"ಇಂದ್ರ! ಅಂಧಕನೆಂಬ ದಾನವನು ಶಂಕರನವರದಿಂದ ಉತ್ಕೃಷ್ಟನೂ, ಸಮಸ್ತ ದೇವತೆಗಳಿಗೆ ಅಜೇಯನೂ ಆಗಿರುವನು. ಇನ್ನುಮುಂದೆ ಏನನ್ನು ಮಾಡಬೇಕು?

೧೮. ಈ ವಿಷಯದಲ್ಲಿ ನೀನು ಆಲೋಚಿಸಿ ಉಪಾಯವನ್ನು ಮಾಡು" ಎಂದು ಆ ದೇವತೆಗಳು ಹೇಳುತ್ತ ಅವನ ಮುಂದೆ ಚಿಂತಿಸಲುದ್ಯುಕ್ತರಾದರು.

೧೯. ಅಂಧಕನು ದೇವತೆಗಳು ಆಲೋಚಿಸುತ್ತಿರುವರೆಂದು ಚಾರರ ಮುಖದಿಂದ ತಿಳಿದು ಮನೆಯಿಂದ ಹೊರಟನು.

೨೦. ಅವನು ಒಬ್ಬಂಟಿಗನಾಗಿಯೇ ರಥವನ್ನೇರಿ ಅನೇಕ ಆಯುಧಗಳೊಡನೆ ಅನಾಯಾಸವಾಗಿ ಮೇರುಪರ್ವತದ ತಪ್ಪಲಿಗೆ ಹೋದನು.

ಸ್ವರ್ಣಪ್ರಾಕಾರಸಂಯುಕ್ತಂ ಶೋಭಿತಂ ವಿವಿಧಾಶ್ರಮೈಃ ।
ದುರ್ಗಮಂ ಶತ್ರುವರ್ಗಸ್ಯ ತದಾ ಪಾರ್ಥಿವಸತ್ತಮ ॥ ೨೧ ॥
ಪ್ರವಿವೇಶಾಽಸುರಸ್ತತ್ರ ಲೀಲಯಾ ಸ್ವಗೃಹೇ ಯಥಾ ।
ವೃತ್ರಹಾ ಭಯಮಾಪನ್ನಃ ಸ್ವಕೀಯಂ ಚಾಸನಂ ದದೌ ॥ ೨೨ ॥
ಉಪವಿಷ್ಟೋಽಂಧಕಸ್ತತ್ರ ಶಕ್ರಸ್ಯೈವಾಸನೇ ಶುಭೇ ।
ಆಸ್ಥಾನಂ ಕಲಯಾಮಾಸ ಸರ್ವತಸ್ತ್ರಿದಶಾವೃತಂ ॥ ೨೩ ॥

ಶಕ್ರ ಉವಾಚ:—

ಕಿಂ ತವಾಽಽಗಮನಂ ಚಾಽತ್ರ ಕಿಂ ಕಾರ್ಯಂ ಕಥಯಸ್ವಮೇ ।
ಯದಸ್ಮದೀಯಂ ವಿತ್ತಂ ಹಿ ತತ್ತೇ ದಾಸ್ಯಾಮಿ ದಾನವ ॥ ೨೪ ॥

ಅಂಧಕ ಉವಾಚ:—

ನಾಽಹಂ ವೈ ಕಾಮಯೇ ಕೋಶಂ ನ ಗಜಾಂಶ್ಚ ಸುರೇಶ್ವರ ।
ಸ್ವಕೀಯಂ ದರ್ಶಯಸ್ವಾಽದ್ಯ ಸ್ವರ್ಗಶೃಂಗಾರಭೂಷಿತಂ ॥ ೨೫ ॥
ಐರಾವತಂ ಮಹಾನಾಗಂ ತಂ ಚೈವೋಚ್ಚೈಃಶ್ರವೋಹಯಂ ।
ಉರ್ವಶ್ಯಾದೀನಿ ರತ್ನಾನಿ ಮಮ ದರ್ಶಯ ಗೋಪತೇ ॥ ೨೬ ॥
ಪಾರಿಜಾತಕಪುಷ್ಪಾಣಿ ವೃಕ್ಷಜಾತೀನನೇಕಶಃ ।
ವಾದಿತ್ರಾಣಿ ಚ ಸರ್ವಾಣಿ ದರ್ಶಯಸ್ವ ಶಚೀಪತೇ ॥ ೨೭ ॥
ತಸ್ಯ ತದ್ವಚನಂ ಶ್ರುತ್ವಾ ಶಕ್ರಶ್ಚಿಂತಿತವಾನಿದಂ ।
ಯೋಽಮುಂ ನಿಹಂತಿ ಪಾಪಾತ್ಮಾನಂ ನತಂ ಪಶ್ಯಾಮಿ ಕರ್ಹಿಚಿತ್ ॥ ೨೮ ॥

---

೨೧–೨೨. ದೊರೆಯೆ! ಅವನು ಚಿನ್ನದ ಪ್ರಾಕಾರಗಳಿಂದ ಕೂಡಿರುವುದೂ, ವಿವಿಧಾಶ್ರಮಗಳಿಂದ ಅಲಂಕಾರಗೊಂಡುದೂ, ಶತ್ರುಗಳಿಗೆ ದುರ್ಗಮವೂ ಆದ ಆ ಸುರಲೋಕವನ್ನು ಪ್ರವೇಶಮಾಡಲು ಇಂದ್ರನು ಹೆದರಿ ತನ್ನ ಆಸನವನ್ನಿತ್ತನು.

೨೩. ಅಂಧಕನು ಇಂದ್ರನ ಭವ್ಯವಾದ ಆಸನದಲ್ಲಿ ಮಂಡಿಸಿ ದೇವತೆಗಳೊಡನೆಯೆ ಸಭೆಮಾಡಿದನು.

೨೪. ಇಂದ್ರನು ಹೇಳುತ್ತಾನೆ:—ದಾನವ! ನೀನು ಇಲ್ಲಿಗೆ ಏಕೆ ಬಂದಿರುವೆ? ಏನು ಕೆಲಸವಾಗಬೇಕು ಹೇಳು. ನನ್ನ ದ್ರವ್ಯವನ್ನೆಲ್ಲ ನಿನಗೆ ಕೊಡಲೆ?

೨೫–೨೭. ಅಂಧಕನು ಹೇಳುತ್ತಾನೆ:—ಇಂದ್ರ! ನಾನು ಬೊಕ್ಕಸವನ್ನೂ, ಆನೆಗಳನ್ನೂ ಬಯಸೆನು. ಈಗ ಈ ಸ್ವರ್ಗವನ್ನು ಸಿಂಗರಿಸಿರುವ ಐರಾವತ, ಉಚ್ಚೈಃಶ್ರವಸ್ಸು, ಉರ್ವಶೀ ಮೊದಲಾದ ಉತ್ತಮ ವಸ್ತುಗಳು, ಪಾರಿಜಾತ ಪುಷ್ಪಗಳು, ಅನೇಕ ಜಾತಿಯ ಕಲ್ಪವೃಕ್ಷಗಳು, ಸಕಲ ವಾದ್ಯಗಳು ಇವುಗಳನ್ನು ತೋರಿಸು.

೨೮–೩೦. ಅವನ ಮಾತನ್ನು ಕೇಳಿ ಇಂದ್ರನು ಈ ಪಾಪಿಯನ್ನು ಕೊಲ್ಲುವ ಯಾರನ್ನೂ ನೋಡಲಿಲ್ಲವಲ್ಲ. ದುಃಖಗೊಂಡ ಸ್ವರ್ಗವನ್ನು ರಕ್ಷಿಸುವವನಾರೂ

ನಾಸ್ತಿ ರಕ್ಷಾಪ್ರದಃ ಕಶ್ಚಿತ್ಸ್ವರ್ಗಲೋಕಸ್ಯ ದುಃಖಿನಃ ।
ಭಯತ್ರಸ್ತೋ ದದಾವಸ್ಯದ್ವಾದಿತ್ರಾದ್ಯಪ್ಸರೋಗಣೈಃ ॥ ೨೯ ॥
ರಂಗಭೂಮಾವುಪಾವಿಶ್ಯ ಕಾರಯಾಮಾಸ ತಾಂಡವಂ ।
ಉಪವಿಷ್ಟಾಃ ಸುರಾಃ ಸರ್ವೇ ಯಮಮಾರುತ ಕಿನ್ನರಾಃ ॥ ೩೦ ॥
ಉರ್ವಶ್ಯಾದ್ಯಾ ಅಪ್ಸರಸೋ ಗೀತವಾದಿತ್ರಯೋಗತಃ ।
ನನೃತುಃ ಪುರತಸ್ತಸ್ಯ ಸರ್ವಾ ಏಕೈಕಶೋ ನೃಪ ॥ ೩೧ ॥
ನನ್ಯಶ್ರಾನ್ಯತ ತಚ್ಚಿತ್ತಂ ದೃಷ್ಟ್ವಾ ಚಾಪ್ಸರಸಸ್ತದಾ ।
ಶಚೀಂ ಪ್ರತಿ ಮನಸ್ತಸ್ಯ ಸಕಾಮಮಭವನ್ನೃಪ ॥ ೩೨ ॥
ಗೃಹೀತ್ವಾ ಶಕ್ರಭಾರ್ಯಾಂ ಸ ಪ್ರಸ್ಥಿತಃ ಸ್ವಪುರಂ ಪ್ರತಿ ।
ತತಃ ಪ್ರವವೃತೇ ಯುದ್ಧಮಂಧಕಸ್ಯ ಸುರೈಃ ಸಹ ॥ ೩೩ ॥
ತೇನ ದೇವಗಣಾಃ ಸರ್ವೇ ಧ್ವಸ್ತಾಃ ಪಾರ್ಥಿವಸತ್ತಮ ।
ಸಂಗ್ರಾಮೇ ವಿವಿಧೈಃ ಶಸ್ತ್ರೈಶ್ಚಕ್ರವಜ್ರಾದಿಭಿರ್ಘನೈಃ ॥ ೩೪ ॥
ಸಂತಾಪಿತಾಃ ಸುರಾಃ ಸರ್ವೇ ಕ್ಷಯಂ ನೀತಾಹ್ಯನೇಕಶಃ ।
ಸರ್ವೇಽಪಿ ಮರುತಸ್ತೇನ ಭಗ್ನಾಃ ಸಂಗ್ರಾಮಮೂರ್ಧನಿ ॥ ೩೫ ॥
ಯಥಾ ಸಿಂಹೋ ಗಜಾನ್ ಸರ್ವಾನ್ವಿಚಿತ್ಯ ವಿಚರೇದ್ವನಂ ।
ತದ್ವದೇಕೇನ ತೇ ದೇವಾ ಜಿತಾಃ ಸರ್ವೇ ಪರಾಙ್ಮುಖಾಃ ॥ ೩೬ ॥

---

ಇಲ್ಲ. ಎಂದು ಚಿಂತಿಸಿ ಭಯದಿಂದ ಆ ವಸ್ತುಗಳನ್ನು ತೋರಿಸಿ ಅವನನ್ನು ನಾಟ್ಯಶಾಲೆಯಲ್ಲಿ ಕುಳ್ಳಿರಿಸಿ ಅಪ್ಸರೆಯರಿಂದ ವಾದ್ಯಗಳೊಡನೆ ನಾಟ್ಯವಾಡಿಸಿದನು. ಯಮ, ವಾಯುಗಳು, ಕಿನ್ನರರೂ ಇತರ ದೇವತೆಗಳೂ ಕುಳಿತುಕೊಂಡರು.

೩೧. ಊರ್ವಶೀ ಮೊದಲಾದ ಅಪ್ಸರೆಯರು ಅವನ ಮುಂದೆ ಒಬ್ಬೊಬ್ಬರಾಗಿ ಗೀತವಾದ್ಯಾದಿಗಳಿಂದ ಕುಣಿದರು.

೩೨. ಆಗ ಅಪ್ಸರೆಯರನ್ನು ನೋಡಿ ಅವನ ಮನಸ್ಸು ಆಯಾಸಗೊಳ್ಳಲಿಲ್ಲ. ಶಚಿಯನ್ನು ಕಂಡು ಅವನ ಮನಸ್ಸು ಕಾಮೋದ್ದೀಪಿತವಾಯಿತು.

೩೩. ಅದರಿಂದವನು ಶಚಿಯನ್ನು ಕರೆದುಕೊಂಡು ತನ್ನ ಪಟ್ಟಣಕ್ಕೆ ಹೊರಟನು. ಬಳಿಕ ಅಂಧಕನಿಗೆ ದೇವತೆಗಳೊಡನೆ ಯುದ್ಧಸಾರಂಭವಾಯಿತು.

೩೪–೩೫. ಅದರಿಂದ ಸಮಸ್ತ ದೇವತೆಗಳೂ ಧ್ವಂಸವಾದರು. ಯುದ್ಧದಲ್ಲಿ ಚಕ್ರ, ವಜ್ರ ಮೊದಲಾದ ಘನವಾದ ಆಯುಧಗಳಿಂದ ಸಂತಾಪಗೊಂಡ ದೇವತೆಗಳು ಬಹಳವಾಗಿ ನಾಶವಾದರು. ಅವನು ಯುದ್ಧದಲ್ಲಿ ಸಕಲ ಮರುತ್ತುಗಳನ್ನೂ ನಾಶಗೊಳಿಸಿದನು.

೩೬. ಸಿಂಹವು ಆನೆಗಳನ್ನೆಲ್ಲ ಹುಡುಕುತ್ತ ಕಾಡಿನಲ್ಲಿ ಸಂಚರಿಸುವಂತೆ ಅವನು ದೇವತೆಗಳನ್ನೆಲ್ಲ ಸೋಲಿಸಿ ಹಿಂದಿರುಗಿಸಿದನು.

ಬಾಲೋಽಧಿಪೋ ಯಥಾಗ್ರಾಮೇ ಸ್ವೇಚ್ಛಯಾ ಪೀಡಯೇಜ್ಜನಾನ್ ।
ಸ್ವೈರಮಾಕ್ರಮ್ಯ ಗೃಹ್ಣಾತಿ ಕೋಶವಾಸಾಂಸಿ ಚಾಽಸಕೃತ್ ॥ ೩೭ ॥
ಗತಂ ನ ಪಶ್ಯತ್ಯಾತ್ಮಾನಂ ಪ್ರಜಾಸಂತಾಪನೇನ ಚ ।
ಗೃಹೀತ್ವಾ ಶಕ್ರಭಾರ್ಯಾಂ ಸ ಗತೋ ವೈ ದಾನವೋತ್ತಮಃ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ
"ಶಚೀಹರಣವರ್ಣನಂ"
ನಾಮ ಷಟ್‌ಚತ್ವಾರಿಂಶೋಽಧ್ಯಾಯಃ

---

೩೭. ಬಾಲಕನಾದ ರಾಜನು ಗ್ರಾಮದಲ್ಲಿ ಜನರನ್ನು ಪೀಡಿಸುವಂತೆ ಅವನು ಸ್ವೇಚ್ಛೆಯಾಗಿ ಸ್ವರ್ಗವನ್ನು ಆಕ್ರಮಿಸಿ ಬೊಕ್ಕಸ ಮತ್ತು ವಸ್ತ್ರಗಳನ್ನು ಅನೇಕಬಾರಿ ಅಪಹರಿಸಿದನು.

೩೮. ಪ್ರಜೆಗಳನ್ನು ಸಂತಾಪಗೊಳಿಸುವುದರಿಂದ ಅವನು ತಾನು ಹೊರಟು ಹೋದುದನ್ನೂ ಅರಿಯುವುದಿಲ್ಲ. ಹೀಗೆ ಅವನು ಇಂದ್ರನ ಪತ್ನಿಯನ್ನು ಅಪಹರಿಸಿ ಕೊಂಡು ಹೊರಟುಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಶಚೀಹರಣವರ್ಣನ"ವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಚತ್ವಾರಿಂಶೋಽಧ್ಯಾಯಃ

### ಗೀರ್ವಾಣಸ್ವರ್ಗಮನವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಗೀರ್ವಾಣಾಶ್ಚ ತತಃ ಸರ್ವೇ ಬ್ರಹ್ಮಾಣಂ ಶರಣಂಗತಾಃ ।
ಗಜೈರ್ಗಿರಿವರಾಕಾರೈರ್ಹಯೈಶ್ಚೈವ ಗಜೋಪಮೈಃ ॥ ೧ ॥
ಸ್ಯಂದನೈರ್ನಗರಾಕಾರೈಃ ಸಿಂಹಶಾರ್ದೂಲಯೋಜಿತೈಃ ।
ಕಚ್ಛಪೈರ್ಮಹಿಷೈಶ್ಚಾನ್ಯೈರ್ಮಕರೈಶ್ಚ ತಥಾಪರೇ ॥ ೨ ॥
ಬ್ರಹ್ಮಲೋಕಮನುಪ್ರಾಪ್ತಾ ದೇವಾಃ ಶಕ್ರಪುರೋಗಮಾಃ ।
ದೃಷ್ಟ್ವಾ ಪದ್ಮೋದ್ಭವಂ ದೇವಂ ಸಾಷ್ಟಾಂಗಂ ಪ್ರಣತಾಃ ಸುರಾಃ ॥ ೩ ॥

ದೇವಾ ಊಚುಃ :—

ಜಯ ದೇವ ಜಗದ್ವಂದ್ಯ ಜಯ ಸಂಸೃತಿಕಾರಕ ।
ಪದ್ಮಯೋನೇ ಸುರಶ್ರೇಷ್ಠ ತ್ವಾಮೇವ ಶರಣಂ ಗತಾಃ ॥ ೪ ॥
ಸೋದ್ವೇಗಂ ಭಾಷಿತಂ ಶ್ರುತ್ವಾ ದೇವಾನಾಂ ಭಾವಿತಾತ್ಮನಾಂ ।
ಮೇಘಗಂಭೀರಯಾ ವಾಚಾ ದೇವರಾಜಮುವಾಚ ಹ ॥ ೫ ॥
ಕಿಮತ್ರಾಗಮನಂ ದೇವಾಃ ಸರ್ವೇಷಾಂ ವೈ ವಿವರ್ಣತಾ ।
ಕೇನಾಪಮಾನಿತಾಃ ಸರ್ವೇ ಶೀಘ್ರಂ ಮೇ ಕಥ್ಯತಾಂ ತ್ವಯಂ ॥ ೬ ॥

---

## ಕನ್ನಡದ ಅನುವಾದ

### ಗೀರ್ವಾಣಸ್ವರ್ಗಗಮನವರ್ಣನ

೧–೩. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಇಂದ್ರಾದಿ ಸಮಸ್ತ ದೇವತೆಗಳು ಬೆಟ್ಟದಂತಿರುವ ಆನೆಗಳು, ಆನೆಯಂತಿರುವ ಕುದುರೆಗಳು, ನಗರದಂತಿರುವ ಸಿಂಹಶಾರ್ದೂಲಗಳನ್ನು ಕಟ್ಟಿರುವ ರಥಗಳು, ಆಮೆ, ಕೋಣ, ಮೊಸಳೆಗಳು ಇವುಗಳೊಡನೆ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಚತುರ್ಮುಖನನ್ನು ನೋಡಿ ಸಾಷ್ಟಾಂಗ ಪ್ರಣಾಮಗೈದು ಮೊರೆಹೊಕ್ಕರು.

೪. ದೇವತೆಗಳು ಹೇಳುತ್ತಾರೆ:—ಜಗದ್ವಂದ್ಯನೂ, ಸೃಷ್ಟಿಕರ್ತನೂ ಆದ ಬ್ರಹ್ಮನೆ! ಜಯಿಸು. ನಾವು ನಿನ್ನನ್ನೆ ಮರೆಹೊಕ್ಕಿರುವೆವು.

೫. ಬ್ರಹ್ಮನು ದೇವತೆಗಳ ಉದ್ವೇಗದಿಂದ ಕೂಡಿರುವ ಮಾತನ್ನು ಕೇಳಿ ಮೇಘದಂತೆ ಗಂಭೀರವಾದ ವಾಣಿಯಿಂದ ಇಂದ್ರನನ್ನು ಕುರಿತು ಹೀಗೆಂದನು.

೬. "ಅಯ್ಯಾ ದೇವತೆಗಳಿರಾ! ನೀವೆಲ್ಲರೂ ಇಲ್ಲಿಗೆ ಬರಲು ಕಾರಣವೇನು? ಎಲ್ಲರೂ ಕಳೆಗುಂದಿರುವಿರಿ. ಯಾರು ನಿಮಗೆ ಅವಮಾನಮಾಡಿದರು? ಬೇಗನೆ ಹೇಳಿರಿ.

ದೇವಾ ಊಚುಃ:—

ಅಂಧಕಾಖ್ಯೋ ಮಹಾದೈತ್ಯೋ ಬಲವಾನ್ ಪದ್ಮಸಂಭವ ।
ತೇನ ದೇವಗಣಾಃ ಸರ್ವೇ ಧನರತ್ನೈರ್ವಿಯೋಜಿತಾಃ ॥ ೭ ॥
ಹತ್ವಾ ದೇವಗಣಾಂಸ್ತಾವದಸಿಚಕ್ರಪರಶ್ವಧೈಃ ।
ಗೃಹೀತ್ವಾ ಶಕ್ರಭಾರ್ಯಾಂ ಸ ದಾನವೋಽಪಿ ಗತೋ ಬಲಾತ್ ॥ ೮ ॥
ದೇವಾನಾಂ ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಚಿಂತಯಾಮಾಸ ರಾಜೇಂದ್ರ ವಧಾರ್ಥಂ ದಾನವಸ್ಯ ಹ ॥ ೯ ॥
ಅವಧ್ಯೋ ದಾನವಃ ಪಾಪಃ ಸರ್ವೇಷಾಂ ವೋ ದಿವೌಕಸಾಂ ।
ಸ ತ್ರಾತಾ ಸರ್ವಜಗತಾಂ ನಾನ್ಯೋ ವಿದ್ಯೇತ ಕುತ್ರಚಿತ್ ॥ ೧೦ ॥
ಏವಮುಕ್ತ್ವಾ ಸುರಾಃ ಸರ್ವೇ ಬ್ರಹ್ಮಣಾ ತದನಂತರಂ ।
ಬ್ರಹ್ಮಾಣಂ ತೇ ಪುರಸ್ಕೃತ್ಯ ಗತಾ ಯತ್ರ ಸ ಕೇಶವಃ ।
ತುಷ್ಟುವುರ್ವಿವಿಧೈಃ ಸ್ತೋತ್ರೈರ್ಬ್ರಹ್ಮಾದ್ಯಾಶ್ಚಕ್ರಪಾಣಿನಂ ॥ ೧೧ ॥

ದೇವಾ ಊಚುಃ:—

ಜಯ ತ್ವಂ ದೇವದೇವೇಶ ಲಕ್ಷ್ಮ್ಯಾ ವಕ್ಷಸ್ಥಲಾಶ್ರಿತಃ ।
ಅಸುರಕ್ಷಯ ದೇವೇಶ ವಯಂ ತೇ ಶರಣಂ ಗತಾಃ ॥ ೧೨ ॥

---

೭. ದೇವತೆಗಳು ಹೇಳುತ್ತಾರೆ:—ಪಿತಾಮಹ! ಬಲಿಷ್ಠನಾದ ಅಂಧಕನೆಂಬ ಮಹಾದೈತ್ಯನು ದೇವತೆಗಳ ದ್ರವ್ಯ ಮತ್ತು ರತ್ನಗಳನ್ನು ಅಪಹರಿಸಿದ್ದಾನೆ.

೮. ಅವನು ಕತ್ತಿ, ಚಕ್ರ, ಕೊಡಲಿಗಳಿಂದ ದೇವತೆಗಳನ್ನು ಸದೆಬಡಿದು ಬಲಾತ್ಕಾರದಿಂದ ಇಂದ್ರನ ಪತ್ನಿಯನ್ನು ಅಪಹರಿಸಿಕೊಂಡು ಹೋಗಿರುವನು.

೯. ಲೋಕಪಿತಾಮಹನಾದ ಬ್ರಹ್ಮನು ದೇವತೆಗಳ ಮಾತನ್ನು ಕೇಳಿ ಅವನ ವಧೆಗಾಗಿ ಚಿಂತಿಸಿದನು.

೧೦. "ಪಾಪಿಷ್ಠನಾದ ಆ ದಾನವನು ಸಮಸ್ತ ದೇವತೆಗಳಿಗೆ ಅವಧ್ಯನಾಗಿರುವುದರಿಂದ ಆ ವಿಷ್ಣುವೊಬ್ಬನೇ ಸಕಲಜಗತ್ತುಗಳನ್ನು ರಕ್ಷಿಸುವವನು. ಬೇರೊಬ್ಬನಿಲ್ಲ."

೧೧. ಬ್ರಹ್ಮನು ಹೀಗೆನ್ನಲು ಸಮಸ್ತ ಸುರರೂ ಆ ಬ್ರಹ್ಮನನ್ನು ಮುಂದಿರಿಸಿಕೊಂಡು ವಿಷ್ಣುವಿದ್ದೆಡೆಗೆ ಹೋದರು. ಅಲ್ಲಿ ಬ್ರಹ್ಮಾದಿ ದೇವತೆಗಳು ಆ ವಿಷ್ಣುವನ್ನು ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸಿದರು.

೧೨. ದೇವತೆಗಳು ಹೇಳುತ್ತಾರೆ!—ಎದೆಯಲ್ಲಿ ಲಕ್ಷ್ಮಿಯನ್ನು ಧರಿಸಿರುವವನೂ, ಅಸುರಾಂತಕನೂ ಆದ ಓ ಮಹಾವಿಷ್ಣುವೆ! ನಾವು ನಿನಗೆ ಶರಣಾಗತರಾಗಿದ್ದೇವೆ.

ಸ್ತೂಯಮಾನಃ ಸುರೈಃ ಸರ್ವೈರ್ಬ್ರಹ್ಮಾದ್ಯೈಶ್ಚ ಜನಾರ್ದನಃ ।
ಸಂಪ್ರಹೃಷ್ಟಮನಾ ಭೂತ್ವಾ ಸುರಸಂಘಮುವಾಚಃ ॥ ೧೩ ॥

ಶ್ರೀ ವಾಸುದೇವ ಉವಾಚ:-

ಸ್ವಾಗತಂ ದೇವವಿಪ್ರಾಣಾಂ ಸುಪ್ರಭಾತಾಽದ್ಯ ಶರ್ವರೀ ।
ಕಿಂ ಕಾರ್ಯಂ ಪ್ರೋಚ್ಯತಾಂ ಕ್ಷಿಪ್ರಂ ಕಸ್ಯ ರುಷ್ಟಾ ದಿವೌಕಸಃ ॥ ೧೪ ॥
ಕಿಂ ದುಃಖಂ ಕಶ್ಚ ಸಂತಾಪಃ ಕುತೋ ವಾ ಭಯಮಾಗತಂ ।
ಕಥಯಂತು ಮಹಾಭಾಗಾಃ ಕಾರಣಂ ಯನ್ಮನೋಗತಂ ॥ ೧೫ ॥
ಪರಾಭವಃ ಕೃತೋ ಯೇನ ಸೋಽದ್ಯ ಯಾತು ಯಮಾಲಯಂ ।
ಏವಮುಕ್ತಾಸ್ತು ಕೃಷ್ಣೇನ ಕಥಯಾಮಾಸುರಸ್ಯ ತತ್ ॥ ೧೬ ॥
ದರ್ಶಯಂತಃ ಸ್ವಕಾನ್ದೇಹಾಂಲ್ಲಜ್ಜಮಾನಾ ಹ್ಯಧೋಮುಖಾಃ ।
ಹೃತರಾಜ್ಯಾಹ್ಯಂಧಕೇನ ಕೃತಾ ನಿಸ್ತೇಜಸಃ ಪ್ರಭೋ ॥ ೧೭ ॥

ಪಿತೇವ ಪುತ್ರಂ ಪರಿರಕ್ಷ ದೇವ
ಜಹೀಂದ್ರಶತ್ರುಂ ಸಹಪುತ್ರಪೌತ್ರೈಃ ।
ತಥೇತಿ ಚೋಕ್ತಃ ಕಮಲಾಸನೇನ
ಸುರಾಽಸುರೈರ್ವಂದಿತಪಾದಪದ್ಮಃ ॥ ೧೮ ॥

---

೧೩. ಹೀಗೆ ಬ್ರಹ್ಮಾದಿ ದೇವತೆಗಳು ಸ್ತುತಿಸಲು ವಿಷ್ಣುವು ಸಂತೋಷ ಗೊಂಡು ದೇವತೆಗಳನ್ನು ಕುರಿತು ಇಂತೆಂದನು.

೧೪. ಶ್ರೀ ವಾಸುದೇವನು ಹೇಳುತ್ತಾನೆ:—"ದೇವವಿಪ್ರರಿಗೆ ಸ್ವಾಗತವು. ಈ ದಿನ ನಿಮಗೆ ರಾತ್ರಿಯು ಸುಪ್ರಭಾತವಾಯಿತೆ? ನಿಮಗೆ ಯಾವ ಕಾರ್ಯ ವಾಗಬೇಕು? ದೇವತೆಗಳು ಯಾರಲ್ಲಿ ಕುಪಿತರಾಗಿರುವರು? ಬೇಗನೆ ಹೇಳಿರಿ.

೧೫. ಮಹಾಭಾಗ್ಯವಂತರೆ! ನಿಮಗೆ ಯಾವ ದುಃಖವು ಪ್ರಾಪ್ತ ವಾಯಿತು? ಯಾವ ಸಂತಾಪವು ಸಂಭವಿಸಿತು? ಯಾರಿಂದ ಭಯವುಂಟಾ ಯಿತು? ಮನೋಗತವಾದ ಕಾರಣವನ್ನು ಹೇಳಿರಿ.

೧೬–೧೭. ಯಾರಿಂದ ಪರಾಭವವುಂಟಾಯಿತು? ಅವನೀಗ ಯಮ ಸದನಕ್ಕೆ ತೆರಳಲಿ." ವಿಷ್ಣುವು ಹೀಗೆ ಕೇಳಲು ದೇವತೆಗಳು ತಮ್ಮ ಶರೀರವನ್ನು ತೋರಿಸುತ್ತ ಲಜ್ಜೆಯಿಂದ ತಲೆಯನ್ನು ತಗ್ಗಿಸಿಕೊಂಡು ಹೀಗೆಂದರು:— "ಸ್ವಾಮಿ! ಅಂಧಕನು ನಮ್ಮ ರಾಜ್ಯವನ್ನು ಅಪಹರಿಸಿ ನಮ್ಮನ್ನು ತೇಜೋಹೀನ ರನ್ನಾಗಿ ಮಾಡಿರುವನು.

೧೮–೧೯. ಪುತ್ರನನ್ನು ತಂದೆಯಂತೆ ನೀನು ನಮ್ಮನ್ನು ಕಾಪಾಡು. ಪುತ್ರ, ಪೌತ್ರರೊಡನೆ ಆ ಇಂದ್ರನ ಶತ್ರುವನ್ನು ಕೊಲ್ಲು." ಬ್ರಹ್ಮನಿಂದಲೂ, ದೇವಾಸುರ ರಿಂದಲೂ ವಂದಿತನಾದ ವಿಷ್ಣುವು ಹಾಗೆಯೇ ಆಗಲೆಂದು ಹೇಳಿ ಆ ದೇವತೆಗಳ

ಶಂಖಂ ಚಕ್ರಂ ಗದಾಂ ಚಾಪಂ ಸಂಗೃಹ್ಯ ಪರಮೇಶ್ವರಃ ।
ಉತ್ಥಿತೋ ಭೋಗಪರ್ಯಂಕಾದ್ದೇವಾನಾಂ ಪುರತಸ್ತದಾ ॥ ೧೯ ॥
ಶ್ರೀ ವಾಸುದೇವ ಉವಾಚ:—
ಪಾತಾಲೇ ಯದಿ ವಾ ಮರ್ತ್ಯೇ ನಾಕೇ ವಾ ಯದಿ ತಿಷ್ಠತಿ ।
ತಂ ಹನಿಷ್ಯಾಮ್ಯಹಂ ಪಾಪಂ ಯೇನ ಸಂತಾಪಿತಾಃ ಸುರಾಃ ॥ ೨೦ ॥
ಸ್ವಂ ಸ್ಥಾನಂ ಯಾಂತು ಗೀರ್ವಾಣಾಃ ಸಂತುಷ್ಟಾ ಭಾವಿತೌಜಸಃ ।
ವಿಷ್ಣೋಸ್ತದ್ವಚನಂ ಶ್ರುತ್ವಾ ಬ್ರಹ್ಮಾದ್ಯಾಸ್ತೇ ಸವಾಸವಾಃ ॥ ೨೧ ॥
ಸ್ವಯಾನೈಸ್ತು ಹರಿಂ ನತ್ವಾ ಹೃದಿ ತುಷ್ಟಾ ದಿವಂ ಯಯುಃ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಗೀರ್ವಾಣಸ್ವರ್ಗಮನವರ್ಣನಂ" ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

ಮುಂದೆ ಶಂಖ, ಚಕ್ರ, ಗದೆ, ಬಿಲ್ಲುಗಳನ್ನು ತೆಗೆದುಕೊಂಡು ಶೇಷಶಯನದಿಂದ ಮೇಲಕ್ಕೆದ್ದನು.

೨೦. ಶ್ರೀ ವಾಸುದೇವನು ಹೇಳುತ್ತಾನೆ:—"ದೇವತೆಗಳನ್ನು ಸಂತಾಪಗೊಳಿಸಿದ ಆ ಅಂಧಕನು ಪಾತಾಳದಲ್ಲಾಗಲಿ, ಭೂಲೋಕದಲ್ಲಾಗಲಿ, ಸ್ವರ್ಗದಲ್ಲಾಗಲಿ ಎಲ್ಲಿಯೆ ಇರಲಿ, ಪಾಪಿಷ್ಠನಾದ ಅವನನ್ನು ಕೊಲ್ಲುವೆನು.

೨೧–೨೨. ಓಜಸ್ವಿಗಳಾದ ದೇವತೆಗಳೇ! ನೀವು ಸಂತುಷ್ಟರಾಗಿ ನಿಮ್ಮ ನಿಮ್ಮ ಸ್ಥಾನಗಳಿಗೆ ತೆರಳಿರಿ." ಬ್ರಹ್ಮೇಂದ್ರಾದಿ ಸುರರು ವಿಷ್ಣುವಿನ ಆ ಮಾತನ್ನು ಕೇಳಿ ಮನಸ್ಸಿನಲ್ಲಿ ಸಂತೋಷಗೊಂಡು ಹರಿಯನ್ನು ನಮಿಸಿ ತಮ್ಮ ವಾಹನಗಳಿಂದ ದೇವಲೋಕಕ್ಕೆ ತೆರಳಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಗೀರ್ವಾಣಸ್ವರ್ಗಗಮನವರ್ಣನ"ವೆಂಬ
ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಚತ್ವಾರಿಂಶೋಽಧ್ಯಾಯಃ

## ಅಂಧಕವಧ-- ತದ್ವರಪ್ರದಾನವರ್ಣನಂ

ಉತ್ತಾನಪಾದ ಉವಾಚ :—

ಕಸ್ಮಿನ್ ಸ್ಥಾನೇಽವಸದ್ದೇವ ಸೋಽಂಧಕೋ ದೈತ್ಯಪುಂಗವಃ ।
ಸರ್ವಾನ್ದೇವಾಂಶ್ಚ ನಿರ್ಜಿತ್ಯ ಕಸ್ಮಿನ್ ಸ್ಥಾನೇ ಸಮಾಸ್ಥಿತಃ ॥ ೧ ॥

ಶ್ರೀ ಮಹೇಶ ಉವಾಚ :—

ಪ್ರವಿಷ್ಟೋ ದಾನವೋ ಯತ್ರ ಕಥಯಾಮಿ ನರಾಧಿಪ ।
ಪಾತಾಲಲೋಕಮಾಶ್ರಿತ್ಯ ಕನ್ಯಾ ವಿಧ್ವಂಸತೇ ತು ಸಃ ॥ ೨ ॥
ತತ್ರ ಸ್ಥಿತಂ ತಂ ವಿಜ್ಞಾಯ ಚಾಪಮಾದಾಯ ಕೇಶವಃ ।
ವ್ಯಸೃಜದ್ಬಾಣಮಾಗ್ನೇಯಂ ದಹ್ಯತಾಮಿತಿ ಚಿಂತಯನ್ ॥ ೩ ॥
ದಹ್ಯಮಾನೋಽಗ್ನಿನಾ ಸೋಽಪಿ ವಾರುಣಾಸ್ತ್ರಂ ಸ ಸಂದಧೇ ।
ವಾರುಣಾಸ್ತ್ರೇಣ ಮಹತಾ ಆಗ್ನೇಯಂ ಶಮಿತಂ ತದಾ ॥ ೪ ॥
ತತೋಽಸೌ ಚಿಂತಯಾಮಾಸ ಕೇನ ಬಾಣೋ ವಿಸರ್ಜಿತಃ ।
ಕಸ್ಯೈಷಾ ಪೌರುಷೀ ಶಕ್ತಿಃ ಕೋ ಯಾಸ್ಯತಿ ಯಮಾಲಯಂ ॥ ೫ ॥

---

### ಕನ್ನಡದ ಅನುವಾದ

#### ಅಂಧಕವಧ— ತದ್ವರಪ್ರದಾನವರ್ಣನ

೧. ಉತ್ತಾನಪಾದನು ಹೇಳುತ್ತಾನೆ:—ಸ್ವಾಮಿ! ದೈತ್ಯಶ್ರೇಷ್ಠನಾದ ಆ ಅಂಧಕನು ಎಲ್ಲಿ ವಾಸಮಾಡಿದನು? ಸಕಲ ದೇವತೆಗಳನ್ನು ಸೋಲಿಸಿ ಯಾವ ಸ್ಥಾನವನ್ನು ಆಕ್ರಮಿಸಿದನು?

೨–೩. ಶ್ರೀ ಮಹೇಶ್ವರನು ಹೇಳುತ್ತಾನೆ:—ದೊರೆಯೆ! ಆ ಅಂಧಕನು ಯಾವ ಸ್ಥಳವನ್ನಾಕ್ರಮಿಸಿದ್ದನೆಂಬುದನ್ನು ಹೇಳುತ್ತೇನೆ. ಅವನು ಪಾತಾಳ ಲೋಕಕ್ಕೆ ಹೋಗಿ ಕನ್ಯೆಯರನ್ನು ಕೆಡಿಸುತ್ತಿರಲು ವಿಷ್ಣುವು ಅವನು ಅಲ್ಲಿರುವುದನ್ನರಿತು ಬಿಲ್ಲನ್ನು ತೆಗೆದುಕೊಂಡು ಅವನು ಬೂದಿಯಾಗಲೆಂದು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು.

೪. ಅಗ್ನಿಯಿಂದ ಸುಡಲ್ಪಡುತ್ತಿರುವ ಅವನು ವಾರುಣಾಸ್ತ್ರವನ್ನು ಪ್ರಯೋಗಿಸಿದನು. ಆ ವಾರುಣಾಸ್ತ್ರದಿಂದ ಆಗ್ನೇಯಾಸ್ತ್ರವು ಶಾಂತವಾಯಿತು.

೫. ಬಳಿಕ ವಿಷ್ಣುವು, "ಯಾರು ಈ ಅಸ್ತ್ರವನ್ನು ಪ್ರಯೋಗಿಸಿದರು? ಯಾರಿಗೆ ಈ ಪೌರುಷ ಶಕ್ತಿಯಿರುವುದು? ಯಾವನು ಈಗ ಯಮಸದನಕ್ಕೆ ತೆರಳುವನು" ಎಂದು ಚಿಂತಿಸಿದನು.

ತತೋಽಂಧಕೋ ಮೃಧೇ ಕ್ರುದ್ಧೋ ಬಾಣಮಾರ್ಗೇಣ ನಿರ್ಗತಃ ।
ಸ ದೃಷ್ಟ್ವಾ ಬಾಣಮಾರ್ಗೇಣ ಚಾಪಹಸ್ತಂ ಜನಾರ್ದನಂ ॥ ೬ ॥

ಅಂಧಕ ಉವಾಚ :—

ನ ಶರ್ಮ ಲಪ್ಸ್ಯಸೇ ಹ್ಯದ್ಯ ಮಯಾ ದೃಷ್ಟ್ಯಾಽಭಿವೀಕ್ಷಿತಃ ।
ನ ಶಕ್ನೋಷಿ ತಥಾ ಗಂತುಂ ನಾಗಃ ಶಾರ್ದೂಲದರ್ಶನಾತ್ ॥ ೭ ॥
ಆಗಚ್ಛತಿ ಯಥಾ ಭಕ್ಷ್ಯಂ ಮಾರ್ಜಾರಸ್ಯ ಚ ಮೂಷಿಕಃ ।
ನ ಶಕ್ನೋಷಿ ತಥಾ ಯಾತುಂ ಸಂಸ್ಥಿತಸ್ತ್ವಂ ಮಮಾಗ್ರತಃ ॥ ೮ ॥
ಅಹಂ ತ್ವಾಂ ಪ್ರೇಷಯಿಷ್ಯಾಮಿ ಯಮಮಾರ್ಗೇ ಸುದಾರುಣೇ ।
ಅಹಮನ್ವೇಷಯಿಷ್ಯಾಮಿ ಕಿಲ ಯಾಸ್ಯಾಮಿ ತೇ ಗೃಹಂ ॥ ೯ ॥
ಉಪನೀತೋಽಸಿ ಕಾಲೇನ ಸಂಗ್ರಾಮೇ ಮಮ ಕೇಶವ ।
ಯೇ ತ್ವಯಾ ನಿರ್ಜಿತಾಃ ಪೂರ್ವಂ ದಾನವಾ ಅಪ್ಯನೇಕಶಃ ॥ ೧೦ ॥
ನ ಭವಂತಿ ಪುಮಾಂಸಸ್ತೇ ಸ್ತ್ರಿಯಸ್ತಾಶ್ಚೈವ ಕೇಶವ ।
ಪರಂ ನ ಶಸ್ತ್ರಸಂಗ್ರಾಮಂ ಕರಿಷ್ಯಾಮಿ ತ್ವಯಾ ಸಹ ॥ ೧೧ ॥
ವದತೋ ದಾನವೇಂದ್ರಸ್ಯ ನ ಚುಕೋಪ ನ ಕೇಶವಃ ।
ಅಯುಧ್ಯಮಾನಂ ತಂ ದೃಷ್ಟ್ವಾ ಚಿಂತಯಾಮಾಸ ದಾನವಃ ॥ ೧೨ ॥

---

೬. ಅಂಧಕನು ಯುದ್ಧದಲ್ಲಿ ಕ್ರುದ್ಧನಾಗಿ ಬಾಣಮಾರ್ಗದಿಂದ ಹೊರಟು ಧನುರ್ಧಾರಿಯಾದ ವಿಷ್ಣುವನ್ನು ನೋಡಿ ಹೀಗೆಂದನು.

೭. ಅಂಧಕನು ಹೇಳುತ್ತಾನೆ:—"ಕೇಶವ! ನನ್ನ ದೃಷ್ಟಿಗೆ ಗೋಚರನಾದ ನೀನು ಸುಖವನ್ನು ಹೊಂದುವುದಿಲ್ಲ. ಆನೆಯು ಶಾರ್ದೂಲದ ದರ್ಶನದಿಂದ ಮುಂದೆ ಹೋಗದಂತೆ ನೀನು ಹೋಗಲು ಶಕ್ತನಾಗುವುದಿಲ್ಲ.

೮. ಬೆಕ್ಕಿಗೆ ಭಕ್ಷ್ಯವಾದ ಇಲಿಯು ಮುಂದೆ ಬರುವಂತೆ ನನ್ನ ಮುಂದೆ ಬಂದಿರುವ ನೀನು ಹೋಗಲು ಸಮರ್ಥನಾಗುವುದಿಲ್ಲ.

೯. ನಾನು ನಿನ್ನನ್ನು ಭಯಂಕರವಾದ ಯಮಮಾರ್ಗದಲ್ಲಿ ಕಳುಹಿಸುವೆನು. ನಾನು ಹುಡುಕುವೆನು. ನಿನ್ನ ಮನೆಗೆ ಹೋಗುವೆನು.

೧೦. ಕೇಶವ! ಹಿಂದೆ ಅನೇಕ ದಾನವರನ್ನು ಸೋಲಿಸಿದ ನಿನ್ನನ್ನು ಯಮನು ಯುದ್ಧಕ್ಕೆ ಕರೆದುಕೊಂಡು ಬಂದಿರುವನು.

೧೧. ನಿನ್ನೊಡನೆ ಕಾಳಗವಾಡುವವರು ಪುರುಷರಲ್ಲ; ಸ್ತ್ರೀಯರೇ. ಆದ್ದರಿಂದ ನಾನು ನಿನ್ನೊಡನೆ ಶಸ್ತ್ರಯುದ್ಧವನ್ನು ಮಾಡುವುದಿಲ್ಲ."

೧೨. ಆ ಅಂಧಕನು ಹೀಗೆ ಹೇಳುತ್ತಿದ್ದರೂ ವಿಷ್ಣುವು ಕುಪಿತನಾಗಲಿಲ್ಲ. ದಾನವನು ವಿಷ್ಣುವು ಯುದ್ಧಮಾಡದಿರುವನ್ನು ನೋಡಿ ಆಲೋಚಿಸಿದನು.

**ದ್ವಂದ್ವಯುದ್ಧಂ ಕರಿಷ್ಯಾಮಿ ನಿಶ್ಚಿತ್ಯ ಯುಯುಧೇ ನೃಪ ।**
**ಸ ಕೃಷ್ಣೇನ ಪದಾಕ್ಷಿಪ್ತಃ ಪತಿತಃ ಪೃಥಿವೀ ತಲೇ ॥ ೧೩ ॥**
**ಮುಹೂರ್ತಾತ್ಸ ಸಮಾಶ್ವಸ್ಯ ಉತ್ಥಾಯೇದಂ ವ್ಯಚಿಂತಯನ್ ।**
**ಅಶಕ್ತೋ ದ್ವಂದ್ವಯುದ್ಧಾಯ ತತಃ ಸಾಮಪ್ರಯುಕ್ತವಾನ್ ।**
**ಪಾಣಿಭ್ಯಾಂ ಸಂಪುಟಂ ಕೃತ್ವಾ ಸಾಷ್ಟಾಂಗಂ ಪ್ರಣತಃ ಶುಚಿಃ ॥ ೧೪ ॥**

**ಅಂಧಕ ಉವಾಚ :—**

**ಜಯ ಕೃಷ್ಣಾಯ ಹರಯೇ ವಿಷ್ಣವೇ ಜಿಷ್ಣವೇ ನಮಃ ।**
**ಹೃಷೀಕೇಶ ಜಗದ್ಧಾತ್ರೇ ಅಚ್ಯುತಾಯ ಮಹಾತ್ಮನೇ ॥ ೧೫ ॥**
**ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।**
**ಜನಾರ್ದನಾಯ ಶ್ರೀಶಾಯ ಶ್ರೀಪತೇ ಪೀತವಾಸಸೇ ॥ ೧೬ ॥**
**ಗೋವಿಂದಾಯ ನಮೋ ನಿತ್ಯಂ ನಮೋ ಜಲಧಿಶಾಯಿನೇ ।**
**ನಮಃ ಕರಾಲವಕ್ತ್ರಾಯ ನರಸಿಂಹಾಯ ನಾದಿನೇ ॥ ೧೭ ॥**
**ಶಾರ್ಙ್ಗಿಣೇಽಸಿತವರ್ಣಾಯ ಶಂಖಚಕ್ರಗದಾಭೃತೇ ।**
**ನಮೋ ವಾಮನರೂಪಾಯ ಯಜ್ಞರೂಪಾಯ ತೇ ನಮಃ ॥ ೧೮ ॥**

---

೧೩. ಅವನು ದ್ವಂದ್ವಯುದ್ಧವನ್ನು ಮಾಡುವೆನೆಂದು ನಿರ್ಣಯಿಸಿ ಹಾಗೆ ಯುದ್ಧಮಾಡಿ ವಿಷ್ಣುವಿನ ಪದಾಘಾತದಿಂದ ನೆಲದಲ್ಲಿ ಬಿದ್ದನು.

೧೪. ಸ್ವಲ್ಪ ಹೊತ್ತಿನಲ್ಲಿಯೇ ಚೇತರಿಸಿಕೊಂಡು ಮೇಲಕ್ಕೆದ್ದು ತಾನು ದ್ವಂದ್ವಯುದ್ಧದಲ್ಲಿ ಅಸಮರ್ಥನೆಂದು ಚಿಂತಿಸಿ ಸಾಮೋಪಾಯವನ್ನವಲಂಬಿಸಿದನು. ಕೈಜೋಡಿಸಿಕೊಂಡು ಸಾಷ್ಟಾಂಗನಮಸ್ಕಾರವಮಾಡಿದನು.

೧೫. ಅಂಧಕನು ಹೇಳುತ್ತಾನೆ:—ಪಾಪಪರಿಹಾರಕನೂ, ಇಂದ್ರಿಯಗಳಿಗೆ ಒಡೆಯನೂ, ಜಗದ್ಧಾರಕನೂ, ನಾಶರಹಿತನೂ, ಮಹಾತ್ಮನೂ ಆದ ವಿಷ್ಣುವೆ! ನಿನಗೆ ನಮಸ್ಕಾರವು.

೧೬. ಪದ್ಮನಾಭನೂ, ಪದ್ಮಮಾಲೆಯನ್ನು ಧರಿಸಿದವನೂ, ಜನನಾಶಕನೂ, ಲಕ್ಷ್ಮೀಪತಿಯೂ, ಪಿತಾಂಬರಧಾರಿಯೂ ಆದ ವಿಷ್ಣುವಿಗೆ ನಮಸ್ಕಾರವು.

೧೭. ವೇದ ಪ್ರತಿಪಾದ್ಯನೂ, ಕ್ಷೀರಸಾಗರಶಾಯಿಯೂ, ಭಯಂಕರ ಮುಖವುಳ್ಳವನೂ, ನರಸಿಂಹರೂಪಿಯೂ, ಗರ್ಜಿಸುವವನೂ ಆದ ವಿಷ್ಣುವಿಗೆ ನಮಸ್ಕಾರವು.

೧೮. ಶಾರ್ಙ್ಗಧಾರಿಯೂ, ಕೃಷ್ಣವರ್ಣನೂ, ಶಂಖ, ಚಕ್ರ, ಗದೆಗಳನ್ನು ಧರಿಸಿದವನೂ, ವಾಮನರೂಪಿಯೂ, ಯಜ್ಞರೂಪನೂ ಆದ ನಿನಗೆ ನಮಸ್ಕಾರವು.

ನಮೋ ವರಾಹರೂಪಾಯ ಕ್ರಾಂತಲೋಕತ್ರಯಾಯ ಚ ।
ವ್ಯಾಪ್ತಾಶೇಷದಿಗಂತಾಯ ಕೇಶವಾಯ ನಮೋನಮಃ ॥ ೧೯ ॥
ವಾಸುದೇವ ನಮಸ್ತುಭ್ಯಂ ನಮಃ ಕೈಟಭನಾಶಿನೇ ।
ಲಕ್ಷ್ಮ್ಯಾಲಯ ಸುರಶ್ರೇಷ್ಠ ನಮಸ್ತೇ ಸುರನಾಯಕ ॥ ೨೦ ॥
ವಿಷ್ಣೋರ್ದೇವಾಧಿದೇವಸ್ಯ ಪ್ರಣಾಮಂ ಯೇಽಪಿ ಕುರ್ವತೇ ।
ಪ್ರಜಾಪತೇರ್ಜಗದ್ಧಾತುಸ್ತೇಷಾಮಪಿ ನಮಾಮ್ಯಹಂ ॥ ೨೧ ॥
ಸಮಸ್ತಭೂತ ದೇವಸ್ಯ ವಾಸುದೇವಸ್ಯ ಧೀಮತಃ ।
ಪ್ರಣಾಮಂ ಯೇ ಪ್ರಕುರ್ವಂತಿ ತೇಷಾಮಪಿ ನಮಾಮ್ಯಹಂ ॥ ೨೨ ॥
ತಸ್ಯ ಯಜ್ಞವರಾಹಸ್ಯ ವಿಷ್ಣೋರಮಿತತೇಜಸಃ ।
ಪ್ರಣಾಮಂ ಯೇ ಪ್ರಕುರ್ವಂತಿ ತೇಷಾಮಪಿ ನಮಾಮ್ಯಹಂ ॥ ೨೩ ॥
ಗುಣಾನಾಂ ಹಿ ನಿಧಾನಾಯ ನಮಸ್ತೇಽಸ್ತು ಪುನಃ ಪುನಃ ।
ಕಾರುಣ್ಯಾಂಬುನಿಧೇ ದೇವ ಸರ್ವಭಕ್ತಪ್ರಿಯಾಯ ಚ ॥ ೨೪ ॥

ಶ್ರೀ ಭಗವಾನುವಾಚ :—

ತುಷ್ಟಸ್ತೇ ದಾನವೇಂದ್ರಾಹಂ ವರಂ ವೃಣು ಯಥೇಪ್ಸಿತಂ ।
ದದಾಮಿ ತೇ ವರಂ ನೂನಮಪಿ ತ್ರೈಲೋಕ್ಯದುರ್ಲಭಂ ॥ ೨೫ ॥

---

೧೯. ವರಾಹರೂಪನೂ, ಮೂರುಲೋಕಗಳನ್ನು ಆಕ್ರಮಿಸಿದವನೂ, ಸಮಸ್ತದಿಗಂತಗಳನ್ನು ವ್ಯಾಪಿಸಿದವನೂ ಆದ ಕೇಶವ! ನಿನಗೆ ನಮಸ್ಕಾರವು.

೨೦. ಕೈಟಭನಾಶಕನೂ, ಲಕ್ಷ್ಮೀನಿಲಯನೂ, ಸುರೋತ್ತಮನೂ, ಸುರನಾಯಕನೂ ಆದ ವಿಷ್ಣುವೆ! ನಿನಗೆ ನಮಸ್ಕಾರವು.

೨೧. ದೇವಾಧಿದೇವನೂ, ಪ್ರಜೆಗಳಿಗಧಿಪತಿಯೂ, ಜಗದ್ಧಾರಕನೂ ಆದ ನಿನ್ನನ್ನು ನಂಬುವವರಿಗೂ ನಮಸ್ಕಾರವು.

೨೨. ಸಕಲಪ್ರಾಣಿಗಳಿಗೆ ದೇವನಾದ ವಾಸುದೇವನನ್ನು ನಮಸ್ಕರಿಸುವವರನ್ನೂ ವಂದಿಸುವೆನು.

೨೩. ಯಜ್ಞವರಾಹನೂ, ಅಪರಿಮಿತತೇಜಸ್ಸುಳ್ಳವನೂ ಆದ ವಿಷ್ಣುವನ್ನು ವಂದಿಸುವವರಿಗೆ ನಮಸ್ಕಾರಮಾಡುವೆನು.

೨೪. ಗುಣನಿಧಿಯೂ, ದಯಾನಿಧಿಯೂ, ಸಮಸ್ತಭಕ್ತಪ್ರಿಯನೂ ಆದ ವಿಷ್ಣುವಿಗೆ ನಮಸ್ಕಾರವು.

೨೫. ಶ್ರೀ ಭಗವಂತನು ಹೇಳುತ್ತಾನೆ:—ದಾನವೇಂದ್ರ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ಇಷ್ಟವಾದ ವರವನ್ನು ಕೇಳಿಕೊ. ತ್ರೈಲೋಕ್ಯ ದುರ್ಲಭವಾಗಿದ್ದರೂ ಅದನ್ನು ಕೊಡುವೆನು.

ಅಂಧಕ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ವರಂ ದಾಸ್ಯಸಿ ಚೇಪ್ಸಿತಂ ।
ತದಾ ದದಸ್ವ ಮೇ ದೇವ ಯುದ್ಧಂ ಪರಮಶೋಭನಂ ।
ತ್ವದ್ಧಸ್ತಪೂತೋ ಯೇನಾಽಹಂ ಲೋಕಾನ್ಗಂತಾಽಸ್ಮಿ ಶೋಭನಾನ್ ॥೨೬॥

ಶ್ರೀ ಭಗವಾನುವಾಚ :—

ಕಥಂ ದದಾಮಿ ತೇ ಯುದ್ಧಂ ತೋಷಿತೋಽಹಂ ತ್ವಯಾ ಪುನಃ ।
ನ ತ್ವಾಂ ತು ಪ್ರಭವೇತ್ಕೋಪಃ ಕಥಂ ಯುಧ್ಯಾಮಿ ತೇಽಂಧಕ ॥ ೨೭ ॥
ಯದಿ ತೇ ವರ್ತತೇ ಬುದ್ಧಿರ್ಯುದ್ಧಂ ಪ್ರತಿ ನ ಸಂಶಯಃ ।
ತತೋ ಗಚ್ಛಸ್ವ ಯುದ್ಧಾಯ ದೇವಂ ಪ್ರತಿ ಮಹೇಶ್ವರಂ ॥ ೨೮ ॥

ಅಂಧಕ ಉವಾಚ :—

ನ ತತ್ರ ಸಿದ್ಧ್ಯತೇ ಕಾರ್ಯಂ ದೇವಂ ಪ್ರತಿ ಮಹೇಶ್ವರಂ ॥ ೨೯ ॥

ಶ್ರೀ ಭಗವಾನುವಾಚ :—

ಪುತ್ರ ತ್ವಂ ಶಿಖರಂ ಗತ್ವಾ ಧೂನಯಸ್ವ ಬಲೇನ ಚ ॥ ೩೦ ॥
ವಿಧೂತೇ ತತ್ರ ದೇವೇಶಃ ಕೋಪಂ ಕರ್ತಾ ಸುದಾರುಣಂ ।
ಕೋಪಿತಃ ಶಂಕರೋ ರೌದ್ರಂ ಯುದ್ಧಂ ದಾಸ್ಯತಿ ದಾನವ ॥ ೩೧ ॥

---

೨೬. ಸ್ವಾಮಿ ! ನೀನು ಸಂತುಷ್ಟನಾಗಿ ಇಷ್ಟವಾದ ವರವನ್ನು ಕೊಡುವುದಾದರೆ ನನ್ನೊಡನೆ ಶುಭವಾದ ಯುದ್ಧವನ್ನು ಮಾಡು. ನಿನ್ನ ಹಸ್ತದಿಂದ ಪೂತನಾದ ನಾನು ಮಂಗಳಕರವಾದ ಲೋಕಗಳಿಗೆ ಹೋಗುವೆನು.

೨೭. ಶ್ರೀ ಭಗವಂತನು ಹೇಳುತ್ತಾನೆ :—ನಿನ್ನಲ್ಲಿ ಸಂತುಷ್ಟನಾದ ನಾನು ಹೇಗೆ ಯುದ್ಧವನ್ನುಕೊಡಲಿ. ನಿನ್ನಲ್ಲಿ ನನಗೆ ಕೋಪವುಂಟಾಗುವುದಿಲ್ಲ. ನಿನ್ನೊಡನೆ ಹೇಗೆ ಯುದ್ಧಮಾಡಲಿ ?

೨೮. ನಿನಗೆ ಯುದ್ಧಮಾಡಬೇಕೆಂದು ಆಶೆಯಿದ್ದರೆ ಮಹೇಶ್ವರನೊಡನೆ ಯುದ್ಧಕ್ಕೆ ಹೋಗು.

೨೯. ಅಂಧಕನು ಹೇಳುತ್ತಾನೆ:—ಮಹೇಶ್ವರನಲ್ಲಿ ನನ್ನ ಕಾರ್ಯವು ಸಿದ್ಧಿಸುವುದಿಲ್ಲ.

೩೦. ಶ್ರೀ ಭಗವಂತನು ಹೇಳುತ್ತಾನೆ :—ಮಗು ! ನೀನು ಕೈಲಾಸ ಶಿಖರಕ್ಕೆ ಹೋಗಿ ಅದನ್ನು ಬಲವಾಗಿ ಅಲ್ಲಾಡಿಸು.

೩೧. ಶಿಖರವು ಅಲ್ಲಾಡಲು ಶಂಕರನು ಅತಿಯಾಗಿ ಕೋಪಿಸಿಕೊಂಡು ನಿನ್ನೊಡನೆ ಯುದ್ಧಮಾಡುವನು.

ವಿಷ್ಣುವಾಕ್ಯಾದಸೌ ಪಾಪೋ ಗತೋ ಯತ್ರ ಮಹೇಶ್ವರಃ ।
ಕೈಲಾಸಶಿಖರಂ ಪ್ರಾಪ್ಯ ಧುನೋತಿಸ್ಮ ಮುಹುರ್ಮುಹುಃ ॥ ೩೨ ॥
ಧೂನಿತೇ ತತ್ರ ಶಿಖರೇ ಕಂಪಿತಂ ಭುವನತ್ರಯಂ ।
ನಿಪೇತುಃ ಶಿಖರಾಗ್ರಾಣಿ ಕಂಪಮಾನಾನ್ಯನೇಕಶಃ ॥ ೩೩ ॥
ಚತ್ವಾರಃ ಸಾಗರಾಃ ಕ್ಷಿಪ್ರಮೇಕೀಭೂತಾ ಮಹೀಪತೇ ।
ನಿಪೇತುರುಲ್ಕಾಪಾತಾಶ್ಚ ಪಾದಪಾ ಅಪ್ಯನೇಕಶಃ ॥ ೩೪ ॥
ಉಮಯಾ ಸಹಿತೋ ದೇವೋ ವಿಸ್ಮಯಂ ಪರಮಂಗತಃ ।
ಗಾಢಮಾಲಿಂಗ್ಯ ಗಿರಿಜಾ ದೇವಂ ವಚನಮಬ್ರವೀತ್ ॥ ೩೫ ॥
ಕಿಮರ್ಥಂ ಕಂಪತೇ ಶೈಲಃ ಕಿಮರ್ಥಂ ಕಂಪತೇ ಧರಾ ।
ಕಿಮರ್ಥಂ ಕಂಪತೇ ನಾಗೋ ಮರ್ತ್ಯಃ ಪಾತಾಲಮೇವ ಚ ।
ಕಿಂ ವಾ ಯುಗಕ್ಷಯೋ ದೇವ ತನ್ಮಮಾಖ್ಯಾತುಮರ್ಹಸಿ ॥ ೩೬ ॥

ಈಶ್ವರ ಉವಾಚ :—

ಕಸ್ಯೈಷಾ ದುರ್ಮತಿರ್ಜಾತಾ ಕ್ಷಿಪ್ತಃ ಸರ್ಪಮುಖೇ ಕರಃ ।
ಲಲಾಟೇ ಚ ಕೃತಂ ವರ್ಮ ಸ ಯಾಸ್ಯತಿ ಯಮಾಲಯಂ ॥ ೩೭ ॥

---

೩೨. ವಿಷ್ಣುವಿನ ಮಾತಿನಿಂದ ಪಾಪಿಷ್ಠನಾದ ಅಂಧಕನು ಮಹೇಶ್ವರನಿರುವ ಕೈಲಾಸಶಿಖರವನ್ನು ಸೇರಿ ಅದನ್ನು ಅಲ್ಲಾಡಿಸಿದನು.

೩೩. ಆ ಶಿಖರವನ್ನು ಅಲ್ಲಾಡಿಸಲು ಮೂರುಲೋಕಗಳೂ ನಡುಗಿದುವು. ಶಿಖರಗಳ ಅಗ್ರಗಳು ನಡುಗುತ್ತ ನೆಲಕ್ಕೆ ಬಿದ್ದುವು.

೩೪. ದೊರೆಯೆ! ನಾಲ್ಕು ಸಮುದ್ರಗಳು ಕೂಡಲೆ ಒಟ್ಟುಗೂಡಿದುವು. ಉಲ್ಕಾಪಾತಗಳಾದುವು. ಮರಗಳೂ ಬಹಳವಾಗಿ ಬಿದ್ದುವು.

೩೫. ಶಂಕರನು ಉಮೆಯೊಡನೆ ಅತ್ಯಾಶ್ಚರ್ಯಗೊಂಡನು. ಗಿರಿಜೆಯು ಶಂಕರನನ್ನು ಗಾಢವಾಗಿ ತಬ್ಬಿಕೊಂಡು ಇಂತೆಂದಳು.

೩೬. "ನಾಥ! ಪರ್ವತವೂ, ಭೂಮಿಯೂ, ನಾಗನೂ, ಪಾತಾಳವೂ ಏಕೆ ನಡುಗುತ್ತಿವೆ? ಪ್ರಳಯವಾಗುವುದೊ? ಅದನ್ನು ನನಗೆ ಹೇಳಲರ್ಹನಾಗಿರುವೆ."

೩೭. ಈಶ್ವರನು ಹೇಳುತ್ತಾನೆ:—ಯಾವನಿಗೆ ಇಂತಹ ದುರ್ಬುದ್ಧಿಯುಂಟಾಯಿತು? ಯಾವನು ಸರ್ಪದ ಬಾಯಿಯಲ್ಲಿ ಕೈಯನ್ನಿಟ್ಟನು? ಹಣೆಯಲ್ಲಿ ಯಾವನು ಕವಚವನ್ನು ಧರಿಸಿದನು? ಅವನು ಯಮಾಲಯಕ್ಕೆ ತೆರಳುವನು.

ಕೈಲಾಸಮಾಶ್ರಿತೋ ಯೇನ ಸುಪ್ತೋಽಹಂ ಯೇನ ಬೋಧಿತಃ ।
ತಂ ವಧಿಷ್ಯೇ ನ ಸಂದೇಹಃ ಸಂಮುಖೋ ವಾ ಭವೇದ್ಯದಿ ॥ ೩೮ ॥
ಚಿಂತಯಾಮಾಸ ದೇವೇಶೋ ಹ್ಯಂಧಕೋಽಯಂ ನ ಸಂಶಯಃ ।
ಉಪಾಯಂ ಚಿಂತಯಾಮಾಸ ಯೇನಾಽಸೌ ಬಧ್ಯತೇ ಕ್ಷಣಾತ್ ॥ ೩೯ ॥
ಆಗತಾಶ್ಚ ಸುರಾಃ ಸರ್ವೇ ಬ್ರಹ್ಮಾದ್ಯಾ ವಸುಭಿಃ ಸಹ ।
ರಥಂ ದೇವಮಯಂ ಕೃತ್ವಾ ಸರ್ವಲಕ್ಷಣಸಂಯುತಂ ॥ ೪೦ ॥
ಕೇಚಿದ್ದೇವಾಃ ಸ್ಥಿತಾಶ್ಚಕ್ರೇ ಕೇಚಿತ್ತುಂಡಾಗ್ರಪಾರ್ಶ್ವಯೋಃ ।
ಕೇಚಿನ್ನಾಭ್ಯಾಂ ಸ್ಥಿತಾ ದೇವಾಃ ಕೇಚಿದ್ಧುರ್ಯೇಷು ಸಂಸ್ಥಿತಾಃ ॥ ೪೧ ॥
ಧುರೀಷು ನಿಶ್ಚಲಾಃ ಕೇಚಿತ್ಕೇಚಿದ್ಯೂಪೇಷು ಸಂಸ್ಥಿತಾಃ ।
ಕೇಚಿತ್ ಸ್ಯಂದನಸಂಸ್ತಂಭಾಃ ಕೇಚಿತ್ ಸ್ಯಂದನವೇಷ್ಟಕಾಃ ॥ ೪೨ ॥
ಆಮಲಸಾರಕೇಽನ್ಯೇಽಪಿ ಅನ್ಯೇಽಪಿ ಕಲಶೇ ಸ್ಥಿತಾಃ ।
ರಿಪೋರ್ಭಯಂಕರಂ ದಿವ್ಯಂ ಧ್ವಜಮಾಲಾದಿಶೋಭಿತಂ ॥ ೪೩ ॥
ರಥಂ ದೇವಮಯಂ ಕೃತ್ವಾ ತಮಾರೂಢೋ ಜಗದ್ಗುರುಃ ।
ನಿರ್ಯಯೌ ದಾನವೋ ಯತ್ರ ಕೋಪಾವಿಷ್ಟೋ ಮಹೇಶ್ವರಃ ॥ ೪೪ ॥
ತಿಷ್ಠ ತಿಷ್ಠೇತ್ಯುವಾಚಾಽಥ ಕ್ವ ಪ್ರಯಾಸ್ಯಸಿ ದುರ್ಮತೇ ।
ಶರಾಸನಂ ಕರೇ ಗೃಹ್ಯ ಶರಾಂಶ್ಚಿಕ್ಷೇಪ ದಾನವೇ ॥ ೪೫ ॥

---

೩೮. ಯಾವನು ಕೈಲಾಸವನ್ನು ಆಶ್ರಯಿಸಿ ಮಲಗಿದ್ದ ನನ್ನನ್ನು ಎಚ್ಚರಗೊಳಿಸಿದನು? ಅವನು ಅಭಿಮುಖನಾದರೆ ನಿಶ್ಚಯವಾಗಿಯೂ ಅವನನ್ನು ವಧಿಸುವೆನು.

೩೯. ಶಂಕರನು ಅವನು ಅಂಧಕನೆಂದು ನಿಶ್ಚಯಿಸಿ ಅವನನ್ನು ಕೂಡಲೆ ಕೊಲ್ಲಲು ಉಪಾಯವನ್ನು ಆಲೋಚಿಸಿದನು.

೪೦. ಬ್ರಹ್ಮಾದಿ ಸಮಸ್ತದೇವತೆಗಳು ವಸುಗಳೊಡನೆ ಬಂದರು. ಶಂಕರನು ದೇವಮಯವಾದ ರಥವನ್ನು ನಿರ್ಮಿಸಿದನು.

೪೧–೪೪. ಕೆಲವರು ದೇವತೆಗಳು ಆ ರಥದ ಚಕ್ರದಲ್ಲಿಯೂ, ಕೆಲವರು ಮುಂಭಾಗ ಮತ್ತು ಪಾರ್ಶ್ವಗಳಲ್ಲಿಯೂ, ಕೆಲವರು ನಾಭಿಯಲ್ಲಿಯೂ, ಕೆಲವರು ನೊಗಗಳಲ್ಲಿಯೂ, ಕೆಲವರು ಕಂಬಗಳಲ್ಲಿಯೂ, ಕೆಲವರು ರಥದ ಸುತ್ತಿನಲ್ಲಿಯೂ, ಕೆಲವರು ಮೂಲೆಗಳಲ್ಲಿಯೂ, ಇನ್ನೂ ಕೆಲವರು ಕಲಶದಲ್ಲಿಯೂ ನೆಲೆಸಿದರು. ಮಹೇಶ್ವರನು ಹೀಗೆ ಶತ್ರುಗಳಿಗೆ ಭಯಂಕರವೂ, ಧ್ವಜಮಾಲೆಗಳಿಂದ ವಿರಾಜಿಸುವುದೂ ಆದ ದೇವಮಯವಾದ ರಥವನ್ನು ನಿರ್ಮಿಸಿ ಅದನ್ನೇರಿ ಕೋಪದಿಂದ ಅಂಧಕನಿರುವ ಸ್ಥಳಕ್ಕೆ ಹೊರಟನು.

೪೫. "ದುರ್ಬುದ್ಧಿಯೆ! ಎಲ್ಲಿಗೆ ಹೋಗುವೆ? ನಿಲ್ಲು ನಿಲ್ಲು" ಎಂದು ಬಿಲ್ಲನ್ನು ಕೈಯಲ್ಲಿ ಹಿಡಿದು ಆ ಬಾಣಗಳನ್ನು ಅಂಧಕನ ಮೇಲೆ ಎಸೆದನು.

ದಾನವೇಽಧಿಷ್ಠಿತೇ ಯುದ್ಧೇ ಶರೈಶ್ಚಿಚ್ಛೇದ ಸಾಯಕಾನ್ ।
ಶರಾಸಾರೇಣ ತತ್ರೈವ ಅಂಧಕಶ್ಛಾದಿತಸ್ತದಾ ॥ ೪೬ ॥
ನ ತತ್ರ ದೃಶ್ಯತೇ ಸೂರ್ಯೋ ನಾಕಾಶಂ ನ ಚ ಚಂದ್ರಮಾಃ ।
ಆಗ್ನೇಯಮಸ್ತ್ರಂ ವ್ಯಸೃಜದ್ದಾನವೋಽಪಿ ಶಿವಂ ಪ್ರತಿ ॥ ೪೭ ॥
ದಹ್ಯಮಾನಾಃ ಶರಾಂಗಾರೈಸ್ತತ್ರಸುಃ ಸರ್ವದೇವತಾಃ ।
ರಕ್ಷ ರಕ್ಷ ಮಹಾದೇವ ದಹ್ಯಮಾನಾಂಸ್ತು ದಾನವಾತ್ ॥ ೪೮ ॥
ತತೋ ದೇವಾಧಿದೇವೋಽಸೌ ವಾರುಣಾಽಸ್ತ್ರಮಯೋಜಯತ್ ।
ವಾರುಣಾಽಸ್ತ್ರೇಣ ನಿಮಿಷಾದಾಗ್ನೇಯಂ ನಾಶಿತಂ ತದಾ ॥ ೪೯ ॥
ದಾನವೇನ ತದಾ ಮುಕ್ತಂ ವಾಯವ್ಯಾಸ್ತ್ರಂ ರಣಾಜಿರೇ ।
ವಾರುಣಂ ಚ ಗತಂ ತಾತ ವಾಯವ್ಯಾಽಸ್ತ್ರವಿನಾಶಿತಂ ॥ ೫೦ ॥
ದೇವೋ ವ್ಯಸರ್ಜಯತ್ಸಾರ್ಪಂ ಕ್ರೋಧಾವಿಷ್ಟೇನ ಚೇತಸಾ ।
ಮಾರುತಂ ನಾಶಿತಂ ಬಾಣೈಃ ಸರ್ಪೈಸ್ತತ್ರ ನ ಸಂಶಯಃ ॥ ೫೧ ॥
ದಾನವೇನ ತತೋ ಮುಕ್ತಂ ಗರುಡಾಸ್ತ್ರಂ ಚ ಲೀಲಯಾ ।
ಗಾರುಡಾಸ್ತ್ರಂ ಚ ತದ್ದೃಷ್ಟ್ವಾ ಸಾರ್ಪಂ ನೈವ ವ್ಯದೃಶ್ಯತ ॥ ೫೨ ॥

---

೪೬. ಆ ದಾನವನು ಯುದ್ಧಕ್ಕೆ ನಿಲ್ಲಲು ಬಾಣಗಳಿಂದ ಅವನ ಬಾಣಗಳನ್ನು ಕತ್ತರಿಸಿದನು. ಬಾಣದ ಮಳೆಯಿಂದ ಅವನನ್ನು ಅಲ್ಲಿಯೇ ಮುಚ್ಚಿದನು.

೪೭. ಅಲ್ಲಿ, ಸೂರ್ಯನೂ, ಆಕಾಶವೂ, ಚಂದ್ರನೂ ಕಾಣಿಸಲಿಲ್ಲ. ದಾನವನೂ ಆಗ್ನೇಯಾಸ್ತ್ರವನ್ನು ಶಿವನಮೇಲೆ ಪ್ರಯೋಗಿಸಿದನು.

೪೮. ಅವನ ಆಗ್ನೇಯಾಸ್ತ್ರದ ಕೆಂಡಗಳಿಂದ ಸುಡಲ್ಪಡುತ್ತಿರುವ ಸಮಸ್ತ ದೇವತೆಗಳೂ ಭಯಗೊಂಡು "ಮಹಾದೇವ! ಸುಟ್ಟುಹೋಗುತ್ತಿರುವ ನಮ್ಮನ್ನು ಈ ದಾನವನಿಂದ ರಕ್ಷಿಸು" ಎಂದು ಬೇಡಿಕೊಂಡರು.

೪೯. ಬಳಿಕ ದೇವಾಧಿದೇವನಾದ ಮಹೇಶ್ವರನು ವಾರುಣಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದಿಂದ ಒಂದು ನಿಮಿಷದಲ್ಲಿಯೆ ಆಗ್ನೇಯಾಸ್ತ್ರವು ಅಡಗಿಹೋಯಿತು.

೫೦. ದಾನವನು ಯುದ್ಧದಲ್ಲಿ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ವಾರುಣಾಸ್ತ್ರವು ನಾಶವಾಯಿತು.

೫೧. ಶಂಕರನು ಕ್ರುದ್ಧನಾಗಿ ಸರ್ಪಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ವಾಯವ್ಯಾಸ್ತ್ರವು ನಾಶವಾಯಿತು.

೫೨. ಅಂಧಕನು ಅನಾಯಾಸವಾಗಿ ಗರುಡಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಸರ್ಪಾಸ್ತ್ರವು ಅದೃಶ್ಯವಾಯಿತು.

ತತೋ ದೇವಾಧಿದೇವೇನ ನಾರಸಿಂಹಂ ವಿಸರ್ಜಿತಂ ।
ನಾರಸಿಂಹಾಽಸ್ತ್ರಬಾಣೇನ ಗಾರುಡಾಸ್ತ್ರಂ ಪ್ರಶಾಮಿತಂ ॥ ೫೩ ॥
ಅಸ್ತ್ರಮಸ್ತ್ರೇಣ ಶಾಮ್ಯೇತ ನ ಬಾಧ್ಯೇತ ಪರಸ್ಪರಂ ।
ಮಹದ್ಯುದ್ಧಮಭೂತ್ತಾತ ಸುರಾಸುರಭಯಂಕರಂ ॥ ೫೪ ॥
ಚಕ್ರನಾಲೀಕನಾರಾಚೈಸ್ತೋಮರೈಃ ಖಡ್ಗಮುದ್ಗರೈಃ ।
ವತ್ಸದಂತೈಸ್ತಥಾ ಭಲ್ಲೈಃ ಕರ್ಣಿಕಾರೈಶ್ಚ ಶೋಭನೈಃ ॥ ೫೫ ॥
ಏವಂ ನ ಶಕ್ಯತೇ ಹಂತುಂ ದಾನವೋ ವಿವಿಧಾಯುಧೈಃ ।
ತದಾ ಜ್ವಾಲಾಕರಾಲಾಶ್ಚ ಖಡ್ಗನಾರಾಚ ತೋಮರಾಃ ॥ ೫೬ ॥
ವೃಷಾಂಕೇನ ವಿಮುಕ್ತಾಸ್ತು ಸಮರೇ ದಾನವಂ ಪ್ರತಿ ।
ನ ಸಂಸ್ಪೃಶಂತಿ ಶಸ್ತ್ರಾಣಿ ಗಾತ್ರಂ ಗೌಡವಧೂರಿವ ॥ ೫೭ ॥
ಆಯುಧಾನಿ ತತಸ್ತ್ಯಕ್ತ್ವಾ ಬಾಹುಯುದ್ಧಮುಪಸ್ಥಿತೌ ।
ಕರಂ ಕರೇಣ ಸಂಗೃಹ್ಯ ಪ್ರಹರಂತೌ ಸ್ವಮುಷ್ಟಿಭಿಃ ।
ರಣಪ್ರಯೋಗೈರ್ಯುಧ್ಯಂತೌ ಯುಯುಧಾತೇ ಶಿವಾಂಧಕೌ ॥ ೫೮ ॥

ಶ್ರೀ ಮಾರ್ಕಂಡೇಯ ಉವಾಚ :—

ಅಂಧಕಂ ಪ್ರತಿ ದೇವೇಶಶ್ಚಿಂತಯಾಮಾಸ ನಿಗ್ರಹಂ ।
ಹನಿಷ್ಯಾಮಿ ನ ಸಂದೇಹೋ ದುಷ್ಟಾತ್ಮಾನಂ ನ ಸಂಶಯಃ ॥ ೫೯ ॥

---

೫೩. ಬಳಿಕ ಶಂಕರನು ನಾರಸಿಂಹಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಗರುಡಾಸ್ತ್ರವು ಶಾಂತವಾಯಿತು.

೫೪–೫೫. ಒಂದು ಅಸ್ತ್ರದಿಂದ ಮತ್ತೊಂದು ಅಸ್ತ್ರವು ಶಾಂತವಾಗುತ್ತಿದ್ದಿತು. ಅವರು ಯಾರೂ ಪರಸ್ಪರವಾಗಿ ಪೀಡೆಯನ್ನು ಹೊಂದುತ್ತಿರಲಿಲ್ಲ. ಹೀಗೆ ಅವರಿಗೆ ಚಕ್ರ, ನಾಲೀಕ, ನಾರಾಚ, ತೋಮರ, ಖಡ್ಗ, ಮುದ್ಗರ, ವತ್ಸದನ್ತ, ಭಲ್ಲ, ಕರ್ಣಿಕಾರ ಮೊದಲಾದ ಆಯುಧಗಳಿಂದ ಸುರಾಸುರ ಭಯಂಕರವಾದ ಮಹಾ ಯುದ್ಧವು ನಡೆಯಿತು.

೫೬–೫೭. ಹೀಗೆ ಶಂಕರನಿಗೆ ಸಮರದಲ್ಲಿ ವಿವಿಧಾಯುಧಗಳಿಂದ ಅಂಧಕನನ್ನು ಕೊಲ್ಲಲಾಗದಿರಲು ಅವನು ಆ ದಾನವನಮೇಲೆ ಜ್ವಾಲೆಗಳಿಂದ ಭಯಂಕರವಾದ ಖಡ್ಗ, ನಾರಾಚ, ತೋಮರಗಳನ್ನು ಪ್ರಯೋಗಿಸಿದನು. ಆದರೆ ಅವು ಆ ಅಂಧಕನನ್ನು ಗೌಡಾಂಗನೆಯಂತೆ ಮುಟ್ಟಲಿಲ್ಲ.

೫೮. ಬಳಿಕ ಅವರು ಆಯುಧಗಳನ್ನು ತ್ಯಜಿಸಿ ಬಾಹುಯುದ್ಧವನ್ನಾರಂಭಿಸಿ ಕೈಯಿಂದ ಕೈಯನ್ನು ಹಿಡಿದುಕೊಂಡು ಮುಷ್ಟಿಯಿಂದ ಗುದ್ದುತ್ತ ಬಾಹುಯುದ್ಧದ ವಿವಿಧಪ್ರಯೋಗಗಳಿಂದ ಯುದ್ಧಮಾಡಿದರು.

೫೯. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಬಳಿಕ ಶಂಕರನು

ಸ ಶಿವೇನ ಯದಾ ಕ್ಷಿಪ್ತಃ ಪತಿತಃ ಪೃಥಿವೀತಲೇ ।
ಊರ್ಧ್ವಬಾಹುರಧೋ ವಕ್ತ್ರೋ ದಾನವೋ ನೃಪಸತ್ತಮ ॥ ೬೦ ॥
ಕ್ರೋಧಾವಿಷ್ಟೇನ ದೇವೇಶಃ ಸಂಗ್ರಾಮೇ ದೇವಶತ್ರುಹಾ ।
ಕಕ್ಷಯೋಃ ಕುಹರೇ ಕ್ಷಿಪ್ತ್ವಾ ಬಂಧೇನಾಕ್ರಮ್ಯ ಪೀಡಿತಃ ॥ ೬೧ ॥
ನಿಸ್ಪಂದಶ್ಚಾಽಭವದ್ದೇವೋ ಮೂರ್ಛಾಯುಕ್ತೋ ಮಹೇಶ್ವರಃ ।
ಮೂರ್ಛಾಪನ್ನಂ ತು ತಂ ಜ್ಞಾತ್ವಾ ಚಿಂತಯಾಮಾಸ ದಾನವಃ ॥ ೬೨ ॥
ಹಾಹಾ ಕಷ್ಟಂ ಕೃತಂ ಮೇಽದ್ಯ ದುಷ್ಕೃತಂ ಪಾಪಕರ್ಮಣಾ ।
ಕಿಂ ಕರೋಮಿ ಕಥಂ ಕರ್ಮ ಕಸ್ಮಿನ್ ಸ್ಥಾನೇ ತು ಮೋಚಯೇ ॥ ೬೩ ॥
ಗೃಹೀತ್ವಾ ದೇವಮುತ್ಸಂಗೇ ಗತಃ ಕೈಲಾಸಪರ್ವತಂ ।
ಶಯ್ಯಾಯಾಂ ಶಂಕರಂ ನ್ಯಸ್ಯ ನಿರ್ಯಯೌ ದೈತ್ಯರಾಟ್ ತತಃ ॥ ೬೪ ॥
ಶಯ್ಯಾಯಾಂ ಪತಿತೋ ದೇವಃ ಪ್ರಪೇದೇ ವೇದನಾಂ ತತಃ ।
ತಾವದ್ದದರ್ಶ ಚಾತ್ಮಾನಂ ಸ್ವಕೀಯಭವನಸ್ಥಿತಂ ॥ ೬೫ ॥
ಪರಾಭವಃ ಕೃತೋ ಮಹ್ಯಂ ಕಥಂ ತೇನ ದುರಾತ್ಮನಾ ।
ಕ್ರೋಧಾವೇಗಸಮಾವಿಷ್ಟೋ ನಿರ್ಯಯೌ ದಾನವಂಪ್ರತಿ ॥ ೬೬ ॥

---

ಈ ದುಷ್ಟನಾದ ಅಂಧಕನನ್ನು ನಿಶ್ಚಯವಾಗಿಯೂ ಸಂಹರಿಸುವೆನು. ಎಂದು ಚಿಂತಿಸಿದನು.

೬೦. ಅವನು ಅಂಧಕನನ್ನು ಎಸೆಯಲು ಅವನು ಮೇಲೆ ತೋಳುಗಳುಳ್ಳವನಾಗಿಯೂ, ಕೆಳಗೆ ಮುಖವುಳ್ಳವನಾಗಿಯೂ ನೆಲದಮೇಲೆ ಬಿದ್ದನು.

೬೧. ಬಳಿಕ ದೇವಶತ್ರುವಾದ ಅಂಧಕನು ಕುಪಿತನಾಗಿ ಶಂಕರನನ್ನು ಕಂಕುಳಲ್ಲಿ ಬಂಧನದಿಂದ ಬಿಗಿದು ಪೀಡಿಸಿದನು.

೬೨. ಮಹೇಶ್ವರನು ಅದರಿಂದ ಮೂರ್ಛೆಗೊಂಡು ನಿಶ್ಚಲನಾದನು. ಅವನು ಮೂರ್ಛೆಗೊಂಡಿರುವುದನ್ನರಿತು ಅಂಧಕನು ಹೀಗೆ ಚಿಂತಿಸಿದನು.

೬೩. "ಪಾಪಿಯಾದ ನಾನು ಮಹೇಶ್ವರನಿಗೆ ಈಗ ಕಷ್ಟವನ್ನುಂಟುಮಾಡಿ ದುಷ್ಕಾರ್ಯವನ್ನೆಸಗಿದೆನು. ಈಗ ಏನನ್ನುಮಾಡಲಿ? ಈತನನ್ನು ಯಾವ ಸ್ಥಳದಲ್ಲಿ ಬಿಡಲಿ."

೬೪. ಬಳಿಕ ಅವನು ಶಂಕರನನ್ನು ತೊಡೆಯಲ್ಲಿರಿಸಿಕೊಂಡು ಕೈಲಾಸ ಪರ್ವತಕ್ಕೆ ಹೋಗಿ ಹಾಸಿಗೆಯಲ್ಲಿ ಮಲಗಿಸಿ ಹೊರಟು ಹೋದನು.

೬೫. ಹಾಸಿಗೆಯಲ್ಲಿ ಮಲಗಿದ ಶಂಕರನು ಜ್ಞಾನವನ್ನು ಹೊಂದಿ ತಾನು ತನ್ನ ಮನೆಯಲ್ಲಿಯೆ ಇರುವುದನ್ನು ಕಂಡನು.

೬೬. "ದುರಾತ್ಮನಾದ ಆ ಅಸುರನು ನನಗೆ ಹೇಗೆ ಸೋಲನ್ನುಂಟುಮಾಡಿದನು?" ಎಂದು ಕ್ರುದ್ಧನಾಗಿ ಮಹೇಶನು ಪುನಃ ದಾನವನೆಡೆಗೆ ಹೊರಟನು.

**ಅಯಸೀಂ ಲಗುಡೀಂ ಗೃಹ್ಯ ಪ್ರಭುರ್ಭಾರಸಹಸ್ರಜಾಂ ।**
**ದಾನವಂ ಚ ತತೋ ದೃಷ್ಟ್ವಾ ಪ್ರಾಕ್ಷಿಪತ್ತಸ್ಯ ಮೂರ್ಧನಿ ॥ ೬೭ ॥**
**ಖಡ್ಗೇನ ತಾಡಯಾಮಾಸ ದಾನವಃ ಪ್ರಹಸನ್ರಣೇ ।**
**ದೇವೇನಾಽಥ ಸ್ಮೃತಂ ಚಾಽಸ್ತ್ರಂ ಕೌಚ್ಛೇರಾಹ್ವಂ ಮಹಾಹವೇ ॥ ೬೮ ॥**
**ದೀಪ್ಯಮಾನಂ ಸಮುತ್ಸೃಜ್ಯ ಹೃದಯೇ ತಾಡಿತಃ ಕ್ಷಣಾತ್ ।**
**ತತಃ ಸ ತಾಡಿತಸ್ತೇನ ರುಧಿರೋದ್ಗಾರಮುದ್ವಮನ್ ॥ ೬೯ ॥**
**ಪತಿತೋಽಧೋಮುಖೋ ಭೂತ್ವಾ ತತಃ ಶೂಲೇನ ಭೇದಿತಃ ।**
**ಪುನಶ್ಚ ದೇವದೇವೇನ ಶೂಲೇನ ದ್ವಿದಲೀಕೃತಃ ॥ ೭೦ ॥**
**ಶೂಲಾಗ್ರೇಽಸೌ ಸ್ಥಿತಃ ಪಾಪೋ ಭ್ರಾಂತವಾಂಶ್ಚಕ್ರವತ್ತದಾ ।**
**ಯೇ ಯೇ ಭೂಮ್ಯಾಂ ಪತಂತಿಸ್ಮ ತತ್ಕಾಯಾದ್ರಕ್ತಬಿಂದವಃ ॥ ೭೧ ॥**
**ತೇ ತೇ ಸರ್ವೇ ಸಮುತ್ತಸ್ಥುರ್ದಾನವಾಃ ಶಸ್ತ್ರಪಾಣಯಃ ।**
**ವ್ಯಾಕುಲಸ್ತು ತತೋ ದೇವೋ ದಾನವೇನ ತರಸ್ವಿನಾ ॥ ೭೨ ॥**
**ದೇವೇನಾಽಥ ಸ್ಮೃತಾ ದುರ್ಗಾ ಚಾಮುಂಡಾ ಭೀಷಣಾನನಾ ।**
**ಆಯಾತಾ ಭೀಷಣಾಕಾರಾ ನಾನಾಯುಧವಿರಾಜಿತಾ ॥ ೭೩ ॥**
**ಮಹಾದಂಷ್ಟ್ರಾ ಮಹಾಕಾಯಾ ಪಿಂಗಾಕ್ಷೀ ಲಂಬಕರ್ಣಿಕಾ ।**
**ಆದೇಶೋ ದೀಯತಾಂ ದೇವ ಕೋ ಯಾಸ್ಯತಿ ಯಮಾಲಯಂ ॥ ೭೪ ॥**

---

೬೭. ದೇವೇಶನು ಆ ದಾನವನನ್ನು ಕಂಡು ಅವನ ತಲೆಯಮೇಲೆ ಸಹಸ್ರ ಭಾರವುಳ್ಳ ಕಬ್ಬಿಣದ ದೊಣ್ಣೆಯನ್ನು ಎಸೆದನು.

೬೮–೭೦. ದಾನವನು ನಗುತ್ತ ಕತ್ತಿಯಿಂದ ಅದನ್ನು ಹೊಡೆದನು. ತರುವಾಯ ಶಂಕರನು ಕೌಚ್ಛೇರವೆಂಬ ಜ್ವಲಿಸುವ ಅಸ್ತ್ರವನ್ನು ಸ್ಮರಿಸಿ ಅದನ್ನು ದಾನವನ ಹೃದಯಕ್ಕೆ ಪ್ರಯೋಗಿಸಲು ಅದರಿಂದ ತಾಡಿತನಾದ ಅವನು ರಕ್ತವನ್ನು ಕಾರುತ್ತ ಕೆಳಮುಖನಾಗಿ ಬಿದ್ದನು. ಮರಳಿ ಮಹಾದೇವನು ತ್ರಿಶೂಲದಿಂದ ಅವನನ್ನು ಸೀಳಿದನು.

೭೧–೭೪. ಅನಂತರ ಶೂಲಾಗ್ರದಲ್ಲಿ ಇರುವ ಪಾಪಿಯಾದ ಅವನು ಚಕ್ರದಂತೆ ಸುತ್ತಿದನು. ಅವನ ಶರೀರದಿಂದ ನೆಲದಲ್ಲಿ ಬಿದ್ದ ರಕ್ತದ ಕಣಗಳೆಲ್ಲ ಶಸ್ತ್ರಪಾಣಿಗಳಾದ ದಾನವರಾಗಿ ಮೇಲಕ್ಕೆದ್ದುವು. ಬಳಿಕ ಬಲಿಷ್ಠನಾದ ಆ ದಾನವನಿಂದ ವ್ಯಾಕುಲಗೊಂಡ ಮಹಾದೇವನು ದುರ್ಗೆಯನ್ನು ಸ್ಮರಿಸಲು ಭಯಂಕರಮುಖವುಳ್ಳವಳೂ, ಭೀಷಣಾಕಾರಳೂ, ಅನೇಕಾಯುಧಗಳಿಂದ ವಿರಾಜಿಸುವವಳೂ, ದೊಡ್ಡ ಹಲ್ಲುಗಳುಳ್ಳವಳೂ, ಮಹಾಕಾಯಳೂ, ಹಳದಿಯ ಕಣ್ಣುಗಳುಳ್ಳವಳೂ, ಜೋಲುಕಿವಿಗಳುಳ್ಳವಳೂ, ಆದ ಚಾಮುಂಡಿಯು ಸನ್ನಿಹಿತಳಾಗಿ, "ಸ್ವಾಮಿ! ಅಪ್ಪಣೆಯನ್ನುಕೊಡು ಯಾವನು ಯಮನಮನೆಗೆ ಹೋಗಲು ಸಿದ್ಧನಾಗಿರುವನು" ಎಂದು ಕೇಳಿದಳು.

ಈಶ್ವರ ಉವಾಚ :—

ಪಿಬಾಽಸ್ಯ ರುಧಿರಂ ಭದ್ರೇ ಯಥೇಷ್ಟಂ ದಾನವಸ್ಯ ಚ ।
ನಿಪತದ್ರುಧಿರಂ ಭೂಮೌ ದುರ್ಗೇ ಗೃಹ್ಣೀಷ್ವ ಮಾ ಚಿರಂ ॥ ೭೫ ॥
ನಿಹನ್ಮಿ ದಾನವಂ ಯಾವತ್ಸಾಹಾಯ್ಯಂ ಕುರು ಸುಂದರಿ ।
ಏವಮುಕ್ತ್ವಾ ತು ಸಾ ದುರ್ಗಾ ಪಪೌ ಚ ರುಧಿರಂ ತತಃ ॥ ೭೬ ॥
ನಿಹತಾ ದಾನವಾಃ ಸರ್ವೇ ದೇವೇಶೇನ ಸಹಸ್ರಶಃ ।
ಅಂಧಕೋಽಪಿ ಚ ತಾನ್ದೃಷ್ಟ್ವಾ ದಾನವಾನವನಿಂಗತಾನ್ ।
ತತೋ ವಾಗ್ಭಿಃ ಪ್ರತುಷ್ಟಾವ ದೇವದೇವಂ ಮಹೇಶ್ವರಂ ॥ ೭೭ ॥

ಅಂಧಕ ಉವಾಚ :—

ಜಯಸ್ವ ದೇವದೇವೇಶ ಉಮಾರ್ಧಾರ್ಧಶರೀರಧೃಕ್ ।
ನಮಸ್ತೇ ದೇವದೇವೇಶ ಸರ್ವಾಯ ತ್ರಿಗುಣಾತ್ಮನೇ ॥ ೭೮ ॥
ವೃಷಭಾಸನಮಾರೂಢ ಶಶಾಂಕಕೃತಶೇಖರ ।
ಜಯ ಖಟ್ವಾಂಗಹಸ್ತಾಯ ಗಂಗಾಧರ ನಮೋಽಸ್ತು ತೇ ॥ ೭೯ ॥
ನಮೋ ಡಮರುಹಸ್ತಾಯ ನಮಃ ಕಪಾಲಮಾಲಿನೇ ।
ಸ್ಮರದೇಹವಿನಾಶಾಯ ಮಹೇಶಾಯ ನಮೋಽಸ್ತು ತೇ ॥ ೮೦ ॥

---

೭೫. ಈಶ್ವರನು ಹೇಳುತ್ತಾನೆ:—ಮಂಗಳಕರಳೆ! ಈ ದಾನವನ ರಕ್ತವನ್ನು ಸ್ವೇಚ್ಛೆಯಾಗಿ ಕುಡಿ. ಶೀಘ್ರವಾಗಿ ನೆಲದಲ್ಲಿ ಬೀಳುತ್ತಿರುವ ಈ ರಕ್ತವನ್ನು ಬೇಗನೆ ತೆಗೆದುಕೊ.

೭೬. ಸುಂದರಿ! ನಾನು ಈ ದಾನವನ್ನು ಕೊಲ್ಲುವವರೆಗೆ ಸಹಾಯ ಮಾಡು.'' ಶಂಕರನು ಹೀಗೆನ್ನಲು ದುರ್ಗೆಯು ಅವನ ರಕ್ತವನ್ನು ಕುಡಿದಳು.

೭೭. ಶಂಕರನು ಸಾವಿರಾರು ಮಂದಿ ದಾನವರನ್ನು ಕೊಂದನು. ಅಂಧಕನು ಭೂಮಿಯಮೇಲೆ ಬಿದ್ದ ಅವರನ್ನು ನೋಡಿ ಮಹೇಶ್ವರನನ್ನು ಪ್ರಶಸ್ತವಾದ ಮಾತುಗಳಿಂದ ಸ್ತೋತ್ರಮಾಡಿದನು.

೭೮. ಅಂಧಕನು ಹೇಳುತ್ತಾನೆ:—'' ದೇವಾಧಿಪನೂ, ಉಮೆಯು ಅರ್ಧಾಂಗಿಯಾಗಿರುವವನೂ ಆದ ಓ ಶಂಕರ! ನೀನು ಜಯಿಸು. ಸರ್ವಸ್ವರೂಪನೂ, ತ್ರಿಗುಣಾತ್ಮಕನೂ ಆದ ಶಂಕರನೆ! ನಿನಗೆ ನಮಸ್ಕಾರವು.

೭೯. ವೃಷಭವನ್ನೇರಿರುವವನೂ, ಚಂದ್ರಮೌಳಿಯೂ ಆದ ಶಂಕರ! ಜಯಿಸು. ಖಟ್ವಾಂಗವನ್ನು ಹಿಡಿದ ಗಂಗಾಧರ! ನಿನಗೆ ನಮಸ್ಕಾರವಿರಲಿ.

೮೦. ಡಮರುಹಸ್ತನೂ, ಕಪಾಲಮಾಲಿಯೂ, ಮನ್ಮಥದೇಹನಾಶಕನೂ ಆದ ಮಹೇಶ! ನಿನಗೆ ನಮಸ್ಕಾರವು.

ಪೂಷ್ಣೋದಂತನಿಪಾತಾಯ ಗಣನಾಥಾಯ ತೇ ನಮಃ ।
ಜಯ ಸ್ವರೂಪದೇಹಾಯ ಅರೂಪ ಬಹುರೂಪಿಣೇ ॥ ೮೧ ॥
ಉತ್ತಮಾಂಗವಿನಾಶಾಯ ವಿರಿಂಚೇರಪಿ ಶಂಕರ ।
ಶ್ಮಶಾನವಾಸಿನೇ ನಿತ್ಯಂ ನಿತ್ಯಂ ಭೈರವರೂಪಿಣೇ ॥ ೮೨ ॥
ತ್ವಂ ಸರ್ವಗೋಽಸಿ ತ್ವಂ ಕರ್ತಾ ತ್ವಂ ಹರ್ತಾ ನಾಽನ್ಯ ಏವ ಚ ।
ತ್ವಂ ಭೂಮಿಸ್ತ್ವಂ ದಿಶಶ್ಚೈವ ತ್ವಂ ಗುರುರ್ಭಾರ್ಗವಸ್ತಥಾ ॥ ೮೩ ॥
ಸೌರಿಸ್ತ್ವಂ ದೇವದೇವೇಶ ಭೂಮಿಪುತ್ರಸ್ತಥೈವ ಚ ।
ಋಕ್ಷಗ್ರಹಾದಿಕಂ ಸರ್ವಂ ಯದ್ದೃಶ್ಯಂ ತತ್ತ್ವಮೇವ ಚ ॥ ೮೪ ॥
ಏವಂ ಸ್ತುತಿಂ ತದಾ ಕೃತ್ವಾ ದೇವಂ ಪ್ರತಿ ಸ ದಾನವಃ ।
ಸಂಹತಾಭ್ಯಾಂ ತು ಪಾಣಿಭ್ಯಾಂ ಪ್ರಣನಾಮ ಮಹೇಶ್ವರಂ ॥ ೮೫ ॥

ಈಶ್ವರ ಉವಾಚ :—

ಸಾಧು ಸಾಧು ಮಹಾಸತ್ತ್ವ ವರಂ ಯಾಚಸ್ವ ದಾನವ ।
ದಾತಾಽಹಂ ಯಾಚಕಸ್ತ್ವಂ ಹಿ ದದಾಮೀಹ ಯಥೇಪ್ಸಿತಂ ॥ ೮೬ ॥

ಅಂಧಕ ಉವಾಚ :—

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ತದಾತ್ಮಸದೃಶೋಽಹಂ ತೇ ಕರ್ತವ್ಯೋ ನಾಽಪರೋ ವರಃ ॥ ೮೭ ॥

---

೮೧. ಸೂರ್ಯನ ದಂತಗಳನ್ನು ಕೆಡವಿದವನೂ, ಗಣಗಳಿಗೊಡೆಯನೂ, ಸ್ವರೂಪದೇಹನೂ, ರೂಪರಹಿತನೂ, ಬಹುರೂಪವುಳ್ಳವನೂ ಆದ ಶಂಕರ! ನಿನಗೆ ನಮಸ್ಕಾರವು.

೮೨. ಬ್ರಹ್ಮನ ಶಿರಸ್ಸನ್ನು ಕತ್ತರಿಸಿದವನೂ, ಶ್ಮಶಾನವಾಸಿಯೂ, ಭಯಂಕರ ರೂಪವುಳ್ಳವನೂ ಆದ ಶಂಕರ! ನಿನಗೆ ನಮಸ್ಕಾರವು.

೮೩. ನೀನು ಸರ್ವವ್ಯಾಪಿಯೂ, ಕರ್ತನೂ, ಸಂಹಾರಕನೂ, ಭೂಮಿಯೂ, ದಿಕ್ಕುಗಳೂ, ಗುರುವೂ, ಶುಕ್ರನೂ ಆಗಿರುವೆ.

೮೪. ನೀನೇ ಶನೈಶ್ಚರನೂ, ಅಂಗಾರಕನೂ, ಸಕಲನಕ್ಷತ್ರಗ್ರಹಗಳೂ, ಕಾಣುವ ಸಮಸ್ತವಸ್ತುವೂ ಆಗಿರುವೆ.''

೮೫. ಆ ಅಂಧಕನು ಶಂಕರನನ್ನು ಹೀಗೆ ಸ್ತುತಿಸಿ ಕೈಗಳನ್ನು ಜೋಡಿಸಿಕೊಂಡು ಶಂಕರನನ್ನು ವಂದಿಸಿದನು.

೮೬. ಈಶ್ವರನು ಹೇಳುತ್ತಾನೆ:—ಇದೀಗ ನೀನು ಮಹಾಸಾತ್ವಿಕನಾದೆ. ದಾನವ! ಒಳ್ಳೆಯದು. ವರವನ್ನು ಕೇಳಿಕೊ. ನಾನು ದಾನಮಾಡುವವನು. ನೀನು ಯಾಚಕನು; ಇಷ್ಟವಾದುದನ್ನು ಕೊಡುವೆನು.

೮೭–೮೮. ಅಂಧಕನು ಹೇಳುತ್ತಾನೆ:—ದೇವೇಶ! ನೀನು ಸಂತುಷ್ಟನಾಗಿದ್ದರೆ, ನನಗೆ ವರವನ್ನು ಕೊಡುವುದಾದರೆ ಭಸ್ಮಧಾರಿಯೂ, ಜಟೆಯನ್ನು

ಭಸ್ಮೀ ಜಟೀ ತ್ರಿನೇತ್ರೀ ಚ ತ್ರಿಶೂಲೀ ಚ ಚತುರ್ಭುಜಃ ।
ವ್ಯಾಘ್ರಚರ್ಮೋತ್ತರೀಯಶ್ಚ ನಾಗಯಜ್ಞೋಪವೀತಕಃ ॥ ೮೮ ॥
ಏತದಿಚ್ಛಾಮ್ಯಹಂ ಸರ್ವಂ ಯದಿ ತುಷ್ಟೋ ಮಹೇಶ್ವರ ॥ ೮೯ ॥

ಈಶ್ವರ ಉವಾಚ :—

ದದಾಮಿ ತೇ ವರಂ ಹ್ಯದ್ಯ ಯಸ್ತ್ವಯಾ ಯಾಚಿತೋಽನಘ ।
ಗಣೇಷು ಮೇ ಸ್ಥಿತಃ ಪುತ್ರ ಭೃಂಗೀಶಸ್ತ್ವಂ ಭವಿಷ್ಯಸಿ ॥ ೯೦ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಅವಂತ್ಯಖಂಡೇ ತೃತೀಯೇ ರೇವಾಖಂಡೇ**
**"ಅಂಧಕವಧ--ತದ್ವರಪ್ರದಾನವರ್ಣನಂ" ನಾಮಾಷ್ಟಚತ್ವಾರಿಂಶೋಽಧ್ಯಾಯಃ**

---

ಧರಿಸಿದವನೂ, ತ್ರಿನೇತ್ರನೂ, ತ್ರಿಶೂಲವನ್ನು ಹಿಡಿದವನೂ, ಚತುರ್ಭುಜನೂ, ವ್ಯಾಘ್ರಚರ್ಮವನ್ನು ಹೊದೆದವನೂ, ಸರ್ಪಯಜ್ಞೋಪವೀತನೂ ಆಗಿ ನಿನಗೆ ಸಮಾನರೂಪವುಳ್ಳವನಾಗುವಂತೆಮಾಡು, ಬೇರೆ ವರವು ನನಗೆ ಬೇಡ.

೮೯. ಮಹೇಶ್ವರ! ನೀನು ಸಂತುಷ್ಟನಾಗಿದ್ದರೆ ಇದನ್ನೆಲ್ಲವನ್ನೂ ಕೊಡು.

೯೦. ಈಶ್ವರನು ಹೇಳುತ್ತಾನೆ:—ನಿರ್ದುಷ್ಟನೆ! ನೀನು ಬೇಡಿದ ವರವನ್ನು ಕೊಡುವೆನು. ಮಗು! ನೀನು ನನ್ನ ಗಣಗಳಲ್ಲಿ ಭೃಂಗೀಶನಾಗುವೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಅಂಧಕವಧ—ತದ್ವರಪ್ರದಾನವರ್ಣನ"ವೆಂಬ
ನಲವತ್ತೆಂಟನೆ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶತ್ತಮೋಽಧ್ಯಾಯಃ

### ಶೂಲಭೇದೋತ್ಪತ್ತಿಮಾಹಾತ್ಮ್ಯವರ್ಣನಂ

ಮಾರ್ಕಂಡೇಯ ಉವಾಚ :—

ಅಂಧಕಂ ತು ನಿಹತ್ಯಾಽಥ ದೇವದೇವೋ ಮಹೇಶ್ವರಃ ।
ಉಮಯಾ ಸಹಿತೋ ರುದ್ರಃ ಕೈಲಾಸಮಗಮನ್ನಗಂ ॥ ೧ ॥
ಆಗತಾಶ್ಚ ತತೋ ದೇವಾ ಬ್ರಹ್ಮಾದ್ಯಾಶ್ಚ ಸವಾಸವಾಃ ।
ಹೃಷ್ಟಾಸ್ತುಷ್ಟಾಶ್ಚ ತೇ ಸರ್ವೇ ಪ್ರಣೇಮುಃ ಪಾರ್ವತೀಪತಿಂ ॥ ೨ ॥

ಈಶ್ವರ ಉವಾಚ :—

ಉಪಾವಿಶಂತು ತೇ ಸರ್ವೇ ಯೇ ಕೇಚನ ಸಮಾಗತಾಃ ।
ನಿಹತೋ ದಾನವೋ ಹ್ಯೇಷ ಗೀರ್ವಾಣಾರ್ಥೇ ಪಿತಾಮಹ ॥ ೩ ॥
ರಕ್ತೇನ ತಸ್ಯ ಮೇ ಶೂಲಂ ನಿರ್ಮಲಂ ನೈವ ಜಾಯತೇ ।
ಶುಭವ್ರತತಪೋಜಪ್ಯರತೋ ಬ್ರಹ್ಮನ್ಮಯಾ ಹತಃ ॥ ೪ ॥
ಕರ್ತುಮಿಚ್ಛಾಮ್ಯಹಂ ಸಮ್ಯಕ್ತೀರ್ಥಯಾತ್ರಾಂ ಚತುರ್ಮುಖ ।
ಆಗಚ್ಛಂತು ಮಯಾ ಸಾರ್ಧಂ ಯೇ ಯೂಯಮಿಹ ಸಂಗತಾಃ ॥ ೫ ॥

---

## ಕನ್ನಡದ ಅನುವಾದ

### ಶೂಲಭೇದೋತ್ಪತ್ತಿಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ:—ಮಹೇಶ್ವರನು ಅಂಧಕನನ್ನು ವಧಿಸಿ ಪಾರ್ವತಿಯೊಡನೆ ಕೈಲಾಸಕ್ಕೆ ಹೋದನು.

೨. ಬಳಿಕ ಬ್ರಹ್ಮಾದಿ ದೇವತೆಗಳು ಬಂದು ಹೃಷ್ಟರಾಗಿ ಪಾರ್ವತೀ ಪತಿಯಾದ ಶಂಕರನನ್ನು ವಂದಿಸಿದರು.

೩. ಈಶ್ವರನು ಹೇಳುತ್ತಾನೆ:—ಪಿತಾಮಹ! ಬಂದಿರುವವರೆಲ್ಲರೂ ಕುಳಿತು ಕೊಳ್ಳಲಿ. ದೇವತೆಗಳಿಗಾಗಿ ಈ ದಾನವನನ್ನು ನಾನು ಕೊಂದಿರುವೆನು.

೪. ಶುಭವ್ರತ, ತಪಸ್ಸು, ಜಪಗಳಲ್ಲಿ ನಿರತನಾದ ಈ ದಾನವನನ್ನು ನಾನು ಕೊಂದಿರುವುದರಿಂದ ಆವನ ರಕ್ತಸಿಕ್ತವಾದ ನನ್ನೀತ್ರಿಶೂಲವು ನಿರ್ಮಲ ವಾಗಲಿಲ್ಲ.

೫. ಪಿತಾಮಹ! ನಾನು ತೀರ್ಥಯಾತ್ರೆಗೈಯ್ಯಲು ಇಚ್ಛಿಸುವೆನು. ಇಲ್ಲಿ ಸೇರಿರುವ ನೀವೆಲ್ಲರೂ ನನ್ನೊಡನೆ ಬನ್ನಿರಿ.

ಇತ್ಯುಕ್ತ್ವಾ ದೇವದೇವೇಶಃ ಪ್ರಭಾಸಂ ಪ್ರತಿ ನಿರ್ಯಯೌ ।
ಪ್ರಭಾಸಾದ್ಯಾನಿ ತೀರ್ಥಾನಿ ಗಂಗಾಸಾಗರಮುಧ್ಯತಃ ॥ ೬ ॥
ಅವಗಾಹ್ಯಾಽಪಿ ಸರ್ವಾಣಿ ನೈರ್ಮಲ್ಯಂ ನಾಽಭವನ್ನೃಪ ।
ನರ್ಮದಾಯಾಂ ತತೋ ಗತ್ವಾ ದೇವೋ ದೇವೈಃ ಸಮನ್ವಿತಃ ॥ ೭ ॥
ಉತ್ತರಂ ದಕ್ಷಿಣಂ ಕೂಲಮವಾಗಾಹತ್ರಿಯವ್ರತಃ ।
ಗತಸ್ತು ದಕ್ಷಿಣೇ ಕೂಲೇ ಪರ್ವತೇ ಭೃಗುಸಂಜ್ಞಿತಂ ॥ ೮ ॥
ತತ್ರ ಸ್ಥಿತ್ವಾ ಮಹಾದೇವೋ ದೇವೈಃ ಸಹ ಮಹೀಪತೇ ।
ಭ್ರಾಂತ್ವಾ ಭ್ರಾಂತ್ವಾ ಚಿರಂ ಶ್ರಾಂತೋ ನಿರ್ವಿಣ್ಣೋ ನಿಷಸಾದಹ ॥ ೯ ॥
ಮನೋಹಾರಿ ಯತಃ ಸ್ಥಾನಂ ಸರ್ವೇಷಾಂ ವೈ ದಿವೌಕಸಾಂ ।
ತೀರ್ಥಂ ವಿಶಿಷ್ಟಂ ತನ್ಮತ್ವಾ ಸ್ಥಿತೋ ದೇವೋ ಮಹೇಶ್ವರಃ ॥ ೧೦ ॥
ಗಿರಿಂ ವಿವ್ಯಾಧ ಶೂಲೇನ ಭಿನ್ನಂ ತೇನ ರಸಾತಲಂ ।
ನಿರ್ಮಲಂ ಚಾಽಭವಚ್ಛೂಲಂ ನ ಲೇಪೋ ದೃಶ್ಯತೇ ಕ್ವಚಿತ್ ॥ ೧೧ ॥
ದೇವೈರಾಹ್ವಾನಿತಾ ತತ್ರ ಮಹಾಪುಣ್ಯಾ ಚ ಭಾರತೀ ।
ಪರ್ವತಾನ್ನಿಃಸೃತಾ ತತ್ರ ಮಹಾಪುಣ್ಯಾ ಸರಸ್ವತೀ ॥ ೧೨ ॥
ದ್ವಿತೀಯಃ ಸಂಗಮಸ್ತತ್ರ ಯಥಾ ವೇಣ್ಯಾಂ ಸಿತಾಽಸಿತಃ ।
ತತ್ರ ಬ್ರಹ್ಮಾ ಸ್ವಯಂ ದೇವೋ ಬ್ರಹ್ಮೇಶಂ ಲಿಂಗಮುತ್ತಮಂ ॥ ೧೩ ॥

---

೬–೯. ಶಂಕರನು ಹೀಗೆ ಹೇಳಿ ಪ್ರಭಾಸಕ್ಷೇತ್ರಕ್ಕೆ ಹೋದನು. ದೊರೆಯೆ! ಅವನು ಪ್ರಭಾಸವೇ ಮೊದಲಾದ ತೀರ್ಥಗಳಲ್ಲಿಯೂ, ಗಂಗಾಸಾಗರಮಧ್ಯದಲ್ಲಿಯೂ ಸ್ನಾನಮಾಡಿಯೂ ಶುದ್ಧನಾಗಲಿಲ್ಲ. ಬಳಿಕ ಶಂಕರನು ದೇವತೆಗಳೊಡನೆ ನರ್ಮದಾ ನದಿಗೆ ಹೋಗಿ ದಕ್ಷಿಣೋತ್ತರದಡಗಳಲ್ಲಿ ಮಿಂದನು. ದಕ್ಷಿಣದಡದಲ್ಲಿರುವ ಭೃಗುಪರ್ವತದಲ್ಲಿ ದೇವತೆಗಳೊಡನೆ ಬಹುಕಾಲ ಸಂಚರಿಸಿ ವ್ಯಥೆಗೊಂಡು ಕುಳಿತುಕೊಂಡನು.

೧೦. ಅದು ಸಕಲದೇವತೆಗಳ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಉತ್ತಮಸ್ಥಾನವೆಂದು ತಿಳಿದು ಅಲ್ಲಿದ್ದನು.

೧೧. ಅವನು ಶೂಲದಿಂದ ಪರ್ವತವನ್ನು ಪಾತಾಳದವರೆಗೆ ಭೇದಿಸಿದನು. ಆದರಿಂದ ಆ ಶೂಲವು ನಿರ್ಮಲವಾಯಿತು. ಅದರಲ್ಲಿ ಎಲ್ಲಿಯೂ ಲೇಪವು ಕಾಣಿಸಲಿಲ್ಲ.

೧೨–೧೬. ದೇವತೆಗಳು ಅಲ್ಲಿ ಭಾರತೀನದಿಯನ್ನು ಕರೆದರು. ಅತಿ ಪುಣ್ಯಕರವಾದ ಸರಸ್ವತೀನದಿಯು ಆ ಪರ್ವತದಿಂದ ಹೊರಟಿತು. ತ್ರಿವೇಣಿಯಲ್ಲಿ ಗಂಗಾಯಮುನಾನದಿಗಳು ಸೇರುವಂತೆ ಅಲ್ಲಿ ಇವೆರಡೂ ಸೇರಿದುವು. ಅಲ್ಲಿ ಬ್ರಹ್ಮನು ಸ್ವಂತವಾಗಿ ಪುಣ್ಯಕರವೂ, ಸಕಲದುಃಖವನ್ನು ಪರಿಹರಿಸುವುದೂ ಆದ

ಸಂಸ್ಥಾಪಯಾಮಾಸ ಪುಣ್ಯಂ ಸರ್ವದುಃಖಘ್ನಮುತ್ತಮಂ ।
ತಸ್ಯ ಯಾಮ್ಯೇ ದಿಶೋ ಭಾಗೇ ಸ್ವಯಂ ದೇವೋ ಜನಾರ್ದನಃ ॥ ೧೪ ॥
ತಿಷ್ಠತೇ ಚ ಸದಾ ತತ್ರ ವಿಷ್ಣುಪಾದಾಗ್ರಸಂಸ್ಥಿತಾ ।
ಅಂಭಸೋ ನ ಭವೇನ್ಮಾರ್ಗಃ ಕುಂಡಮಧ್ಯಸ್ಥಿತಸ್ಯ ಚ ॥ ೧೫ ॥
ಶೂಲಾಗ್ರೇಣ ಕೃತಾ ರೇಖಾ ತತಸ್ತೋಯಂ ವಹೇನ್ನೃಪ ।
ತತ್ತೋಯಂ ಚ ಗತಂ ತತ್ರ ಯತ್ರ ರೇವಾ ಮಹಾನದೀ ॥ ೧೬ ॥
ಜಲಲಿಂಗಂ ಮಹಾಪುಣ್ಯಂ ಚಕ್ರತೀರ್ಥಂ ನೃಪೋತ್ತಮ ।
ಶೂಲಭೇದೇ ಚ ದೇವೇಶಃ ಸ್ನಾನಂ ಕುರ್ಯಾದ್ಯಥಾವಿಧಿ ॥ ೧೭ ॥
ಆತ್ಮಾನಂ ಮನ್ಯತೇ ಶುದ್ಧಂ ನ ಕಿಂಚಿತ್ಕಲ್ಮಷಂ ಕೃತಂ ।
ತಸ್ಯೈವೋತ್ತರಕಾಷ್ಠಾಯಾಂ ದೇವದೇವೋ ಜಗದ್ಗುರುಃ ॥ ೧೮ ॥
ಆತ್ಮನಾ ದೇವದೇವೇಶಃ ಶೂಲಪಾಣಿಃ ಪ್ರತಿಷ್ಠಿತಃ ।
ಸರ್ವತೀರ್ಥೇಷು ತತ್ತೀರ್ಥಂ ಸರ್ವದೇವಮಯಂ ಪರಂ ॥ ೧೯ ॥
ಸರ್ವಪಾಪಹರಂ ಪುಣ್ಯಂ ಸರ್ವದುಃಖಘ್ನಮುತ್ತಮಂ ।
ತತ್ರ ತೀರ್ಥೇ ಪ್ರತಿಷ್ಠಾಪ್ಯ ದೇವದೇವಂ ಜಗದ್ಗುರುಃ ॥ ೨೦ ॥
ರಕ್ಷಾಪಾಲಾಂಸ್ತತೋ ಮುಕ್ತ್ವಾ ಶತಂ ಸಾಷ್ಟವಿನಾಯಕಾನ್ ।
ಕ್ಷೇತ್ರಪಾಲಾಃ ಶತಂ ಸಾಷ್ಟಂ ತದ್ರಕ್ಷಂತಿ ಪ್ರಯತ್ನತಃ ॥ ೨೧ ॥

---

ಬ್ರಹ್ಮೇಶಲಿಂಗವನ್ನು ಪ್ರತಿಷ್ಠೆಮಾಡಿದನು. ಅದರ ದಕ್ಷಿಣ ದಿಕ್ಕಿನಲ್ಲಿ ವಿಷ್ಣುವು ನೆಲೆಸಿರುವನು. ಕುಂಡದ ನಡುವೆ ಇರುವ ನೀರಿಗೆ ಹೋಗಲು ಮಾರ್ಗವಿಲ್ಲದಿರುವುದರಿಂದ ಶಂಕರನು ವಿಷ್ಣುಪಾದದ ಕೊನೆಯಿಂದ ಅಲ್ಲಿ ಒಂದು ರೇಖೆಯನ್ನು ರಚಿಸಿರುವನು. ಕುಂಡದ ನೀರು ಅದರ ಮೂಲಕ ಹರಿದು ನರ್ಮದಾನದಿಯನ್ನು ಸೇರುವುದು.

೧೭–೨೦. ಜಲಲಿಂಗವುಳ್ಳ ಚಕ್ರತೀರ್ಥವು ಅತಿ ಪುಣ್ಯಕರವಾದುದು. ಶಂಕರನು ಶೂಲಭೇದದಲ್ಲಿ ವಿಧಿಯಂತೆ ಮಿಂದು ಶುದ್ಧನಾಗಿ ತಾನು ಯಾವ ಪಾಪವನ್ನೂ ಮಾಡಲಿಲ್ಲವೆಂದರಿಯುತ್ತಾನೆ. ಅದರ ಉತ್ತರದಿಕ್ಕಿನಲ್ಲಿ ಜಗದ್ಗುರುವಾದ ಮಹಾದೇವನು ತಾನೇ ಶೂಲಪಾಣಿಯನ್ನು ಪ್ರತಿಷ್ಠೆಮಾಡಿರುವನು. ಸಮಸ್ತದೇವತೆಗಳುಳ್ಳುದೂ, ಸಕಲಪಾಪಗಳನ್ನು ಪರಿಹರಿಸುವುದೂ, ಅಖಿಲ ದುಃಖನಾಶಕವೂ ಆದ ಆ ತೀರ್ಥವು ಸಮಸ್ತತೀರ್ಥಗಳಲ್ಲಿ ಶ್ರೇಷ್ಠವಾದುದು. ಶಂಕರನು ಆ ತೀರ್ಥದಲ್ಲಿ ತನ್ನ ಲಿಂಗವನ್ನು ಪ್ರತಿಷ್ಠೆಮಾಡಿದನು.

೨೧. ನೂರೆಂಟು ವಿನಾಯಕರನ್ನು ಬಿಟ್ಟು ನೂರೆಂಟು ಕ್ಷೇತ್ರಪಾಲಕರು ಆ ಲಿಂಗವನ್ನು ಪ್ರಯತ್ನದಿಂದ ರಕ್ಷಿಸುವರು.

ವಿಘ್ನಾಸ್ತಸ್ಯೋಪಜಾಯಂತೇ ಯಸ್ತತ್ರ ಸ್ನಾತುಮಿಚ್ಛತಿ ।
ಕೇಚಿತ್ಕುಟುಂಬಾರ್ಜಿತಾಸು ವ್ಯಗ್ರಾಃ ಕೇಚಿತ್ಕೃಷೀಷು ಚ ॥ ೨೨ ॥
ಕೇಚಿತ್ಸಭಾಂ ಪ್ರಕುರ್ವಂತಿ ಕೇಚಿದ್ದ್ರವ್ಯಾರ್ಜನೇ ರತಾಃ ।
ಪರೋಕ್ಷವಾದಂ ಕುರ್ವಂತಿ ಕೇಽಪಿ ಹಿಂಸಾರತಾಃ ಸದಾ ॥ ೨೩ ॥
ಪರದಾರರತಾಃ ಕೇಚಿತ್ಕೇಚಿದ್ವೃತ್ತಿವಿಹಿಂಸಕಾಃ ।
ಅನ್ಯೇ ಕೇಚಿದ್ವದಂತ್ಯೇವಂ ಕಥಂ ತೀರ್ಥೇಷು ಗಮ್ಯತೇ ॥ ೨೪ ॥
ಕ್ಷುಧಯಾ ಪೀಡ್ಯತೇ ಭಾರ್ಯಾಪುತ್ರಭೃತ್ಯಾದಯಸ್ತದಾ ।
ಮೋಹಜಾಲೇಷು ಯೋಜ್ಯಂತೇ ಏವಂ ದೇವಗಣೈರ್ನರಾಃ ॥ ೨೫ ॥
ಪಾಪಾಚಾರಾಶ್ಚ ಯೇ ಮರ್ತ್ಯಾಃ ಸ್ನಾನಂ ತೇಷಾಂ ನ ಜಾಯತೇ ।
ಸಂರಕ್ಷಂತಿ ಚ ತತ್ತೀರ್ಥಂ ದೇವಭೃತ್ಯಗಣಾಃ ಸದಾ ॥ ೨೬ ॥
ಧನ್ಯಾಃ ಪುಣ್ಯಾಶ್ಚ ಯೇ ಮರ್ತ್ಯಾಸ್ತೇಷಾಂ ಸ್ನಾನಂ ಪ್ರಜಾಯತೇ ।
ಸರಸ್ವತ್ಯಾ ಭೋಗವತ್ಯಾ ದೇವನದ್ಯಾ ವಿಶೇಷತಃ ॥ ೨೭ ॥
ಅಯಂ ತು ಸಂಗಮಃ ಪುಣ್ಯೋ ಯಥಾ ವೇಣ್ಯಾಂ ಸಿತಾಸಿತಃ ।
ದೃಷ್ಟ್ವಾ ತೀರ್ಥಂ ತು ತೇ ಸರ್ವೇ ಗೀರ್ವಾಣಾ ಹೃಷ್ಟಚೇತಸಃ ॥ ೨೮ ॥
ದೇವಸ್ಯ ಸನ್ನಿಧೌ ಭೂತ್ವಾ ವರ್ಣಯಾಮಾಸುರುತ್ತಮಂ ।
ಇದಂ ತೀರ್ಥಂ ತು ದೇವೇಶ ಗಯಾ ತೀರ್ಥೇನ ತೇ ಸಮಂ ॥ ೨೯ ॥

---

೨೨. ಆ ಕ್ಷೇತ್ರದಲ್ಲಿರಲು ಅಪೇಕ್ಷಿಸುವವನಿಗೆ ವಿಘ್ನಗಳುಂಟಾಗುವುವು. ಅಲ್ಲಿ ಕೆಲವರು ಕುಟುಂಬ ಚಿಂತೆಗಳಲ್ಲಿಯೂ, ಕೆಲವರು ವ್ಯವಸಾಯಗಳಲ್ಲಿಯೂ ನಿರತರಾಗಿರುವರು.

೨೩. ಕೆಲವರು ಸಭೆಯನ್ನು ರಚಿಸುವರು. ಕೆಲವರು ದ್ರವ್ಯಸಂಪಾದನೆಯಲ್ಲಿ ಆಸಕ್ತರಾಗಿರುವರು. ಕೆಲವರು ಪರೋಕ್ಷವಾದವನ್ನು ಮಾಡುವರು. ಕೆಲವರು ಹಿಂಸೆಯಲ್ಲಿ ಯಾವಾಗಲೂ ನಿರತರಾಗಿರುವರು.

೨೪–೨೫. ಕೆಲವರು ಪರದಾರನಿರತರೂ, ಕೆಲವರು ವೃತ್ತಿಹಿಂಸಕರೂ ಆಗಿರುವರು. ಇನ್ನು ಕೆಲವರು ಪತ್ನಿಯೂ, ಪುತ್ರಭೃತ್ಯಾದಿಗಳೂ ಹಸಿವಿನಿಂದ ಪೀಡಿತರಾಗಿರುವಾಗ ತೀರ್ಥಯಾತ್ರೆಗೆ ಹೇಗೆ ಹೋಗಲಿ? ಎಂದು ಹೇಳುವರು. ಹೀಗೆ ದೇವತೆಗಳು ಅಲ್ಲಿಯ ನರರನ್ನು ಮೋಹಜಾಲಗಳಲ್ಲಿ ಸಿಲುಕಿಸುವರು.

೨೬. ಪಾಪಿಷ್ಠರಾದ ಮಾನವರು ಅಲ್ಲಿ ಸ್ನಾನಮಾಡುವುದಿಲ್ಲ. ಆ ತೀರ್ಥವನ್ನು ದೇವಭೃತ್ಯರು ಯಾವಾಗಲೂ ರಕ್ಷಿಸುವರು.

೨೭–೨೯. ಧನ್ಯರೂ, ಪುಣ್ಯಕರರೂ ಆದ ಮಾನವರಿಗೆ ಆ ತೀರ್ಥದ ಸ್ನಾನವು ಲಭಿಸುವುದಿಲ್ಲ. ತ್ರಿವೇಣೀಸಂಗಮದಂತೆ ಸರಸ್ವತೀ, ಭೋಗವತೀ, ದೇವನದಿಗಳ ಸಂಗಮವು ಪುಣ್ಯಕರವಾದುದು ಸಕಲ ದಿವಿಜರೂ ಆ ತೀರ್ಥವನ್ನು

**ಗುಹ್ಯಾದ್ಗುಹ್ಯತಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।**
**ಶೂಲಪಾಣಿಃ ಸಮಭ್ಯರ್ಚ್ಯ ಇಂದ್ರಾದ್ಯೈರಪ್ಸರೋಗಣೈಃ ॥ ೩೦ ॥**
**ಯಕ್ಷಕಿನ್ನರಗಂಧರ್ವೈರ್ದಿಕ್ಪಾಲೈರ್ಲೋಕಪೈರಪಿ ।**
**ನೃತ್ಯಗೀತೈಸ್ತಥಾ ಸ್ತೋತ್ರೈಃ ಸರ್ವೈಶ್ಚಾಪಿ ಸುರಾಸುರೈಃ ॥ ೩೧ ॥**
**ಪೂಜ್ಯಮಾನೋ ಗಣೈಃ ಸರ್ವೈಃ ಸಿದ್ಧೈರ್ನಾಗೈರ್ಮಹೇಶ್ವರಃ ।**
**ದೇವೇನ ಭೇದಿತಂ ತತ್ರ ಶೂಲಾಗ್ರೇಣ ನರಾಧಿಪ ॥ ೩೨ ॥**
**ತ್ರಿಧಾ ಯತ್ರೇಕ್ಷ್ಯತೇಽದ್ಯಾಪಿ ಹ್ಯಾವರ್ತಃ ಸುರಪೂರಿತಃ ।**
**ಕುಂಡತ್ರಯಂ ನರವ್ಯಾಘ್ರ ಮಹತ್ಕಲಕಲಾನ್ವಿತಂ ॥ ೩೩ ॥**
**ಸರ್ವಪಾಪಕ್ಷಯಕರಂ ಸರ್ವದುಃಖಘ್ನಮುತ್ತಮಂ ।**
**ತತ್ರ ತೀರ್ಥೇ ತು ಯಃ ಸ್ನಾತಿ ಉಪವಾಸಪರಾಯಣಃ ॥ ೩೪ ॥**
**ದೀಕ್ಷಾಮಂತ್ರವಿಹೀನೋಽಪಿ ಮುಚ್ಯತೇ ಚಾಬ್ದಿಕಾದಘಾತ್ ।**
**ಯೋ ಪುನರ್ವಿಧಿವತ್ ಸ್ನಾಂತಿ ಮಂತ್ರೈಃ ಪಂಚಭಿರೇವ ಚ ॥ ೩೫ ॥**
**ವೇದೋಕ್ತೈಃ ಪಂಚಭಿರ್ಮಂತ್ರೈಃ ಸಹಿರಣ್ಯಘಟೈಃ ಶುಭೈಃ ।**
**ಅಕ್ಷರೈರ್ದಶಭಿಶ್ಚೈವ ಷಡ್ಭಿರ್ವಾ ತ್ರಿಭಿರೇವ ವಾ ॥ ೩೬ ॥**
**ಪೃಥಗ್ಭೂತೈರ್ದ್ವಿಜಾತೀನಾಂ ತೀರ್ಥೇ ಕಾರ್ಯಂ ನರಾಧಿಪ ।**
**ಬ್ರಹ್ಮಕ್ಷತ್ರವಿಶಾಂ ವಾಽಪಿ ಸ್ತ್ರೀಶೂದ್ರಾಣಾಂ ತಥೈವ ಚ ॥ ೩೭ ॥**

---

ಕಂಡು ಸಂತೋಷದಿಂದ ಮಹೇಶ್ವರನ ಹತ್ತಿರದಲ್ಲಿಯೆ ಇದ್ದು ಹೀಗೆ ವರ್ಣಿಸಿದರು. "ಶಂಕರ! ನಿನ್ನೀತೀರ್ಥವು ಗಯಾತೀರ್ಥಕ್ಕೆ ಸಮಾನವಾದುದು. ಇಂತಹ ಗುಹ್ಯವಾದ ತೀರ್ಥವು ಹಿಂದೆ ಇರಲಿಲ್ಲ. ಮುಂದೆಯೂ ಇರುವುದಿಲ್ಲ." ಇಂತು ನುಡಿದು ಇಂದ್ರಾದಿಗಳೂ, ಅಪ್ಸರರೂ, ಯಕ್ಷಕಿನ್ನರಗಂಧರ್ವರೂ, ದಿಕ್ಪಾಲ ಲೋಕಪಾಲಕರೂ, ಸಮಸ್ತ ಗಣಗಳೂ, ಸಿದ್ಧರೂ, ನಾಗಗಳೂ ನೃತ್ಯಗೀತ ಸ್ತೋತ್ರಗಳಿಂದ ಶಂಕರನನ್ನು ಸ್ತುತಿಸಿದರು. ಆ ಶಂಕರನು ಶೂಲಾಗ್ರದಿಂದ ಅಲ್ಲಿ ಭೇದಿಸಿರುವನು.

೩೩–೩೯. ಅಲ್ಲಿ ಈಗಲೂ ಮೂರು ವಿಧವಾದ ಸುಳಿಯು ಕಾಣಿಸುವುದು. ನರೇಂದ್ರ! ಮಹಾಕಲಕಲಧ್ವನಿಯಿಂದ ಕೂಡಿದ ಆ ಮೂರು ಕುಂಡಗಳು, ಸಕಲಪಾಪಗಳನ್ನು ನಾಶಗೊಳಿಸುವುವೂ, ಸಮಸ್ತ ದುಃಖಗಳನ್ನು ನೀಗಿಸುವುವೂ ಆಗಿರುವುವು. ಉಪವಾಸನಿರತನಾಗಿ ಆ ತೀರ್ಥದಲ್ಲಿ ಮಿಂದವನು ದೀಕ್ಷಾಮಂತ್ರ ವಿಲ್ಲದವನಾದರೂ ಒಂದು ವರ್ಷದ ಪಾಪದಿಂದ ಮುಕ್ತನಾಗುವನು. ಮಾನವರು ಬ್ರಹ್ಮಕ್ಷತ್ರಿಯ, ವೈಶ್ಯ, ಸ್ತ್ರೀ ಶೂದ್ರರಿಗೆ ಪ್ರತ್ಯೇಕ ವಿಹಿತವಾಗಿರುವ ವೇದೋಕ್ತ ಪಂಚಮಂತ್ರಗಳಿಂದಲೂ, ಹಿರಣ್ಯಘಟಸಹಿತವಾದ ಶುಭಕರವಾದ ಪಂಚ ಮಂತ್ರಗಳಿಂದಲೂ, ದಶಾಕ್ಷರ, ಷಡಕ್ಷರ, ತ್ರ್ಯಕ್ಷರ ಮಂತ್ರಗಳಿಂದಲೂ

ಪುರುಷಾಣಾಂ ತ್ರಯೀಣಾಂ ಧ್ಯಾತ್ವಾ ಸ್ನಾನಂ ಕುರ್ಯಾದ್ಯಥಾವಿಧಿ ।
ದಶಾಕ್ಷರೇಣ ಮಂತ್ರೇಣ ಽಪೋ ಪಿಬಂತಿ ಜಲಂ ನರಾಃ ॥ ೩೮ ॥
ತೇ ಗಚ್ಛಂತಿ ಪರಂ ಲೋಕಂ ಯತ್ರ ದೇವೋ ಮಹೇಶ್ವರಃ ।
ಕೇದಾರೇ ಚ ಯಥಾ ಪೀತಂ ರುದ್ರಕುಂಡೇ ತಥೈವ ಚ ॥ ೩೯ ॥
ಪಂಚರೇಫಸಮಾಯುಕ್ತಂ ಕ್ಷಕಾರಂ ಸುರಪೂಜಿತಂ ।
ಓಂಕಾರೇಣ ಸಮಾಯುಕ್ತಮೇತದ್ವೇದ್ಯಂ ಪ್ರಕೀರ್ತಿತಂ ॥ ೪೦ ॥
ಯಸ್ತತ್ರ ಕುರುತೇ ಸ್ನಾನಂ ವಿಧಿಯುಕ್ತೋ ಜಿತೇಂದ್ರಿಯಃ ।
ತಿಲಮಿಶ್ರೇಣ ತೋಯೇನ ತರ್ಪಯೇತ್ಪಿತೃದೇವತಾಃ ॥ ೪೧ ॥
ಕುಲಾನಾಂ ತಾರಯೇದ್ವಿಂಶಂ ದಶಪೂರ್ವಾನ್ದಶಾಪರಾನ್ ।
ಗಯಾದಿಪಂಚಸ್ಥಾನೇಷು ಯಃ ಶ್ರಾದ್ಧಂ ಕುರುತೇ ನರಃ ॥ ೪೨ ॥
ಸ ತತ್ರ ಫಲಮಾಪ್ನೋತಿ ಶೂಲಭೇದೇ ನ ಸಂಶಯಃ ।
ಯಸ್ತತ್ರ ವಿಧಿನಾ ಯುಕ್ತೋ ದದ್ಯಾದ್ದಾನಾನಿ ಭಕ್ತಿತಃ ॥ ೪೩ ॥
ತದಕ್ಷಯಂ ಫಲಂ ತತ್ರ ಸುಕೃತಂ ದುಷ್ಕೃತಂ ತಥಾ ।
ಗಯಾಶಿರೋ ಯಥಾ ಪುಣ್ಯಂ ಪಿತೃಕಾರ್ಯೇಷು ಸರ್ವದಾ ॥ ೪೪ ॥
ಶೂಲಭೇದಂ ತಥಾ ಪುಣ್ಯಂ ಸ್ನಾನದಾನಾದಿ ತರ್ಪಣೈಃ ।
ಭಕ್ತ್ಯಾ ದದಾತಿ ಯಸ್ತತ್ರ ಕಾಂಚನಂ ಗಾಂ ಮಹೀಂ ತಿಲಾನ್ ॥ ೪೫ ॥
ಆಸನೋಪಾನಹೌ ಯುಗ್ಮಂ ಶಯ್ಯಾಂ ವರಾಶ್ವತ್ರಿತಯಸ್ತಥಾ ।
ವಸ್ತ್ರಯುಗ್ಮಂ ಚ ಧಾನ್ಯಂ ಚ ಗೃಹಂ ಪೂರ್ಣಂ ಪ್ರಯತ್ನತಃ ॥ ೪೬ ॥

---

ಆ ತೀರ್ಥದಲ್ಲಿ ವಿಧಿಯಂತೆ ಸ್ನಾನಮಾಡಬೇಕು. ದಶಾಕ್ಷರಮಂತ್ರದಿಂದ ಆ ಕುಂಡದ ನೀರನ್ನು ಕುಡಿದ ಮಾನವರು ಕೇದಾರ, ರುದ್ರಕುಂಡಗಳಲ್ಲಿ ಜಲಪಾನ ಮಾಡಿದವರಂತೆ ಮಹೇಶ್ವರನ ಲೋಕವನ್ನು ಸೇರುವರು.

೪೦. ಐದುರೇಫಗಳಿಂದ ಕೂಡಿರುವುದೂ, ದೇವಪೂಜಿತವೂ, ಓಂಕಾರದಿಂದ ಸಹಿತವಾಗಿರುವುದೂ ಆದ ಈ ಕ್ಷಕಾರವನ್ನು ತಿಳಿದುಕೊಳ್ಳಬೇಕು.

೪೧–೪೬. ಅಲ್ಲಿ ವಿಧಿಯಿಂದ ಜಿತೇಂದ್ರಿಯನಾಗಿ ಮಿಂದು ಪಿತೃದೇವತೆಗಳಿಗೆ ತಿಲತರ್ಪಣಮಾಡಿದವನು ಹಿಂದಿನ ಮತ್ತು ಮುಂದಿನ ಹತ್ತು ತಲೆಯ ಪಿತೃಗಳನ್ನು ಉದ್ಧರಿಸುವನು. ಶೂಲಭೇದದಲ್ಲಿ ಶ್ರಾದ್ಧಮಾಡಿದವನಿಗೆ ಗಯಾದಿ ಪಂಚಸ್ಥಾನಗಳಲ್ಲಿ ಶ್ರಾದ್ಧಮಾಡಿದ ಫಲವು ದೊರೆಯುವುದು. ಅಲ್ಲಿ ವಿಧ್ಯುಕ್ತವಾಗಿ ಭಕ್ತಿಯಿಂದ ದಾನಮಾಡಿದರೆ ಅಕ್ಷಯ ಪುಣ್ಯಫಲವುಂಟಾಗುವುದು. ಅಲ್ಲಿ ಮಾಡಿದ ಪಾಪವೂ ಅಕ್ಷಯವಾಗುವುದು. ಪಿತೃಕಾರ್ಯಗಳಲ್ಲಿ ಗಯೆಯು ಹೇಗೆ ಪುಣ್ಯಕರವೋ, ಶೂಲಭೇದವೂ ಹಾಗೆಯೇ ಸ್ನಾನ, ದಾನ, ತರ್ಪಣಾದಿಗಳಿಂದ ಪುಣ್ಯಕರವಾಗಿರುವುದು. ಅಲ್ಲಿ ಕ್ಷತ್ರಿಯನು ಭಕ್ತಿಯಿಂದ ಸುವರ್ಣ,

**ಸಯೋಕ್ತ್ರಂ ಲಾಂಗಲಂ ದದ್ಯಾತ್ಪೃಷ್ಟಾಂ ಚೈವ ವಸುಂಧರಾಂ ।**
**ದಾನಾನ್ಯೇತಾನಿ ಯೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ॥ ೪೭ ॥**
**ಶ್ರೋತ್ರಿಯೇ ಕುಲಸಂಪನ್ನೇ ಶುಚಿಷ್ಮತಿ ಜಿತೇಂದ್ರಿಯೇ ।**
**ಶ್ರುತಾಽಧ್ಯಯನಸಂಪನ್ನೇ ದಂಭಹೀನೇ ಕ್ರಿಯಾನ್ವಿತೇ ।**
**ತ್ರಯೋ ದಶಾಽಹಃ ಸ್ವೇಕೈಕಂ ತ್ರಯೋದಶ ಗುಣಂ ಭವೇತ್ ॥ ೪೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ "ಶೂಲಭೇದೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮೈಕೋನಪಂಚಾಶತ್ತಮೋಽಧ್ಯಾಯಃ**

---

ಗೋವು, ಭೂಮಿ, ಎಳ್ಳು, ಆಸನ, ಪಾದರಕ್ಷೆ, ಶಯ್ಯೆ, ಉತ್ತಮವಾದ ಕುದುರೆಗಳು, ಜೋಡಿ ವಸ್ತ್ರ, ಧಾನ್ಯ, ತುಂಬಿದಮನೆ, ಕಟ್ಟುಮಣಿಯಿಂದ ಸಹಿತವಾದ ನೇಗಿಲು, ಉತ್ತ ಭೂಮಿ ಈ ಪದಿಮೂರು ದಾನಗಳನ್ನು ಹದಿಮೂರುದಿನ ವೇದಪಾರಂಗತನೂ, ಶ್ರೋತ್ರಿಯನೂ, ಕುಲೀನನೂ, ಶುದ್ಧನೂ, ಜಿತೇಂದ್ರಿಯನೂ, ಶಾಸ್ತ್ರನಿಷ್ಣಾತನೂ, ದಂಭವಿಲ್ಲದವನೂ, ಕ್ರಿಯಾನಿಷ್ಠನೂ ಆದ ಬ್ರಾಹ್ಮಣನಿಗೆ ದಾನಮಾಡಿದರೆ ಆ ದಾನವು ಹದಿಮೂರು ಮಡಿಯಷ್ಟು ಹೆಚ್ಚಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ "ಶೂಲಭೇದೋತ್ಪತ್ತಿಮಹಾತ್ಮ್ಯವರ್ಣನ"ವೆಂಬ ನಲವತ್ತೊಂಬತ್ತನೆ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಾಶತ್ತಮೋಽಧ್ಯಾಯಃ

## ಪಾತ್ರಾಽಪಾತ್ರಪರೀಕ್ಷಾದಿವರ್ಣನಂ

ಉತ್ತಾನಪಾದ ಉವಾಚ :—

ದ್ವಿಜಾಶ್ಚ ಕೀದೃಶಾಃ ಪೂಜ್ಯಾ ಅಪೂಜ್ಯಾಃ ಕೀದೃಶಾಃ ಸ್ಮೃತಾಃ ।
ಶ್ರಾದ್ಧೇ ವೈವಾಹಿಕೇ ಕಾರ್ಯೇ ದಾನೇ ಚೈವ ವಿಶೇಷತಃ ॥ ೧ ॥
ಯದಿ ಶ್ರದ್ಧಾ ಭವೇದ್ದೈವಯೋಗಾಚ್ಛ್ರಾದ್ಧಾದಿಕೇ ವಿಧೌ ।
ಏತದಾಖ್ಯಾಹಿ ಮೇ ದೇವ ಕಸ್ಯ ದಾನಂ ನ ದೀಯತೇ ॥ ೨ ॥

ಈಶ್ವರ ಉವಾಚ :—

ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ ।
ಬ್ರಾಹ್ಮಣಶ್ಚಾಽನಧೀಯಾನಸ್ತ್ರಯಸ್ತೇ ನಾಮಧಾರಕಾಃ ॥ ೩ ॥
ಯಥಾ ಷಂಢೋಽಫಲಃ ಸ್ತ್ರೀಷು ಯಥಾ ಗೌರ್ಗವಿ ಚಾಽಫಲಾ ।
ಯಥಾ ಚಾಽಜ್ಞೇಽಫಲಂ ದಾನಂ ತಥಾ ವಿಪ್ರೋಽನೃಚೋಽಫಲಃ ॥ ೪ ॥
ಯಥಾಽನೃಣೇ ಬೀಜಮುಪ್ತ್ವಾ ವಪ್ತಾ ನ ಲಭತೇ ಫಲಂ ।
ತಥಾಽನೃತೇ ಹವಿರ್ದತ್ವಾ ನ ದಾತಾ ಲಭತೇ ಫಲಂ ॥ ೫ ॥

---

## ಕನ್ನಡದ ಅನುವಾದ

### ಪಾತ್ರಾಪಾತ್ರಪರೀಕ್ಷಾದಿವರ್ಣನ

೧. ಉತ್ತಾನಪಾದನು ಹೇಳುತ್ತಾನೆ:—ಶ್ರಾದ್ಧ, ವಿವಾಹ, ದಾನ ಇವುಗಳಲ್ಲಿ ಎಂತಹ ಬ್ರಾಹ್ಮಣರು ಪೂಜಾರ್ಹರು ? ಎಂತಹವರು ಅಪೂಜ್ಯರು.

೨. ಅದೃಷ್ಟವಶದಿಂದ ಶ್ರಾದ್ಧಾದಿಗಳಲ್ಲಿ ಶ್ರದ್ಧೆಯುಂಟಾದರೆ ಯಾರಿಗೆ ದಾನ ಕೊಡಬಾರದು ? ಇದನ್ನು ನನಗೆ ಹೇಳು.

೩. ಈಶ್ವರನು ಹೇಳುತ್ತಾನೆ:—ವೇದಾಧ್ಯಯನ ಮಾಡದ ಬ್ರಾಹ್ಮಣನು ಕಟ್ಟಿಗೆಯಿಂದಮಾಡಿದ ಆನೆಯಂತೆಯೂ, ಚರ್ಮದ ಜಿಂಕೆಯಂತೆಯೂ ಹೆಸರನ್ನು ಮಾತ್ರ ಹೊಂದಿರುವನು.

೪. ನಪುಂಸಕನು ಸ್ತ್ರೀಯರಲ್ಲಿ ನಿಷ್ಫಲನಾಗುವಂತೆಯೂ, ಗೋವಿನಲ್ಲಿ ಬಂಜೆಯಾದ ಗೋವು ನಿಷ್ಫಲವಾಗುವಂತೆಯೂ, ಮೂಢನಲ್ಲಿ ದಾನವು ನಿಷ್ಫಲವಾಗುವಂತೆಯೂ, ವೇದಾಧ್ಯಯನಮಾಡದವ ಬ್ರಾಹ್ಮಣನು ನಿಷ್ಫಲನು.

೫. ಜಲವಿಲ್ಲದಸ್ಥಳದಲ್ಲಿ ಬೀಜವನ್ನು ನೆಟ್ಟವನು ಫಲವನ್ನು ಪಡೆಯದಿರುವಂತೆ ವೇದಾಧ್ಯಯನಮಾಡದವನಲ್ಲಿ ದಾನಮಾಡಿದವನು ಫಲವನ್ನು ಹೊಂದುವುದಿಲ್ಲ.

ರೋಗೀ ಹೀನಾಽತಿರಿಕ್ತಾಂಗಃ ಕಾಣಃ ಪೌನರ್ಭವಸ್ತಥಾ ।
ಅವಕೀರ್ಣೀ ಶ್ಯಾವದಂತಃ ಸರ್ವಾಽಶೀ ವೃಷಲೀಪತಿಃ ॥ ೬ ॥
ಮಿತ್ರಧ್ರುಕ್ಪಿಶುನಃ ಸೋಮವಿಕ್ರಯಿೂ ಪರನಿಂದಕಃ ।
ಪಿತೃಮಾತೃ ಗುರುತ್ಯಾಗೀ ನಿತ್ಯಂ ಬ್ರಾಹ್ಮಣ ನಿಂದಕಃ ॥ ೭ ॥
ಶೂದ್ರಾನ್ನಂ ಮಂತ್ರಸಂಯುಕ್ತಂ ಯೋ ವಿಪ್ರೋ ಭಕ್ಷಯೇನ್ನೃಪ ।
ಸೋಽಸ್ಪೃಶ್ಯಃ ಕರ್ಮಚಾಂಡಾಲಃ ಸ್ಪೃಷ್ಟ್ವಾ ಸ್ನಾನಂ ಸಮಾಚರೇತ್ ॥೮॥
ಕುನಖೀ ವೃಷಲೀ ಸ್ತೇಯಿೂ ವಾರ್ಧುಷ್ಯಃ ಕುಂಡಗೋಲಕೌ ।
ಮಹಾದಾನರತೋ ಯಾಶ್ಚ ಯಶ್ಚಾತ್ಮಹನನೇ ರತಃ ॥ ೯ ॥
ಭೃತಕಾಽಧ್ಯಾಪಕಃ ಕ್ಲೀಬಃ ಕನ್ಯಾದೂಷೋಽಭಿಶಸ್ತಕಃ ।
ಏತೇ ವಿಪ್ರಾಃ ಸದಾ ತ್ಯಾಜ್ಯಾಃ ಪರಿಭಾವ್ಯ ಪ್ರಯತ್ನತಃ ॥ ೧೦ ॥
ಪ್ರತಿಗ್ರಹಂ ಗೃಹೀತ್ವಾ ತು ವಾಣಿಜ್ಯಂ ಯಸ್ತು ಕಾರಯೇತ್ ।
ತಸ್ಯ ದಾನಂ ನ ದಾತವ್ಯಂ ವೃಥಾ ಭವತಿ ತಸ್ಯ ತತ್ ॥ ೧೧ ॥
ಶ್ರುತಾಽಧ್ಯಯನಸಂಪನ್ನಾ ಯೇ ದ್ವಿಜಾ ವೃತ್ತತತ್ಪರಾಃ ।
ತೇಷಾಂ ಯದ್ದೀಯತೇ ದಾನಂ ಸರ್ವಮಕ್ಷಯತಾಂ ವ್ರಜೇತ್ ॥ ೧೨ ॥

---

೬—೭. ರೋಗಿಯು, ಅಂಗವಿಕಲನು, ಕುರುಡನು, ಪುನರ್ವಿವಾಹಮಾಡಿಕೊಂಡವಳ ಮಗನು, ನಷ್ಟವ್ರತನು, ಹುಳುಕುಹಲ್ಲಿನವನು, ಎಲ್ಲವನ್ನೂ ತಿನ್ನುವವನು, ಶೂದ್ರಳಪತಿಯು, ಮಿತ್ರದ್ರೋಹಿಯು, ಚಾಡಿಹೇಳುವವನೂ, ಸೋಮವನ್ನು ಮಾರುವವನು, ಪರರನ್ನು ನಿಂದಿಸುವವನು, ತಾಯಿ, ತಂದೆ, ಗುರುಗಳನ್ನು ತ್ಯಜಿಸಿದವನು, ಯಾವಾಗಲೂ ಬ್ರಾಹ್ಮಣರನ್ನು ನಿಂದಿಸುವವನು ಇಂತಹ ಬ್ರಾಹ್ಮಣರನ್ನು ತ್ಯಜಿಸಬೇಕು.

೮. ಮಂತ್ರಸಹಿತನಾಗಿ ಶೂದ್ರಾನ್ನವನ್ನು ಭಕ್ಷಿಸುವ ವಿಪ್ರನು ಕರ್ಮಚಂಡಾಲನು. ಅಸ್ಪೃಶ್ಯನಾದ ಅವನನ್ನು ಮುಟ್ಟಿದರೆ ಸ್ನಾನಮಾಡಬೇಕು.

೯—೧೦. ಕೊಳೆತ ಉಗುರುಳ್ಳವನೂ, ಶೂದ್ರಸ್ತ್ರೀಯಪತಿಯೂ, ಕಳ್ಳನೂ, ಬಡ್ಡಿಯಿಂದ ಜೀವಿಸುವವನೂ, ವ್ಯಭಿಚಾರಿಣಿಯಮಗನೂ, ಗೋಳಕನೂ, ಮಹಾದಾನನಿರತನೂ, ಆತ್ಮಹತ್ಯೆಯಲ್ಲಿ ಆಸಕ್ತನೂ, ಸಂಬಳದಿಂದ ಪಾಠಪ್ರವಚನಮಾಡುವವನೂ, ನಪುಂಸಕನೂ, ಕನ್ಯೆಯನ್ನು ಕೆಡಿಸುವವನೂ, ಬ್ರಹ್ಮಹತ್ಯೆಮಾಡಿದವನೂ ಆದ ಬ್ರಾಹ್ಮಣನನ್ನು ವಿಚಾರಿಸಿ ತ್ಯಜಿಸಬೇಕು.

೧೧. ದಾನವನ್ನು ತೆಗೆದುಕೊಂಡು ವಾಣಿಜ್ಯವನ್ನು ಮಾಡುವವನಿಗೆ ದಾನವನ್ನು ಕೊಡಬಾರದು. ಅವನಿಗೆ ಕೊಟ್ಟ ದಾನವು ನಿಷ್ಫಲವಾಗುವುದು.

೧೨. ಶಾಸ್ತ್ರಾಧ್ಯಯನನಿರತರೂ, ಒಳ್ಳೆಯ ನಡತೆಯುಳ್ಳವರೂ ಆದ ಬ್ರಾಹ್ಮಣರಿಗಿತ್ತ ದಾನವು ಅಕ್ಷಯವಾಗುವುದು.

**ದರಿದ್ರಾನ್ಭರ ಭೂಪಾಲ ಮಾ ಸಮೃದ್ಧಾನ್ಕದಾಚನ ।**
**ವ್ಯಾಧಿತಸ್ಯೌಷಧಂ ಪಥ್ಯಂ ನೀರುಜಸ್ಯ ಕಿಮೌಷಧೈಃ ॥ ೧೩ ॥**

**ಉತ್ತಾನಪಾದ ಉವಾಚ :—**

**ಕೀದೃಶೋಽಥ ವಿಧಿಸ್ತತ್ರ ತೀರ್ಥಶ್ರಾದ್ಧಸ್ಯ ಕಾ ಕ್ರಿಯಾ ।**
**ದಾನಂ ಚ ದೀಯತೇ ಯದ್ವತ್ತನ್ಮಮಾಖ್ಯಾಹಿ ಶಂಕರ ॥ ೧೪ ॥**

**ಈಶ್ವರ ಉವಾಚ :—**

**ಶ್ರಾದ್ಧಂ ಕೃತ್ವಾ ಗೃಹೇ ಭಕ್ತ್ಯಾ ಶುಚಿಶ್ಚಾಽಪಿ ಜಿತೇಂದ್ರಿಯಃ ।**
**ಗುರುಂ ಪ್ರದಕ್ಷಿಣೀಕೃತ್ಯ ಭೋಜ್ಯ ಸೀಮಂತಕೇ ತತಃ ॥ ೧೫ ॥**
**ವಾಗ್ಯತಃ ಪ್ರವ್ರಜೇತ್ತಾವದ್ಯಾವತ್ಸೀಮಾಂ ನ ಲಂಘಯೇತ್ ।**
**ಶೂಲಭೇದಂ ತತೋ ಗತ್ವಾ ಸ್ನಾನಂ ಕುರ್ಯಾದ್ಯಥಾವಿಧಿ ॥ ೧೬ ॥**
**ಪಂಚಸ್ಥಾನೇಷು ಚ ಶ್ರಾದ್ಧಂ ಹವ್ಯಕವ್ಯಾದಿಭಿಃ ಕ್ರಮಾತ್ ।**
**ಪಿಂಡದಾನಂ ಚ ಯಃ ಕುರ್ಯಾತ್ಪಾಯಸೈರ್ಮಧುಸರ್ಪಿಷಾ ॥ ೧೭ ॥**
**ಪಿತರಸ್ತಸ್ಯ ತೃಪ್ಯಂತಿ ದ್ವಾದಶಾಬ್ದಾನಿ ಪಂಚ ಚ ।**
**ಅಕ್ಷತೈರ್ಬದರೈರ್ಬಿಲ್ವೈರಿಂಗುದೈರ್ಮಧುಸರ್ಪಿಷಾ ॥ ೧೮ ॥**

---

೧೩. ದೊರೆಯೆ! ಬಡವರನ್ನು ಕಾಪಾಡು. ಐಶ್ವರ್ಯವಂತರನ್ನು ಯಾವಾಗಲೂ ಕಾಪಾಡಬೇಡ. ಕಾಯಿಲೆಯವನಿಗೆ ಔಷಧವು ಹಿತವಾಗುವುದು. ಕಾಯಿಲೆಯಿಲ್ಲದವನಿಗೆ ಔಷಧದಿಂದೇನು ಪ್ರಯೋಜನ?

೧೪. ಉತ್ತಾನಪಾದನು ಕೇಳುತ್ತಾನೆ:—ತೀರ್ಥಶ್ರಾದ್ಧದ ವಿಧಿಯಾವುದು? ಅದನ್ನು ಹೇಗೆ ಮಾಡಬೇಕು? ದಾನವನ್ನು ಹೇಗೆ ಕೊಡಬೇಕು? ಶಂಕರ! ಅದನ್ನು ನನಗೆ ಹೇಳು.

೧೫–೧೬. ಈಶ್ವರನು ಹೇಳುತ್ತಾನೆ:—ಮನೆಯಲ್ಲಿ ಶುದ್ಧನೂ, ಜಿತೇಂದ್ರಿಯನೂ ಆಗಿ ಭಕ್ತಿಯಿಂದ ಶ್ರಾದ್ಧಮಾಡಿ ಗುರುವನ್ನು ಭೋಜನಮಾಡಿಸಿ ಪ್ರದಕ್ಷಿಣೆಮಾಡಿ ಎಲ್ಲೆಯವರೆಗೆ ಮೌನದಿಂದ ಅವನನ್ನು ಹಿಂಬಾಲಿಸಬೇಕು. ಎಲ್ಲೆಯನ್ನು ಮೀರಬಾರದು. ಅನಂತರ ಶೂಲಭೇದ ಕುಂಡದಲ್ಲಿ ವಿಧಿಯಂತೆ ಸ್ನಾನಮಾಡಬೇಕು.

೧೭–೨೪. ಪಂಚಸ್ಥಾನಗಳಲ್ಲಿ ಹವ್ಯಕವ್ಯಾದಿಗಳಿಂದ ಶ್ರಾದ್ಧಮಾಡಿ ಪಾಯಸ, ಜೇನು, ಆಜ್ಯ ಇವುಗಳಿಂದ ಪಿಂಡಪ್ರದಾನಮಾಡಿದವನ ಪಿತೃಗಳು ಹದಿನೈದುವರ್ಷಗಳಕಾಲ ತೃಪ್ತಿಗೊಳ್ಳುವರು. ಈ ತೀರ್ಥದಲ್ಲಿ ಕೆಡದ ಎಳಚೆಯ ಹಣ್ಣು, ಬಿಲ್ವಫಲ, ಇಂಗಳದ ಹಣ್ಣು, ಜೇನು, ಘೃತಗಳಿಂದ ಶ್ರಾದ್ಧಮಾಡಿದವನೂ ಆ ಫಲವನ್ನು ಪಡೆಯುವನು. ಬ್ರಾಹ್ಮಣರಿಗೆ ಈ ತೀರ್ಥದಲ್ಲಿ ಪಾದರಕ್ಷೆಗಳನ್ನು ದಾನಮಾಡಿದವನು ಕುದುರೆಯನ್ನೇರಿ ಸ್ವರ್ಗಕ್ಕೆ ತೆರಳುವನು.

**ಸೋಽಪಿ ತತ್ಫಲಮಾಪ್ನೋತಿ ತೀರ್ಥೇಽಸ್ಮಿನ್ನಾತ್ರ ಸಂಶಯಃ ।**
**ಉಪಾನಹೌ ಚ ಯೋ ದದ್ಯಾದ್ಬ್ರಾಹ್ಮಣೇಭ್ಯಃ ಪ್ರಯತ್ನತಃ ॥ ೧೯ ॥**
**ಸೋಽಪಿ ಸ್ವರ್ಗಮವಾಪ್ನೋತಿ ಹಯಾರೂಢೋ ನ ಸಂಶಯಃ ।**
**ಶಯ್ಯಾಮಶ್ವಂ ಚ ಯೋ ದದ್ಯಾಚ್ಛತ್ರಿಕಾಂ ವಾ ವಿಶೇಷತಃ ॥ ೨೦ ॥**
**ಗಚ್ಛೇದ್ವಿಮಾನಮಾರೂಢಃ ಸೋಽಪ್ಸರೋವೃಂದವೇಷ್ಟಿತಃ ।**
**ಉತ್ತಮಂ ಯೋ ಗೃಹಂ ದದ್ಯಾತ್ಸಪ್ತಧಾನ್ಯಸಮನ್ವಿತಂ ॥ ೨೧ ॥**
**ಸ್ವೇಚ್ಛಯಾ ಮೇ ವಸೇಲ್ಲೋಕೇ ಕಾಂಚನೇ ಭವನೇ ಹಿ ಸಃ ।**
**ತಿಲಧೇನುಂ ಚ ಯೋ ದದ್ಯಾತ್ಸವತ್ಸಾಂ ವಸ್ತ್ರಸಂಪ್ಲುತಾಂ ॥ ೨೨ ॥**
**ನಾಕಪೃಷ್ಠೇ ವಸೇತ್ತಾವದ್ಯಾವದಾಭೂತಸಂಪ್ಲವಂ ।**
**ಗೃಹೇ ವಾ ಯದಿ ವಾಽರಣ್ಯೇ ತೀರ್ಥವರ್ತ್ಮನಿ ವಾ ನೃಪ ॥ ೨೩ ॥**
**ತೋಯಮನ್ನಂ ಚ ಯೋ ದದ್ಯಾದ್ಯಮಲೋಕಂ ಸ ನೇಕ್ಷತೇ ।**
**ಸರ್ವದಾನಾನಿ ದೀಯಂತೇ ತೇಷಾಂ ಫಲಮವಾಪ್ಯತೇ ॥ ೨೪ ॥**
**ಉದಕಂ ಚಾಽನ್ನದಾನಂ ಚ ದದ್ಯಾದಭಯಮೇವ ಚ ।**
**ಅನ್ನದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ॥ ೨೫ ॥**
**ಕನ್ಯಾದಾನಂ ತು ಯಃ ಕುರ್ಯಾದ್ವೃಷಂ ವಾ ಯಃ ಸಮುತ್ಸೃಜೇತ್ ।**
**ತಸ್ಯ ವಾಸೋ ಭವೇತ್ತತ್ರ ಯತ್ರಾಽಹಮಿತಿ ನಾಽನ್ಯಥಾ ॥ ೨೬ ॥**

---

ಹಾಸಿಗೆ, ಕುದುರೆ, ಕೊಡೆಯನ್ನು ದಾನಮಾಡಿದವನು ಅಪ್ಸರೆಯರೊಡನೆ ವಿಮಾನವನ್ನೇರಿ ಸ್ವರ್ಗಲೋಕಕ್ಕೆ ಹೋಗುವನು. ಸಪ್ತಧಾನ್ಯಗಳೊಡನೆ ಉತ್ತಮಗೃಹವನ್ನು ದಾನಮಾಡಿದವನು ಸ್ವೇಚ್ಛೆಯಾಗಿ ನನ್ನ ಲೋಕದಲ್ಲಿ ಸುವರ್ಣಭವನದಲ್ಲಿ ವಾಸಿಸುವನು. ಕರುವಿನಿಂದ ಸಹಿತವಾದ ತಿಲಧೇನುವನ್ನು, ವಸ್ತ್ರವನ್ನು ಹೊದಿಸಿ ಪಾನಮಾಡಿದವನು ಪ್ರಳಯಕಾಲದವರೆಗೆ ದೇವಲೋಕದಲ್ಲಿ ವಾಸಮಾಡುವನು. ಮನೆಯಲ್ಲಾಗಲಿ, ಕಾಡಿನಲ್ಲಾಗಲಿ, ತೀರ್ಥದ ದಾರಿಯಲ್ಲಾಗಲಿ, ನೀರು, ಅನ್ನಗಳನ್ನು ದಾನಮಾಡಿದವನು ಯಮಲೋಕವನ್ನು ಕಾಣುವುದಿಲ್ಲ. ಮತ್ತು ಸಕಲದಾನಗಳನ್ನುಮಾಡಿದ ಫಲವನ್ನೂ ಪಡೆಯುವನು.

೨೫. ಅಲ್ಲಿ ನೀರು, ಅನ್ನದಾನಗಳನ್ನೂ, ಅಭಯದಾನವನ್ನೂ ಮಾಡಬೇಕು. ಅನ್ನದಾನಕ್ಕಿಂತ ಉತ್ತಮವಾದ ದಾನವು ಹಿಂದೆ ಇರಲಿಲ್ಲ. ಮುಂದೆಯೂ ಇರುವುದಿಲ್ಲ.

೨೬. ಅಲ್ಲಿ ಕನ್ಯಾದಾನಮಾಡಿದವನೂ, ವೃಷೋತ್ಸರ್ಗಮಾಡಿದವನೂ ನನ್ನ ಲೋಕದಲ್ಲಿ ವಾಸಿಸುವನು.

ಉತ್ತಾನಪಾದ ಉವಾಚ :—

ಕನ್ಯಾದಾನಂ ಕಥಂ ಸ್ವಾಮಿನ್ಕರ್ತವ್ಯಂ ಧಾರ್ಮಿಕೈಃ ಸದಾ ।
ಪರಿಗ್ರಹೋ ಯಥಾ ಪೋಷ್ಯಃ ಕನ್ಯೋದ್ವಾಹಸ್ತಥೈವ ಚ ॥ ೨೭ ॥
ಅನ್ಯತ್ಪೃಚ್ಛಾಮಿ ದೇವೇಶ ಕಸ್ಯ ಕನ್ಯಾ ನ ದೀಯತೇ ।
ದಾತವ್ಯಂ ಕುತ್ರ ತದ್ದೇವ ಕಸ್ಮೈ ದತ್ತಮಥಾಽಕ್ಷಯಂ ॥ ೨೮ ॥
ಉತ್ತಮಂ ಮಧ್ಯಮಂ ವಾಽಪಿ ಕನೀಯಃ ಸ್ಯಾತ್ಕಥಂ ವಿಭೋ ।
ರಾಜಸಂ ತಾಮಸಂ ವಾಽಪಿ ನಿಃಶ್ರೇಯಸಮಥಾಽಪಿ ವಾ ॥ ೨೯ ॥

ಈಶ್ವರ ಉವಾಚ :—

ಸರ್ವೇಷಾಮೇವ ದಾನಾನಾಂ ಕನ್ಯಾದಾನಂ ವಿಶಿಷ್ಯತೇ ।
ಯೋ ದದ್ಯಾತ್ಪರಯಾ ಭಕ್ತ್ಯಾಽಭಿಗಮ್ಯ ತನಯಾಂ ನಿಜಾಂ ॥ ೩೦ ॥
ಕುಲೀನಾಯ ಸುರೂಪಾಯ ಗುಣಜ್ಞಾಯ ಮನೀಷಿಣೇ ।
ಸುಲಗ್ನೇ ಸುಮುಹೂರ್ತೇ ಚ ದದ್ಯಾತ್ಕನ್ಯಾಮಲಂಕೃತಾಂ ॥ ೩೧ ॥
ಅಶ್ವಾನ್ನಾಗಾಂಶ್ಚ ವಾಸಾಂಸಿ ಯೋಽತ್ರ ದದ್ಯಾತ್ಸ್ವಶಕ್ತಿತಃ ।
ತಸ್ಯ ವಾಸೋ ಭವೇತ್ತತ್ರ ಪದಂ ಯತ್ರ ನಿರಾಮಯಂ ॥ ೩೨ ॥
ಯೇನಾಽತ್ರ ದುಹಿತಾ ದತ್ತಾ ಪ್ರಾಣೇಭ್ಯೋಽಪಿ ಗರೀಯಸೀ ।
ತೇನ ಸರ್ವಮಿದಂ ದತ್ತಂ ತ್ರೈಲೋಕ್ಯಂ ಸ ಚರಾಚರಂ ॥ ೩೩ ॥

---

೨೭. ಉತ್ತಾನಪಾದನು ಹೇಳುತ್ತಾನೆ:—ಸ್ವಾಮಿ! ಧಾರ್ಮಿಕರು ಕನ್ಯೆಯನ್ನು ಹೇಗೆ ದಾನಮಾಡಬೇಕು? ಪತ್ನಿಯನ್ನು ಹೇಗೆ ಪೋಷಣೆಮಾಡಬೇಕು? ವಿವಾಹವನ್ನು ಮಾಡುವ ಬಗೆ ಹೇಗೆ?

೨೮. ದೇವೇಶ! ಮತ್ತೊಂದನ್ನು ಕೇಳುತ್ತೇನೆ. ಯಾರಿಗೆ ಕನ್ಯೆಯನ್ನು ಕೊಡಬಾರದು? ಯಾರಿಗೆ ಕೊಡಬೇಕು? ಯಾರಿಗೆ ಕೊಟ್ಟರೆ ಅದರ ಪುಣ್ಯವು ಅಕ್ಷಯವಾಗುವುದು?

೨೯. ಉತ್ತಮ, ಮಧ್ಯಮ, ಅಧಮ, ರಾಜಸ, ತಾಮಸ, ಸಾತ್ವಿಕ ಕನ್ಯಾದಾನಗಳು ಹೇಗಾಗುವುವು?

೩೦–೩೨. ಈಶ್ವರನು ಹೇಳುತ್ತಾನೆ:—ಸಮಸ್ತ ದಾನಗಳಲ್ಲಿಯೂ ಕನ್ಯಾದಾನವು ಉತ್ತಮವಾದುದು. ತನ್ನ ಮಗಳನ್ನು ಕುಲೀನನೂ, ಸುಂದರನೂ, ಗುಣಜ್ಞನೂ, ವಿದ್ವಾಂಸನೂ ಆದ ವರನಿಗೆ ಒಳ್ಳೆಯ ಮುಹೂರ್ತದಲ್ಲಿ ಉತ್ತಮ ಲಗ್ನದಲ್ಲಿ ಕನ್ಯೆಯನ್ನಲಂಕರಿಸಿ ದಾನಮಾಡಿ ಕುದುರೆ, ಆನೆ, ವಸ್ತ್ರಗಳನ್ನು ಶಕ್ತ್ಯನುಸಾರ ಕೊಟ್ಟವನು ದುಃಖರಹಿತವಾದ ಸ್ಥಾನವನ್ನು ಸೇರುವನು.

೩೩. ಪ್ರಾಣಕ್ಕಿಂತಲೂ ಉತ್ತಮಳಾದ ಕನ್ಯೆಯನ್ನು ದಾನಮಾಡಿದವನು ಚರಾಚರಾತ್ಮಕವಾದ ಮೂರು ಲೋಕಗಳನ್ನೂ ದಾನಮಾಡಿದಂತಾಗುವನು.

ಯಃ ಕನ್ಯಾರ್ಥಂ ತತೋ ಲಬ್ಧ್ವಾ ಭಿಕ್ಷತೇ ಚೈವ ತದ್ಧನಂ ।
ಸ ಭವೇತ್ಕರ್ಮಚಂಡಾಲಃ ಕಾಷ್ಠಕೀಲೋ ಭವೇನ್ಮೃತಃ ॥ ೩೪ ॥
ಗೃಹೇಽಪಿ ತಸ್ಯ ಯೋಽಶ್ನೀಯಾಜ್ಜಿಹ್ವಾಲೌಲ್ಯಾತ್ಕಥಂಚನ ।
ಚಾಂದ್ರಾಯಣೇನ ಶುದ್ಧ್ಯೇತ ತಪ್ತಕೃಚ್ಛ್ರೇಣ ವಾ ಪುನಃ ॥ ೩೫ ॥

ಉತ್ತಾನಪಾದ ಉವಾಚ :—

ವಿತ್ತಂ ನ ವಿದ್ಯತೇ ಯಸ್ಯ ಕನ್ಯಾವಾಸ್ತಿ ಚ ಯದ್ಗೃಹೇ ।
ಕಥಂ ಚೋದ್ವಾಹನಂ ತಸ್ಯ ನ ಯಾಂಚಾಂ ಕುರುತೇ ಯದಿ ॥ ೩೬ ॥

ಈಶ್ವರ ಉವಾಚ :—

ಅವಿತ್ತೇನೈವ ಕರ್ತವ್ಯಂ ಕನ್ಯೋದ್ವಹನಕಂ ನೃಪ ।
ಕನ್ಯಾನಾಮ ಸಮುಚ್ಚಾರ್ಯ ನ ದೋಷಾಯ ಕದಾಚನ ॥ ೩೭ ॥
ಅಭಿಗಮ್ಯೋತ್ತಮಂ ದಾನಂ ಯಚ್ಚ ದಾನಮಯಾಚಿತಂ ।
ಭವಿಷ್ಯತಿ ಯುಗಸ್ಯಾಂತಸ್ತಸ್ಯಾಂತೋ ನೈವ ವಿದ್ಯತೇ ॥ ೩೮ ॥
ಅಭಿಗಮ್ಯೋತ್ತಮಂ ದಾನಂ ಸ್ಮೃತಮಾಹೂಯ ಮಧ್ಯಮಂ ।
ಯಾಚ್ಯಮಾನಂ ಕನೀಯಃ ಸ್ಯಾದ್ದೇಹಿ ದೇಹೀತಿ ಚಾಧಮಂ ॥ ೩೯ ॥
ಯಥೈವಾಶ್ಮಾಶ್ಮನಾಬದ್ಧೋ ನಿಕ್ಷಿಪ್ತೋ ವಾರಿಮಧ್ಯತಃ ।
ದ್ವಾವೇತೌ ನಿಧನಂ ಯಾತಸ್ತದ್ವದನ್ನಮಪಾತ್ರಕೇ ॥ ೪೦ ॥

---

೩೪. ಕನ್ಯಾದಾನಮಾಡಿ ವರನಿಂದ ದ್ರವ್ಯವನ್ನು ಯಾಚಿಸುವವನು ಕರ್ಮಚಂಡಾಲನಾಗಿ ಕಾಷ್ಠಶೀಲನಾಗುವನು.

೩೫. ಅವನ ಮನೆಯಲ್ಲಿ ನಾಲಿಗೆಯ ಚಾಪಲ್ಯದಿಂದ ಭೋಜನಮಾಡಿದವನು ಚಾಂದ್ರಾಯಣದಿಂದಲೂ, ತಪ್ತಕೃಚ್ಛ್ರದಿಂದಲೂ ಶುದ್ಧನಾಗುವನು.

೩೬. ಉತ್ತಾನಪಾದನು ಹೇಳುತ್ತಾನೆ :—ಕನ್ಯಾಪಿತನು ಬಡವನಾಗಿ ಯಾಚಿಸದಿದ್ದರೆ ಕನ್ಯೆಯನ್ನು ಹೇಗೆ ವಿವಾಹಮಾಡಿಕೊಡಬೇಕು ?

೩೭. ಈಶ್ವರನು ಹೇಳುತ್ತಾನೆ :—ದ್ರವ್ಯವಿಲ್ಲದೆ ಕನ್ಯೆಯ ನಾಮವನ್ನುಚ್ಚರಿಸಿ ವಿವಾಹ ಮಾಡಿದರೆ ದೋಷವುಂಟಾಗುವುದಿಲ್ಲ.

೩೮. ಅಯಾಚಿತನಾಗಿ ಎದುರುಗೊಂಡು ಕನ್ಯೆಯನ್ನು ದಾನಮಾಡುವುದು ಉತ್ತಮವಾದುದು. ಯುಗವಾದರೂ ಕೊನೆಗೊಳ್ಳುವುದು. ಆ ದಾನದ ಪುಣ್ಯವು ಕೊನೆಗೊಳ್ಳುವುದಿಲ್ಲ.

೩೯–೪೦. ಎದುರುಗೊಂಡು ಕೊಡುವ ದಾನವು ಉತ್ತಮವಾದುದು. ಕರೆದುಕೊಡುವ ದಾನವು ಮಧ್ಯಮವು. ಕೊಡು ಕೊಡು ಎಂದು ಬೇಡಲ್ಪಟ್ಟು ಕೊಡುವ ದಾನವು ಕನಿಷ್ಠವಾದುದು. ಕಲ್ಲನ್ನು ಕಲ್ಲಿನಿಂದ ಕಟ್ಟಿ ನೀರಿನ ನಡುವೆ ಎಸೆದರೆ ಅವೆರಡೂ ಮುಳುಗಿ ನಾಶವಾಗುವಂತೆ ಅಪಾತ್ರನಲ್ಲಿ ಮಾಡಿದ ದಾನದಿಂದ ದಾನದಾತೃ ಇಬ್ಬರೂ ಹಾಳಾಗುವರು.

ಅಸಮರ್ಥೇ ತತೋ ದಾನಂ ನ ಪ್ರದೇಯಂ ಕದಾಚನ ।
ದಾತಾರಂ ನಯತೇಽಧಸ್ತಾದಾತ್ಮಾನಂ ಚ ವಿಶೇಷತಃ ॥ ೪೧ ॥
ಸಮರ್ಥಸ್ತಾರಯೇದ್ದ್ವೌ ತು ಕಾಷ್ಠಂ ಶುಷ್ಕಂ ಯಥಾ ಜಲೇ ।
ಯಥಾ ನೌಶ್ಚ ತಥಾ ವಿದ್ವಾನ್ಪ್ರಾಪಯೇದಪರಂ ತಟಂ ॥ ೪೨ ॥
ಆಹಿತಾಗ್ನಿಶ್ಚ ಗೃಹ್ಣಾತಿ ಯಃ ಶೂದ್ರಾಣಾಂ ಪ್ರತಿಗ್ರಹಂ ।
ಇಹ ಜನ್ಮನಿ ಶೂದ್ರೋಽಸೌ ಮೃತಃ ಶ್ವಾ ಚೋಪಜಾಯತೇ ॥ ೪೩ ॥
ವೃಥಾ ಕ್ಲೇಶಶ್ಚ ಜಾಯೇತ ಬ್ರಾಹ್ಮಣೇ ಹ್ಯಗ್ನಿಹೋತ್ರಿಣಿ ।
ಅಸತ್ಪ್ರತಿಗ್ರಹಂ ಕುರ್ವನ್ಗುಪ್ತಂ ನೀಚಸ್ಯ ಗರ್ಹಿತಂ ॥ ೪೪ ॥
ಅಭೋಜ್ಯಃ ಸ ಭವೇನ್ಮರ್ತ್ಯೋ ದಹ್ಯತೇ ಕಾರಿಷಾಗ್ನಿನಾ ।
ಕಟಿಕಾರೋ ಭವೇತ್ಪಶ್ಚಾತ್ಸಪ್ತ ಜನ್ಮ ಸ ಸಂಶಯಃ ॥ ೪೫ ॥
ಲಜ್ಜಾದಾಕ್ಷಿಣ್ಯಲೋಭಾಚ್ಚ ಯದ್ದಾನಂ ಚೋಪರೋಧಜಂ ।
ಭೃತ್ಯೇಭ್ಯಶ್ಚ ತು ಯದ್ದಾನಂ ತದ್ವೃಥಾ ನಿಷ್ಫಲಂ ಭವೇತ್ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ತೃತೀಯೇ ರೇವಾಖಂಡೇ
"ಪಾತ್ರಾಽಪಾತ್ರಪರೀಕ್ಷಾದಿವರ್ಣನಂ" ನಾಮ ಪಂಚಾಶತ್ತಮೋಽಧ್ಯಾಯಃ

---

೪೧. ಆದ್ದರಿಂದ ಅಸಮರ್ಥನಿಗೆ ದಾನವನ್ನೀಯಬಾರದು. ಅಂತಹ ದಾನವು ದಾನಮಾಡುವವನನ್ನೂ, ತೆಗೆದುಕೊಳ್ಳುವವನನ್ನೂ ಕೆಡಿಸುವುದು.

೪೨. ಸಮರ್ಥನಾದವನು ಒಣಗಿದ ಕಟ್ಟಿಗೆಯು ನೀರುಯ್ಯುವಂತೆ ಇಬ್ಬರನ್ನೂ ಉದ್ಧಾರಮಾಡುವನು. ದೋಣಿಯು ಮತ್ತೊಂದು ದಡವನ್ನು ಸೇರಿಸುವಂತೆ ಸಂಸಾರಸಾಗರದಿಂದ ದಾಟಿಸುವನು.

೪೩. ಆಹಿತಾಗ್ನಿಯು ಶೂದ್ರನಿಂದ ಪ್ರತಿಗ್ರಹಮಾಡಿದರೆ ಈ ಜನ್ಮದಲ್ಲಿ ಶೂದ್ರನೂ, ಮೃತನಾಗಿ ನಾಯಿಯೂ ಆಗುವನು.

೪೪. ಅಗ್ನಿಹೋತ್ರಿಯಾದ ಬ್ರಾಹ್ಮಣನು ಗುಟ್ಟಾಗಿ ನೀಚನಿಂದ ದುಷ್ಟ ವಸ್ತುವನ್ನು ಪ್ರತಿಗ್ರಹಮಾಡಿದರೆ ವ್ಯರ್ಥವಾಗಿ ಕ್ಲೇಶವುಂಟಾಗುವುದು.

೪೫. ಅವನು ಭೋಜನಾನರ್ಹನಾಗುವನು. ಅವನನ್ನು ಬೆರಣಿಯ ಬೆಂಕಿಯಿಂದ ಸುಡಲ್ಪಡಬೇಕು. ಅನಂತರ ಅವನು ಏಳು ಜನ್ಮಗಳಲ್ಲಿ ಚಾಪೆ ನೇಯುವವನಾಗುವನು.

೪೬. ನಾಚಿಕೆ, ದಾಕ್ಷಿಣ್ಯ, ಆಶೆ, ಬಲಾತ್ಕಾರದಿಂದ ಕೊಟ್ಟ ದಾನವೂ, ಭೃತ್ಯನಿಗಿತ್ತ ದಾನವೂ ನಿಷ್ಫಲವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಮೂರನೆಯ ರೇವಾಖಂಡದಲ್ಲಿ
"ಪಾತ್ರಾಪಾತ್ರಪರೀಕ್ಷಾದಿವರ್ಣನ"ವೆಂಬ ಐವತ್ತನೆಯ ಅಧ್ಯಾಯವು ಮುಗಿದುದು

